ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಬಿ. ರಾಚಯ್ಯ

## Eminent Parlimentarian Series

# B. RACHAIAH

ರಚನೆ:
ಡಾ|| ಎಂ. ನಂಜಯ್ಯ ಹೊಂಗನೂರು



ಮೊದಲ ಮುದ್ರಣ:
ಸೆಪ್ಟೆಂಬರ್, 2001 - 2,000 ಪ್ರತಿಗಳು

ಬೆಲೆ: 20 ರೂಪಾಯಿಗಳು

ಮುಖಪುಟ ವಿನ್ಯಾಸ:
ಸರ್ಕಾರಿ ಮುದ್ರಣಾಲಯ
ಬೆಂಗಳೂರು.

ಪ್ರಕಟಣೆ:
ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001.

# ಪೀಠಿಕೆ

ದೇಶದ ಸ್ವಾತಂತ್ರ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ರಾಂಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಕಿರುಹೊತ್ತಿಗೆಯನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಿ ಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರ ಕುರಿತ ಕಿರುಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸ್ ಹಾಗೂ ಇನ್ನೂ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಡಾ|| ನಂಜಯ್ಯ ಹೊಂಗನೂರು ಅತಿಥಿ ಉಪನ್ಯಾಸಕರು, ಮಾನಸ ಗಂಗೋತ್ರಿ, ಮೈಸೂರು ಅವರು ರಚಿಸಿರುವ, ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಬಿ. ರಾಚಯ್ಯ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಹಾಗೂ ಪುಸ್ತಕವನ್ನು ರಚಿಸಿದ ಲೇಖಕರಿಗೆ, ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಯು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಬಿ.ಎಲ್. ಶಂಕರ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಎಂ.ವಿ. ವೆಂಕಟಪ್ಪ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಅರಿಕೆ

ಸಮಾಜದಲ್ಲಿ ಯಾರು ತಮ್ಮ ಬದುಕಿನ ಹೆಚ್ಚು ದಿನಗಳನ್ನು ನಿಸ್ವಾರ್ಥತೆಯಿಂದ ಸಾರ್ವಜನಿಕ ಸೇವೆಗೆ ಮೀಸಲಾಗಿಟ್ಟು; ಆ ಮುಖಾಂತರ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಸೈದ್ಧಾಂತಿಕ ವ್ಯಕ್ತಿತ್ವವನ್ನು ನಿರ್ಮಾಣ ಮಾಡಿಕೊಂಡಿರುತ್ತಾರೋ, ಅಂಥವರ ಬದುಕಿನ ಅವಿಸ್ಮರಣೀಯ ಘಟನೆಗಳನ್ನು, ಮೌಲ್ಯಾಧಾರಿತ ಜೀವನ ವಿಧಾನಗಳನ್ನು ಮತ್ತು ಅವರ ಸಾಧನೆ ಸಿದ್ಧಿಗಳನ್ನು ಕುರಿತು ಗ್ರಂಥಗಳನ್ನು ರಚಿಸುವಂಥದು ಬಹಳ ಅರ್ಥಪೂರ್ಣವಾದುದು. ಏಕೆಂದರೆ ಅದು ಆದರ್ಶ ವ್ಯಕ್ತಿಯ ಬದುಕಿನ ಘಟನಾವಳಿಗಳ ಅನಾವರಣದ ಹಿನ್ನೆಲೆಯಲ್ಲಿ ದಾಖಲುಗೊಂಡ ನಾಡಿನ, ಸಮಾಜದ, ಸಂಸ್ಕೃತಿಯ ಮತ್ತು ಸಂಕಲ್ಪಬದ್ಧ ರಾಜನೀತಯ ಸಮಗ್ರ ಚರಿತ್ರೆಯ ವಿಶ್ಲೇಷಣೆಯಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ವಿಧಾನ ಮಂಡಲದ ಸಚಿವಾಲಯವು ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳನ್ನು ಕುರಿತು ಬದುಕು-ಬರಹ ಮಾಲಿಕೆಯ ಅಡಿಯಲ್ಲಿ ಪುಸ್ತಕಗಳನ್ನು ಬರೆಸಿ ಪ್ರಕಟಿಸಲು ತೀರ್ಮಾನಿಸಿರುವ ವಿಚಾರ ನಿಜಕ್ಕೂ ಮೆಚ್ಚಬೇಕಾದುದು. ಏಕೆಂದರೆ ಪ್ರತಿಭಾವಂತ ಸಂಸದೀಯ ಪಟುಗಳು ತಮ್ಮ ಪ್ರಗತಿಪರ ಹಾಗೂ ಜನಪರ ಚಿಂತನೆಯ ನೆಲೆಯಲ್ಲಿ ಕೇಂದ್ರ ಮತ್ತು ರಾಜ್ಯ ಶಾಸನ ಸಭೆಗಳಲ್ಲಿ ಭಾಗವಹಿಸಿ, ಮಂಡಿಸಿದ ವಿಚಾರಗಳು, ಮಾಡಿದ ಚರ್ಚೆಗಳು ಸಮಕಾಲೀನ ಸಂದರ್ಭಗಳನ್ನು ಕುರಿತದ್ದಾಗಿರುತ್ತವೆ. ಆದ್ದರಿಂದ ಇಂಥ ಹಿರಿಯ ರಾಜಕೀಯ ಮುತ್ಸದ್ದಿಗಳ ತತ್ವನಿಷ್ಠ ಆಡಳಿತ ಕ್ರಮ ಮತ್ತು ಕ್ರಿಯಾಶೀಲ ಚಿಂತನೆಗಳು ಮುಂದೆ ಬರುವ ಶಾಸನಸಭಾ ಸದಸ್ಯರುಗಳಿಗೆ, ಅಧಿಕಾರಿಗಳಿಗೆ ಆದರ್ಶವಾಗುವುದರಲ್ಲಿ, ಮಾರ್ಗಸೂಚನೆಯ ಕೈಪಿಡಿಯಾಗುವುದರಲ್ಲಿ ಸಂದೇಹವಿಲ್ಲ. ಈ ಯೋಜನೆಯ ಅಡಿಯಲ್ಲಿ ಈಗಾಗಲೇ ಎಸ್. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಕಡಿದಾಳ್ ಮಂಜಪ್ಪ, ವೀರೇಂದ್ರ ಪಾಟೀಲ್, ವೈಕುಂಠ ಬಾಳಿಗಾ, ಶಾಂತವೇರಿ ಗೋಪಾಲಗೌಡ, ಬಿ.ಜಿ. ಬಣಾಕರ್ ಮತ್ತು ಕೆ.ಎಸ್. ನಾಗರತ್ನಮ್ಮ ಅವರನ್ನು ಕುರಿತು ಕೃತಿಗಳು ಪ್ರಕಟಗೊಂಡಿವೆ. ಅಂಥ ಮಾಲಿಕೆಯ ಅಡಿಯಲ್ಲಿ ಕರ್ನಾಟಕ ರಾಜಕಾರಣದ ಅಪರೂಪದ ವ್ಯಕ್ತಿತ್ವದ ಶ್ರೇಷ್ಠ ರಾಜಕಾರಣಿ ಬಿ. ರಾಚಯ್ಯನವರನ್ನು ಕುರಿತು ಪುಸ್ತಕ ರಚಿಸುವ ಜವಾಬ್ದಾರಿಯನ್ನು ಕರ್ನಾಟಕ ವಿಧಾನ ಮಂಡಲದ ಸಚಿವಾಲಯದ ಗ್ರಂಥಾಲಯದ ಉಪ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರು ನನಗೆ ಒಪ್ಪಿಸಿದಾಗ ನಾನು ಅದನ್ನು ಸಂತೋಷದಿಂದ ಒಪ್ಪಿಕೊಂಡಿದುದರ ಫಲವಾಗಿ ಪ್ರಸ್ತುತ ಗ್ರಂಥವು ಹೊರಬಂದಿದೆ.

ಕರ್ನಾಟಕ ರಾಜಕೀಯ ದಿಗ್ಗಜಗಳಲ್ಲಿ ಒಬ್ಬರೆನಿಸಿದ ರಾಚಯ್ಯನವರು ಕನ್ನಡ ನಾಡಿನ ಮಾದರಿ ರಾಜಕಾರಣದ ಪ್ರಖರತೆಯನ್ನು ಹೊರನಾಡಿಗೂ ಮೆರೆದ ಮೇಧಾವಿಗಳು. ಇವರು ಪ್ರಗತಿಪರ ಹಾಗೂ ಚಿಂತನಾ ಶೀಲ ನೆಲೆಯಲ್ಲಿ ರಾಷ್ಟ್ರಮಟ್ಟದ ರಾಜಕಾರಣ ಮಾಡಿದವರು. ಸುಮಾರು ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ಆಡಳಿತ ಮಾಡಿದ ಅವರು ಶಾಸಕರಾಗಿ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ಮೊದಲ ಶ್ರೇಣಿಯ ಸಚಿವರಾಗಿ, ಕೇಂದ್ರ ಸರ್ಕಾರದ

ಮಂತ್ರಿಯಾಗಿ, ವಿವಿಧ ಮಂಡಲಿಗಳ ಸದಸ್ಯ ಮತ್ತು ಅಧ್ಯಕ್ಷರಾಗಿ, ಕ್ರಾಂತಿರಂಗ ಹಾಗೂ ಜನತಾದಳದ ಅಧ್ಯಕ್ಷರಾಗಿ, ಸಾಮಾಜಿಕ ನ್ಯಾಯದ ರಕ್ಷಕರಾಗಿ, ಸಾಂಸ್ಕೃತಿಕ ಪರಿವರ್ತನೆಯ ಹರಿಕಾರರಾಗಿ, ಸೈದ್ಧಾಂತಿಕ ರಾಜನೀತಿಗೆ ಹೆಸರು ವಾಸಿಯಾಗಿದ್ದರು. ಅಲ್ಲದೆ ಹಿಮಾಚಲ ಪ್ರದೇಶ, ಕೇರಳ ಮತ್ತು ಗೋವಾ ರಾಜ್ಯಗಳ ರಾಜ್ಯಪಾಲರಾಗಿ ಪ್ರಾಮಾಣಿಕ ಸೇವೆ ಸಲ್ಲಿಸಿದ ವಿಚಾರದಿಂದ ಇಡೀ ರಾಷ್ಟ್ರಕ್ಕೆ ಗೌರವ ಬಂದಂತೆ ಆಗಿದೆ.

ರಾಚಯ್ಯ ಅವರು ಕೇಂದ್ರ ಮತ್ತು ರಾಜ್ಯ ಶಾಸನ ಸಭೆಗಳಲ್ಲಿ ಮಂಡಿಸಿದ ವಿಚಾರಗಳು ಮತ್ತು ಮಾಡಿದ ಭಾಷಣಗಳು ತುಂಬಾ ಮೌಲಿಕವಾದುದ್ದಾಗಿವೆ. ಇವನ್ನೆಲ್ಲಾ ನಾನು ಸಂಗ್ರಹಿಸಲು ವಿಧಾನ ಸೌಧದ ಗ್ರಂಥಾಲಯ ಹಾಗೂ ಸಂಶೋಧನಾ ಮತ್ತು ಉಲ್ಲೇಖನಾ ಶಾಖೆಗೆ ಹೋದಾಗ ವಿಧಾನ ಸಭೆಯ ಸಚಿವಾಲಯದ ಕಾರ್ಯದರ್ಶಿಗಳು ಹಾಗೂ ಅವರ ಸಿಬ್ಬಂದಿ ವರ್ಗದವರು ತುಂಬು ಮನಸ್ಸಿನ ಸಹಕಾರ ನೀಡಿದ್ದಾರೆ, ಅವರಿಗೆ ಈ ಸಂದರ್ಭದಲ್ಲಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಈ ಗ್ರಂಥ ರಚನೆಗೆ ಮೂಲಭೂತವಾಗಿ ಕಾರಣಕರ್ತರಾದ ಬಿ. ರಾಚಯ್ಯನವರ ಸುಪುತ್ರರು, ಸಂತೇಮರಹಳ್ಳಿ ಮೀಸಲು ಕ್ಷೇತ್ರದ ಜನಪ್ರಿಯ ಶಾಸಕರಾದ ಶ್ರೀ ಎ.ಆರ್. ಕೃಷ್ಣಮೂರ್ತಿ ಅವರಿಗೆ ನನ್ನ ಪ್ರೀತಿಯ ವಂದನೆಗಳು. ಪ್ರಸ್ತುತ ಕೃತಿ ರಚನೆಗೆ ತಮ್ಮ ವಿದ್ವತ್ ಪೂರ್ಣ ಸಲಹೆಗಳನ್ನು, ಪೂರಕ ಮಾಹಿತಿಗಳನ್ನೂ ಗಂಭೀರವಾಗಿ ಚರ್ಚಿಸಿ ಕೊಟ್ಟ ನಾಡಿನ ಹೆಸರಾಂತ ಸಾಹಿತಿಗಳು, ವಿಚಾರವಂತರು, ವಿದ್ವಾಂಸರು ಆದಂತಹ ಪ್ರೋ. ಮ.ನ. ಜವರಯ್ಯ ನವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಹಾಗೆಯೇ ಈ ಗ್ರಂಥ ರಚನೆಯ ಸಂದರ್ಭದಲ್ಲಿ ಸದಾ ಪ್ರೋತ್ಸಾಹಿಸುತ್ತಿದ್ದ ಕರ್ನಾಟಕ ಲೋಕ ಸೇವಾ ಆಯೋಗದ ಸದಸ್ಯರಾದ ಆರ್. ನಾಗರಾಜ್ ಅವರಿಗೂ ಮತ್ತು ನನ್ನ ಪ್ರಿಯ ಗುರುಗಳಾದ ಡಾ. ಆರ್. ರಾಮಕೃಷ್ಣ ಅವರಿಗೂ ನನ್ನ ಕೃತಜ್ಞತೆಗಳು.

ಈ ಕೃತಿಯ ರಚನೆಗೆ ನೆರವು ನೀಡಿದ ಸ್ನೇಹಿತ ಸಿ. ಮಹದೇವಯ್ಯ ಎ. ಜ್ಯೋತಿಲಕ್ಷ್ಮೀ ಅವರಿಗೂ ಹಾಗೂ ಇಂಗ್ಲಿಷ್ ಭಾಷಣಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟ ಶ್ರೀ ಗಣೇಶ್ ಐತಾಳ್ ಮತ್ತು ಆರ್.ಎಲ್. ಅನಂತರಾಮಯ್ಯ ಅವರಿಗೂ ನನ್ನ ಧನ್ಯವಾದಗಳು.

ಕೊನೆಯದಾಗಿ ಈ ಗ್ರಂಥ ರಚನೆಗೆ ಸಂಬಂಧಿಸಿದಂತೆ ನನ್ನನ್ನು ಆಗಾಗ್ಗೆ ಕರೆದು ಚರ್ಚಿಸುತ್ತಿದ್ದ ವಿಧಾನ ಮಂಡಲದ ಸಚಿವಾಲಯದ ಗ್ರಂಥಾಲಯದ ಉಪ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳಿಗೆ ನನ್ನ ಅನಂತ ವಂದನೆಗಳು.

ಡಾ. ಎಂ. ಸಂಜಯ್ಯ ಹೊಂಗನೂರು
ಅತಿಥಿ ಉಪನ್ಯಾಸಕರು,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ,
ಮೈಸೂರು-6.

# ಗ್ರಂಥಾಲಯ ಉಪ ಸಮಿತಿಯ ಸದಸ್ಯರುಗಳು

(ಅಕ್ಟೋಬರ್ 1999 - ಮಾರ್ಚ್ 2001)

ಶ್ರೀಯುತರುಗಳಾದ:

| | |
|---|---|
| 1. ಬಿ.ಬಿ. ಶಿವಪ್ಪ<br>ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. ಕಾಕಾಸಾಹೇಬ ಪಾಂ ಪಾಟೀಲ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 3. ಸಿರಾಜ್ ಶೇಖ್<br>ವಿಧಾನ ಸಭಾ ಸದಸ್ಯರು | " |
| 4. ಪಿ.ಎಂ. ರಂಗನಾಥ್<br>ವಿಧಾನ ಸಭಾ ಸದಸ್ಯರು | " |
| 5. ಎನ್. ಸಂಪಂಗಿ<br>ವಿಧಾನ ಸಭಾ ಸದಸ್ಯರು | " |
| 6. ಡಾ।। ವಿ.ಎಸ್. ಆಚಾರ್ಯ<br>ವಿಧಾನ ಪರಿಷತ್ ಸದಸ್ಯರು | " |
| 7. ಡಾ।। ಎಚ್.ಎಲ್. ನಾಗೇಗೌಡ<br>ವಿಧಾನ ಪರಿಷತ್ ಸದಸ್ಯರು | " |
| 8. ಜಿ. ಮಧುಸೂದನ್<br>ವಿಧಾನ ಪರಿಷತ್ ಸದಸ್ಯರು | " |

(ಆಗಸ್ಟ್ 2001-2002)

ಶ್ರೀಯುತರುಗಳಾದ:

| | |
|---|---|
| 1. ಬಿ.ಬಿ. ಶಿವಪ್ಪ<br>ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. ಚಂದ್ರಕಾಂತ್ ಗುರಪ್ಪ ಬೆಲ್ಲದ್<br>ವಿಧಾನ ಸಭಾ ಸದಸ್ಯರು | ಸದಸ್ಯರು |

| | |
|---|---|
| 3. ಸುಭಾಷ್ ರುಕ್ಮಯ್ಯ ಗುತ್ತೇದಾರ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 4. ಉಮೇಶ್ ವಿ. ಕತ್ತಿ<br>ವಿಧಾನ ಸಭಾ ಸದಸ್ಯರು | " |
| 5. ಕೆ.ಎನ್. ಸುಬ್ಬಾರೆಡ್ಡಿ<br>ವಿಧಾನ ಸಭಾ ಸದಸ್ಯರು | " |
| 6. ಡಾ॥ ಹನುಮಂತಯ್ಯ<br>ವಿಧಾನ ಪರಿಷತ್ ಸದಸ್ಯರು | " |
| 7. ಶ್ರೀಮತಿ ನಿರ್ಮಲಾ ವೆಂಕಟೇಶ್<br>ವಿಧಾನ ಪರಿಷತ್ ಸದಸ್ಯರು | " |
| 8. ಕೆ. ನಿರಂಜನ ನಾಯ್ಡು<br>ವಿಧಾನ ಪರಿಷತ್ ಸದಸ್ಯರು | " |

# ಬಿ. ರಾಚಯ್ಯ
# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

## ಪರಿವಿಡಿ

ಭಾಗ - ಒಂದು

ಬಿ. ರಾಚಯ್ಯನವರ ವ್ಯಕ್ತಿತ್ವ ಮತ್ತು ಅವರ ರಾಜಕಾರಣದ ವಿಭಿನ್ನ ನೆಲೆಗಳು. (ಪುಟ 1 ರಿಂದ 23)

ಭಾಗ - ಎರಡು

ಶಾಸಕವಾಗ್ಮಿ ಬಿ. ರಾಚಯ್ಯ

(ಪುಟ 27 - 74)

1. ಕೆರೆಗಳ ಸಂರಕ್ಷಣೆ ಕುರಿತು - 1952
2. ರೈತರ ಜೀವನಕ್ಕೆ ಒತ್ತು - 1952
3. ಕ್ಷೇತ್ರದ ನೀರಿನ ವ್ಯವಸ್ಥೆ ಬಗ್ಗೆ ನೀಡಿದ ವಿವರ - 1952
4. ಮಹಾರಾಜರ ಭಾಷಣವನ್ನು ಕುರಿತು - 1953
5. ಅಪ್ರೋಪ್ರಿಯೇಷನ್ ಬಿಲ್ ಮೇಲಿನ ಚರ್ಚೆ - 1953
6. ಐ.ವಿ.ಸಿ. ರಸ್ತೆಗಳಿಗೆ ಹೆಚ್ಚು ಹಣಕ್ಕಾಗಿ ಒತ್ತಾಯ - 1953
7. ಕೈಗಾರಿಕಾ ಇಲಾಖೆಯ ಮೇಲಿನ ಚರ್ಚೆ - 1954
8. ಪಬ್ಲಿಕ್ ಸರ್ವಿಸ್ ಕಮಿಷನ್‌ನಲ್ಲಿ ಪರಿಶಿಷ್ಟ ಜಾತಿ ಸದಸ್ಯರು ನೇಮಕಾತಿ ಕುರಿತು ನೀಡಿದ ವಿವರ - 1954
9. ನ್ಯಾಯಾಂಗ ನೇಮಕಾತಿ ಕುರಿತು ನೀಡಿದ ವಿವರ - 1955
10. ರಾಜ್ಯ ಪುನರ್ ವಿಂಗಡಣೆ ಆಯೋಗದ ವರದಿ ಕುರಿತು ಮಾಡಿದ ಭಾಷಣ - 1955
11. ಪಾನ ನಿರೋಧ ಜಾರಿ ಕುರಿತು ಮಾಡಿದ ಭಾಷಣ - 1956
12. ವಿಶ್ವವಿದ್ಯಾನಿಲಯದ ತಿದ್ದುಪಡಿ ಮೇಲಿನ ಚರ್ಚೆ ಕುರಿತು - 1957

13. ಮೈಸೂರು ಗೇಣಿ ಮತ್ತು ಕೃಷಿ ಭೂ ಕಾಯಿದೆ ಸಮಿತಿ ಕುರಿತ ವರದಿಯ ಮೇಲಿನ ಮುಂದುವರೆದ ಚರ್ಚೆ - 1958

14. 1961-62ನೇ ಸಾಲಿನ ಆಯವ್ಯಯ ಅಂದಾಜು ಪಟ್ಟಿ ಮೇಲಿನ ಚರ್ಚೆಯ ಸಂದರ್ಭದಲ್ಲಿ ನೀಡಿದ ಕೆಲವು ಸಲಹೆಗಳು - 1961

15. ಕಡ್ಡಾಯ ಮತ್ತು ಉಚಿತ ಪ್ರಾಥಮಿಕ ಶಿಕ್ಷಣ ಮಸೂದೆಯನ್ನು ಸ್ವಾಗತಿಸುತ್ತ ಮಂಡಿಸಿದ ಕೆಲವು ವಿಚಾರಗಳು - 1961

## ಭಾಗ - 3

## ಸಮರ್ಥ ಸಚಿವ ಬಿ. ರಾಚಯ್ಯ

(ಪುಟ 76 - 185)

1. ಮೀನುಗಾರಿಕೆ ಇಲಾಖೆಯ ಅಭಿವೃದ್ಧಿಯ ಬಗ್ಗೆ ನೀಡಿದ ವಿವರಗಳು - 1964

2. ರೇಷ್ಮೆ ಇಲಾಖೆಯನ್ನು ಕುರಿತು ನಡೆದ ಚರ್ಚೆಗೆ ನೀಡಿದ ಉತ್ತರಗಳು - 1964

3. ಕಂದಾಯ ಮತ್ತು ಅರಣ್ಯ ಇಲಾಖೆಗಳ ಮೇಲೆ ನಡೆದ ಚರ್ಚೆಯ ವಿವರಣೆಗಳು - 1967

4. ಭೂಸ್ವಾಧೀನ ಕಾನೂನಿನ ತಿದ್ದುಪಡಿ ಮಸೂದೆಯ ಮೇಲಿನ ಚರ್ಚೆಗಳು - 1967

5. 1968-69ರ ಆಯವ್ಯಯ ಅಂದಾಜು ಸಂದರ್ಭದಲ್ಲಿ ಅರಣ್ಯ ಮತ್ತು ಕಂದಾಯ ಇಲಾಖೆಗಳಿಗೆ ಸಂಬಂಧಪಟ್ಟ ಬೇಡಿಕೆಗಳ ಮೇಲಿನ ಪ್ರಶ್ನೆಗಳಿಗೆ ಮತ್ತು ಚರ್ಚೆಗಳಿಗೆ ನೀಡಿದ ಉತ್ತರಗಳು - 1968

6. ಕೃಷಿ ಮತ್ತು ತೋಟಗಾರಿಕೆ ಇಲಾಖೆಗಳಿಗೆ ಸಂಬಂಧಿಸಿದ ಬೇಡಿಕೆಗಳ ಮೇಲಿನ ಚರ್ಚೆಗಳಿಗೆ ನೀಡಿದ ಉತ್ತರಗಳು - 1970

7. ಶಿಕ್ಷಣ ಇಲಾಖೆ ಬೇಡಿಕೆಯ ಮೇಲಿನ ಪ್ರಶ್ನೆಗಳಿಗೆ ಮತ್ತು ಚರ್ಚೆಗಳಿಗೆ ಶಿಕ್ಷಣ ಸಚಿವರಾಗಿ ನೀಡಿದ ಉತ್ತರಗಳು - 1983

8. ಕರ್ನಾಟಕ ವಿಶ್ವವಿದ್ಯಾನಿಲಯಗಳ (ಅಧಿನಿಯಮ) ಮಸೂದೆ 1984

9. ಕರ್ನಾಟಕ ಶಿಕ್ಷಣ ಸಂಸ್ಥೆಗಳ ಕ್ಯಾಪಿಟೇಷನ್ ಶುಲ್ಕ ವಸೂಲಾತಿ ನಿಷೇಧ ಮಸೂದೆ 1984

10. 1986-87ನೇ ಸಾಲಿನ ಗೃಹ ಇಲಾಖೆಯ ಕುರಿತಾದ ಬೇಡಿಕೆಗಳ ಮೇಲಿನ ಚರ್ಚೆಗಳಿಗೆ ಮತ್ತು ಶಾಸನ ಸಭಾ ಸದಸ್ಯರು ಕೇಳಿದ ಪ್ರಶ್ನೆಗಳಿಗೆ ಗೃಹ ಸಚಿವರಾಗಿ ಬಿ. ರಾಚಯ್ಯ ಅವರು ನೀಡಿದ ಉತ್ತರಗಳು - 1986

11. 1988-89ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸಂಬಂಧಿಸಿದ ಬೇಡಿಕೆಗಳ ಮೇಲಿನ ಚರ್ಚೆಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಾಗಿ ಬಿ. ರಾಚಯ್ಯ ಅವರು ನೀಡಿದ ಉತ್ತರಗಳು 1988

12. ರೈತರ ಬಿತ್ತನೆ ಬೀಜಗಳ ಕುಂದುಕೊರತೆ ಕುರಿತು ಕೃಷಿ ಸಚಿವರಾಗಿ ಬಿ. ರಾಚಯ್ಯ ಅವರು ನೀಡಿದ ಉತ್ತರಗಳು - 1989

## ಭಾಗ - 4

## ಸಂಸತ್ತಿನಲ್ಲಿ ಬಿ. ರಾಚಯ್ಯ

(ಪುಟ 187 - 227)

1. 1977-78ನೆ ಸಾಲಿನ ಮುಂಗಡ ಪತ್ರದ ಸಂದರ್ಭದಲ್ಲಿ ರೈಲ್ವೆ ಇಲಾಖೆಯನ್ನು ಕುರಿತು ಮಂಡಿಸಿದ ವಿಚಾರಗಳು - 1977

2. ನಾಗರಿಕ ಸರಬರಾಜು ಮತ್ತು ಸಹಕಾರ ಇಲಾಖೆಗಳ ಸಂಬಂಧವಾಗಿ ನಡೆದ ಚರ್ಚೆಯಲ್ಲಿ ರಫ್ತು ವಿಷಯವಾಗಿ ನೀಡಿದ ಉತ್ತರ - 1977

3. ದೇಶದ ಕೃಷಿಕ್ಷೇತ್ರಕ್ಕೆ ಮೂಲಭೂತವಾಗಿ ಬೇಕಾಗಿರುವ ನೀರಿನ ಪೂರೈಕೆ ಕುರಿತು ನೀಡಿದ ವಿವರಗಳು - 1977

4. ಕೃಷಿ ಇಲಾಖೆಯ ಬೆಳವಣಿಗೆ, ಅಭಿವೃದ್ಧಿ, ಸಮಸ್ಯೆ ಮತ್ತು ಅದರ ವೈವಿಧ್ಯತೆಯನ್ನು ಕುರಿತು ಮಂಡಿಸಿದ ಅಭಿಪ್ರಾಯಗಳು - 1977

5. ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗದ ವರದಿ 1975-76 ಕುರಿತ ನಿಲುವಳಿ ಸೂಚನೆ - 1977

6. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಸೇವಾ ಸಂರಕ್ಷಣೆಗಳನ್ನು ಕುರಿತು ಮಂಡಿಸಿದ ವಿಚಾರಗಳು - 1977

7. ಕೇಂದ್ರದ 1978-79ರ ಆಯವ್ಯಯ ಅಂದಾಜು ಪತ್ರದ ಪ್ರಸ್ತಾವನೆಗಳನ್ನು ಕುರಿತು ಮಂಡಿಸಿದ ವಿಚಾರಗಳು - 1978

8. ಹಡಗು ಮತ್ತು ಸಾಗಾಣಿಕೆ ಇಲಾಖೆಗಳ ಮೇಲಿನ ಬೇಡಿಕೆಯ ಸಂಬಂಧವಾಗಿ ನೀಡಿದ ವಿವರಗಳು - 1978

9. ಸಕ್ಕರೆ ಇಲಾಖೆಯನ್ನು ಕುರಿತು ನೀಡಿದ ವಿವರಣೆಗಳು - 1978

ಭಾಗ - 5

ರಾಜನೀತಿ ನಿಪುಣ ರಾಜ್ಯಪಾಲ

(ಪುಟ 229 - 258)

1. ಕೇರಳದ ಪುಸ್ತಕ ಮೇಳ ಉದ್ಘಾಟನಾ ಭಾಷಣ - 1991

2. ಡಾ. ಬಿ.ಆರ್. ಅಂಬೇಡ್ಕರ್ ಶತಮಾನೋತ್ಸವ ಸಮಾರಂಭಗಳು - 1991

3. ಮಹಾರಾಜ ಶ್ರೀ ಸ್ವಾತಿ ತಿರುನಾಳರ 178ನೇ ಜಯಂತೋತ್ಸವ - 1991

4. ಮಾದಕ ದ್ರವ್ಯ ಚಟದಲ್ಲಿ ಈ ದಶಕದ ಸವಾಲುಗಳು ಸಾರ್ಕ್ ದೇಶಗಳ ಪ್ರತಿನಿಧಿಗಳ ವಿಚಾರಗೋಷ್ಠಿ ಉದ್ಘಾಟನೆ - 1991

5. ವಿಶ್ವ ರೆಡ್‌ಕ್ರಾಸ್ ದಿನಾಚರಣೆ - ತಿರುವನಂತಪುರ - 1991

6. ಪ್ರವಾದಿ ಮಹಮ್ಮದರ 1465ನೇ ಜನ್ಮದಿನೋತ್ಸವಕ್ಕೆ ಸಂಬಂಧಿಸಿದ ಸಾರ್ವಜನಿಕ ಸಭೆಯ ಉದ್ಘಾಟನೆ, - 1991

7. ಗಾಂಧೀ ಜಯಂತಿ ಆಚರಣೆ ಉದ್ಘಾಟನೆ - 1991

8. ಮಹಾಕವಿ ವಲ್ಲತ್ತೋಳ್‌ರವರ 144ನೇ ಜನ್ಮದಿನೋತ್ಸವ ಉದ್ಘಾಟನಾ ಕಾರ್ಯಕ್ರಮ - 1991

9. ನಿಶಾಗಂಧಿ ನೃತ್ಯೋತ್ಸವದ ಉದ್ಘಾಟನೆ - 1991

10. ಮಕ್ಕಳಿಗಾಗಿ ಏರ್ಪಡಿಸಿದ ಜವಾಹರಲಾಲ್ ನೆಹರು ರಾಷ್ಟ್ರೀಯ ವಿಜ್ಞಾನ ವಸ್ತು ಪ್ರದರ್ಶನ - 1991

11. ಶ್ರೀ ನಾರಾಯಣಗುರು ಅವರ ಪ್ರತಿಮೆ ಅನಾವರಣ - 1991

12. ಬೀಳ್ಕೊಡುಗೆ ಸಂದರ್ಭದಲ್ಲಿ ಕೇರಳ ರಾಜ್ಯದ ಜನತೆಗೆ ರಾಚಯ್ಯನವರ ಕೃತಜ್ಞತೆ - 1995

ಭಾಗ - 6

1. ಗಣ್ಯರ ದೃಷ್ಟಿಯಲ್ಲಿ ಬಿ. ರಾಚಯ್ಯ 260 - 267

2. ಕ್ಷೇತ್ರಕ್ಕಾಗಿ ಕೈಗೊಂಡ ಕೆಲವು ಐತಿಹಾಸಿಕ ಅಭಿವೃದ್ಧಿ ಕಾರ್ಯಗಳು. 268 - 282

3. ಅವಿಸ್ಮರಣೀಯ ಘಟನೆಗಳ ಬದುಕು. 281-284

4. ರಾಷ್ಟ್ರದ ರಾಜಕೀಯ ಪಕ್ಷಗಳು ಮತ್ತು ಬಿ. ರಾಚಯ್ಯ. 285

5. ಗ್ರಂಥಸೂಚಿ. 286-287

# ಭಾಗ - ಒಂದು

## ಬಿ. ರಾಚಯ್ಯನವರ ವ್ಯಕ್ತಿತ್ವ ಮತ್ತು ಅವರ ರಾಜಕಾರಣದ ವಿಭಿನ್ನ ನೆಲೆಗಳು

# ಬಿ. ರಾಚಯ್ಯ

## ಭಾಗ - ಒಂದು

### ಬಿ. ರಾಚಯ್ಯನವರ ವ್ಯಕ್ತಿತ್ವ ಮತ್ತು ಅವರ ರಾಜಕಾರಣದ ವಿಭಿನ್ನ ನೆಲೆಗಳು

ರಾಚಯ್ಯ ಅವರು ರಾಷ್ಟ್ರಮಟ್ಟದ ಒಬ್ಬ ಪ್ರಭಾವಿ ಸುಸಂಸ್ಕೃತ ನಾಯಕರು. ಅವರ ವ್ಯಕ್ತಿತ್ವಕ್ಕೆ ಹಲವಾರು ಮುಖಗಳಿದ್ದವು. ಜಾತ್ಯಾತೀತ ರಾಷ್ಟ್ರದಲ್ಲಿ ಸ್ವಜಾತಿಯವರನ್ನೆ ಮೇಲೆತ್ತುವುದು ಅನಿಷ್ಟ ಪರಂಪರೆ ಮಾನವ ಕಲ್ಯಾಣಕ್ಕೆ ಕುತ್ತು. ರಾಷ್ಟ್ರದ ಪ್ರಗತಿಗೆ ಮಾರಕ. ಅಸ್ಪೃಶ್ಯತೆಯಂತ ಅಮಾನುಷ ಮನುಷ್ಯ - ಮನುಷ್ಯರ ನಡುವಣ ಸಂಬಂಧದಲ್ಲಿ ಈ ಕ್ರೂರ ಪದ್ಧತಿ ಆಚರಣೆ ಹಿಂದು ಸಮಾಜದ ಮೇಲಿರುವ ಮಹಾಕಳಂಕ. ಮಾನವೀಯ ತುಡಿತವಿರುವ ಮನುಷ್ಯರನ್ನು ಬಲ್ಲ ಮಹನೀಯರೆಲ್ಲ ಇಂತಹ ಅನಿಷ್ಟದ ವಿರುದ್ಧವೇ ಹೋರಾಡಿ ಜೀವತೆತ್ತದ್ದು. ಆ ನಿಟ್ಟಿನಲ್ಲಿ ಸಮಾಜದೊಳಗಿದ್ದ ಅನಿಷ್ಟ ಪರಂಪರೆಯನ್ನು ಕೊನೆಗಾಣಿಸಲು ಮೌಲ್ಯಾಧಾರಿತ ಸಮಾಜವನ್ನು ಕಟ್ಟಲು ರಾಚಯ್ಯನವರು ಶ್ರಮಿಸಿದರು.

ಕರ್ನಾಟಕ ರಾಜಕಾರಣದಲ್ಲಿ ರಾಚಯ್ಯನವರು ಪ್ರಾಮಾಣಿಕತೆಯನ್ನು ಮೆರೆದ ದಿಗ್ಗಜ. ಗ್ರಾಮೀಣ ಸೊಗಡಿನ ದಲಿತ ರೈತ ಕುಟುಂಬದಲ್ಲಿ ಹುಟ್ಟಿ ಅದೇ ರೈತ ಪರಂಪೆಯಲ್ಲಿಯೇ ಮುನ್ನಡೆದು ಜೀವನದಲ್ಲಿ ಆತ್ಮಗೌರವ, ಸ್ವಾಭಿಮಾನ ಕಾಯ್ದುಕೊಂಡರು. ಜನರಿಗೆ ಧೈರ್ಯ, ಆತ್ಮವಿಶ್ವಾಸವನ್ನು ತುಂಬಿ ಅವರ ಬಾಳನ್ನು ಅರಳಿಸಬಲ್ಲ ಧೀಮಂತ ವ್ಯಕ್ತಿಯಾಗಿದ್ದರು. ಹಳ್ಳಿಗರ ಸಹಜಗುಣ, ಅವಗುಣ ಇವರಲ್ಲಿ ಸದಾಮನೆ ಮಾಡಿದವು. ಸಹೃದಯ, ಅನುಕಂಪ, ಉದಾರತೆ, ನೇರಸ್ವಭಾವ, ದಿಟ್ಟತನ, ನಿರಾಡಂಬರ, ಕರ್ತವ್ಯ ನಿಷ್ಠೆ ಇಂತಹ ಮೌಲ್ಯಗಳನ್ನು ಅಳವಡಿಸಿಕೊಂಡು ದೀನ ದಲಿತರ, ಹಿಂದುಳಿದವರ, ಬಡವರ, ಹಸಿದವರ ಹಾಗೂ ಸಂಕಷ್ಟದಲ್ಲಿದ್ದವರ ಬಗ್ಗೆ ವಿಶೇಷವಾದ ಕನಿಕರ ಮತ್ತು ಕಾಳಜಿಯನ್ನು ಹೊಂದಿದ್ದರು. ರಾಜಕಾರಣದಲ್ಲಿ ರಾಚಯ್ಯ ಅವರು ಒಂದೊಂದೇ ಮೆಟ್ಟಲನ್ನು ಏರುತ್ತಾ ಬಂದಿದ್ದಾರೆ. ಶಾಸಕರಾಗಿ, ಸರ್ಕಾರಿ ಸಂಸ್ಥೆಗಳ ಸದಸ್ಯರಾಗಿ ಅಧ್ಯಕ್ಷರಾಗಿ, ಸಚಿವರಾಗಿ, ರಾಜ್ಯಸಭಾ ಮತ್ತು ಲೋಕಸಭಾ ಸದಸ್ಯರಾಗಿ, ಕೇಂದ್ರದ ಮಂತ್ರಿಯಾಗಿ, ಮತ್ತು ರಾಜ್ಯಪಾಲರಾಗಿ ಹೀಗೆ ಇವರ ನಡೆ ಊರ್ಧ್ವಗತಿಯಾಗಿತ್ತು. ವಿವಿಧ ಹುದ್ದೆಗಳ ಅಧಿಕಾರದಲ್ಲಿದ್ದು ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಕಾನೂನಿಗೆ ದಕ್ಕೆಯಾಗದೆ ನಿಷ್ಪಕ್ಷಪಾತವಾಗಿ ಜನತೆಯ ಸೇವೆಯನ್ನು ಮಾಡಿಕೊಂಡು ಬಂದಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಇವರು ಕಾಯಕಪ್ರಿಯರು.

ಭಾರತದ ಇತಿಹಾಸದಲ್ಲಿ ಬಂಡಾಯದೊಂದಿಗೆ ಜಾತಿ ಬೆಳೆದಿದೆ. ಬುದ್ಧ, ಬಸವ, ಅಂಬೇಡ್ಕರ್ ಜಾತಿ ವ್ಯವಸ್ಥೆಯ ವಿರುದ್ಧ ಸಮರ ಸಾರಿದರು. ಹಾಗೂ ಜಾತಿರಹಿತ ಸಮಾಜ ಕಟ್ಟಲು ಹೊರಟರು. ಇಂದು ಅವೆಲ್ಲ ಜಾತಿ ವ್ಯವಸ್ಥೆಗಳಾಗಿ ತಲೆಎತ್ತಿವೆ. ಇಂಥ ಪಾರಂಪರಿಕ

ಅನಿಷ್ಟ ವ್ಯವಸ್ಥೆಯನ್ನು ಕಿತ್ತೆಸೆಯುವುದು ಆದರ್ಶ ಸಮಾಜದ ಲಕ್ಷಣ. ರಾಚಯ್ಯನವರು ರಾಜಕೀಯದೊಳಗೆ ಜಾತಿಯ ಮಾನದಂಡವಾಗಿದ್ದರೆ ಹೊರತು, ವೈಯಕ್ತಿಕ ಬದುಕಿನಲ್ಲಿ ಜಾತ್ಯಾತೀತ ದೃಷ್ಟಿಕೋನವನ್ನು ಹೊಂದಿದ್ದರು. ಇಡೀ ಜೀವನವನ್ನೇ ಸಾರ್ವಜನಿಕ ಸೇವೆಗಾಗಿ ಮೀಸಲಿಟ್ಟರು. ಹೀಗಾಗಿ ಇವರು ನೊಂದ ವರ್ಗಗಳ ಸಮರ್ಥ ನಾಯಕರಾಗಿದ್ದು, ಆ ವರ್ಗಗಳ ನೋವು, ನಲಿವನ್ನು ಪ್ರತಿಬಿಂಬಿಸುವ ದನಿಯಾಗಿದ್ದರು. ಪ್ರಬಲ ಕೋಮುಗಳ ಮಧ್ಯ ಅಧಿಕಾರದ ಗದ್ದುಗೆಗೇರಿ, ದೇಶವೇ ಮೆಚ್ಚುವಂಥ ಸ್ವಚ್ಛ ಆಡಳಿತ ಮಾಡಿ ದಲಿತರ ಪ್ರತಿಭೆ, ಪಾಂಡಿತ್ಯ, ಆತ್ಮಭಿಮಾನ ಮತ್ತು ಸ್ವಾಭಿಮಾನಗಳನ್ನು ಹೆಚ್ಚಿಸಿದರು. ಕೆಲವು ಬಾರಿ ಪ್ರಬಲ ಕೋಮುಗಳ ಹಿತಾಸಕ್ತಿಯನ್ನು ಹಿಂದೆಸರಿಸಿ ದುರ್ಬಲ ವರ್ಗಗಳ ಪ್ರಗತಿಗೆ ಒತ್ತುಕೊಟ್ಟು ಹಗಲಿರುಳು ಶ್ರಮಿಸಿದರು. ಜನತೆಯ ದೃಷ್ಟಿಯಿಂದ ಬಲಿಷ್ಠ ನಾಯಕರಾಗಿ ಸದಾರಾರಾಜಿಸಿ ಜನಪ್ರಿಯತೆಯ ಮುಗಿಲೆತ್ತರಕ್ಕೇರಿದರು. ಆದರೆ ಈ ಮುಗಿಲೆತ್ತರದ ಹಿನ್ನಲೆ ಕೇವಲ ಆಕಸ್ಮಿಕವಲ್ಲ ಅದು ಸತತ ಪ್ರಯತ್ನ ಹಾಗೂ ನಿರಂತರ ಸಾಧನೆಯಿಂದ ಬಂದದು. ಆಳವಾದ ಅಭ್ಯಾಸ, ಚಿಂತನಾಶೀಲತೆ, ಪ್ರಗತಿಪರ ಆಲೋಚನೆ, ವಿಮರ್ಶಾತ್ಮಕ ದೃಷ್ಟಿಕೋನ ಹಾಗೂ ಹೋರಾಟ - ಸೆಣಸಾಟಗಳ ಧೈರ್ಯ ಇವರಲ್ಲಿ ಗಟ್ಟಿಯಾಗಿದ್ದವು.

ಅವಕಾಶವಾದಿ ರಾಜಕಾರಣಕ್ಕೆ ಇವರೆಂದೂ ಒಳಗಾದವರಲ್ಲ. ಪ್ರತಿಯೊಬ್ಬ ಆದರ್ಶ ರಾಜಕಾರಣಿಯಲ್ಲೂ ಅವರದೇ ಆದ ಸಿದ್ಧಾಂತ, ಆದರ್ಶ ಮತ್ತು ಚಿಂತನೆಗಳಿರುತ್ತವೆ. ಆದರೆ ಈ ಸಿದ್ಧಾಂತಕ್ಕೆ ವಿರುದ್ಧವಾಗಿ ತಮ್ಮ ಚಿಂತನೆ, ಆದರ್ಶಗಳನ್ನು ಗಾಳಿಗೆ ತೂರಿ ಭ್ರಷ್ಟಾಚಾರ, ಸ್ವಜನ ಪಕ್ಷಪಾತ ಮತ್ತು ಜಾತಿ ಆಧಾರಿತ ಸರ್ಕಾರವನ್ನು ನಡೆಸುವಂಥ ಸಂದರ್ಭಗಳಲ್ಲಿ ತಾವು ಪ್ರಾಮಾಣಿಕವಾಗಿ ಒಪ್ಪಿ ಪಕ್ಷ ಮತ್ತು ನಾಯಕತ್ವವನ್ನು ಬದಲಾಯಿಸಿಕೊಳ್ಳುವ ಸಾಧ್ಯತೆಗಳು ಹೆಚ್ಚು. ಆದ್ದರಿಂದಲೇ ರಾಚಯ್ಯನವರು ತಮ್ಮ ನಲವತ್ತು ವರ್ಷಗಳ ರಾಜಕೀಯ ಜೀವನದಲ್ಲಿ ಅನೇಕ ಪಕ್ಷಗಳನ್ನು, ಜವಾಬ್ದಾರಿ ಹೊತ್ತ ನಾಯಕರನ್ನು ಬದಲಾಯಿಸಿಕೊಂಡು ಬಂದವರು. ಇದು ಯಾವತ್ತು ಕೂಡ ಅವಕಾಶವಾದಿ ರಾಜಕಾರಣವಲ್ಲ ಬದಲಿಗೆ ತತ್ತ್ವಾದರ್ಶಗಳನ್ನು ಕಾಪಾಡಿಕೊಳ್ಳಲು ಮಾಡಿದಂತಹ ಹೋರಾಟ.

ಭಾರತೀಯ ಇತಿಹಾಸ ಪರಂಪರೆಯಲ್ಲಿ ಕರ್ನಾಟಕದ ದಕ್ಷಿಣ ಜಿಲ್ಲೆಯಾದ ಮೈಸೂರು ಉಜ್ವಲ ಸಾಂಸ್ಕೃತಿಕ ಪರಂಪರೆಯಿಂದ ಮೆರೆದ ನಾಡು. ಕನ್ನಡ ಸಾಹಿತ್ಯ, ಜಾನಪದ, ಸಂಗೀತ, ನೃತ್ಯ, ನಾಟಕ ಹಾಗೂ ರಾಜಮನೆತನದವರ ತವರು ಮನೆ. ದೇಶದ ಸ್ವಾತಂತ್ರ್ಯ ಸಂಗ್ರಾಮಕ್ಕೂ ವಿಶಿಷ್ಟ ಕಾಣಿಕೆ ನೀಡಿದ ಈ ಪ್ರದೇಶ ದೇಶ, ವಿದೇಶಿಯರ ಗಮನ ಸೆಳೆಯುವ ಮೂಲಕ ಬೌದ್ಧಿಕ ಬೆಳವಣಿಗೆ ಮತ್ತು ಪ್ರಗತಿಪರ ಚಿಂತನೆಗಳಿಗೆ ಹೊಸ ಆಯಾಮವನ್ನು ಹಾಕಿಕೊಟ್ಟಿದೆ.

ಆಲೂರು ಎಷ್ಟು ಪುರಾತನ ಕಾಲದೆಂದು ನಿರ್ಧರಿಸಲು ಸಧ್ಯಕ್ಕೆ ಸೂಕ್ಷ್ಮ ಐತಿಹಾಸಿಕ ಪುರಾವೆಗಳಿಲ್ಲ. ಆದರೆ ಊರ ತೋಟದಲ್ಲಿರುವ ಶಾಸನದಲ್ಲಿರುವ ಅರ್ಕೇಶ್ವರ ದೇವಸ್ಥಾನದ ಮಹಾದ್ವಾರದ ಹಾಸುಗಲ್ಲಿನಲ್ಲಿರುವ ಶಾಸನದಲ್ಲಿ ಈ ಊರಿಗೆ ಸಂಬಂಧಿಸಿದ ವಿವರಣೆ ಉಂಟು.

ಈ ರೀತಿ ರಾಚಯ್ಯನವರ ಹುಟ್ಟುರಾದ ಆಲೂರು ಸಮುದಾಯದ ಬದುಕಿಗೂ ಸೌಹಾರ್ದತೆಗೂ ಹೆಸರಾದುದು ಎಂಬುದಕ್ಕೆ ಇನ್ನೂ ಹಲವಾರು ಶಾಸನಗಳಲ್ಲಿ ನಿದರ್ಶನಗಳಿವೆ.

ಬಿ. ರಾಚಯ್ಯನವರು ಹುಟ್ಟಿದ ಆಲೂರು ಹಲವು ವೈಶಿಷ್ಟ್ಯತೆಗಳಿಂದ ಕೂಡಿ ನಡೆದು ಬಂದಿದ್ದರೂ ಕಾಲಕ್ರಮೇಣ ಗ್ರಾಮದ ಸಮುದಾಯ ಬದುಕಿನಲ್ಲಿ ಕೆಲವು ಸಾಮಾಜಿಕ ಅನಿಷ್ಟಗಳು ತಲೆ ದೋರಲಿಲ್ಲ. ಚುನಾವಣಾ ರಾಜಕೀಯ ಪದ್ಧತಿ ಆರಂಭವಾದ ತರುವಾಯ ರಾಜಕೀಯ ವಿರಸಗಳು ಜಾತಿಯ ತಿರುವು ಪಡೆಯ ತೊಡಗಿದವು. ದಲಿತರಿಗೆ ಆ ಗ್ರಾಮದಲ್ಲಿ ಸರಿಯಾದ ಸ್ಥಾನಮಾನಗಳಿಲ್ಲದಿದ್ದರೂ ಸ್ವಾಭಿಮಾನ ಮತ್ತು ಸ್ವಾವಲಂಬಿಗಳಾಗಿ, ಕಷ್ಟ ಸಹಿಷ್ಣತೆ ಈ ವರ್ಗದ ಜನಜೀವನವನ್ನು ಮುನ್ನಡೆಸಿದ ಶಕ್ತಿಗಳಾಗಿದ್ದವು. ಗ್ರಾಮದಲ್ಲಿನ ಅಂಥವರಲ್ಲಿ ಚಿಕ್ರ ನಂಜಯ್ಯ ಒಬ್ಬರು. ಇವರು ರಾಚಯ್ಯನವರ ತಾತಾ. ಚಿಕ್ರ ನಂಜಯ್ಯ ಆರ್ಥಿಕವಾಗಿ ಅಂಥ ಅನುಕೂಲಸ್ಥರಲ್ಲದಿದ್ದರೂ, ದುಡಿದು ಬದುಕುವ, ಅವರ ಬದುಕಿನ ಕ್ರಮ ಅನ್ಯರಿಗೆ ಮಾದರಿ ಮತ್ತು ಪ್ರೇರಣೆ. ಹೀಗೆ ಮೇಲ್ವರ್ಗದವರ ಹೊಲ ಮತ್ತು ಮನೆಗಳಲ್ಲಿ ಜೀತ ಮಾಡಿ ಬದುಕುತ್ತಿದ್ದ ದಲಿತ ವರ್ಗದ ಜನ ಹೊಸ ಜೀವನವನ್ನು ಹುಡುಕುವ ಆಲೋಚನೆಗೆ ಚಿಕ್ರ ನಂಜಯ್ಯ ಮಾದರಿಯಾದರು. ಇವರಿಗೆ ಐದು ಜನ ಮಕ್ಕಳು. ಮೂರು ಗಂಡು, ಎರಡು ಹೆಣ್ಣು. ಗಂಡು ಮಕ್ಕಳಲ್ಲಿ ಹಿರಿಯವರೆ ಪೊಳ್ಳಂಡೆ ಬಸವಯ್ಯ. ಅವರು ಬಿ. ರಾಚಯ್ಯನವರ ತಂದೆ. ಈ ಸಂಸಾರಕ್ಕೆ ಒಂದು ಎಕರೆ ಇನಾಮ್ ಜಮೀನು ಹನ್ನೆರಡು ಅಂಕಣದ ಒಂದು ತೆಂಗಿನ ಗರಿ ಹೊದಿಕೆಯ ಮನೆ. ವರ್ಷಕ್ಕೊಮ್ಮೆ ಬತ್ತದ ಒಣಹುಲ್ಲನ್ನು ಮನೆಗೆ ಹೊದಿಸುತ್ತಿದ್ದರು. ಈ ಮನೆಯ ಒಂದು ಭಾಗದಲ್ಲಿ ಅವರ ದಾಯಾದಿ ಕುಟುಂಬ ವಾಸವಾಗಿದ್ದು, ಉಳಿದ ಜಾಗದಲ್ಲಿ ದನಗಳನ್ನು ಕಟ್ಟುತ್ತಿದ್ದರು. ಚಿಕ್ರ ಇನಾಮ್ ಜಮೀನಿನಲ್ಲಿ ಬತ್ತ ಬೆಳೆಯುತ್ತಿದ್ದರು. ಅಲ್ಲದೆ ಹಸುಗಳಿಂದ ಹಾಲು ಕರೆದು ಮೊಸರು ಮತ್ತು ಬೆಣ್ಣೆಯನ್ನು ತೆಗೆದು ಮಾರುತ್ತಿದ್ದರು. ಹೀಗೆ ನಡೆದಿತ್ತು ಚಿಕ್ರ ನಂಜಯ್ಯನವರ ಕುಟುಂಬದ ಜೀವನ.

ಚಿಕ್ರ ನಂಜಯ್ಯನವರ ಮೊದಲನೆ ಮಗನಾದ ಪೊಳ್ಳಂಡೆ ಬಸವಯ್ಯ ಮನೆಯ ಹಿರಿಯ ಮಗನಾಗಿದ್ದು, ಎಲ್ಲಾ ಜವಾಬ್ದಾರಿಗಳನ್ನು ವಹಿಸಿಕೊಂಡು ತಂಗಿಯರಿಗೆ, ತಮ್ಮಂದರಿಗೆ ಮದುವೆ, ಬಸಗೆ ತಂಗಿಯರಿಗೆ ಬಾಣಂತನವನ್ನೆಲ್ಲ ಮಾಡಿಸಿದರು. ಇವರು ಸಹ ತಂದೆಯಂತೆಯೇ ಎತ್ತರವಾದ ದೇಹಸೌಷ್ಟವ. ಕಪ್ಪಾದರೂ ಆಕರ್ಷಣೀಯವಾದ ದೈಹಿಕ ನಿಲುವು. ರಾತ್ರಿ ಹಗಲು ಎನ್ನದೆ ದುಡಿದು ಮಕ್ಕಳನ್ನು ಸಾಕುತ್ತಿದ್ದರು. ಇವರು ತಮ್ಮ ತಮ್ಮಿಂದಿರನ್ನಾಗಲಿ ಅಥವಾ ಮಕ್ಕಳನ್ನಾಗಲಿ ಮೇಲ್ವರ್ಗದವರ ಕೇರಿಗೆ ಹೋಗಿ ಅವರ ಆಳುಗಳಾಗಿ ದುಡಿಯಲು ಕಳುಹಿಸಿದವರಲ್ಲ, ಜೀತಕ್ಕಂತೂ ಕಳಿಸಲೇ ಇಲ್ಲ. ಆದರೆ ಅವರ ಹೊಲ ತೋಟಗಳನ್ನು ಮಾತ್ರ ವಾರ ಸಾಗುವಳಿಗೆ ತೆಗೆದುಕೊಳ್ಳುತ್ತಿದ್ದರಷ್ಟೆ. ಅದರಲ್ಲೂ ಮೇಲ್ವರ್ಗದ ಅನೇಕ ಮಂದಿ ಇವರಿಗೆಂದರೆ ತೋಟಗಳನ್ನು ಗುತ್ತಿಗೆಗೆ ಕೊಡಲು ಮುಂದೆ ಬರುತ್ತಿದ್ದರು. ಕಾರಣ ಪ್ರಾಮಾಣಿಕ ತೀರ ನಿಯತ್ತಿನ ಮನುಷ್ಯ, ಶ್ರಮಜೀವಿ ಧೈರ್ಯವಂತ, ದುಡಿದು ನಮ್ಮ ಅಡಿಕೆ ಮತ್ತು ತೆಂಗಿನ ತೋಟಗಳಲ್ಲಿ ಹೆಚ್ಚಿನ ಫಸಲನ್ನು ತೆಗೆಯುತ್ತಾನೆ ಎಂಬ ನಂಬಿಕೆ ಅವರಲ್ಲಿತ್ತು.

ಪೊಳ್ಳಂಡೆ ಬಸವಯ್ಯ ಮೂಲತಃ ಸೂಕ್ಷ್ಮಮತಿವಂತ. ಯಾರಿಗೂ ತೊಂದರೆ ಮಾಡದೆ, ಯಾರಿಗಾದರೂ ಸಹಾಯ ಮಾಡಲು, ಸಾಧ್ಯವಾದರೆ ಖಂಡಿತಾ ಮಾಡುತ್ತ, ಯಾರ ಆಶ್ರಯವಿಲ್ಲದೆ ತಮ್ಮ ಸ್ವಂತ ಶಕ್ತಿಯಿಂದ ಮುಂದೆ ಬಂದರು. ಇವರಿಗೆ ಸಿದ್ಧಯ್ಯ, ಮಾದಯ್ಯ, ಬಸವಯ್ಯ, ರಾಚಯ್ಯ ಮತ್ತು ನಂಜಮ್ಮ ಎಂಬ ಐದು ಜನ ಮಕ್ಕಳು. ಸಿದ್ಧಯ್ಯ ತಲೆಗೆ ಹಿರಿಯ ಮಗನಾಗಿದ್ದು ತಂದೆ ಬದುಕಿದ್ದಾಗಲೇ ಮನೆಯ ಎಲ್ಲ ಒಡೆತನವನ್ನು ತೆಗೆದುಕೊಂಡು ತಮ್ಮಂದಿರು ಮತ್ತು ತಂಗಿಗೆಲ್ಲ ಶುಭ ಸೋಬನಗಳನ್ನು ಮಾಡಿಸಿ, ಎಲ್ಲರನ್ನು ಒಂದು ವ್ಯವಸ್ಥೆಗೆ ತಂದರು. ಹೀಗೆ ಪೊಳ್ಳಂಡೆ ಬಸವಯ್ಯನವರದು ಒಂದು ಅವಿಭಕ್ತ ಕುಟುಂಬವಾಗಿ ತಮ್ಮ ಅಪ್ಪನ ಕಾಲದಿಂದಲೂ ಎಲ್ಲರೂ ಜೊತೆಯಲ್ಲಿಯೇ ಇದ್ದು ಒಗ್ಗಟಿನಿಂದ ಬಾಳಿ ಬದುಕಿದರು. ಒಂದೇ ಸೂರಡಿ, ಒಂದೇ ಒಲೆಯಲ್ಲಿ ಅಟ್ಟುಂಡವರು. ಯಾರಾದರೂ ಮೆಚ್ಚಬಹುದಾದ ನಂಟು ನಡವಳಿಕೆಯ ಮನೆತನ ಈ ಕುಟುಂಬದ ವೈಶಿಷ್ಟ್ಯವಾಗಿತ್ತು. ಪೊಳ್ಳಂಡೆ ಬಸವಯ್ಯನವರ ನಾಲ್ಕನೆಯ ಮಗನೆ ಬಿ. ರಾಚಯ್ಯ ಇವರು ಬಾಲ್ಯದಿಂದಲೂ ಶಿಕ್ಷಣದಲ್ಲಿ ಬಹು ಆಸಕ್ತಿಯನ್ನು ತಾಳಿ ಬಿ.ಎಸ್.ಸಿ ಮತ್ತು ಬಿ.ಎಲ್. ಪದವೀಧರರಾಗಿ, ವಕೀಲರಾಗಿ, ಮುಂದೆ ಅವರು ಅನಿರೀಕ್ಷಿತವಾಗಿ ರಾಜಕಾರಣಕ್ಕೆ ಪ್ರವೇಶಿಸಿ, ತಮ್ಮ ಪ್ರಖರ ವಿಚಾರವಂತಿಕೆಯಿಂದ ರಾಷ್ಟ್ರಮಟ್ಟದ ರಾಜಕಾರಣದಲ್ಲಿ ಎತ್ತರದ ವ್ಯಕ್ತಿತ್ವವನ್ನು ನಿರ್ಮಿಸಿದಂತಹವರು. ಇವರೇ ಪ್ರಸ್ತುತ ಜೀವನ ಚರಿತ್ರೆಯ ಕಥಾ ನಾಯಕರು.

ಹಚ್ಚನೆಯ ಹಸಿರು ಪರಿಸರ; ಜನ ಜಾನುವಾರುಗಳಿಗೆ ಆಶ್ರಯ ತಾಣವಾಗಿ, ಸುವರ್ಣಾವತಿ ಹೊಳೆಯ ಬಲ ಭಾಗದ ಸಮೀಪದಲ್ಲಿ ನೆಲೆಗೊಂಡಿರುವ ಆಲೂರು, ತನ್ನ ಒಡಲೊಳಗೆ ಸಮುದಾಯ ಬದುಕಿಗೆ ಆಶ್ರಯ ನೀಡಿದೆ. ಈ ಊರಿನ ಪೂರ್ವ ದಿಕ್ಕಿನಲ್ಲಿ ನೆಲೆಸಿರುವ ದಲಿತರು ಶ್ರಮಜೀವಿಗಳಾಗಿ ಬದುಕುತ್ತಿದ್ದು, ಈ ಕೇರಿಯ ಯಜಮಾನ ಪೊಳ್ಳಂಡೆ ಬಸವಯ್ಯ ಮತ್ತು ಶ್ರೀಮತಿ ಸಿದ್ಧಮ್ಮ ಶ್ರಮ ಜೀವಿ ಸತಿಪತಿಯಾಗಿ ತಮ್ಮ ನಿತ್ಯಕಾಯಕದಲ್ಲಿ ನಂಬಿಕೆ ಇಟ್ಟು ವಾಸವಾಗಿದ್ದರು. ಇಂತಹ ಪ್ರಾಮಾಣಿಕ ಶ್ರಮಿಕ ರೈತ ಕುಟುಂಬದಲ್ಲಿ 1922ರ ಆಗಸ್ಟ್ 10 ರಂದು ರಾಚಯ್ಯನವರು ಹುಟ್ಟಿದ್ದರು.

ಗಂಡು ಮಗು ಎಂದೊಡನೆ ಬಸವಯ್ಯನಿಗೆ ಅಸಮಾಧಾನ. ಏಕೆಂದರೆ ಈಗಾಗಲೇ ಮೂರ ಜನ ಗಂಡು ಮಕ್ಕಳಿದ್ದರು. ನಾಲ್ಕನೆಯ ಮಗು ಹೆಣ್ಣಾಗಬಹುದೆಂಬ ನಿರೀಕ್ಷೆಯಲ್ಲಿದ್ದರು. ಆದರೆ ಹಾಗಗಲಿಲ್ಲ. ಅದು ಸಹ ತಂದೆಯ ಮುಖ ಮುದ್ರೆ ಹೋಲುವಂಥ ದುಂಡು ಮುಖದ ಗಂಡು ಮಗುವಾಯಿತು. ಮನೆಯವರಿಗೆ ಹೆಣ್ಣು ಮಗುವಿನ ಬಯಕೆ ಇದ್ದುದರಿಂದ ಈ ಮಗುವಿನ ಮೇಲೆ ಅಂತಹ ಪ್ರೀತಿ ಇರಲಿಲ್ಲ. ವಾರದ ನಂತರ ಸ್ಥಳೀಯ ದಾಸಯ್ಯನೊಬ್ಬನ ನೇತೃತ್ವದಲ್ಲಿ ಮಗುವಿನ ನಾಮಕರಣವಾಯಿತು. ಮಗುವಿಗೆ ಯಾವ ಹೆಸರಿಡಬೇಕು ಎನ್ನುವ ವೇಳೆಗೆ "ಹಿಂದಲಿಂದ ನಮ್ಮದು ಮಂಟೇ ಸ್ವಾಮಿ ಒಕ್ಕಲು, ರಾಚಪ್ಪಾಜಿಗೆ ಹೊಂದಿಕೊಳ್ಳುವಂತೆ ರಾಚಯ್ಯ ಅಂತ ಕರೀರಿ" ಎನ್ನುವ ಮಾತು ಕೇಳಿ ಬಂದೊಡನೆಯೇ ಎಲ್ಲರೂ ಒಪ್ಪಿಗೆ ಸೂಚಿಸಿದರು. ಆಗ ದಾಸಯ್ಯ ಮಗುವಿನ ಬಾಯಿಗೆ ಸುವರ್ಣಾಮಯ ತೀರ್ಥಹಾಕಿ ಹಣೆಗೆ ಗಂಧಾಕ್ಷತೆ ಹಚ್ಚಿ, ಕಿವಿಗೆ

ತುಳಸಿದಳ ಇಟ್ಟು, ಮೂರು ಸಾರಿ ರಾಚಯ್ಯ, ರಾಚಯ್ಯ, ರಾಚಯ್ಯ ಎಂದು ಹೇಳಿದೊಡನೆ ಕುಟುಂಬದವರೆಲ್ಲ ಅನುಮೋದಿಸಿದರು.

ರಾಚಯ್ಯನವರು ಎಂಟು ವರ್ಷಕ್ಕೆ ಕಾಲಿಡುತ್ತಿದ್ದರೂ ಶಾಲೆಗೆ ಸೇರಿರಲಿಲ್ಲ. ಅಣ್ಣಂದಿರು ಪ್ರೈಮರಿ ನಾಲ್ಕನೆಯ ತರಗತಿ ಮುಗಿಸಿದ್ದು, ಮುಂದೆ ಓದಲಿಲ್ಲ, ಏಕೆಂದರೆ ಗುತ್ತಿಗೆ ಜಮೀನುಗಳ ಸಾಗುವಳಿ ಕೆಲಸ ಹೆಚ್ಚಾಗಿ ವ್ಯವಸಾಯ, ದನಕುರಿಗಳನ್ನು ಕಾಯುವ ಕಾಯಕವೇ ಅವರ ಬಲವಾಯಿತು. ಆದರೆ ಕಿರಿಯ ಮಗನಾದ ರಾಚಯ್ಯನನ್ನಾದರೂ ಓದಿಸಬೇಕೆಂಬ ಆಸೆಯಿಂದ ಬಸವಯ್ಯ ಊರಿನ ಚಾವಡಿಯಲ್ಲಿದ್ದ ಪ್ರೈಮರಿ ಶಾಲೆಗೆ ಸೇರಿಸಿದರು. ಪ್ರಾಥಮಿಕ ಶಿಕ್ಷಣವೇನೋ ಆಲೂರಿನಲ್ಲೇ ಆಯಿತು. ಆದರೆ ಮಾಧ್ಯಮಿಕ ಶಿಕ್ಷಣಕ್ಕಾಗಿ ಚಾಮರಾಜನಗರದ ಸರ್ಕಾರಿ ಶಾಲೆಗೆ ಪ್ರವೇಶ ಪಡೆದರು. ಆದರೆ ಶಾಲೆಗೆ ಆಕಸ್ಮಿಕವಾಗಿ ಬೆಂಕಿಬಿದ್ದು ಕೊಠಡಿ ಸುಟ್ಟುಹೋದ ಕಾರಣ ಮುಂದಿನ ತರಗತಿಗಳಿಗೆ ಸೇರುವುದಕ್ಕಾಗಲಿಲ್ಲ. ಅಷ್ಟೊತ್ತಿಗಾಗಲೇ ರಾಚಯ್ಯನವರು ವ್ಯವಸಾಯ ಮಾಡುವ ವಿಷಯದಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದು ಗದ್ದೆ ಹೊಲಗಳಲ್ಲಿ ಉಳುವ ಬಿತ್ತುವ, ದನಕುರಿಗಳನ್ನು ಮೇಯಿಸುವ ಮತ್ತು ಅವನ್ನು ತೊಳೆಯುವ ಕೆಲಸದಲ್ಲಿ ಅಷ್ಟೆ ಪರಿಣತಿ ಪಡೆದಿದ್ದರು.

ಮುಂದಿನ ವರ್ಷ ಚಾಮರಾಜನಗರ ತಾಲ್ಲೂಕಿನ ಕುದೇರು ಗ್ರಾಮದಲ್ಲಿನ ಮಾಧ್ಯಮಿಕ ಶಾಲೆಗೆ ಸೇರಿಕೊಂಡು. ಒಂದು ವರ್ಷ ಮಾತ್ರ ವ್ಯಾಸಂಗ ಮಾಡಿದರು. ಆದರೆ ಮೂರನೆಯ ವರ್ಷ ಮತ್ತೆ ಕುದೇರಿನಲ್ಲಿಯೇ ಮುಂದುವರೆಸಲು ಸ್ವಲ್ಪ ಕಷ್ಟವಾಯಿತು. ಏಕೆಂದರೆ ಕಾಲದಲ್ಲಿ ಸರಿಯಾದ ರಸ್ತೆ ಮಾರ್ಗಗಳಿಲ್ಲದೆ ಆಲೂರಿನಿಂದ ಕುದೇರಿಗೆ ಹೊಲಗದ್ದೆಗಳ ಮಾರ್ಗವಾಗಿ ನೀರುಹಾಯ್ದು ಬಹಳ ಪರಿಶ್ರಮದಿಂದ ಹೋಗಬೇಕಾಯಿತು. ಇಂಥ ಸೂಕ್ಷ್ಮಗಳನ್ನು ಹತ್ತಿರದಿಂದ ಗಮನಿಸಿದ ಮನೆಯವರು, ರಾಚಯ್ಯನವರ ಇಚ್ಛೆಯಂತೆ ಮೈಸೂರು ನಗರದಲ್ಲಿದ್ದ ನೇರಳೆ ರಂಗರಾಮಯ್ಯನವರ ಅನುದಾನಿತ ವಿದ್ಯಾರ್ಥಿ ನಿಲಯಕ್ಕೆ ಸೇರಿಸಿ, ಟೌನ್ ಹಾಲ್ ಪಕ್ಕದಲ್ಲಿದ್ದ ಮೆಥೋಡಿಸ್ ಕ್ರೈಸ್ತ ಮಿಷನರಿ ಶಾಲೆಯ ಮಾಧ್ಯಮಿಕ ವಿಭಾಗಕ್ಕೆ ಪ್ರವೇಶ ಕೊಡಿಸಿದರು. 1933ರ ಹೊತ್ತಿಗೆ ರಾಚಯ್ಯನವರು ಇಲ್ಲಿ ಲೋಯರ್ ಸೆಕೆಂಡರಿಯನ್ನು ಅತ್ಯಂತ ಯಶಸ್ವಿಯಾಗಿ ಮುಗಿಸಿದರು.

ಅಂದಿನ ಮೈಸೂರು ಸಂಸ್ಥಾನದ ಯುವರಾಜರಾಗಿದ್ದ ಶ್ರೀಕಂಠೀರವ ನರಸಿಂಹರಾಜ ರಾಜ ಒಡೆಯರ್ (ಜಯಚಾಮರಾಜೇಂದ್ರ ಒಡೆಯರ್ ತಂದೆ) ಹೆಸರಿನಲ್ಲಿ ನಿಮ್ನವರ್ಗದವರ ವಿದ್ಯಾಭ್ಯಾಸಕ್ಕಾಗಿ ಹಾಸನದಲ್ಲಿ ಉಚಿತ ವಿದ್ಯಾರ್ಥಿ ನಿಲಯವೊಂದನ್ನು ತೆರೆದಿದ್ದರು. ಇಂತಹದೊಂದು ಅನುಕೂಲತೆ ಇದೆ ಎಂಬುದನ್ನು ತಿಳಿದ ರಾಚಯ್ಯ ಪ್ರೌಢ ವ್ಯಾಸಂಗಕ್ಕಾಗಿ ಹಾಸನದ ನರಸಿಂಹರಾಜ ಹಾಸ್ಟೆಲ್ ಮತ್ತು ಸರ್ಕಾರಿ ಪ್ರೌಢ ಶಾಲೆಗೆ ಸೇರಲು ಪ್ರವೇಶ ಕೋರಿ ಅರ್ಜಿ ಹಾಕಿದರು. ಅಷ್ಟರಲ್ಲಿ ವಿದ್ಯಾರ್ಥಿ ನಿಲಯಕ್ಕೆ ಪ್ರವೇಶ ಪಡೆಯಲು ಬಂದಿದ್ದ ಅರ್ಜಿಗಳನ್ನು ಸಂಬಂಧಪಟ್ಟ ಅಧಿಕಾರಿಗಳು ಪರಿಶೀಲಿಸಿ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ

ಪಡೆದಿದ್ದ ಅಂಕಗಳ ಆಧಾರದ ಮೇಲೆ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದರು. ಪರಿಣಾಮವಾಗಿ ರಾಚಯ್ಯನವರಿಗೆ ಇಲ್ಲಿ ಸೀಟ್ ಸಿಕ್ಕಿ, ಹಾಸನದ ಸರ್ಕಾರಿ ಪ್ರೌಢ ಶಾಲೆ ಮತ್ತು ನರಸಿಂಹರಾಜ ಹಾಸ್ಟೆಲಿಗೆ ಸೇರಿಕೊಂಡರು.

ಪ್ರೌಢ ಶಾಲೆಯ ವ್ಯಾಸಂಗದ ಅವಧಿಯಲ್ಲಿ ರಾಚಯ್ಯನವರು ಪ್ರತಿ ವರ್ಷವು ಮೊದಲ ದರ್ಜೆಯಲ್ಲಿಯೇ ಉತ್ತೀರ್ಣರಾಗುತ್ತಿದ್ದರು. ಇಂಗ್ಲೀಷ್ ಮತ್ತು ಗಣಿತದಲ್ಲಿ ಮಾತ್ರ ಮೊದಲ ಸ್ಥಾನವನ್ನು ಕಾಯ್ದಿರಿಸಿಕೊಳ್ಳುತ್ತಿದ್ದರು. ಕ್ರೀಡೆಯಲ್ಲಿ ಎಲ್ಲಿಲ್ಲದ ಆಸಕ್ತಿ ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ ಶಾಲಾ ಮೈದಾನದಲ್ಲಿ ಸ್ನೇಹಿತರೊಡಗೂಡಿ ವಾಲಿಬಾಲ್, ಫುಟ್‌ಬಾಲ್, ಷಾಟ್‌ಪುಟ್, ಲಾಂಗ್‌ಜಂಪ್ ಮತ್ತು ಹೈ ಜಂಪ್ ಮಾಡುತ್ತಿದ್ದರು. ವಾಲಿಬಾಲ್ ಇವರ ಅಚ್ಚುಮೆಚ್ಚಿನ ಆಟವಾಗಿದ್ದು, ಅದರ ಮುಖ್ಯ ಹಿಟ್ಟರ್ ಆಗಿದ್ದರು. ಹಾಗೆಯೇ ಡ್ರಿಲ್, ಕುಸ್ತಿ ಮತ್ತು ಕವಾಯಿತುಗಳಲ್ಲೂ ತಪ್ಪದೆ ಭಾಗವಹಿಸುತ್ತಿದ್ದರು.

1940ರಲ್ಲಿ ಹಾಸನದ ಪ್ರೌಢ ಶಾಲೆಯಿಂದ ಚಿತ್ರದುರ್ಗಕ್ಕೆ ವಿದ್ಯಾರ್ಥಿಗಳ ಸ್ಪೇಟ್ ರ್‍ಯಾಲಿಯನ್ನು ಕರೆದುಕೊಂಡು ಹೋಗಬೇಕಾಗಿದ್ದು; ಅದಕ್ಕೆ ರಾಚಯ್ಯನವನ್ನೇ ಸ್ಕೌಟ್ ತಂಡದ ನಾಯಕನನ್ನಾಗಿ ಆಯ್ಕೆ ಮಾಡಿ ಮುಂದಿನ ಸಾಲಿನಲ್ಲಿ ನಿಲ್ಲಿಸಲಾಗಿತ್ತು. ಆಗ ಮೈಸೂರು ಸಂಸ್ಥಾನದ ಯುವ ರಾಜರಾದ ಶ್ರೀಕಂಠೀರವ ನರಸಿಂಹರಾಜ ಒಡೆಯರು ಈ ರ್‍ಯಾಲಿಯನ್ನು ಉದ್ಘಾಟಿಸುವುದಕ್ಕೆ ಬಂದಿದ್ದರು. ದಿಟ್ಟ ಎದೆಗಾರ ಯೋಧನಂತೆ ನಿಂತಿದ್ದ ರಾಚಯ್ಯನಲ್ಲಿಗೆ ಬಂದ ಯುವರಾಜರು, ರಾಚಯ್ಯ ನಿಂತಿದ್ದ ದಿಟ್ಟ ನಿಲುವನ್ನು ಕಂಡು ಸಂತೋಷದಿಂದ ಅವನ ಭುಜ ತಟ್ಟಿದರು. ರಾಚಯ್ಯನವರು ತಕ್ಷಣವೇ ಅಟೆನ್‌ಷನ್ ಆಗಿ ಬಹು ಆಕರ್ಷಕವಾಗಿ ಸೆಲ್ಯೂಟ್ ಮಾಡಿದರು. ಹೈಸ್ಕೂಲಿನ ಶೈಕ್ಷಣಿಕ ಅವಧಿಯಲ್ಲಿ ಹಾಸನದ ಸುತ್ತಮುತ್ತಲ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದು ಎಲ್ಲ ವಿದ್ಯಾರ್ಥಿಗಳ ಆಸೆಯಾಗಿತ್ತು. ಆಗ ರಾಚಯ್ಯನವರ ಮುಂದಾಳತ್ವ ಹಾಸನದಿಂದ ಇಪ್ಪನ್ನಾಲ್ಕು ಮೈಲಿ ದೂರದಲ್ಲಿರುವ ಬೇಲೂರಿನ ಚೆನ್ನಕೇಶವ ದೇವಾಲಯಕ್ಕೆ ಕಾಲ್ನಡಿಗೆಯಲ್ಲಿಯೇ ಹೋಗಿದ್ದರು. ಹಾಗೆಯೇ ಬರುವಾಗ ಕನ್ನಡದ ಪ್ರಖ್ಯಾತ ಸಾಹಿತಿ ಗೊರುರು ರಾಮಸ್ವಾಮಿ ಅಯ್ಯಾಂಗಾರ್‌ರ ಮನೆಗೆ ಹೋದರು. ಗೊರೂರು ರಾಚಯ್ಯನ ನಾಯಕತ್ವವನ್ನು ತುಂಬಾ ಮೆಚ್ಚಿ ಬೆನ್ನುತಟ್ಟುತ್ತ "ಏನ್ ಹೆಸರೇನಪ್ಪ ? ......." ಎಂದು ಕೇಳಿದರು. ಆಗ "ನನ್ನೆಸರು ರಾಚಯ್ಯ ಸಾರ್ ......." ಎಂಬುದಾಗಿ ರಾಚಯ್ಯ ಉತ್ತರ ಹೇಳಿದ ಕೂಡಲೆ, ಗೊರೂರು ಪುನಃ ರಾಚಯ್ಯನ ಬೆನ್ನು ತಟ್ಟುತ್ತ "ಒಳ್ಳೇ ಶಿಸ್ತಿನ ಸಿಪಾಯಿ ಇದ್ದಂತಿಯಾ ....... ದೇಶದ ಯುವಕರು ನಿಮ್ಮಂತಿರಬೇಕು .........." ಎಂದು ಹೇಳಿದ ಗಾಂಧಿವಾದಿ ಗೊರೂರು ಅಭಿಮಾನದಿಂದ ಬೀಗಿದರು.

ಹೀಗೆ ರಾಚಯ್ಯನವರ ಪ್ರೌಢ ಶಿಕ್ಷಣ ಪ್ರಗತಿಯ ಹಾದಿಯಲ್ಲಿ ನಡೆಯುತ್ತಿದ್ದಂತೆ ನಿಲಯ ಪಾಲಕರ ಅವ್ಯವಹಾರದಿಂದ ವಿದ್ಯಾರ್ಥಿ ನಿಲಯದಲ್ಲಿ ತುಸು ಗೊಂದಲದ ವಾತಾವರಣ ನಿರ್ಮಾಣವಾಯಿತು. ಅಂದು ಹುಡುಗರೆಲ್ಲ ತುಂಬಾ ಹಸಿವಿನಿಂದ ಕೋಪಗೊಂಡು ರಾಚಯ್ಯನವರ ನೇತೃತ್ವದಲ್ಲಿ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದರು, ಅಷ್ಟರಲ್ಲಿ ಹಾಸ್ಟೆಲಿನ ಅಧ್ಯಕ್ಷರಾದ ಎಚ್.ಬಿ. ಗುಂಡಪ್ಪ ಗೌಡರು ಬಂದು ಸ್ವಲ್ಪ ಒರಟಾಗಿ ಬೈದು ಕೋಪದಿಂದ

ವಿಚಾರಣೆ ಮಾಡಿದರು. ಆಗ ರಾಚಯ್ಯನವರು ವಿದ್ಯಾರ್ಥಿ ಮುಖಂಡರಾಗಿ ಹೆದರದೆ ಎದ್ದು ನಿಂತು, ಆಡಳಿತ ವರ್ಗದವರು ಕೊಡುತ್ತಿದ್ದ ಕಿರುಕುಳಗಳನ್ನು, ವಿದ್ಯಾರ್ಥಿಗಳಿಗಾಗಿರುವ ಅನ್ಯಾಯಗಳನ್ನು ತೋಡಿಕೊಂಡರು, ಇದನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡ ನಿಲಯ ಪಾಲಕರು ವಿದ್ಯಾರ್ಥಿಗಳಿಗೆ ತೊಂದರೆ ಕೊಡುವುದಕ್ಕೆ ಸಮಯ ಕಾಯುತ್ತಲೇ ಇದ್ದರು. ಅಷ್ಟೊತ್ತಿಗೆ 1941ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆ ಬಂದಿತ್ತು. ಹಾಸ್ಟೆಲ್ ಮುಚ್ಚಿತು, ಇದರಿಂದ ರಾಚಯ್ಯನವರು ವಿಜ್ಞಾನ ಪರೀಕ್ಷೆಯ ದಿನ ಹಸಿವನ್ನು ತಾಳಲಾರದೆ ಮಧ್ಯಂತರಕ್ಕೆ ಕೊಠಡಿಯಿಂದ ಹೊರಬಂದರು. ಪರಿಣಾಮವಾಗಿ ರಾಚಯ್ಯನವರು ಮೊದಲ ಪ್ರಯತ್ನದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅನುತ್ತೀರ್ಣರಾದರು. ಮತ್ತೆ ರಾಚಯ್ಯನವರು ಎಸ್.ಎಸ್.ಎಲ್.ಸಿ. ಓದಲು ಮೈಸೂರಿನ ಮಹಾಜನ ಹೈಸ್ಕೂಲಿಗೆ ಪ್ರವೇಶ ಪಡೆದು ಪಾಸು ಮಾಡಿಕೊಂಡರು.

ಮುಂದೆ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಟರ್‌ಮೀಡಿಯೇಟ್ ವ್ಯಾಸಂಗ ಮಾಡಲು ಸೇರಿಕೊಂಡರು. ಆ ಸಮಯಕ್ಕಾಗಲೇ 1942ರ ಚಳವಳಿ ದೇಶದ ತುಂಬೆಲ್ಲ ವ್ಯಾಪಕವಾಗಿ ಹಬ್ಬಿತ್ತು. ಆದರೂ ಈ ನಡುವೆ ಇಂಟರ್ ಮೀಡಿಯೇಟ್ ಪಾಸ್ ಮಾಡಿದರು. ಅನಂತರ ಬಿಎಸ್‌ಸಿ ಪದವಿಗಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ವಿಜ್ಞಾನ ವಿಭಾಗಕ್ಕೆ ಪ್ರವೇಶ ಪಡೆದು; ಲಾಲ್‌ಬಾಗ್‌ನಲ್ಲಿದ್ದ ಆದಿಕರ್ನಾಟಕ ವಿದ್ಯಾರ್ಥಿ ನಿಲಯಕ್ಕೆ ಸೇರಿಕೊಂಡರು. ಕ್ರೀಡೆಯಲ್ಲಿ ವಿಶೇಷವಾದ ಆಸಕ್ತಿ ಇದ್ದುದರಿಂದ ವಾಲಿಬಾಲ್ ತಂಡದ ಉಪನಾಯಕರಾಗಿದ್ದರು. ಇದೇ ಸಂದರ್ಭದಲ್ಲಿ 1947ರ ಸ್ವಾತಂತ್ರ್ಯ ಚಳವಳಿ ನಾಡಿನಾದ್ಯಂತ ತೀವ್ರ ಸ್ವರೂಪ ಪಡೆಯಿತು. ಈ ಸ್ವಾತಂತ್ರ್ಯ ಚಳವಳಿಯ ಗೊಂದಲದ ಶೈಕ್ಷಣಿಕ ಪರಿಸ್ಥಿತಿಗಳ ಏಳುಬೀಳುಗಳ ನಡುವೆಯಲ್ಲೂ 1948ರಲ್ಲಿ ವಿಜ್ಞಾನ ಪದವಿಗಳಿಸಿ, ಬಿ. ರಾಚಯ್ಯ ಬಿ.ಎಸ್.ಸಿ. ಆದರು. ತಂದೆಯ ಅಭಿಲಾಷೆಯಂತೆ ರಾಚಯ್ಯನವರು ಕಾನೂನು ಪದವಿಗಾಗಿ ಬೆಂಗಳೂರು ಸರ್ಕಾರಿ ಕಾನೂನು ಕಾಲೇಜಿಗೆ ಸೇರಿ, ಅಲ್ಲಿಂದ 1953ರಲ್ಲಿ ಬಿ.ಎಲ್. ಪದವಿಗಳಿಸಿದರು. ಅನಂತರದಲ್ಲಿ ಬೆಂಗಳೂರಿನ ಹೈಕೋರ್ಟ್ ವಕೀಲರಾಗಿ ಹೆಸರು ನೋಂದಾಯಿಸಿಕೊಂಡು ಸ್ವಲ್ಪ ದಿನಗಳ ಕಾಲ ಹಿರಿಯ ವಕೀಲರಿಗೆ ಸಹಾಯಕರಾಗಿ ಕೆಲಸ ಮಾಡಿದರು.

ರಾಚಯ್ಯನವರು ತಮ್ಮ ತಂದೆ ಬದುಕಿರುವಾಗಲೇ ಅವರ ಇಚ್ಛೆಯಂತೆ ಸುತ್ತೂರು ವೆಂಕಟಯ್ಯನವರ ಮಗಳಾದ ಸದ್ಗುಣ ಸಂಪನ್ನೆ ಗೌರಮ್ಮಳನ್ನು ಒಪ್ಪಿ 1950 ಮಾರ್ಚಿ 8ರಲ್ಲಿ ಮದುವೆಯಾಗಿ ತಮ್ಮ ವೈವಾಹಿಕ ಜೀವನಕ್ಕೆ ಕಾಲಿರಿಸಿದರು.

ಸ್ವಾತಂತ್ರ್ಯ ಪೂರ್ವದಲ್ಲಿ ಒಂದೆಡೆ ಬ್ರಿಟಿಷರ ಆಳ್ವಿಕೆ ಇನ್ನೊಂದೆಡೆ ಭಾರತೀಯ ಸಮಾಜದಲ್ಲಿ ಅಸ್ಪೃಶ್ಯತೆ ಘೋರಾಂಧಕಾರ ಅಚಲವಾಗಿ, ಬ್ರಾಹ್ಮಣರೂ, ಶೂದ್ರರೂ ಒಟ್ಟಾಗಿ ಸೇರಿಯೇ ಅಸ್ಪೃಶ್ಯ ಜನವರ್ಗವನ್ನು ಸಾಂಸ್ಕೃತಿಕ ಗುಲಾಮಗಿರಿಯಲ್ಲಿ ಇಟ್ಟಿದ್ದರು. ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಮತ್ತು ಆರ್ಥಿಕವಾಗಿ ತಲೆ ಎತ್ತದಂತೆ ನೋಡಿಕೊಳ್ಳಲಾಯಿತು. ಇನ್ನೂ ರಾಜಕೀಯ ಪ್ರಗತಿ ಎಂಬುದು ಅಸ್ಪೃಶ್ಯರ ಬಳಿ ಸುಳಿದೆ ಇರಲಿಲ್ಲ. ಶೋಷಣೆ ದೌರ್ಜನ್ಯ ಮತ್ತು ಅತ್ಯಾಚಾರಗಳಂಥ ಅಮಾನುಷ ಹಿಂಸೆಗಳೇ ಅಸ್ಪೃಶ್ಯರ ದಿನನಿತ್ಯದ ಬದುಕಾಗಿತ್ತು. ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿ

ಬಿ. ರಾಚಯ್ಯನವರು ರಾಜಕೀಯ ಪ್ರವೇಶ ಪಡೆಯಲು ಯತ್ನಿಸಿದರು. ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ರಾಚಯ್ಯನವರಲ್ಲಿ ಕಾಣಿಸಿಕೊಂಡ ನಾಯಕತ್ವ ಗುಣ ಈ ಸಂದರ್ಭದಲ್ಲಿ ಅವರ ರಾಜಕೀಯ ಪ್ರವೇಶಕ್ಕೆ ಪ್ರೇರಣೆ ನೀಡಿತು.

ಬಹಳ ಹಿಂದೆ ಚಾಮರಾಜನಗರ ತಾಲ್ಲೂಕು ಅಬ್ಕಾರಿ ಇಲಾಖೆಯಿಂದ ಹೆಚ್ಚಿನ ಆದಾಯವನ್ನು ತೆಗೆಯುತ್ತಿತ್ತು. ಯಳಂದೂರು, ಕೊಳ್ಳೆಗಾಲ, ಟಿ. ನರಸೀಪುರ ಮತ್ತು ತಲಕಾಡು. ಈ ಭಾಗಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಹಾಗೂ ಹಿಂದುಳಿದ ವರ್ಗಗಳ ಸಂಖ್ಯೆ ಹೆಚ್ಚಾಗಿತ್ತು. ಇವರು ಜೀವನದ ಬಹುಭಾಗವನ್ನು ಕುಡಿತದಲ್ಲಿ ಕಳೆಯುತ್ತಿದ್ದರಿಂದ ಬಡತನ ಭೂತ ಇವರ ಬೆನ್ನೇರಿತ್ತು. ಇಂತಹದೊಂದು ದಾರುಣ ಪರಿಸ್ಥಿತಿಯನ್ನು ರಾಚಯ್ಯನವರು ವಿದ್ಯಾರ್ಥಿ ದೆಸೆಯಿಂದಲೇ ಕಣ್ಣಾರೆ ಕಂಡವರಾಗಿದ್ದರು. ಇದಕ್ಕೋಸ್ಕರ ಚಾಮರಾಜನಗರ ತಾಲ್ಲೂಕು ಅಭಿವೃದ್ಧಿ ಸಂಘವನ್ನು ಅಸ್ತಿತ್ವಕ್ಕೆ ತಂದು ಅದರ ಮುಖಾಂತರ ಜನತೆಯನ್ನು ಒಗ್ಗೂಡಿಸುವ ಮತ್ತು ಅವರಲ್ಲಿ ಜಾಗೃತಿ ಮೂಡಿಸುವ ಕಾರ್ಯದಲ್ಲಿ ತೊಡಗಿದರು. ದೀನ ದಲಿತರ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ರಾಚಯ್ಯನವರು ಅಂದು ದಲಿತ ವರ್ಗಗಳ ಮೇಲೆ ನಡೆಯುತ್ತಿದ್ದ ದೌರ್ಜನ್ಯ ದಬ್ಬಾಳಿಕೆಯ ವಿರುದ್ಧ ಹೋರಾಡಿ "ಅಸ್ಪೃಶ್ಯತೆಯನ್ನು ಈ ಸಮಾಜದಿಂದ ಕಿತ್ತೆಸೆಯಿರಿ" ಎಂಬ ಚಳವಳಿಯನ್ನು ಹೂಡಿ ಅದರಲ್ಲಿ ಯಶಸ್ವಿಯಾದರು. ಹೀಗೆ ರಾಚಯ್ಯನವರು ರಾಜಕೀಯದ ಸಲುವಾಗಿ ಮಾತ್ರ ರಾಜಕಾರಣ ಪ್ರವೇಶಿಸಿದವರಲ್ಲ. ಪ್ರಬಲ ಸಾಮಾಜಿಕ ಉದ್ದೇಶವನ್ನು ಇಟ್ಟುಕೊಂಡು ರಾಜಕಾರಣಕ್ಕೆ ಬಂದವರು. ಅಜ್ಞಾನ ಮತ್ತು ಅನಕ್ಷರಸ್ಥ ಜನರ ನಡುವೆ ಹುಟ್ಟಿದ ರಾಚಯ್ಯನವರು ತಾವು ಹಾಗೆ ಗಳಿಸಿದ ಅಕ್ಷರಜ್ಞಾನವನ್ನು ಸಮಾಜದ ಮೂಲಭೂತ ಪರಿವರ್ತನೆಗಾಗಿ ಬಳಸುವ ಸಲುವಾಗಿ ರಾಚಯ್ಯನವರಿಗೆ ರಾಜಕೀಯ ಪ್ರವೇಶ ಅನಿವಾರ್ಯವಾಗಿತ್ತು.

ಆ ವೇಳೆಗಾಗಲೇ ಭಾರತದಾದ್ಯಂತ ಮೊದಲ ಬಾರಿಗೆ 1952ರ ಲೋಕಸಭೆ ಮತ್ತು ವಿಧಾನ ಸಭೆಗಳಿಗೆ ಸಾರ್ವತ್ರಿಕ ಚುನಾವಣೆಗಳು ಜಂಟಿಯಾಗಿಯೇ ಘೋಷಿತವಾಯಿತು. ಈ ಮೊದಲ ವಿಧಾನ ಸಭಾ ಚುನಾವಣೆಯಲ್ಲಿ ಯಳಂದೂರನ್ನು ದ್ವಿಸದಸ್ಯ ವಿಧಾನ ಸಭಾ ಕ್ಷೇತ್ರವನ್ನಾಗಿ ಮಾಡಿ [Double Member Constitutency] ಇದನ್ನು ಸಾಮಾನ್ಯ ಮತ್ತು ಮೀಸಲು ಕ್ಷೇತ್ರಗಳನ್ನಾಗಿ ವಿಭಾಗಿಸಲಾಯಿತು. ಅಷ್ಟರಲ್ಲಿ ಈ ಭಾಗದ ದಲಿತ ವಿದ್ಯಾವಂತರೆನಿಸಿಕೊಂಡಿದ್ದ ರಾಮಸಮುದ್ರದ ಬಸವಣ್ಣನವರು ತಮ್ಮ ನಾಯಕತ್ವದಲ್ಲಿ ಎಲ್ಲ ಮುಖಂಡರನ್ನು ಸೇರಿಸಿ ಅಭ್ಯರ್ಥಿಯ ಆಯ್ಕೆಯ ಬಗ್ಗೆ ಶೋಧ ನಡೆಸಿದರು. ಕೆಲವು ವಿದ್ಯಾವಂತ ಯುವಕರು ತಾನು ಮುಂದು ನಾನು ಮುಂದು ಎಂದು ಬರತೊಡಗಿದರು. ಆಗ ಬಸವಣ್ಣನವರು ದೂರದಿಂದ ಆಲೋಚನೆ ಮಾಡಿ; ಮೈಸೂರು ಮುನ್ಸಿಪಲ್ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ರಾಚಯ್ಯನವರನ್ನು ಕೆಲಸಕ್ಕೆ ರಾಜೀನಾಮೆ ಕೊಡಿಸಿ ಚುನಾವಣೆಗೆ ತಂದು ನಿಲ್ಲಿಸಿದರು. ಆಗತಾನೆ ದೇಶಾದ್ಯಂತ ಪ್ರಚಾರಕ್ಕೆ ಬಂದಿದ್ದ ಆಚಾರ್ಯ ಕೆ.ಬಿ. ಕೃಪಲಾನಿಯವರ ಕೆ.ಎಂ.ಪಿ.ಪಿ. ಅನ್ಯಪಕ್ಷಗಳಿಗಿಂತ ಭಿನ್ನವಾಗಿದ್ದು ಇದು 1952ರ ಚುನಾವಣೆಗೂ ಮುನ್ನ ಪಿ.ಎಸ್.ಪಿ. ಪಕ್ಷದ ಜೊತೆ ವಿಲೀನವಾಗಿತ್ತು. ಇದರಿಂದ ಆಕರ್ಷಿತರಾದ

ರಾಚಯ್ಯನವರು, ಪಿ.ಎಸ್.ಪಿ. ಟಿಕೆಟ್ ಮೂಲಕ ಗುಡಿಸಲು ಗುರುತಿನ ಅಭ್ಯರ್ಥಿಯಾಗಿ ಯಳಂದೂರು ಮೀಸಲು ಕ್ಷೇತ್ರದಿಂದ ಆಯ್ಕೆಯಾಗಿ ಮೊದಲ ಬಾರಿಗೆ ವಿಧಾನ ಸಭೆ ಪ್ರವೇಶಿಸಿದರು. ಈ ಸಂದರ್ಭದಲ್ಲಿ ಬಿ. ಬಸವಣ್ಣ, ಸುತ್ತೂರು ವೆಂಕಟಯ್ಯ, ಬಾಗಳಿ ಪುಟ್ಟಸ್ವಾಮಿ, ಹೆಗ್ಗವಾಡಿ ರಂಗಸ್ವಾಮಿ, ಆರ್.ಎಂ. ಸಿದ್ಧಪ್ಪ, ಎಂ. ಮಾದಯ್ಯ, ದುಗ್ಗಟ್ಟಿ ನಂಜಯ್ಯ ಮತ್ತು ಕೆ.ಸಿ. ರಂಗಯ್ಯ ಮುಂತಾದವರು ಬೆನ್ನಲುಬಾಗಿ ನಿಂತು ಕೆಲಸ ಮಾಡಿದರು.

ಮೊದಲ ಬಾರಿಗೆ ವಿಧಾನ ಸಭೆಗೆ ಆಯ್ಕೆಯಾದ ರಾಚಯ್ಯನವರು ಹಲವಾರು ಜನಹಿತ, ಪ್ರಗತಿಪರ ಕೆಲಸ ಕಾರ್ಯಗಳನ್ನು ಮಾಡಿ ಜನಪ್ರಿಯರಾದರು. ಆ ವೇಳೆಗಾಗಲೆ ಅಂದಿನ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರ ವಿಶ್ವಾಸಗಳಿಸಿ, ಅವರ ದೀನದಲಿತಪರ ಕಾರ್ಯಕ್ರಮಗಳನ್ನು ಮೆಚ್ಚಿಕೊಂಡಿದ್ದರು. ಹಾಗಾಗಿ ಕೆಂಗಲ್ ಹನುಮಂತಯ್ಯನವರ ಒತ್ತಾಯದ ಮೇರೆಗೆ 1954ರಲ್ಲಿ ರಾಚಯ್ಯನವರು ಕಾಂಗ್ರೆಸ್ ಪಕ್ಷ ಸೇರಿಕೊಂಡರು. ಮತ್ತೆ 1957ರ ಸಾರ್ವತ್ರಿಕ ವಿಧಾನಸಭಾ ಚುನಾವಣೆ ಬಂದಿತು. ಆ ಸಂದರ್ಭದಲ್ಲಿ ಚಾಮರಾಜನಗರ ದ್ವಿಸದಸ್ಯ ಕ್ಷೇತ್ರವಾಯಿತು. ರಾಚಯ್ಯನವರು ಕಾಂಗ್ರೆಸ್ ಪಕ್ಷದಿಂದ ನಿಂತು ಎರಡನೆಯ ಬಾರಿಯ ಗೆಲುವನ್ನು ಸಾಧಿಸಿದರು. ಈ ಒಂದು ಅವಧಿಯಲ್ಲಿ ಕರ್ನಾಟಕ ರಾಜ್ಯದ ಭೂಸುಧಾರಣ ಸಮಿತಿಯ ಸದಸ್ಯರಾಗಿ, ಕುವೆಂಪು ಉಪಕುಲಪತಿಗಳಾಗಿದ್ದಾಗ ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯರಾಗಿ, ರಾಜ್ಯ ಸರ್ಕಾರದ ಅಧಿಕೃತ ಭಾಷಾ ಸಮಿತಿಯ ಸದಸ್ಯರಾಗಿ ಯಶಸ್ವಿಯಾಗಿ ಸೇವೆ ಸಲ್ಲಿಸಿದರು.

ರಾಚಯ್ಯನವರು ಈ ರೀತಿಯಾಗಿ ಜನಪ್ರಿಯರಾಗಿ, ರಾಜಕೀಯವಾಗಿ ತಮ್ಮನ್ನು ಗುರುತಿಸಿಕೊಂಡ ಮೇಲೆ ಮತ್ತೆ 1962ರ ಸಾರ್ವತ್ರಿಕ ಚುನಾವಣೆಯಲ್ಲಿ ಸಂತೇಮರಹಳ್ಳಿ ಮೀಸಲು ಕ್ಷೇತ್ರದಿಂದ ಚುನಾಯಿತರಾಗಿ, ಎಸ್.ಆರ್. ಕಂಠಿ ಅವರ ಸಚಿವ ಸಂಪುಟದಲ್ಲಿ ಮೊಟ್ಟ ಮೊದಲ ಬಾರಿಗೆ ಅರಣ್ಯ, ಕೃಷಿ ಮತ್ತು ಸಹಕಾರ ಖಾತೆಗಳ ಸಚಿವರಾಗಿ ಸೇರ್ಪಡೆಯಾದರು. ಈ ನಡುವೆ ಬದಲಾದ ರಾಜಕಾರಣದ ಅನಿವಾರ್ಯತೆಯಿಂದಾಗಿ ಎಸ್. ನಿಜಲಿಂಗಪ್ಪನವರು ಉಪ ಚುನಾವಣೆಯಲ್ಲಿ ಆಯ್ಕೆಯಾಗಿ 1962ರ ಜೂನ್ 2ರಲ್ಲಿ ಎರಡನೆಯ ಬಾರಿಗೆ ರಾಜ್ಯದ ಮುಖ್ಯಮಂತ್ರಿಯಾದರು. ಈ ಅವಧಿಯಲ್ಲಿ ರಾಚಯ್ಯನವರು ಮತ್ತೆ ಸಚಿವ ಸ್ಥಾನ ಉಳಿಸಿಕೊಂಡು ಅರಣ್ಯ, ಕೃಷಿ ಮತ್ತು ಸಹಕಾರ ಖಾತೆಗಳಿಗೆ ಬದಲಾಗಿ ಅರಣ್ಯ, ರೇಷ್ಮೆ ಮತ್ತು ಮೀನುಗಾರಿಕೆ ಇಲಾಖೆಗಳನ್ನು ವಹಿಸಿಕೊಂಡು. ಮೈಸೂರು ರಾಜ್ಯದ ದಲಿತವರ್ಗದ ಎರಡನೆಯ ಸಚಿವರಾಗಿ ಕರ್ನಾಟಕ ರಾಜಕಾರಣದ ಚರಿತ್ರೆಯ ಪುಟ ಸೇರಿದರು.

1962ರಲ್ಲಿ ಮೈಸೂರು ವಿಭಾಗದ ರಾಷ್ಟ್ರೀಯ ಹಿಂದುಳಿದ ವರ್ಗದ ಸಮಿತಿಯ ಅಧ್ಯಕ್ಷರಾದ ಅವರು ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತರಿಗೆ ಸರ್ಕಾರದಿಂದ ಅನೇಕ ಮೂಲಭೂತ ಸೌಲಭ್ಯಗಳನ್ನು ದೊರಕಿಸಿಕೊಟ್ಟರು. ಎಸ್. ನಿಜಲಿಂಗಪ್ಪನವರ ಅತ್ಯಂತ ಹತ್ತಿರದ ಶಿಷ್ಯರಾದ ರಾಚಯ್ಯನವರು ಸರಳತೆ, ಸಜ್ಜನಿಕೆ, ಬುದ್ಧಿವಂತಿಕೆಗೆ ಹೆಸರುವಾಸಿಯಾದರು. 1964ರಲ್ಲಿ ಜಪಾನ್

ಹಾಗೂ ಈಶಾನ್ಯ ರಾಜ್ಯಗಳಿಗೆ ಭೇಟಿ ನೀಡಿದರು. ಕರ್ನಾಟಕದ ರೇಷ್ಮೆ ಕೃಷಿಯನ್ನು ಜಪಾನ್ ಮತ್ತು ಚೀನಾ ದೇಶಗಳ ಅಭಿವೃದ್ಧಿಯ ಮಟ್ಟಕ್ಕೆ ಕೊಂಡೊಯ್ಯಲು ಹಲವಾರು ವರ್ಷಗಳಿಂದ ಈ ಕ್ಷೇತ್ರದಲ್ಲಿ ದುಡಿದ ಅನುಭವಿಗಳನ್ನು ತಜ್ಞರನ್ನು ಮತ್ತು ವಿಜ್ಞಾನಿಗಳನ್ನು ಬಳಸಿಕೊಂಡು ಅವರ ಸಲಹೆ ಸೂಚನೆಗಳ ಆಧಾರದ ಮೇಲೆ; ರೇಷ್ಮೆ ಕೃಷಿ, ಸಂಶೋಧನೆ, ಶಿಕ್ಷಣ, ರೋಗರಹಿತ ಮೊಟ್ಟೆಗಳ ಉತ್ಪಾದನೆ, ರೇಷ್ಮೆ ಗೂಡಿನ ಮಾರುಕಟ್ಟೆ ಮತ್ತು ವಿತರಣೆ, ಹತೋಟಿಯನ್ನು ಕಾನೂನಿನ ಕಕ್ಷೆಗೊಳಪಡಿಸುವುದು, ರೇಷ್ಮೆ ವ್ಯಾಪಾರದಲ್ಲಿನ ಅಹಿತಕರ ಬೆಳವಣಿಗೆಯನ್ನು ತಪ್ಪಿಸುವುದು ಮುಂತಾದ ಅಂಶಗಳನ್ನೂ ಕಾರ್ಯರೂಪಕ್ಕೆ ತಂದರು. ರೈತರ ಸರ್ವಹಿತವನ್ನು ಬಯಸುತ್ತಿದ್ದ ಅವರು, ರೈತರ ಪುರೋಭಿವೃದ್ಧಿಗಾಗಿ ಸರ್ಕಾರದಿಂದ ಅನೇಕ ನವೀನ ಮಾದರಿಯ ಯೋಜನೆಗಳನ್ನು ಅಸ್ತಿತ್ವಕ್ಕೆ ತಂದರು. ಹೊರದೇಶಗಳ ರೇಷ್ಮೆ ಬೇಸಾಯವನ್ನು ಕುರಿತಂತೆ, ಅಲ್ಲಿಯ ಸರ್ಕಾರ ಸಮಾಜಗಳು ರೇಷ್ಮೆಕೃಷಿಗೆ ಕೊಟ್ಟಿರುವ ಪ್ರಾಧಾನ್ಯತೆ ಮತ್ತು ಈ ಬೇಸಾಯವನ್ನು ಕುರಿತು ಅಲ್ಲಲ್ಲಿ ನಡೆದಿರುವ ಸಂಶೋಧನೆಯ ಫಲಶೃತಿಗಳನ್ನು ಪ್ರತ್ಯೇಕ್ಷವಾಗಿ ಕಂಡುಬರಲು ಕರ್ನಾಟಕದಿಂದ ಕೆಲವು ಪ್ರತಿಭಾವಂತ ರೇಷ್ಮೆ ಬೆಳೆಗಾರರ ತಂಡಗಳನ್ನು ತಮ್ಮ ಅಧಿಕಾರ ಅವಧಿಯಲ್ಲಿ ಹೊರದೇಶಗಳಿಗೆ ಕಳುಹಿಸಿಕೊಟ್ಟಿದ್ದರು. ಹಾಗೆಯೇ 1965ರಲ್ಲಿ ಬೆಹಿರೂಚ್ ಮತ್ತು ಲೆಬನಾನ್‌ನಲ್ಲಿ ನಡೆದ "World Sericulture Conferenece" (ವಿಶ್ವ ರೇಷ್ಮೆ ಸಮ್ಮೇಳನ) ಗೆ ಭಾರತ ತಂಡ ನಾಯಕರಾಗಿ ಪ್ರತಿನಿಧಿಸಿದರು. ಇದೇ ಸಮಯದಲ್ಲಿ ಹೆಚ್ಚಿನ ಅಧ್ಯಯನಕ್ಕಾಗಿ ಇಟಲಿ, ಸ್ಪೇನ್, ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ, ರಷ್ಯಾ ಮತ್ತು ಇನ್ನಿತರ ದೇಶಗಳಿಗೆ ಭೇಟಿ ನೀಡಿದರು.

ರೈತನ ಮಗನಾಗಿ ರಾಚಯ್ಯನವರು ಕೃಷಿ ಖಾತೆಯನ್ನು ವಹಿಸಿಕೊಂಡಾಗ ಅದಕ್ಕೆ ಸಂಬಂಧಪಟ್ಟ ಕಡತ ಮತ್ತು ವರದಿಗಳನ್ನು ಪರಿಶೀಲಿಸಿ, ಕೃಷಿಕರಿಗೆ ಬೇಸಾಯದ ಮಹತ್ವವನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ಪರಿಚಯಿಸಲು ಸರ್ವ ಪ್ರಯತ್ನ ಮಾಡಿದರು. ಹಿಂದೆ ಮೈಸೂರು ಪ್ರಾಂತ್ಯದಲ್ಲಿ ನೂರಕ್ಕೆ ಹತ್ತರಷ್ಟು ಭಾಗದಲ್ಲಿ ಮಾತ್ರ ನೀರಾವರಿ ಪ್ರದೇಶವಿತ್ತು. ಇನ್ನುಳಿದ ತೊಂಬತ್ತು ಭಾಗದಷ್ಟು ಪ್ರದೇಶ ಮಳೆಯನ್ನೇ ಅವಲಂಬಿಸಿತ್ತು. ಖುಷ್ಕಿ ಬೆಳೆ ಬೆಳೆಯುವಂಥ ಕಡೆಗಳಲ್ಲಿ ಬೀಳುವ ಮಳೆನೀರು ಭೂಮಿಯಲ್ಲಿ ಇಂಗಿ ಹೋಗದೆ ಅದು ರೈತರಿಗೆ ನೇರವಾಗಿ ಉಪಯೋಗವಾಗುವ ಸಲುವಾಗಿ ಹಿಂದಿನಿಂದಲೂ ಭೂ ಸಂರಕ್ಷಣಾ ಯೋಜನೆ ಜಾರಿಯಲ್ಲಿತ್ತು. ಆದರೆ ರಾಚಯ್ಯನವರ ಕಾಲದಲ್ಲಿ ಇದರ ಕಾರ್ಯವ್ಯಾಪ್ತಿ ಇನ್ನುಷ್ಟು ವಿಸ್ತಾರವಾಯಿತು. ಅಲ್ಲಲ್ಲಿ ಒಡ್ಡುಗಳನ್ನು ಹಾಕಿ ನೀರನ್ನು ತಡೆದು, ಸುಮಾರು 2,84,000 ಎಕರೆಯಷ್ಟು ಜಮೀನಿನಲ್ಲಿ ಭೂಸಂರಕ್ಷಣೆ ಕಾರ್ಯ ಕೈಗೊಂಡಿದ್ದಲ್ಲದೆ, ಅದನ್ನು ಇನ್ನು ಅಧಿಕಗೊಳಿಸುವ ಉದ್ದೇಶದಿಂದ 280 ಕೋಟಿ ರೂಪಾಯಿ ಅಂದಾಜು ವೆಚ್ಚದಲ್ಲಿ ಯೋಜನೆಯೊಂದನ್ನು ರೂಪಿಸಿ ಹಣಕಾಸಿನ ಸಹಾಯಕ್ಕಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳನ್ನು ಒತ್ತಾಯಿಸಿದರು. ಕರ್ನಾಟಕದಾದ್ಯಂತ ಪರಿಣಿತ ಭೂಶಾಸ್ತ್ರಜ್ಞರಿಂದ ಭೂಮಿ ಮತ್ತು ನೀರಿನ ಗುಣಗಳ ಪರೀಕ್ಷೆ ಮಾಡಿಸಿ, ಭೂಮಿಯ ಅಂತರಾಳದಲ್ಲಿರುವ ನೀರನ್ನು ಬಾವಿಗಳ ಮೂಲಕ ಮೇಲಕ್ಕೆತ್ತಿ ಅದನ್ನು ವೈಜ್ಞಾನಿಕವಾಗಿ ರೈತರ ಬೇಸಾಯಕ್ಕೆ ಅನುಕೂಲ ಮಾಡಿಕೊಟ್ಟರು. ರಾಚಯ್ಯನವರು ಹಾಕಿದ ಯೋಜನೆಯ ಪ್ರಕಾರ

ರೈತರು ಬಾವಿ ತೋಡಿಸಿಕೊಳ್ಳುವುದಕ್ಕೆ ಸರ್ಕಾರ ಕೇಂದ್ರ ಅಭಿವೃದ್ಧಿ ಬ್ಯಾಂಕಿನ ಮೂಲಕ ಈ ಹಿಂದೆ ಕೊಡುತ್ತಿದ್ದ ಮೂರು ಸಾವಿರ ರೂಪಾಯಿಗಳಿಗೆ ಬದಲಾಗಿ ಅದನ್ನು ಐದು ಸಾವಿರ ರೂಪಾಯಿಗಳಿಗೆ ಹೆಚ್ಚಿಸಿ ತಕ್ಷಣವೇ ಸಚಿವ ಸಂಪುಟದಿಂದ ಮಂಜೂರಾತಿ ಪಡೆದರು. ಸುಮಾರು 87 ಸಾವಿರ ಬಾವಿಗಳಿಗೆ ವಿದ್ಯುಚ್ಛಕ್ತಿಯ ಕಲ್ಪಿಸಿ, ಮತ್ತೆ 20 ಸಾವಿರ ಬಾವಿಗಳಿಗೆ ವಿದ್ಯುಚ್ಛಕ್ತಿ ಒದಗಿಸಬೇಕೆಂದು ಎಲೆಕ್ಟ್ರಿಸಿಟಿ ಬೋರ್ಡ್‌ನವರಿಗೆ ಸರ್ಕಾರದಿಂದ ಆದೇಶ ಹೊರಡಿಸಿದರು. ಹೀಗೆ ರಾಚಯ್ಯನವರು ಕೃಷಿ ಇಲಾಖೆಯನ್ನು ಪ್ರಗತಿ ಕಡೆ ಕೊಂಡ್ಯೊಯ್ದರು.

ಅರಣ್ಯ ಸಚಿವರಾಗಿ ರಾಚಯ್ಯನವರು ನೀಡಿದಂತಹ ಒಂದು ವಿಶಿಷ್ಟ ಕೊಡುಗೆ ಎಂದರೆ "1964ರ ಕರ್ನಾಟಕ ಸಮಗ್ರ ಅರಣ್ಯ ಕಾನೂನನ್ನು ಜಾರಿಗೆ ತಂದದ್ದು. ಕರ್ನಾಟಕವು ಏಕೀಕರಣಗೊಂಡ ನಂತರ ಹಳೆಯ ಮೈಸೂರು ರಾಜ್ಯಕ್ಕೆ ಆಗಿನ ಮುಂಬಯಿ, ಹೈದ್ರಾಬಾದ್, ಮದ್ರಾಸ್ ಮತ್ತು ಕೊಡಗು, ಈ ಪ್ರಾಂತ್ಯಗಳಿಂದ ಬರುತ್ತಿದ್ದ ಅರಣ್ಯ ಸಂಪತ್ತನ್ನು ಏಕರೂಪವಾಗಿ ಮಾರ್ಪಡಿಸುವ ಉದ್ದೇಶದಿಂದ ಒಂದು ಸಮಗ್ರ ಅರಣ್ಯ ಕಾನೂನಿನ ಆವಶ್ಯಕತೆ ಇತ್ತು. ಅದು ರಾಚಯ್ಯನವರ ಕಾಲದಲ್ಲಿ ಪೂರ್ಣಗೊಂಡಿತ್ತು. 1967ರ ಸಾರ್ವತ್ರಿಕ ವಿಧಾನಸಭಾ ಚುನಾವಣೆಯಲ್ಲಿ ರಾಚಯ್ಯನವರು ಪುನರಾಯ್ಕೆಯಾದ ಮೇಲೆ ಎಸ್. ನಿಜಲಿಂಗಪ್ಪನವರು ತಮ್ಮ ಸಚಿವ ಸಂಪುಟದೊಳಗೆ ಕಂದಾಯ ಮತ್ತು ಅರಣ್ಯ ಖಾತೆಗಳನ್ನು ವಹಿಸಿಕೊಟ್ಟರು. ಅಂದರೆ ರಾಜ್ಯದ ಎರಡು ದೊಡ್ಡ ಇಲಾಖೆಗಳ ಜವಾಬ್ದಾರಿ ಇವರ ಮೇಲೆ ಬಿತ್ತು. ಈ ಅವಧಿಯಲ್ಲಿ ಅರಣ್ಯ ಇಲಾಖೆಗೂ, ಕಂದಾಯ ಇಲಾಖೆಗೂ ಸಾಗುವಳಿ ಮಾಡಿಕೊಂಡು ಬರುತ್ತಿದ್ದ ರೈತರ ಪರಿಸ್ಥಿತಿಯನ್ನು ನೋಡಿ ಅವರನ್ನು ಸ್ವಂತ ಸಾಗುವಳಿದಾರರನ್ನಾಗಿ ಮಾಡಲು ಪ್ರತಿ ಜಿಲ್ಲೆಯಲ್ಲಿಯೂ ತಾಲ್ಲೂಕು ಬೋರ್ಡ್ ಅಧ್ಯಕ್ಷರು, ಕಂದಾಯ ಅಧಿಕಾರಿಗಳು, ಪಶುಪಾಲನಾಧಿಕಾರಿಗಳು ಮತ್ತು ಅಬ್ಕಾರಿ ಅಧಿಕಾರಿಗಳನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿದರು. ಸಾಗುವಳಿಗೆ ಯೋಗ್ಯವಾದ ಭೂಮಿಯನ್ನು ಕಂದಾಯ ಇಲಾಖೆಗೆ ವರ್ಗಾಯಿಸಿ, ಸಾಗುವಳಿಗೆ ಯೋಗ್ಯವಲ್ಲದ ಭೂಮಿಯನ್ನು ಅರಣ್ಯ ಇಲಾಖೆಗೆ ವರ್ಗಾಯಿಸಬಹುದೆಂಬ ಶಿಫಾರಸ್ಸನ್ನು ಈ ಸಮಿತಿಯು ಸರ್ಕಾರಕ್ಕೆ ಮಾಡಿತು. ಈ ಶಿಫಾರಸ್ಸಿನ ಆಧಾರದ ಮೇಲೆ ಕಂದಾಯ ಇಲಾಖೆಯಿಂದ ಅರಣ್ಯ ಇಲಾಖೆಗೆ 5,64,126 ಎಕರೆಗಳು ಮತ್ತು ಅರಣ್ಯ ಇಲಾಖೆಯಿಂದ ಕಂದಾಯ ಇಲಾಖೆಗೆ 3,07,00 ಎಕರೆಗಳಷ್ಟು ಜಮೀನನ್ನು ವರ್ಗಾಯಿಸಿದ ರಾಚಯ್ಯನವರು ಅದಕ್ಕೆ ಸಚಿವ ಸಂಪುಟದ ಮಂಜೂರಾತಿ ಪಡೆದರು. ಹೀಗೆ ಅರಣ್ಯ ಇಲಾಖೆಯಿಂದ ವರ್ಗಾಯಿಸಲಾದ ಜಮೀನನ್ನು ಸಾವಿರಾರು ಜನ ಬಡಬಗ್ಗರಿಗೆ, ದಲಿತರಿಗೆ, ಮತ್ತು ಹಿಂದುಳಿದವರಿಗೆ ಕೊಟ್ಟು; ಸ್ವಂತ ಜಮೀನನ್ನು ಹೊಂದದಿದ್ದ ಅವರನ್ನು ಸ್ವಂತ ಸಾಗುವಳಿದಾರರನ್ನಾಗಿ ಮಾಡಿದರು. ಈ ಎರಡು ಇಲಾಖೆಗಳ ಅಧಿಕಾರ ಒಬ್ಬರ ಕೈಯಲ್ಲಿ ಇದ್ದುದರಿಂದ ಬಹುಶಃ ರಾಜ್ಯದಲ್ಲೇ ಪ್ರಪ್ರಥಮ ಬಾರಿಗೆ ಇಂತಹ ಸೌಲಭ್ಯಗಳನ್ನು ಜನರಿಗೆ ಒದಗಿಸಿಕೊಡಲು ರಾಚಯ್ಯನವರು ತುಂಬಾ ಎತ್ತರದ ಮುತ್ಸದ್ದಿತನವನ್ನು ದೂರಗಾಮಿ ಪರಿಣಾಮದ ಅನುಷ್ಠಾಕ್ರಮದ ಪ್ರತಿಭೆಯನ್ನು ಏಕಕಾಲದಲ್ಲಿ ಮೆರೆದರು.

ಒಟ್ಟಿನಲ್ಲಿ ಅರಣ್ಯ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿದಾಗ ಕರ್ನಾಟಕದಾದ್ಯಂತ ಅನೇಕ ಕಡುಬಡುವರಿಗೆ, ನಿರ್ಗತಿಕರಿಗೆ, ನಿರಾಶ್ರಿತರಿಗೆ ಲಾಭವಾಯಿತು. ಚನ್ನಪಟ್ಟಣ, ಮಾಗಡಿ, ರಾಮನಗರ, ಕನಕಪುರ, ಬಿಜಾಪುರ, ಬಳ್ಳಾರಿ, ಗುಲ್ಬರ್ಗಾ, ಬೆಂಗಳೂರು ಸುತ್ತಮುತ್ತ, ನೆಲಮಂಗಲ ತಾಲ್ಲೂಕು, ಅರಸೀಕೆರೆ ತಾಲ್ಲೂಕು, ಮೈಸೂರು ಜಿಲ್ಲೆ, ಚಾಮರಾಜನಗರ ಜಿಲ್ಲೆ ಇನ್ನು ಮುಂತಾದ ಕಡೆಗಳಲ್ಲಿ ಈ ರೀತಿಯ ಜಮೀನು ಹಂಚಿಕೆಯಾಗಿದೆ. ಹೀಗೆ ರಾಚಯ್ಯನವರು ಅರಣ್ಯ ಮತ್ತು ಕಂದಾಯ ಇಲಾಖೆಗಳ ಅಧಿಕಾರ ಅವಧಿಯಲ್ಲಿ ಇಡೀ ನಾಡಿನಾದ್ಯಂತ ವಿನೂತನವಾದ ಕಾರ್ಯಕ್ರಮಗಳನ್ನು ಜಾರಿಗೆ ತರುವಲ್ಲಿ ಅವರು ಸದಾ ಕಾರ್ಯ ಪ್ರವೃತ್ತರಾಗಿದ್ದರು.

ಆರಂಭದಿಂದಲೂ ಸಚಿವರಾಗಿ ಕ್ಯಾಬಿನೆಟ್ ರ್‍ಯಾಂಕಿನಲ್ಲೇ ಮುಂದುವರೆದ ರಾಚಯ್ಯನವರು 1968ರ ಮೇ 30ರಂದು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿ ಆಯ್ಕೆಯಾದ ವೀರೇಂದ್ರ ಪಾಟೀಲ್‌ರವರ ಸಚಿವ ಸಂಪುಟದಲ್ಲಿ, ಕೃಷಿ, ರೇಷ್ಮೆ ಮತ್ತು ತೋಟಗಾರಿಕೆ ಇಲಾಖೆಗಳ ಮಂತ್ರಿ ಸ್ಥಾನದಲ್ಲಿ 1970ರ ತನಕವೂ ಮುಂದುವರೆದರು. ಈ ನಡುವೆ 1969ರಲ್ಲಿ ರಾಷ್ಟ್ರಮಟ್ಟದ ರಾಜಕಾರಣದಲ್ಲಿ ಬಿರುಗಾಳಿ ಎದ್ದಿತು. ರಾಷ್ಟ್ರ ನಾಯಕರ ಅಧಿಕಾರಲಾಲಸೆ ಮತ್ತು ಸ್ವಪ್ರತಿಷ್ಠೆಯಿಂದಾಗಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಈ ಸಂದರ್ಭದಲ್ಲಿ ಇಬ್ಭಾಗವಾಯಿತು. ರಾಷ್ಟ್ರ ಮಟ್ಟದಲ್ಲಿ ಆದಂತಹ ಈ ಬಗೆಯ ವಿಭಜನೆಯ ಪ್ರಭಾವ ಕರ್ನಾಟಕ ರಾಜ್ಯದ ಮೇಲೂ ಸಹಜವಾಗಿಯೇ ಆಯಿತು. ಪರಿಣಾಮವಾಗಿ ನಿಜಲಿಂಗಪ್ಪನವರ ಆಶೀರ್ವಾದ ಹೊತ್ತ ವೀರೇಂದ್ರ ಪಾಟೀಲರ ಸರ್ಕಾರ ಬಹುಮತವನ್ನು ಕಳೆದುಕೊಂಡಿತ್ತು. ಈ ಸಂದರ್ಭದಲ್ಲಿ ಬಿ. ರಾಚಯ್ಯನವರು ನಿಜಲಿಂಗಪ್ಪನವರ ಸಂಸ್ಥಾ ಕಾಂಗ್ರೆಸಿನಲ್ಲಿ ಉಳಿದುಕೊಂಡರು. ಅಷ್ಟರಲ್ಲಿ 1972ರ ಸಾರ್ವತ್ರಿಕ ವಿಧಾನಸಭಾ ಚುನಾವಣೆ ಬಂದಿತು. ರಾಜಕೀಯ ಅತಂತ್ರತೆಯಿಂದ ಆ ವರ್ಷ ಚುನಾವಣೆಯಲ್ಲಿ ಸ್ಪರ್ಧಿಸದೆ ರಾಚಯ್ಯನವರು ದೂರ ಉಳಿದರು. ಈ ಬದಲಾದ ರಾಜಕಾರಣದ ಪ್ರಕ್ರಿಯೆಯಿಂದಾಗಿ 1971 ರಿಂದ 1973ರ ವರೆಗೆ ಮೂರು ವರ್ಷಗಳ ಕಾಲ ಅವರು ರಾಜಕೀಯವಾಗಿ ಅಜ್ಞಾತವಾಸದಲ್ಲಿದ್ದರು.

ಶ್ರೀಮತಿ ಇಂದಿರಾ ಗಾಂಧಿಯವರ ಕೃಪಕಟಾಕ್ಷದಿಂದ ಕರ್ನಾಟಕದಲ್ಲಿ ಮುಖ್ಯಮಂತ್ರಿಗಳಾಗಿದ್ದ ಡಿ. ದೇವರಾಜ ಅರಸ್‌ರವರು ರಾಜಕೀಯ ಕ್ಷೇತ್ರದಲ್ಲಿ ತುಂಬಾ ಆತ್ಮೀಯರು ಮತ್ತು ಹಿರಿಯ ಚಿಂತನಾಶೀಲ ರಾಜಕಾರಣಿಗಳು ಆಗಿದ್ದ ಬಿ. ರಾಚಯ್ಯನವರನ್ನು ಮತ್ತೆ ರಾಜಕೀಯ ರಂಗಕ್ಕೆ ತರಬೇಕೆಂಬ ಉದ್ದೇಶದಿಂದ ಎಚ್.ಎಂ. ಚನ್ನಬಸಪ್ಪನವರ ಮೂಲಕ ಗದ್ದೆ ಕೆಲಸ ಮಾಡುತ್ತಿದ್ದ ರಾಚಯ್ಯನವರನ್ನು ಕರೆಸಿ, ಅವರನ್ನು ರಾಜ್ಯಸಭೆಗೆ ಆಯ್ಕೆ ಮಾಡಿ ಕಳುಹಿಸಿದರು. ಇದು ರಾಚಯ್ಯ ಮತ್ತು ಡಿ. ದೇವರಾಜ ಅರಸ್‌ರವರ ನಡುವಿದ್ದ ವಿಶ್ವಾಸ ಮತ್ತು ರಾಜಕೀಯ ಸಂಬಂಧಗಳನ್ನು ಸೂಚಿಸುತ್ತದೆ. ಹೀಗೆ ರಾಚಯ್ಯನವರು ರಾಜ್ಯಸಭಾ ಸದಸ್ಯರಾಗಿ ರಾಷ್ಟ್ರಮಟ್ಟದ ಅಭಿವೃದ್ಧಿಯ ಬಗ್ಗೆ ಚಿಂತನೆ ಮಾಡುವಂಥ ಸಮಯಕ್ಕೆ ಸರಿಯಾಗಿ 1977ರಲ್ಲಿ ಲೋಕಸಭೆಗೆ ಚುನಾವಣೆ ಬಂದಿತು. ಈ ಚುನಾವಣೆಯಲ್ಲಿ ರಾಚಯ್ಯನವರು ಇಂದಿರಾ ಗಾಂಧಿಯವರ ಒತ್ತಾಯದ ಮೇರೆಗೆ

ಚಾಮರಾಜನಗರ ಮೀಸಲು ಕ್ಷೇತ್ರದಿಂದ ಸ್ಪರ್ಧಿಸಿ ಗೆಲುವು ಸಾಧಿಸಿದರು. ಕೇಂದ್ರದಲ್ಲಿ ಮೊರಾರ್ಜಿ ದೇಸಾಯಿ ಅವರ ನಾಯಕತ್ವದ ಜನತಾ ಸರ್ಕಾರ ಅಧಿಕಾರಕ್ಕೆ ಬಂದಿತು. ಇದು ಹೆಚ್ಚು ಕಾಲ ಉಳಿಯಲಿಲ್ಲ. ಇದರ ಪರಿಣಾಮವಾಗಿ ಮಿತ್ರಪಕ್ಷಗಳ ಬೆಂಬಲದೊಂದಿಗೆ ಚರಣ್ ಸಿಂಗ್‌ರವರು 1979ರ ಜುಲೈ 28 ರಂದು ಪ್ರಧಾನಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು. ದೇವರಾಜ ಅರಸ್‌ರವರು ಚರಣ್ ಸಿಂಗ್ ಸರ್ಕಾರಕ್ಕೆ ತಮ್ಮ ಬೆಂಬಲ ಸೂಚಿಸಿದ್ದರಿಂದ ರಾಚಯ್ಯನವರಿಗೆ ಅವರ ಸಂಪುಟದಲ್ಲಿ ಪ್ರಾತಿನಿಧ್ಯ ದೊರೆತು ಕೇಂದ್ರದ ಕೈಗಾರಿಕಾಭಿವೃದ್ಧಿ ಸಚಿವರಾದರು. ಆದರೆ ಹೆಚ್ಚು ವರ್ಷಗಳ ಕಾಲ ಈ ಸರ್ಕಾರ ಅಸ್ತಿತ್ವದಲ್ಲಿ ಇರಲಿಲ್ಲ.

ಚರಣ್ ಸಿಂಗ್‌ರವರ ಸರ್ಕಾರ ರಚನೆಯಾದ ಕೆಲವಾರು ತಿಂಗಳುಗಳಲ್ಲಿಯೇ ತನ್ನ ಬಹುಮತವನ್ನು ಕಳೆದುಕೊಂಡಿತ್ತು. ಪರಿಣಾಮವಾಗಿ ಅಂದಿನ ರಾಷ್ಟ್ರಪತಿಗಳಾಗಿದ್ದ ನೀಲಂ ಸಂಜೀವರೆಡ್ಡಿಯವರು ಚರಣ್‌ಸಿಂಗ್ ಸರ್ಕಾರವನ್ನು ವಿಸರ್ಜಿಸಿ; 1980ರ ಜನವರಿ ತಿಂಗಳಿನಲ್ಲಿ ಮಧ್ಯಂತರ ಚುನಾವಣೆಗೆ ಆದೇಶ ಹೊರಡಿಸಿದರು. ಈ ಚುನಾವಣೆಯಲ್ಲಿ ರಾಚಯ್ಯನವರು ಇಂದಿರಾ ಗಾಂಧಿಯವರ ಪಕ್ಷವನ್ನು ಬಿಟ್ಟು ದೇವರಾಜ ಅರಸ್‌ರವರ 'ಕಾಂಗ್ರೆಸ್ ಯು' ನಿಂದ ನಿಂತು ಸೋತರು. ಇದು ರಾಚಯ್ಯನವರ ರಾಜಕೀಯ ಜೀವನದ ಮೊದಲ ಸೋಲು. ಬಹುಶಃ ಈ ಚುನಾವಣೆಯಲ್ಲಿ ರಾಚಯ್ಯನವರು ತಪ್ಪು ನಿರ್ಧಾರ ತೆಗೆದುಕೊಂಡಿದ್ದನ್ನು ಬಿಟ್ಟರೆ ಮುಂದೆಂದೂ ಸೋಲನ್ನು ಕಂಡವರಲ್ಲ. ಒಂದು ವೇಳೆ ಇಂದಿರಾ ಗಾಂಧಿಯವರ ಮಾತಿಗೆ ಬೆಲೆಕೊಟ್ಟು ಕಾಂಗ್ರೆಸ್ (ಐ) ನಿಂದ ಸ್ಪರ್ಧಿಸಿದ್ದರೆ, ಅವರು ಬಹುಮತಗಳಿಸಿ ವಿಜಯ ಸಾಧಿಸುತ್ತಿದ್ದರು. ಆಗ ಇನ್ನೂ ಹೆಚ್ಚಿನ ಮಟ್ಟದಲ್ಲಿ ರಾಷ್ಟ್ರ ರಾಜಕಾರಣದ ಪ್ರಬಲ ಶಕ್ತಿಯಾಗಿ ನಿಲ್ಲುತ್ತಿದ್ದರು. ಬಾಬು ಜಗಜೀವನರಾಮ್ ನಂತರದ ಸ್ಥಾನವನ್ನು ಪಡೆಯುತ್ತಿದ್ದರೆಂಬುದರಲ್ಲಿ ಖಂಡಿತ ಎರಡನೆ ಮಾತಿರಲಾರದು. ಹೀಗೆ ರಾಚಯ್ಯನವರು 1974 ರಿಂದ 1979ರ ವರೆಗಿನ ಆರು ವರ್ಷಗಳ ಕಾಲಾವಧಿಯಲ್ಲಿ ರಾಜ್ಯಸಭೆ, ಲೋಕಸಭೆ ಮತ್ತು ಕೇಂದ್ರ ಮಂತ್ರಿಯಾಗಿ ಕೆಲಸ ಮಾಡಿ ರಾಷ್ಟ್ರ ಮಟ್ಟದ ರಾಜಕಾರಣದಲ್ಲಿ ಗುರುತಿಸಿಕೊಂಡಿದ್ದರು. ಅಲ್ಲದೆ ಇಂದಿರಾಗಾಂಧಿ, ಮೊರಾರ್ಜಿ ದೇಸಾಯಿ, ಚರಣ್ ಸಿಂಗ್ ಮತ್ತು ಬಾಬು ಜಗಜೀವನರಾಂರವರಂತಹ ನುರಿತ ರಾಜಕೀಯ ಮೇಧಾವಿಗಳ ಹತ್ತಿರದ ಸಂಬಂಧವನ್ನು ಹೊಂದಿದ್ದರು.

1980ರ ಜನವರಿ ತಿಂಗಳಿನಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಪರಾಭವಗೊಂಡ ರಾಚಯ್ಯನವರು 1982ರ ವರೆಗೂ ರಾಜಕಾರಣದ ಕಡೆ ತಿರುಗಿ ನೋಡದೆ ತಮ್ಮ ಕುಲಕಸುಬಿನ ಕಾಯಕದಲ್ಲಿ ನಿರತರಾಗಿದ್ದರು. ತದನಂತರ ದೇವರಾಜ ಅರಸ್‌ರವರ ನಾಯಕತ್ವದಲ್ಲಿ ಪ್ರಾದೇಶಿಕ ಮಟ್ಟದ 'ಕ್ರಾಂತಿರಂಗ' ಎಂಬ ಪಕ್ಷವನ್ನು ಕಟ್ಟಲು ಮುಂದಾದರು. ಆದರೆ ಈ ಪಕ್ಷ ಕಣ್ಣು ಬಿಡುವಷ್ಟರಲ್ಲೇ ದೇವರಾಜ ಅರಸ್‌ರವರು ಮರಣ ಹೊಂದಿದ್ದರು. ರಾಚಯ್ಯನವರು ಕ್ರಾಂತಿ ರಂಗದ ರಾಜ್ಯಾಧ್ಯಕ್ಷರಾದರು. ಈ ನಡುವೆ ಕೆಲವು ಮೂಲಭೂತ ಸಮಾಜವಾದಿಗಳು, ಜನಪರ ಹಾಗೂ ಪ್ರಗತಿಪರ ಆಲೋಚಕರೆಲ್ಲ ಒಂದೆಡೆ ಸೇರಿ ಚರ್ಚಿಸಿ ರಾಜ್ಯಮಟ್ಟದಲ್ಲಿ ಕಾಂಗ್ರೆಸೇತರ

ಸರ್ಕಾರವನ್ನು ಜಾರಿಗೆ ತರಬೇಕೆಂಬ ಒಮ್ಮತದ ನಿರ್ಧಾರವನ್ನು ವ್ಯಕ್ತಪಡಿಸಿದರು. ಅವರ ಈ ಸಂಕಲ್ಪಬದ್ಧ ರಾಜಕಾರಣದ ಹಿನ್ನೆಲೆಯಲ್ಲಿ ಜನತಾ ಪಕ್ಷ ಮತ್ತು ಕ್ರಾಂತಿರಂಗದ ಧುರೀಣರೆಲ್ಲ ಜೊತೆಗೂಡಿ 'ಜನತಾ ರಂಗ' ಎಂಬ ಒಕ್ಕೂಟವನ್ನು ರಚಿಸಿಕೊಂಡರು. 1983ರ ಜವರಿ ತಿಂಗಳಿನಲ್ಲಿ ನಡೆದ ರಾಜ್ಯ ವಿಧಾನ ಸಭಾ ಚುನಾವಣೆಯಲ್ಲಿ ಈ ಒಕ್ಕೂಟ ಅತ್ಯಂತ ಹೆಚ್ಚಿನ ಸ್ಥಾನವನ್ನು ಗಳಿಸಿತು. ಅವರ ನಿರೀಕ್ಷೆಯಂತೆ ಕಾಂಗ್ರೆಸ್‌ನ ನೆಲದಲ್ಲಿ ಮೊದಲ ಬಾರಿಗೆ ಜನತಾ ಸರ್ಕಾರವೊಂದು ಅಸ್ತಿತ್ವಕ್ಕೆ ಬಂದಿತು. ರಾಮಕೃಷ್ಣ ಹೆಗಡೆಯವರು ಈ ಸರ್ಕಾರದ ಮೊದಲ ಮುಖ್ಯಮಂತ್ರಿಯಾದರು.

ಈ ಜನತಾ ಸರ್ಕಾರದ ಮೊಟ್ಟಮೊದಲ ಶಿಕ್ಷಣ ಸಚಿವರಾಗಿ ಆಯ್ಕೆಯಾದ ರಾಚಯ್ಯನವರು, ರಾಮಕೃಷ್ಣ ಹೆಗಡೆಯವರ ಸಮೀಪದವರಾಗಿ, ಜನತಾ ಸರ್ಕಾರದ ಬೆನ್ನೆಲುಬಾಗಿ ನಿಂತರು. ಸಮಾಜ ಸ್ವರೂಪದ ಬದಲಾವಣೆಗೆ ನಮ್ಮ ಶಿಕ್ಷಣ ಕ್ರಮದ ಬದಲಾವಣೆ ಅತ್ಯಗತ್ಯ. ಈ ಕ್ರಾಂತಿಕಾರಕ ಸುಧಾರಣೆಗಳನ್ನು ಜಾರಿಗೆ ತರಲೆಂದೇ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ರಾಜ್ಯದ ಬೊಕ್ಕಸದ ಕೋಟ್ಯಾಂತರ ರೂಗಳ ವೆಚ್ಚದ ಶಿಕ್ಷಣ ಖಾತೆಯನ್ನು ಅನುಭವಿಗಳಾದ ರಾಚಯ್ಯನವರಿಗೆ ವಹಿಸಿದರು. ಇಡೀ ರಾಜ್ಯದ ಜನತೆಗೆ ಅಕ್ಷರದ ಅನ್ನ ನೀಡುವ ಶಿಕ್ಷಣ ಇಲಾಖೆ ಇಂದಿನ ಹಾಗೆ ಚಿಕ್ಕಪ್ರಮಾಣದಲ್ಲಿರಲಿಲ್ಲ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ, ಉನ್ನತ ಶಿಕ್ಷಣ ಹಾಗೂ ವೈದ್ಯಕೀಯ ಶಿಕ್ಷಣಗಳನ್ನೊಳಗೊಂಡ ಸಮಗ್ರ ಶಿಕ್ಷಣ ಖಾತೆ ಅವರ ಅಧಿಕಾರದ ತೆಕ್ಕೆಯಲ್ಲಿತ್ತು. ಯಾವುದೇ ಒಂದು ಸಮಾಜ ತೀರ ಹಿಂದುಳಿದಿರುವಿಕೆಗೆ ಮೂಲಭೂತವಾದ ಶಿಕ್ಷಣದ ಕೊರತೆಯೇ ವಿನಾ ಬೇರೇನೂ ಅಲ್ಲ ಎಂಬ ಸೂಕ್ಷ್ಮತೆಗಳು ರಾಚಯ್ಯನವರಿಗೆ ತಿಳಿದಿತ್ತು. ಆದ್ದರಿಂದಲೇ ಗ್ರಾಮಾಂತರ ಪ್ರದೇಶಗಳಲ್ಲಿ, ಗುಡ್ಡಗಾಡು ಸ್ಥಳಗಳಲ್ಲಿ, ಪರಂಪರಾನುಗತವಾಗಿ, ಶಿಕ್ಷಣದ ಅರಿವಿಲ್ಲದೆಯೇ ಬದುಕುತ್ತಿದ್ದ ದುರ್ಬಲ, ಹಿಂದುಳಿದ ಮತ್ತು ನಿರಾಶ್ರಿತ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಸರ್ಕಾರದ ವತಿಯಿಂದ ಅನೇಕ ಶಿಕ್ಷಣ ಪರ ಕಾರ್ಯಕ್ರಮಗಳನ್ನು ಜಾರಿಗೆ ತಂದು ಅವರ ಅಕ್ಷರ ಕಲಿಕೆಗೆ ಬೆಳಕಾದರು.

ಸಮಾಜದಲ್ಲಿ ಬೆಸೆದುಕೊಂಡಿರುವ ಹಲವಾರು ಮೂಢನಂಬಿಕೆಗಳು ಹಾಗೂ ಅನಗತ್ಯ ಸಂಪ್ರದಾಯಗಳನ್ನು ಕಿತ್ತೆಸೆಯಲು ಆಧುನಿಕ ಶಿಕ್ಷಣದ ಮಹತ್ವ ಹಿರಿದಾದುದು. ಇದನ್ನು ಮನಗಂಡ ಶಿಕ್ಷಣ ಸಚಿವ ರಾಚಯ್ಯನವರು ಪ್ರಪ್ರಥಮವಾಗಿ ಶಾಸನ ಸಭೆಗಳಲ್ಲಿ ಶಿಕ್ಷಣ ಸುಧಾರಣೆಗಳ ಮಸೂದೆಯನ್ನು ಮಂಡಿಸುತ್ತ, ಒಂದು ಐತಿಹಾಸಿಕ ದಾಖಲೆಯನ್ನು ನಿರ್ಮಿಸಿದರು. ಕರ್ನಾಟಕ ರಾಜ್ಯದಲ್ಲಿ ಮೊದಲ ಬಾರಿಗೆ ರಾಮಕೃಷ್ಣ ಹೆಗಡೆಯವರ ಸರ್ಕಾರ ಕೈಗೊಳ್ಳಲಾದ ಒಂದು ಕ್ರಾಂತಿಕಾರಕ ನಿಲುವೆಂದರೆ ನೇರ ನೇಮಕಾತಿ ವ್ಯವಸ್ಥೆ. ಇದರ ಜಾರಿಗೋಸ್ಕರ ರಾಚಯ್ಯನವರು ಕ್ಯಾಬಿನೆಟ್‌ನಲ್ಲಿ ಶತತ ಹೋರಾಟ ಮಾಡಿದರು. ಶಿಕ್ಷಣ ಮಂತ್ರಿಯಾಗಿ ಇವರ ಇನ್ನೊಂದು ಚರಿತ್ರಾರ್ಹ ಕೆಲಸವೆಂದರೆ ಪ್ರಪ್ರಥಮ ಬಾರಿಗೆ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ವಿಷಯಗಳಿಗೆ ಸಾಮಾನ್ಯ ಪರೀಕ್ಷೆಯನ್ನು ಜಾರಿಗೆ ತಂದದ್ದು. [C.E.T. Common Entrance Test] ಹಾಗೂ ಬಹಳ ವರ್ಷಗಳ ಕಾಲ ಸರ್ಕಾರದ ಕಡತದ ಬುಟ್ಟಿಯಲ್ಲಿ ಸಜೀವವಾಗಿ ಹೂತುಹೋಗಿದ್ದ

ಕಾಲೇಜು ಹಿರಿಯ ಉಪನ್ಯಾಸಕರ ಬಡ್ತಿ ವಿಷಯವನ್ನು ಮೇಲಕ್ಕೆತ್ತಿ ಅದಕ್ಕೊಂದು ಪುನರ್ ಜೀವ ಕೊಟ್ಟಿದ್ದು.

ರಾಜ್ಯದಲ್ಲಿ ಶಿಕ್ಷಣ ವ್ಯವಸ್ಥೆಯ ಸುಧಾರಣೆಯನ್ನು ಕುರಿತಂತೆ ಹತ್ತಾರು ವರ್ಷಗಳಿಂದಲೂ ಬಹಳಷ್ಟು ಚರ್ಚೆ ಮತ್ತು ಚಿಂತನೆಗಳು ನಡೆದಿದ್ದವು. ಆದರೆ ಏಕರೂಪದ ಶಿಕ್ಷಣ ಕಾಯಿದೆಯೊಂದು ಜಾರಿಯಲ್ಲಿರಲಿಲ್ಲ. ಕೊನೆಗೆ 1983ರಲ್ಲಿ ಅಧಿಕಾರಕ್ಕೆ ಬಂದ ಜನತಾ ಸರ್ಕಾರ ಅದಕ್ಕೊಂದು ಹೊಸ ಆಯಾಮ ಹಾಕಿತ್ತು. ಶಿಕ್ಷಣ ಸಚಿವರಾದ ರಾಚಯ್ಯನವರು ಈ ಸಂದರ್ಭದಲ್ಲಿ ಸಮಕಾಲೀನ ಶೈಕ್ಷಣಿಕ ವ್ಯವಸ್ಥೆಯನ್ನು ಸಾರ್ವತ್ರಿಕಗೊಳಿಸುವ ಸದ್ದುದ್ದೇಶದಿಂದ ಸಮಗ್ರ ಶಿಕ್ಷಣ ಮಸೂದೆಗೆ ಪುನರ್ ಚಾಲನೆ ಕೊಟ್ಟರು. ರಾಜ್ಯದ ಶಿಕ್ಷಣ ಸಂಸ್ಥೆಗಳಲ್ಲಿರುವ ಅಕ್ರಮಗಳ ನಿವಾರಣೆ, ಡೊನೇಷನ್ ಪದ್ಧತಿಯ ರದ್ದು, ಶಿಕ್ಷಕರ ಹಿತರಕ್ಷಣೆ, ವಿಶ್ವವಿದ್ಯಾನಿಲಯಗಳ ಸ್ವಾಯತ್ತತೆಯ ಸಾಧನೆ, ಪರೀಕ್ಷಾ ವ್ಯವಸ್ಥೆಯ ಸುಧಾರಣೆ, ವಿದ್ಯಾರ್ಥಿಗಳ ಮಾನಸಿಕ ಮತ್ತು ಬೌದ್ಧಿಕ ಸಮಾರ್ಥ್ಯಗಳ ಸಮರಸ ಬೆಳವಣಿಗೆಗೆ ಪೋಷಣೆ, ಶಿಕ್ಷಣದ ಮೂಲಕ ವೈಜ್ಞಾನಿಕ ಮತ್ತು ಜಾತ್ಯಾತೀತ ಮನೋಭಾವವನ್ನು ಬೆಳೆಸುವಿಕೆ ಮತ್ತು ಶಿಕ್ಷಣ ಸಂಸ್ಥೆಗಳು ಆರೋಗ್ಯಕರ ಶಿಕ್ಷಣ ವಿಧಾನಗಳನ್ನು ಅಳವಡಿಸಿಕೊಳ್ಳುವಿಕೆ ಮತ್ತು ಶಿಸ್ತುಪಾಲನೆಯ ನಿಯಂತ್ರಣ. ಈ ಎಲ್ಲದರ ದೃಷ್ಟಿಯಿಂದ ರಾಚಯ್ಯನವರು ಪರಿಣಿತ ಶಿಕ್ಷಣ ತಜ್ಞರ ಜಂಟಿ ಸಮಿತಿಗಳನ್ನು ನೇಮಕ ಮಾಡಿದರು. ಈ ಸಮಿತಿಗಳು ಬೇರೆ, ಬೇರೆ ಭಾಗದ ಶಿಕ್ಷಣ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಒಂದು ವರದಿಯನ್ನು ಸಲ್ಲಿಸಿತು. ಜಂಟಿ ಸಮಿತಿಗಳ ಈ ವರದಿಗಳ ಆಧಾರದ ಮೇಲೆ ರಾಚಯ್ಯನವರು ಸಮಗ್ರ ಶಿಕ್ಷಣ ಮಸೂದೆಯನ್ನು ಜಂಟಿ ಸದನಗಳ ಮುಂದೆ ಪ್ರಸ್ತುತ ಪಡಿಸಿದರು. ಎರಡು ಸದನಗಳಲ್ಲೂ ಈ ವಿಷಯದ ಮೇಲೆ ಗಂಭೀರವಾದಂತಹ ಚರ್ಚೆಯಾಯಿತು. ಅಂತಿಮವಾಗಿ 1983ರ ಆಗಸ್ಟ್ 25ರಂದು "ಸಮಗ್ರ ಶಿಕ್ಷಣ ವಿಧೇಯಕ" ಎರಡು ಸದನಗಳಿಂದಲೂ ಒಪ್ಪಿತವಾಗಿ ಜಾರಿಗೆ ಬಂದಿತು. ಇದು ಕರ್ನಾಟಕ ಶೈಕ್ಷಣಿಕ ಕ್ಷೇತ್ರದಲ್ಲಾದ ಒಂದು ಮಹತ್ವದ ಬದಲಾವಣೆ. ಹೀಗೆ ರಾಚಯ್ಯನವರು ಅಧಿಕಾರ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದ ಇಂತಹ ಪರಿಣಾಮಕಾರಿ ಶಿಕ್ಷಣ ಮಸೂದೆಯಿಂದ ಖಾಸಗಿ ಶಿಕ್ಷಣ ಸಂಸ್ಥೆಗಳ ಆಡಳಿತವನ್ನು ನಿಯಂತ್ರಿಸಲು ಸಾಧ್ಯವಾಯಿತು.

ಒಟ್ಟಿನಲ್ಲಿ ಸಮಾಜದ ಬುಡದಿಂದಲೇ ಶೈಕ್ಷಣಿಕ ಸುಧಾರಣೆಗಳನ್ನು ಪ್ರಾರಂಭಿಸಿದ ರಾಚಯ್ಯನವರು ಕರ್ನಾಟಕ ಶಿಕ್ಷಣ ಕ್ಷೇತ್ರದಲ್ಲಿ ಗುರುತರವಾದ ಕಾರ್ಯಕ್ರಮಗಳನ್ನು ಜಾರಿಗೊಳಿಸಿದರು. ಹಾಗೂ ಗಾಂಧೀಜಿ ಕನಸಿನ ಗ್ರಾಮ ರಾಜ್ಯ ಸ್ಥಾಪನೆಗೆ ತೀವ್ರ ಗಮನಹರಿಸಿ ತಮ್ಮ ವ್ಯಾಪಕ ಯೋಜನೆ ಸಾಧನೆಗಳ ಮೂಲಕ ಶಿಕ್ಷಣ ಕ್ಷೇತ್ರದ ಸುಧಾರಣೆಗಳ ಆದ್ಯ ಪ್ರವರ್ತಕರೆಂಬ ಅಭಿದಾನಕ್ಕೆ ಹೆಸರಾಗಿದ್ದಾರೆ.

ಜನತಾ ಸರ್ಕಾರದಲ್ಲಿ ಶಿಕ್ಷಣ ಸಚಿವರಾಗಿ ಸುಮಾರು ಇಪ್ಪತ್ತು ತಿಂಗಳುಗಳ ಕಾಲ ಸಮರ್ಥ, ಸುವ್ಯವಸ್ಥಿತ ಆಡಳಿತ ನಡೆಸಿ, ಅಪಾರ ಜನ ಮನ್ನಣೆಗಳಿಸಿದ ರಾಚಯ್ಯನವರನ್ನು ಅಂದಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಅತ್ಯಂತ ಸ್ನೇಹಗೌರವಗಳಿಂದ ನಡೆಸಿಕೊಳ್ಳುತ್ತಿದ್ದಲ್ಲದೆ ತಮ್ಮ ಮಂತ್ರಿಮಂಡಲದಲ್ಲಿ ಅವರಿಗೆ ಪ್ರಮುಖ ಸ್ಥಾನ ಕೊಟ್ಟಿದ್ದರು. ಈ ಸಂದರ್ಭದಲ್ಲಿ ರಾಮಕೃಷ್ಣ ಹೆಗಡೆಯವರು ರಾಚಯ್ಯನವರ ಸಮರ್ಥ ಸುಧಾರಣಾ ಆಡಳಿತ ನೈಪುಣ್ಯತೆಯನ್ನು ಬಹಳ ಹತ್ತಿರದಿಂದ ಗಮನಿಸಿದರು. ಬಹು ಹಿಂದಿನಿಂದಲೂ ಅವಮಾನಕ್ಕೊಳಗಾಗಿದ್ದ ದಲಿತ, ಹಿಂದುಳಿದ ಮತ್ತು ದುರ್ಬಲ ವರ್ಗಗಳ ಸಾಮಾಜಿಕ ಮೌಲ್ಯಗಳ ಭದ್ರತೆಯನ್ನು ಕಾಪಾಡುವ ಸಲುವಾಗಿ ಹೆಗಡೆಯವರು ರಾಚಯ್ಯನವರ ಶಿಕ್ಷಣ ಖಾತೆಯನ್ನು ಬದಲಾಯಿಸಿ ಅದರ ಬದಲಿಗೆ ಅತ್ಯಂತ ಹೆಚ್ಚು ಜವಾಬ್ದಾರಿಯುತವಾದ ಗೃಹ ಖಾತೆಯನ್ನು ವಹಿಸಿದರು. ಮುಖ್ಯಮಂತ್ರಿಯವರ ಆಜ್ಞೆಯಂತೆ ರಾಚಯ್ಯನವರು 1984ರ ಆಗಸ್ಟ್‌ರಂದು ರಾಜ್ಯದ ಗೃಹ ಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು.

ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ಮುಖ್ಯಮಂತ್ರಿಯನ್ನು ಬಿಟ್ಟರೆ ಗೃಹ ಸಚಿವರೆ ಅತ್ಯಂತ ಪ್ರಬಲ ಸಚಿವರು. ಅವರಿಗೆ ಇರುವ ಅಧಿಕಾರ ಅಷ್ಟಿಷ್ಟಲ್ಲ. ಇಡೀ ರಾಜ್ಯದ ಆಂತರಿಕ ಭದ್ರತೆಯನ್ನು ಕಾಪಾಡುವ ಜವಾಬ್ದಾರಿ ಗೃಹ ಖಾತೆಗೆ ಸೇರಿದ್ದು. ಆದ್ದರಿಂದಲೇ ಈ ಜವಾಬ್ದಾರಿಯ ನಿರ್ವಹಣೆಗೆ ರಾಜ್ಯಾಂಗದಲ್ಲಿ ಅಪಾರ ಅಧಿಕಾರವನ್ನು ಕೊಡಲಾಗಿದೆ. ಗೃಹ ಸಚಿವರಾಗಿ ರಾಚಯ್ಯನವರು ತಮ್ಮ ಆಡಳಿತದಲ್ಲಿ ವಿನೂತನ ಕಾರ್ಯಕ್ರಮಗಳನ್ನು ಅಸ್ತಿತ್ವಕ್ಕೆ ತರುವುದರ ಮೂಲಕ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿದರು. ಹಾಗೂ ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಸ್ವಾಭಿಮಾನವನ್ನು ಹೆಚ್ಚಿಸಿಕೊಟ್ಟರು. ಅವರ ಕಾಲದಲ್ಲಿ ರಾಜ್ಯದ ವಿವಿಧ ಭಾಗಗಳಲ್ಲಿ ತಲೆಎತ್ತಿದ ದುಷ್ಟಶಕ್ತಿಗಳನ್ನು ದಮನಗೊಳಿಸಿದರು. ನಾಡಿನ ಶಾಂತಿ ಪಾಲನೆಗೆ ಅಡ್ಡಿಯುಂಟು ಮಾಡುತ್ತಿದ್ದ ಗೂಂಡಾ ಸಂಸ್ಕೃತಿಯನ್ನು ಹದ್ದುಬಸ್ತಿನಲ್ಲಿಟ್ಟು ರಾಜ್ಯದುದ್ದಗಲಕ್ಕೂ ನಿರ್ಭಯ ವಾತಾವರಣವನ್ನು ನಿರ್ಮಾಣ ಮಾಡಿದರು. ಇಂಥ ಶ್ರೇಷ್ಠತನದ ಆಡಳಿತ ತಂತ್ರಗಾರಿಕೆಯ ಕಾರ್ಯ ನಿರ್ವಹಣೆಯಲ್ಲಿ ರಾಚಯ್ಯನವರು ಅಪ್ರತೀಮ ರಾಜನೀತಿಯನ್ನು ಪ್ರದರ್ಶಿಸಿದರು.

ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಯಾಗಿ ಮುಂದುವರೆಯುತ್ತಿದಂತೆಯೇ ಕರ್ನಾಟಕ ರಾಜಕಾರಣದಲ್ಲಿ ಸ್ವಲ್ಪ ಏರಿಳಿತಗಳು ಉಂಟಾಯಿತು. ಇದರ ಪರಿಣಾಮವಾಗಿ 1985ರ ಮಾರ್ಚಿ 8ರಲ್ಲಿ ರಾಜ್ಯದ ವಿಧಾನ ಸಭೆಗೆ ಚುನಾವಣೆ ನಡೆಯಿತು. ಈ ಬಾರಿಯ ರಾಚಯ್ಯನವರು ಸಂತೇಮರಹಳ್ಳಿ ಕ್ಷೇತ್ರದ ಮಹಾಜನತೆಯ ಆಶೀರ್ವಾದದೊಂದಿಗೆ ಪುನರ್ ಆಯ್ಕೆಯಾಗಿ, ರಾಮಕೃಷ್ಣ ಹೆಗಡೆಯವರ ಮಂತ್ರಿಮಂಡಲದಲ್ಲಿ ಅದೇ ಗೃಹ ಸಚಿವ ಸ್ಥಾನದಲ್ಲೇ ಮುಂದುವರೆದರು. ಈ ಅವಧಿಯಲ್ಲಿ ಅವರು ಶಾಸಕಾಂಗದಲ್ಲಿ ಮಹತ್ವ ಸ್ಥಾನ ಪಡೆದಿದ್ದು, ಹೆಗಡೆಯವರನ್ನು ಬಿಟ್ಟರೆ ನಂತರದ ಸ್ಥಾನವನ್ನು ಅಲಂಕರಿಸುತ್ತಿದ್ದರು. ಗೃಹ ಖಾತೆಯನ್ನು ವಹಿಸಿಕೊಂಡ ದಿನದಿಂದಲೂ, ಗ್ರಾಮಾಂತರ ಪ್ರದೇಶಗಳ ಜನರ ಸಮಾಜ ರಕ್ಷಣೆಗಾಗಿ ಚಿಂತಿಸುತ್ತಿದ್ದರು. ಈ ಒಂದು ದೃಷ್ಟಿಯಿಂದಲೇ ಅವರು ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ಪೊಲೀಸ್ ಠಾಣೆಗಳನ್ನು ತೆರೆದು ಅಲ್ಲಿ ಜನರಿಗೆ ಕಾನೂನಿನ ಭದ್ರತೆಯನ್ನು ಒದಗಿಸಿಕೊಟ್ಟರು.

ಸಮಾಜದಲ್ಲಿ ಮಹಿಳೆಯರು ಮತ್ತು ಮಕ್ಕಳ ಹಿತರಕ್ಷಣೆಗಾಗಿ, ಹಾಗೂ ಅವರ ನೈತಿಕ ಭದ್ರತೆಗಾಗಿ ಅನೇಕ ಮಹಿಳಾಪರ ಕಾನೂನುಗಳನ್ನು ಕಾರ್ಯರೂಪಕ್ಕೆ ತಂದ ರಾಚಯ್ಯನವರು ದಿನನಿತ್ಯ ಅವರ ಮೇಲೆ ನಡೆಯುತ್ತಿದ್ದ ಅತ್ಯಾಚಾರ, ದೌರ್ಜನ್ಯ ಮತ್ತು ಹಿಂಸೆಗಳ ಪ್ರಕರಣಗಳ ಬಗ್ಗೆ ವಿಚಾರಣೆ ನಡೆಸುವ ಸಲುವಾಗಿ ಐ.ಪಿ.ಎಸ್ ಮಹಿಳಾ ಪೊಲೀಸ್ ಅಧಿಕಾರಿಯ ನೇತೃತ್ವದಲ್ಲಿ ಒಂದು 'ವಿಶೇಷ ಪೊಲೀಸ್ ಘಟಕ' ವನ್ನು ಅಸ್ತಿತ್ವಕ್ಕೆ ತಂದರು. ಅದೇ ರೀತಿ ದಲಿತ ವರ್ಗದವರ ಮೇಲೆ ನಡೆದಂತಹ ಅತ್ಯಾಚಾರ ಮತ್ತು ದಬ್ಬಾಳಿಕೆಯ ಕೇಸಿನ ನೋಂದಾವಣೆ ಮತ್ತು ಕೇಸಿನ ವಿಚಾರಣೆಗಾಗಿ ಬೆಂಗಳೂರು ನಗರದಲ್ಲಿ ಡಿ.ಐ.ಜಿ ಅವರ ನೇತೃತ್ವದಲ್ಲಿ 'ವಿಶೇಷ ಪೊಲೀಸ್ ಘಟಕ' ವನ್ನು ರಚಿಸಿ ಇವರ ಸಹಾಯಕ್ಕಾಗಿ ಮೈಸೂರು, ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲೂ ಕೆಲವು ಪೊಲೀಸ್ ಅಧಿಕಾರಿಗಳನ್ನು ನೇಮಿಸಿದರು. ಹಾಗೆಯೇ ದಲಿತರು ಮತ್ತು ಗಿರಿಜನರ ಮೇಲೆ ಆದಂತಹ ಮೊಕದ್ದಮೆಗಳನ್ನು ತೀರ್ಮಾನಿಸುವುದಕ್ಕಾಗಿ ಅವರಿಗಾಗಿಯೇ ಮೀಸಲಾದ ಒಂದು ವಿಶೇಷ ನ್ಯಾಯಾಲಯವೊಂದನ್ನು ಮೈಸೂರಿನಲ್ಲಿ ಸ್ಥಾಪಿಸಿದರು.

ಕರ್ನಾಟಕ ರಾಜಕಾರಣದ ಇತಿಹಾಸದಲ್ಲಿ ರಾಚಯ್ಯನವರು ಗೃಹ ಸಚಿವರಾಗಿ ಮಾಡಿದ ಶ್ರೇಷ್ಠ ಸಾಧನೆ ಮತ್ತು ಚಾರಿತ್ರಿಕ ದಾಖಲೆ ಎಂದರೆ ಶಿವಮೊಗ್ಗದ ಚಂದ್ರಗುತ್ತಿಯಲ್ಲಿ ನಿರಂತರವಾಗಿ ನಡೆದು ಬರುತ್ತಿದ ಬೆತ್ತಲೆ ಸೇವೆ (Nude Worship) ಯನ್ನು ಶಾಶ್ವತವಾಗಿ ನಿಲ್ಲುವಂತೆ ಮಾಡಿದ್ದು. ಅಲ್ಲದೆ ಅದಕ್ಕೊಂದು ವಿಶೇಷ ಕಾನೂನನ್ನು ಜಾರಿಗೆ ತಂದದ್ದು. ರಾಚಯ್ಯನವರು ಪೊಲೀಸ್ ಸಿಬ್ಬಂದಿ ವರ್ಗವನ್ನು ಬಹಳ ಆತ್ಮೀಯತೆಯಿಂದ ನಡೆಸಿಕೊಳ್ಳುತ್ತಿದ್ದರು. ಹಾಗಾಗಿಯೇ ಇವರ ಕಾಲದಲ್ಲಿ ಈ ಇಲಾಖೆ ಹೆಚ್ಚು ವ್ಯವಸ್ಥಿತವಾದ ಮಾರ್ಗದಲ್ಲಿ ಆಡಳಿತ ನಡೆಸಿಕೊಂಡು ಬಂದಿದ್ದು. ಈ ಇಲಾಖೆಯ ಸಾಮಾನ್ಯ ಪೇದೆಯಿಂದ ಹಿಡಿದು ಪೊಲೀಸ್ ಅಧಿಕಾರಿಗಳವರೆಗೆ ಎಲ್ಲರೂ ಒಂದೇ ಕಡೆ ವ್ಯವಸ್ಥಿತವಾಗಿ ವಾಸವಾಗಿರಲು ವಸತಿ ಸೌಕರ್ಯಗಳ ಅನುಕೂಲತೆಗಾಗಿ ರಾಜ್ಯದಲ್ಲೇ ಮೊದಲ ಬಾರಿಗೆ 'ಪೊಲೀಸ್ ಹೌಸಿಂಗ್ ಕಾರ್ಪೊರೇಷನ್' ಅನ್ನು ಜಾರಿಗೆ ತಂದದ್ದು ಕೂಡ ರಾಚಯ್ಯನವರ ಕೊಡುಗೆ, ಹೀಗೆ ರಾಚಯ್ಯನವರು ಗೃಹ ಸಚಿವರಾಗಿ ಜಾರಿಗೆ ತಂದಂತಹ ಒಂದೊಂದು ಕಾರ್ಯಕ್ರಮಗಳು ಸಹ ಇತಿಹಾಸದ ಪುಟ ಸೇರಿವೆ. ದಲಿತ ವರ್ಗದ ಒಬ್ಬ ರಾಜಕಾರಣಿ ಇಷ್ಟೊಂದು ಎದೆಗಾರಿಕೆಯಿಂದ ವಿನೂತನ ಬದಲಾವಣೆಗಳನ್ನು ಜಾರಿಗೆ ತಂದದ್ದೆ ಒಂದು ದೊಡ್ಡ ಸಾಧನೆ. ಇದಕ್ಕೆಲ್ಲ ಶೋಷಿತ ವರ್ಗಗಳು ಪಾರಂಪರಿಕವಾಗಿ ಅನುಭವಿಸಿಕೊಂಡು ಬಂದಿದ್ದ ನೋವಿನ ಜ್ವಾಲೆಯ ಪ್ರತೀಕವೇ ಹೊರತು ಅದು ಬೇರೇನು ಅಲ್ಲ.

ಸಮುದಾಯ ಬದುಕಿಗೆ ಹೆಚ್ಚಿನ ಮಹತ್ವ ನೀಡುವ ಗೃಹ ಇಲಾಖೆ ರಾಚಯ್ಯನವರ ಕಾಲದಲ್ಲಿ ಕೆಲವಾರು ಮೂಲಭೂತವಾದ ಬದಲಾವಣೆಗಳನ್ನು ಕಂಡುಕೊಂಡಿತ್ತು. ಪಾರಂಪರಿಕವಾಗಿ ನಂಬಿಕೆ ಮತ್ತು ಆಚರಣೆಗಳ ನೆಪದಲ್ಲಿ ನಡೆಯುತ್ತಿದ್ದ ಅನೇಕ ಅನಿಷ್ಟಗಳು ಈ ಅವಧಿಯಲ್ಲಿ ಕೊನೆಗೊಂಡವು. ಹೀಗೆ ಜನಪರ ಆಶಯಗಳಿಗೆ ಅನುಗುಣವಾಗಿ ಮುನ್ನಡೆಸಿಕೊಂಡು ಹೋಗುತ್ತಿದ್ದ ರಾಚಯ್ಯನವರ ಗೃಹ ಖಾತೆಯನ್ನು ಯಾವುದೇ

ಸದ್ದುಗದ್ದಲವಿಲ್ಲದೆ ಅಂದಿನ ರಾಮಕೃಷ್ಣ ಹೆಗಡೆಯವರ ಸರ್ಕಾರ ಬದಲಾಯಿಸಿತು. ಈ ಹಿನ್ನೆಲೆಯಲ್ಲಿ ಅವರು 1987ರ ಏಪ್ರಿಲ್ 27 ರಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆಗಳ ಜಂಟಿ ಖಾತೆಯನ್ನು ವಹಿಸಿಕೊಂಡರು. ಸರ್ಕಾರ ರಾಚಯ್ಯನವರು ಆಡಳಿತಾನುಭವದ ಹಿರಿಮೆಯನ್ನು ಗುರುತಿಸಿ ಆಗಾಗ್ಗೆ ಇಂತಹ ಬದಲಾವಣೆಯನ್ನು ಮಾಡುತ್ತಿತ್ತು.

ಆರೋಗ್ಯ ಇಲಾಖೆಯ ಮೂಲ ಸ್ವರೂಪವನ್ನು ಕೆಳಹಂತದಿಂದಲೇ ತಿಳಿದಿದ್ದ ರಾಚಯ್ಯನವರು ಅದರ ಪ್ರಾಥಮಿಕ ಸೌಲಭ್ಯಗಳನ್ನು ಎಲ್ಲರಿಗೂ ಸರಿಸಮನಾಗಿ ಸಿಗುವಂಥ ವ್ಯವಸ್ಥೆಯನ್ನು ಮಾಡಿದರು. ಆರೋಗ್ಯ ಭಾಗ್ಯವೇ ಎಲ್ಲಕ್ಕೂ ಮೂಲ ಸಮಾಜದಲ್ಲಿ ಒಳ್ಳೆಯ ಆರೋಗ್ಯವನ್ನು ಇಟ್ಟುಕೊಂಡವರು ಇನ್ನುಳಿದ ಎಲ್ಲಾ ಭಾಗ್ಯವನ್ನು ಸಲೀಸಾಗಿ ಗಳಿಸಿಕೊಳ್ಳುತ್ತಾರೆ. ಇದರ ಮೂಲಕ ಪ್ರತಿಯೊಬ್ಬ ಮಾನವ ಜೀವಿಯೂ ನೆಮ್ಮದಿಯ ಜೀವನವನ್ನು ನಡೆಸಬಹುದು ಎಂಬತಾತ್ವಿಕ ಚಿಂತನೆ ರಾಚಯ್ಯನವರದು. ಆದ್ದರಿಂದಲೇ ಅವರು ಇಂಥ ಆರೋಗ್ಯ ಸೌಲಭ್ಯಗಳು ಮೊದಲು ಗ್ರಾಮೀಣ ಮತ್ತು ಗುಡ್ಡಗಾಡು ಪ್ರದೇಶಗಳ ಜನರ ಮನೆ ಮನೆ ಬಾಗಿಲಿಗೆ ತಲುಪುವ ಪ್ರಾಮಾಣಿಕ ಪ್ರಯತ್ನ ಮಾಡಿದರು. ಹೀಗೆ ಆರೋಗ್ಯ ಇಲಾಖೆಯ ಅಧಿಕಾರವನ್ನು ಕೈಗೆತ್ತಿಕೊಂಡ ಆರಂಭದಲ್ಲೇ ಅವರು ಸಾಮಾಜಿಕ ಬದುಕನ್ನು ಕಿತ್ತುತಿನ್ನುವ ಕೆಲವು ಅಂಟು ಜಾಡ್ಯಕಾಯಿಲೆಗಳ ನಿವಾರಣೆ ಮಾಡುವ ದಿಟ್ಟ ಕ್ರಮ ಕೈಗೊಂಡು ಅದಕ್ಕಾಗಿ ನುರಿತ ವೈದ್ಯರ ಸಲಹೆ ಸೂಚನೆಗಳನ್ನು ಪಡೆದು ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದರು.

ಗ್ರಾಮೀಣ ಬದುಕಿನ ತುಡಿತ ರಾಚಯ್ಯನವರಲ್ಲಿ ರಕ್ತಗತವಾಗಿ ಹರಿದು ಬಂದಿದ್ದರಿಂದ ಸಹಜವಾಗಿಯೇ ಅವರ ಕೇಂದ್ರ ಪ್ರಜ್ಞೆ ಆ ಪರಿಸರದ ನೆಲೆಯಲ್ಲಿ ಬದುಕುತ್ತಿದ್ದ ಜನಸಮುದಾಯದವರ ಕಡೆ ಮಿಡಿಯುತ್ತಿತ್ತು. ಕರ್ನಾಟಕದಾದ್ಯಂತ ಜನಸಂಖ್ಯೆಗೆ ಅನುಗುಣವಾಗಿ ಬಯಲು ಪ್ರದೇಶಗಳಲ್ಲಿ ಪ್ರತಿ 30 ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಹಾಗೂ ಗಿರಿಜನ, ಗುಡ್ಡಗಾಡು ಪ್ರದೇಶಗಳಲ್ಲಿ ಪ್ರತಿ ಹತ್ತು ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು; ಅದೇ ರೀತಿ ಬಯಲು ಪ್ರದೇಶದಲ್ಲಿ ಪ್ರತಿ ಐದು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪಕೇಂದ್ರವನ್ನು ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ಪ್ರತಿ ಮೂರು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪಕೇಂದ್ರವನ್ನು ತಮ್ಮ ಅಧಿಕಾರ ಅವಧಿಯಲ್ಲಿ ಕಡ್ಡಾಯವಾಗಿ ತೆರೆಯಲೇಬೇಕೆಂಬ ಸಂಕಲ್ಪ ರಾಚಯ್ಯನವರದಾಗಿತ್ತು. ಅದರಂತೆ ಅದನ್ನು ಅನುಷ್ಠಾನಕ್ಕೂ ತಂದರು. ಇದು ಸ್ವಾತಂತ್ರ್ಯ ದಿನಗಳಲ್ಲಿ ಗ್ರಾಮಾಂತರ ಪ್ರದೇಶಗಳ ಜನತೆಗೆ ಪ್ರಾಥಮಿಕ ಆರೋಗ್ಯ ಸೇವಾ ಸೌಲಭ್ಯಗಳನ್ನು ಅವರ ಸಮೀಪಕ್ಕೆ ಕೊಂಡೊಯ್ಯುವಲ್ಲಿ ನಡೆದ ಮೊದಲ ಪ್ರಯತ್ನ ಹಾಗೂ ಆರೋಗ್ಯ ಇಲಾಖೆಯಲ್ಲಿ ಆದಂತಹ ಒಂದು 'ಮೌನ ಕ್ರಾಂತಿ' ಎಂದರೆ ತಪ್ಪಾಗಲಾರದು.

ರಾಚಯ್ಯನವರು ಯಾವಾಗಲೂ ಹೊಸ ಹೊಸ ಆಯಾಮಗಳನ್ನು ಅಳವಡಿಸುವ ಪ್ರವೃತ್ತಿಯುಳ್ಳವರು. ಹಾಗಾಗಿ ಅವರು ರಾಜ್ಯದ ಆರೋಗ್ಯ ಇಲಾಖೆಯ ಆಧುನೀಕರಣದ ಬಗ್ಗೆ ಯೋಚಿಸಿ, ವಿದೇಶಗಳಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ಸೌಲಭ್ಯಗಳನ್ನು ಯಾವ ಹಂತದಲ್ಲಿ ಅಭಿವೃದ್ಧಿಯಾಗಿವೆ; ಅಲ್ಲಿನ ಜನನ ಪ್ರಮಾಣ, ಮರಣ ಪ್ರಮಾಣ, ಶಿಶು ಪೋಷಣೆ, ಗರ್ಭಿಣಿ ಸ್ತ್ರೀಯರ ಶುಶ್ರೂಷೆ, ಔಷಧೋಪಚಾರಗಳ ಬಳಕೆ ಮತ್ತು ಅವುಗಳ ವಿತರಣೆ ಇನ್ನು ಮುಂತಾದವುಗಳು ಯಾವ ಮಟ್ಟದಲ್ಲಿ ಬೆಳವಣಿಗೆಯಾಗಿವೆ, ಇತ್ತೀಚಿನ ಆರೋಗ್ಯ ಅಭಿವೃದ್ಧಿಯ ಬಗ್ಗೆ ಅವರ ಕಾರ್ಯಕ್ರಮಗಳೇನು ಎಂಬುದನ್ನೆಲ್ಲ ಅಧ್ಯಯನ ಮಾಡಲು ಆಲೋಚಿಸಿದರು. ಅಷ್ಟೊತ್ತಿಗೆ 1988ರಲ್ಲಿ ಭಾರತ ಸರ್ಕಾರ ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ನೇತೃತ್ವದಲ್ಲಿ ಒಂದು ತಂಡವನ್ನು ಆಯ್ಕೆಮಾಡಿ ಅವರನ್ನು ದಕ್ಷಿಣ ಕೊರಿಯಾ, ಇಂಡೋನೇಷ್ಯ ಮತ್ತು ಬ್ಯಾಂಕಾಕ್ ರಾಷ್ಟ್ರಗಳಿಗೆ ಕಳುಹಿಸಿಕೊಟ್ಟಿತ್ತು. ಆವಾಗ ರಾಚಯ್ಯನವರು ಕರ್ನಾಟಕ ರಾಜ್ಯದ ಆರೋಗ್ಯ ಸಚಿವರಾಗಿ ಭಾರತ ತಂಡವನ್ನು ಪ್ರತಿನಿಧಿಸಿದರು. ಈ ಸಂದರ್ಭದಲ್ಲಿ ಅವರು ಈ ದೇಶಗಳಲ್ಲಿ ಆಗಿರುವ ಎಲ್ಲಾ ಆರೋಗ್ಯ ಅಭಿವೃದ್ಧಿಯನ್ನು ಪರಿಶೀಲಿಸಿ, ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದರು. ಹೀಗೆ ಅವರು ವಿದೇಶಕ್ಕೆ ಹೋಗಿ ಬಂದ ಮೇಲೆ ಅಭಿವೃದ್ಧಿ ಕಂಡಿತ್ತು. ಅಷ್ಟರಲ್ಲಿ ಮತ್ತೆ ಅಂದು ಅಧಿಕಾರದಲ್ಲಿದ್ದಂತಹ ಎಸ್.ಆರ್. ಬೊಮ್ಮಾಯಿ ಸರ್ಕಾರ ಅವರ ಖಾತೆಯನ್ನು ಬದಲಾಯಿಸಿ, ಕೃಷಿ ಮತ್ತು ಅರಣ್ಯ ಇಲಾಖೆಗಳನ್ನು ವಹಿಸಿತ್ತು. ಈ ಇಲಾಖೆಗಳ ಜವಾಬ್ದಾರಿಯನ್ನು ಹೊತ್ತಂಥ ಸಂದರ್ಭದಲ್ಲೇ ರಾಷ್ಟ್ರಮಟ್ಟದ ತೀರ್ಮಾನದಂತೆ ಅವರು ಕರ್ನಾಟಕ ರಾಜ್ಯದ ಜನತಾದಳ ಘಟಕದ ಅಧ್ಯಕ್ಷ ಸ್ಥಾನವನ್ನು ಕೂಡ ನಿರ್ವಹಿಸಬೇಕಾಗಿ ಬಂತು.

ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದ ನಂತರ ಸಾರ್ವತ್ರಿಕ ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬಂದ ಸರ್ಕಾರಗಳ ಎಲ್ಲ ನಾಯಕರ ಅವಧಿಯಲ್ಲಿ ಅರ್ಥಪೂರ್ಣ ಆಡಳಿತ ನಡೆಸಿದಂಥ ರಾಚಯ್ಯನವರು, ಅಂದಂದಿನ ನಾಯಕರಿಗೆ ಅತೀ ಸಮೀಪದವರಾಗಿ ಅಷ್ಟೆ ಎತ್ತರಕ್ಕೆ ಬೆಳೆದವರು. ಇದುವರೆಗೆ ಕರ್ನಾಟಕದಲ್ಲಿ ಅಧಿಕಾರ ಹಿಡಿದ ಮುಖ್ಯ ಮಂತ್ರಿಗಳ ಪೈಕಿ ಕೆಲವರನ್ನು ಬಿಟ್ಟರೆ, ಉಳಿದೆಲ್ಲಾ ಮುಖ್ಯ ಮಂತ್ರಿಗಳ ಆಡಳಿತಾನುಭವದೊಂದಿಗೆ, ಕೇಂದ್ರ ಸರ್ಕಾರದಲ್ಲಿಯೂ ಆಡಳಿತ ನಿರ್ವಹಣೆ ಮಾಡಿ ರಾಷ್ಟ್ರಮಟ್ಟದ ರಾಜಕಾರಣದಲ್ಲಿ ಗುರುತಿಸಿಕೊಂಡಿದ್ದರು. ಭಾರತದ ಪ್ರಗತಿಪರ ರಾಜಕೀಯ ಬುದ್ಧಿಜೀವಿಗಳಲ್ಲಿ ಒಬ್ಬರಾದ ರಾಚಯ್ಯನವರು ರಾಜ್ಯ ರಾಜಕಾರಣದ ಮಂಚೂಣಿಯ ನಾಯಕರಾಗಿದ್ದರು. ಅದರಲ್ಲೂ ದಲಿತ ವರ್ಗದ ರಾಜಕಾರಣಿಗಳಲ್ಲಿ ಇವತ್ತಿನವರೆಗೂ ಅಗ್ರಗಣ್ಯರು. ಕನ್ನಡ ನಾಡಿನ ತತ್ವನಿಷ್ಠ ರಾಜಕಾರಣದ ಪ್ರಖರತೆಯನ್ನು ಹೊರನಾಡಿಗೂ ತೋರಿಸಿದ ಮೇಧಾವಿ ಎನ್ನಬಹುದು. ಇವರು ಮೂರು ಬಾರಿ ಈ ರಾಜ್ಯದ ಮುಖ್ಯಮಂತ್ರಿಯಾಗುವ ಕನಸು ಕಂಡಿದ್ದರು. ಅದಕ್ಕೆ ಕಾಲಾವಕಾಶಗಳೆಲ್ಲವೂ ಕೂಡಿ ಬಂದಿತ್ತು. ಆದರೆ ಪ್ರಬಲ ಕೋಮಿನ ನಾಯಕರ ಕುತಂತ್ರ, ದಲಿತ ಪ್ರತಿನಿಧಿಗಳ ಅಸಂಘಟನೆ ಮತ್ತು ಹಿಂದುಳಿದವರ ಇಬ್ಬಗೆಯ ಧೋರಣೆಗಳಿಂದ ಅದು ಕೈತಪ್ಪಿ ಮುಖ್ಯಮಂತ್ರಿಯ ಕನಸು ಕನಸಾಗಿಯೇ ಉಳಿದುಕೊಂಡಿತ್ತು. ಹೀಗೆ ದಲಿತ ವರ್ಗದವರೊಬ್ಬ ಪ್ರಥಮ ಬಾರಿಗೆ

ಮುಖ್ಯಮಂತ್ರಿಯಾಗುವುದನ್ನು ತಪ್ಪಿಸಿದ್ದು ಪ್ರಜಾತಂತ್ರ ವ್ಯವಸ್ಥೆಗೆ ಮೋಸ ವೆಸಗಿದಂತೆ ಹಾಗೂ ಅದು ಕನ್ನಡದ ನಾಲ್ಕು ಕೋಟಿ ಜನತೆಗೆ ಎಸಗಿದ ದ್ರೋಹ. ಹಾಗೇನಾದರೂ ರಾಚಯ್ಯನವರನ್ನು ಮುಖ್ಯ ಮಂತ್ರಿಯನ್ನಾಗಿ ಮಾಡಿದ್ದರೆ. ಇಡೀ ಭರತ ಖಂಡದಲ್ಲೇ ಒಬ್ಬ ಆದರ್ಶ ದಲಿತ ರಾಜಕಾರಣಿಯನ್ನು ಮುಖ್ಯಮಂತ್ರಿಯನ್ನಾಗಿ ಮಾಡಿದಂತಹ ಒಂದು ದೊಡ್ಡ ಹೆಸರು ಕರ್ನಾಟಕಕ್ಕೆ ಬರುತ್ತಿತ್ತು.

ಎಂಟನೆಯ ಲೋಕಸಭಾ ಚುನಾವಣೆಯ ನಂತರ ಕೇಂದ್ರದಲ್ಲಿ ಬಿ.ಜೆ.ಪಿ ಹಾಗೂ ಮಿತ್ರಪಕ್ಷಗಳ ಬೆಂಬಲದಿಂದ ಜನತಾ ದಳ ನೇತೃತ್ವದಲ್ಲಿ ರಾಷ್ಟ್ರೀಯ ರಂಗ ಅಧಿಕಾರಕ್ಕೆ ಬಂದಿತು. ಸಾಮಾಜಿಕ ನ್ಯಾಯದ ಹರಿಕಾರ ವಿ.ಪಿ. ಸಿಂಗ್ ಈ ಸರ್ಕಾರದ ಪ್ರಧಾನಮಂತ್ರಿಯಾಗಿ ಆಯ್ಕೆಯಾದರು. ಅಂಬೇಡ್ಕರವರ ಸಿದ್ಧಾಂತ ಮತ್ತು ಆದರ್ಶಗಳಲ್ಲಿ ಅಪಾರ ನಂಬಿಕೆಯನ್ನು ಹೊಂದಿದ್ದ ವಿ.ಪಿ. ಸಿಂಗ್ ಅವರು ತಮ್ಮ ಅಧಿಕಾರದ ಅವಧಿಯಲ್ಲಿ ದಲಿತರಿಗೆ, ಗಿರಿಜನರಿಗೆ, ಹಿಂದುಳಿದವರಿಗೆ ಮತ್ತು ಅಲ್ಪಸಂಖ್ಯಾತರಿಗೆ ಹೆಚ್ಚಿನ ಪ್ರಾತಿನಿಧ್ಯ ಕೊಟ್ಟರು. ಈ ಸಂದರ್ಭದಲ್ಲಿ ರಾಚಯ್ಯನವರು ಕರ್ನಾಟಕ ರಾಜ್ಯ ಜನತಾ ದಳದ ಅಧ್ಯಕ್ಷರಾಗಿದ್ದರು. ರಾಜ್ಯದಲ್ಲಿ ಜನತಾ ದಳ ಅಧಿಕ ಕ್ಷೇತ್ರದಲ್ಲಿ ಗೆದ್ದು ಬಾರದೆ ಇದ್ದರೂ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿತು. ರಾಮಕೃಷ್ಣ ಹೆಗಡೆ, ರಾಮವಿಲಾಸ್ ಪಾಸ್ವಾನ್, ಜಾರ್ಜ್ ಫರ್ನಾಂಡೀಸ್, ಮಾಜಿ ಪ್ರಧಾನಿ ಚಂದ್ರಶೇಖರ್, ಎಸ್.ಆರ್. ಬೊಮ್ಮಾಯಿ ಮುಂತಾದವರೆಲ್ಲ ಕೂಡಿ ಸಮಾಲೋಚಿಸಿ, ಕರ್ನಾಟಕದ ಹಿರಿಯ ಅನುಭವಿ; ಪ್ರಾಮಾಣಿಕ ದಲಿತ ರಾಜಕಾರಣಿಯಾದ ಬಿ. ರಾಚಯ್ಯ ಅವರನ್ನು ರಾಜ್ಯಪಾಲರನ್ನಾಗಿ ಮಾಡಬೇಕೆಂದು ಪ್ರಧಾನಮಂತ್ರಿ ವಿ.ಪಿ. ಸಿಂಗ್ ರವರಿಗೆ ಸಲಹೆ ಮಾಡಿದರು. ಅದಕ್ಕೆ ವಿ.ಪಿ. ಸಿಂಗ್‌ರವರು ಒಪ್ಪಿಗೆ ನೀಡಿ. ಬಿ. ರಾಚಯ್ಯನವರನ್ನು ರಾಜ್ಯಪಾಲರನ್ನಾಗಿ ಆಯ್ಕೆ ಮಾಡಿ ಅನುಮೋದನೆಗಾಗಿ ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರಿಗೆ ಕಳುಹಿಸಿಕೊಟ್ಟರು. ರಾಷ್ಟ್ರಪತಿ ಭವನದಿಂದ ಪ್ರಕಟಣೆಯಾದ ನಂತರ 1990ರ ಫೆಬ್ರವರಿ 14 ರಂದು ರಾಚಯ್ಯನವರು ಹಿಮಾಚಲ ಪ್ರದೇಶದ ರಾಜ್ಯಪಾಲರಾಗಿ ಅಧಿಕಾರ ವಹಿಸಿಕೊಂಡರು.

ಸದಾ ಸಾರ್ವಜನಿಕ ಸೇವೆಯಲ್ಲಿ ನಿರತರಾಗಿದ್ದ ರಾಚಯ್ಯನವರು ಮೊದಮೊದಲು ರಾಜ್ಯಪಾಲರಾಗಿ ಹೋಗಲು ಹಿಂಜರಿಯುತ್ತಿದ್ದರು. ಆದರೆ ಕೆಲವು ಸಮಕಾಲೀನ ರಾಜಕಾರಣಿಗಳ ಒತ್ತಾಯದಿಂದ ತಮ್ಮ ನಲವತ್ತು ವರ್ಷದ ರಾಜಕೀಯ ಜೀವನದಲ್ಲಿ ಗಳಿಸಿದ ಸಾವಿರಾರು ಜನ ಬೆಂಬಲಿಗರನ್ನು ಬಿಟ್ಟು ಸಕ್ರಿಯ ರಾಜ್ಯ ರಾಜಕಾರಣಕ್ಕೆ ವಿದಾಯ ಹೇಳಿದರು. ಇದರಿಂದಾಗಿ ಕರ್ನಾಟಕದಿಂದ ಒಬ್ಬ ದಲಿತ ಸಮುದಾಯದ ವ್ಯಕ್ತಿ ಪ್ರಪ್ರಥಮ ಬಾರಿಗೆ ರಾಜ್ಯಪಾಲರ ಹುದ್ದೆಯನ್ನು ಅಲಂಕರಿಸುವಂತಾಯಿತು. ರಾಚಯ್ಯನವರು ರಾಜ್ಯಪಾಲರಾಗಿ ನೇಮಕ ಗೊಂಡದ್ದು ರಾಜ್ಯದ ಇಡೀ ದುರ್ಬಲ ಸಮುದಾಯಕ್ಕೆ ಹೆಗ್ಗಳಿಕೆಯ ವಿಷಯವಾಯಿತು. ಆದರೆ ಹಿರಿಯ ರಾಜಕೀಯ ಮುತ್ಸದ್ದಿನೊಂದವರ ಧ್ವನಿ, ರಾಜಕೀಯ ಚೇತನವೊಂದು ಸಕ್ರಿಯ ರಾಜಕಾರಣದಿಂದ ದೂರವಾಯಿತೆಂಬ ಕೊರಗು ಎದ್ದು ಕಾಣುತ್ತಿತ್ತು.

ರಾಚಯ್ಯನವರು ಹಿಮಾಚಲ ಪ್ರದೇಶದ ರಾಜ್ಯಪಾಲರಾಗಿ ಸುಮಾರು ಹನ್ನೊಂದು ತಿಂಗಳ ಕಾಲ ಅಧಿಕಾರದಲ್ಲಿದ್ದರು. ಆ ಸಮಯಕ್ಕೆ ಉತ್ತರದ ಅತಿಯಾದ ಶೀತಾಂಶ ರಾಚಯ್ಯನವರ ಆರೋಗ್ಯ ಸ್ಥಿತಿಯನ್ನು ಗಂಭೀರಗೊಳಿಸಿತು. ಇದನ್ನು ಹತ್ತಿರದಿಂದ ಗಮನಿಸಿದ ಅಂದಿನ ರಾಷ್ಟ್ರಪತಿಗಳಾದ ಆರ್. ವೆಂಕಟರಾಮನ್‌ರವರು, ರಾಚಯ್ಯನವರನ್ನು ಕೇರಳ ರಾಜ್ಯಕ್ಕೆ ರಾಜ್ಯಪಾಲರಾಗಿ ವರ್ಗ ಮಾಡಿದರು.

ಕೇರಳ ಚಿಕ್ಕರಾಜ್ಯವಾದರೂ ದೇಶದ ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರತಿಭೆ ಮತ್ತು ಪಾಂಡಿತ್ಯಗಳನ್ನು ಮೆರೆದ ನಾಡು. ಇಂಥ ರಾಜ್ಯಕ್ಕೆ ರಾಜ್ಯಪಾಲರಾಗಿ ಬರುವುದಕ್ಕೆ ರಾಚಯ್ಯನವರಿಗೆ ತುಂಬಾ ಸಂತೋಷವಾಯಿತು. ಹಾಗಾಗಿ ಅವರು ನಾಲ್ಕು ವರ್ಷ ಹನ್ನೊಂದು ತಿಂಗಳ ಕಾಲ ಕೇರಳ ರಾಜ್ಯಪಾಲರಾಗಿ ನಿಷ್ಠೆಯಿಂದ ಆಡಳಿತ ನಡೆಸಿದರು. ಈ ಅವಧಿಯಲ್ಲಿ ಇ.ಕೆ. ನಾಯನಾರ್, ಕೆ. ಕರುಣಾಕರನ್ ಮತ್ತು ಎ.ಕೆ. ಆಂಟೋನಿ ಎಂಬ ಮೂರು ಜನ ಪ್ರಬಲ ಮುಖ್ಯಮಂತ್ರಿಗಳ ಆಡಳಿತ ಕ್ರಮವನ್ನು ಸಮರ್ಥವಾಗಿ ನಿಭಾಯಿಸಿದರು. ಕೇರಳ ರಾಜ್ಯಪಾಲರಾಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿಯೇ ನಾಲ್ಕು ತಿಂಗಳ ಕಾಲ ಗೋವಾಕ್ಕೆ ಹೆಚ್ಚುವರಿ ರಾಜ್ಯಪಾಲರಾಗಿ ನೇಮಕವಾಗಿದ್ದರು.

ರಾಚಯ್ಯನವರಿಗೆ ಎಷ್ಟೇ ಕಷ್ಟ ಕಾರ್ಪಣ್ಯಗಳು ಎದುರಾದರು ಅವಕ್ಕೆ ಅಂಜದೆ, ಅಳುಕದೆ, ಅವನ್ನು ಪಕ್ಕಕ್ಕೆ ಸರಿಸಿ, ಎದೆಗಟ್ಟಿಮಾಡಿಕೊಂಡು ತಮ್ಮ ಹೊಣೆಗಾರಿಕೆಯನ್ನು ತುಂಬು ಹೊಳೆಯಲ್ಲಿ ಸುರಕ್ಷಿತವಾಗಿ ದಡ ಸೇರಿದ ದೋಣಿಯ ಹಾಗೆ ನಡೆಸಿಕೊಂಡು ಬಂದರು. ಇವರ ಈ ನಿರಂತರ ಬದುಕಿನ ಸಾಧನೆಗಳು ಎಂಥವರನ್ನು ಬೆರಗು ಗೊಳಿಸುತ್ತದೆ. ಯಾವುದೋ ನಿರ್ಜನ ಪ್ರದೇಶದಲ್ಲಿ ಯಾರ ಆಶ್ರಯಶವಿಲ್ಲದೆಯೂ ಸ್ವಂತಿಕೆಯಿಂದ ಮೇಲಿಂದ ಮೇಲೆ ಪುಟಿದೆದ್ದ ಗಿಡವೊಂದು ತನ್ನ ಸುತ್ತಮುತ್ತಲ ಪ್ರದೇಶಕ್ಕೆ ಕಂಪು ಸೂಸಿ ಮುಗಿಲೆತ್ತರಕ್ಕೆ ಬೆಳೆಯುತ್ತದೆ ಎಂದು ನಿರೀಕ್ಷಿಸಿರಲಿಲ್ಲ. ಇಂತಹ ಜನಪರಚಿಂತನೆಯ ನೆಲೆಯಲ್ಲಿ ರಾಷ್ಟ್ರಮಟ್ಟದ ರಾಜಕಾರಣವನ್ನು ಮಾಡಿದ ವ್ಯಕ್ತಿಗಳು ನಿಮ್ಮ ವರ್ಗದವರಲ್ಲಿ ಸಿಕ್ಕುವುದು ಬಹಳ ಅಪರೂಪ. ಈಗಿನ ರಾಜ್ಯಪಾಲರುಗಳಂತೆ ರಾಜ್ಯ ಸರ್ಕಾರಗಳ ಆಡಳಿತಗಲ್ಲಿ ಹಸ್ತಕ್ಷೇಪ ಮಾಡದೆ, ಕೇಂದ್ರದ ಏಜೆಂಟ್‌ರಾಗದೇ ಸ್ವತಂತ್ರವಾಗಿ ಕಾರ್ಯ ನಿರ್ವಹಿಸಿದ ಹೆಗ್ಗಳಿಕೆ ರಾಚಯ್ಯನವರಿಗೆ ಸಲುತ್ತದೆ. ಇವರ ಈ ಸ್ವಚ್ಛ ಆಡಳಿತದ ಕ್ರಮವನ್ನು ಮೆಚ್ಚಿಯೇ ವಿ.ಪಿ. ಸಿಂಗ್, ಚಂದ್ರಶೇಖರ್, ರಾಜೀವ್ ಗಾಂಧಿ ಮತ್ತು ಪಿ.ವಿ. ನರಸಿಂಹರಾವ್ ರವರು ಇವರಿಗೆ ಪೂರ್ಣಾವಧಿ ಕಾರ್ಯ ನಿರ್ವಹಿಸುವ ಅವಕಾಶ ಮಾಡಿಕೊಟ್ಟಿದ್ದರು. ಅಂದು ಕೇಂದ್ರದಲ್ಲಿ ಅಸ್ತಿತ್ವದಲ್ಲಿದ್ದ ಪಿ.ವಿ. ನರಸಿಂಹರಾವ್ ಸರ್ಕಾರ ಇವರ ಚತುರ ರಾಜಕೀಯ ಕೌಶಲ್ಯವನ್ನು ಮೆಚ್ಚಿಕೊಂಡು, ಇನ್ನೊಂದು ಅವಧಿಗೆ ಮುಂದುವರೆಸುವ ಆಲೋಚನೆಯಲ್ಲಿತ್ತು. ಆದ್ದರಿಂದಲೇ ಅಂದಿನ ಕೇಂದ್ರದ ಗೃಹ ಸಚಿವರಾಗಿದ್ದ ಎಸ್.ಬಿ. ಚವ್ಹಾನ್ ರವರು ವೈಯುಕ್ತಿಯುವಾಗಿ ರಾಚಯ್ಯನವರನ್ನು ತಮಿಳುನಾಡಿನ ರಾಜ್ಯಪಾಲರಾಗಿ ಮುಂದುವರೆಯುವಂತೆ ಕೋರಿದರು. ಆದರೆ ಅನಾರೋಗ್ಯದ ಕಾರಣ ಅದನ್ನು ನಿರಾಕರಿಸಿದರು.

1992ರಲ್ಲಿ ಡಾ. ಶಂಕರ್ ದಯಾಳ್ ಶರ್ಮ ಅವರಿಂದ ತೆರವಾದ ಉಪ ರಾಷ್ಟ್ರಪತಿಯ ಸ್ಥಾನಕ್ಕೆ ದಲಿತ ವರ್ಗದ ಒಬ್ಬ ಶ್ರೇಷ್ಠ ಹಿರಿಯ ಅನುಭವಿ ರಾಜಕೀಯ ಮೇಧಾವಿಯನ್ನು ಆಯ್ಕೆ ಮಾಡಬೇಕೆಂಬುದು ಎಲ್ಲ ರಾಜಕೀಯ ಪಕ್ಷದವರ ತೀರ್ಮಾನವಾಗಿತ್ತು. ಅದಕ್ಕಾಗಿ ನಿಷ್ಠಾವಂತ ಕ್ರಿಯಾಶೀಲ ನಾಯಕನನ್ನು ದೇಶಾದ್ಯಂತ ಹುಡುಕಿ ನಾಲ್ಕುಮಂದಿ ಹೆಸರನ್ನು ಪಟ್ಟಿ ಮಾಡಿದರು. ಅದರಲ್ಲಿ ದಕ್ಷಿಣ ಭಾರತದಿಂದ ಬಿ. ರಾಚಯ್ಯ ಮತ್ತು ಕೆ.ಆರ್. ನಾರಾಯಣನ್ ರವರ ಹೆಸರು ಪ್ರಮುಖವಾಗಿತ್ತು. ಆಗ ಕೆಲವು ರಾಷ್ಟ್ರಮಟ್ಟದ ರಾಜಕೀಯ ಧುರೀಣರು ಇವರನ್ನು ಉಪ ರಾಷ್ಟ್ರಪತಿಯಾಗುವಂತೆ ಒತ್ತಾಯಿಸಿದರು. ಆದರೆ ದೇಹಾರೋಗ್ಯದ ಸ್ಥಿತಿ ಉತ್ತಮವಾಗಿಲ್ಲದಿದ್ದರಿಂದ ಸ್ವತಃ ರಾಚಯ್ಯನವರೇ ಕೆ.ಆರ್. ನಾರಾಯಣನ್ ರವರ ಹೆಸರನ್ನು ಉಪ ರಾಷ್ಟ್ರಪತಿ ಸ್ಥಾನಕ್ಕೆ ಸೂಚಿಸಿದರು. ಒಂದು ವೇಳೆ ಅವರ ಆರೋಗ್ಯದ ಸ್ಥಿತಿ ಸರಿಯಾಗಿದ್ದರೆ. ಇಂದು ಕೆ.ಆರ್. ನಾರಾಯಣನ್ ರವರ ಸ್ಥಾನ ಲಭಿಸುತ್ತಿತ್ತು ಎಂಬುದರಲ್ಲಿ ಪ್ರಾಯಶಃ ಎರಡು ಮಾತಿರಲಾರದು. ದೆಹಲಿಯ ಹವೆ ಒಗ್ಗದ ಕಾರಣ ರಾಷ್ಟ್ರದ ಅತ್ಯುನ್ನತ ಸ್ಥಾನವನ್ನು ಅಲಂಕರಿಸುವ ಅವಕಾಶ ತಾನಾಗಿಯೇ ಒದಗಿ ಬಂದಿದ್ದರೂ ಅವರ ಆರೋಗ್ಯ ಅವರಿಗೆ ಅವಕಾಶ ನೀಡಲಿಲ್ಲ. ಕೊನೆಗೆ 1995ರ ನವೆಂಬರ್ 9ರಲ್ಲಿ ಕೇರಳ ರಾಜ್ಯಪಾಲ ಹುದ್ದೆಯಿಂದ ನಿವೃತ್ತಿಯಾದರು.

ಭಾರತದ ಹಣೆ ಬರಹವನ್ನೇ ಬದಲಾಯಿಸಿದಂತಹ ಸಾಮಾಜಿಕ ಕ್ರಾಂತಿಯ ಹರಿಕಾರರೂ, ಮಹಾನ್ ಮಾನವತಾವಾದಿಗಳೂ, ಹಾಗೂ ಪ್ರಗತಿಪರ ಚಿಂತಕರು ಆದ ಡಾ. ಬಿ.ಆರ್. ಅಂಬೇಡ್ಕರರ ಶಿಷ್ಯತ್ವವನ್ನು ಪಡೆದುಕೊಳ್ಳುವುದು ನಮ್ಮೆಲ್ಲರ ಪೂರ್ವಜನ್ಮದ ಪುಣ್ಯಫಲ. ಯಾರು ಅಂಬೇಡ್ಕರರ ಜೀವನ ಮೌಲ್ಯಗಳನ್ನು, ಹೋರಾಟದ ಹಾದಿಯನ್ನು ಅರ್ಥ ಮಾಡಿಕೊಂಡು, ಶೋಷಿತರ ಏಳಿಗೆಗಾಗಿ ಸದಾದುಡಿಯುತ್ತಾರೋ ಅವರೇ ನಿಜವಾದ ಅಂಬೇಡ್ಕರ್ ಅನುಯಾಯಿಗಳು ಎಂಬುದು ರಾಚಯ್ಯನವರ ವಾದ. ಆದ್ದರಿಂದಲೇ ಇವರು ಕೇಂದ್ರ ಮತ್ತು ರಾಜ್ಯ ಶಾಸನ ಸಭೆಗಳಲ್ಲಿ ಕೂತು ಆಡಳಿತ ಮಾಡುವಾಗ, ಅಂಬೇಡ್ಕರರು ತಮ್ಮ ಜೀವಿತ ಅವಧಿಯಲ್ಲಿ ಹೋರಾಡಿ ದೊರಕಿಸಿ ಕೊಟ್ಟಂತಹ ಹಕ್ಕುಗಳನ್ನು ಕಾಪಾಡಿಕೊಳ್ಳುವಲ್ಲಿ ಸರ್ವಪ್ರಯತ್ನ ಮಾಡಿದ್ದಾರೆ.

ಕರ್ನಾಟಕ ರಾಜ್ಯದ ಚದುರಂಗದಾಟದಲ್ಲಿ ಅಪಾರವಾದ ಪ್ರತಿಭೆ ಪಾಂಡಿತ್ಯಗಳ, ಸದುವಿನಯದ ಮೃದು ನಡೆ-ನುಡಿಗಳ ಸರ್ವಧರ್ಮ ಸಮಭಾವಗಳ ಪರಿಪಕ್ವ ನಿರ್ಲಿಪ್ತ ನಿರಂಜನ ಜೀವನ ನಡೆಸಿದ ರಾಚಯ್ಯ ಅವರದು ಅಪರೂಪದ ವ್ಯಕ್ತಿತ್ವ, ಹಾಗೂ ಈ ಶತಮಾನ ಕಂಡ ಶ್ರೇಷ್ಠ ರಾಜಕಾರಣಿಗಳು. ಅವರು ಎಂದೂ ಅಧಿಕಾರಕ್ಕಾಗಿ ಆಸೆಪಟ್ಟವರಲ್ಲ, ಅಧಿಕಾರ ಇವರನ್ನೆ ಹುಡುಕಿಕೊಂಡು ಬಂದಿತು. "When power comes, power knock door (by ಲೋಹಿಯಾ) ಈ ಸಿದ್ಧಾಂತವನ್ನು ನಿಜಮಾಡಿದವರು. ಸಹನೆ, ವಿನಯ, ತಾಳ್ಮೆ ಮತ್ತು ಛಲದಿಂದ ರಾಜಕೀಯವಾಗಿ ತಮ್ಮನ್ನು ಬೆಳೆಸಿಕೊಳ್ಳುವುದಲ್ಲದೆ ತಮ್ಮ ಅಧಿಕಾರ ಅವಧಿಯಲ್ಲಿ ಕೆಳತುಳಿತ ವರ್ಗಗಳ ಬದುಕಿನ ಉದ್ಧಾರಕ್ಕೂ ಶ್ರಮಿಸಿದ ಮುಗ್ಧ, ದಕ್ಷ ಹಾಗೂ ಪ್ರಾಮಾಣಿಕ ಬುದ್ಧಿಜೀವಿ ಎನಿಸಿಕೊಂಡರು. ಆಡು ಮುಟ್ಟದ ಸೊಪ್ಪಿಲ್ಲ, ಎಂದ ಹಾಗೆ ಇವರು ಸೇರದ ಪಕ್ಷಗಳಿಲ್ಲ ನಿರ್ವಹಿಸದೆ

ಇರದ ಖಾತೆಗಳಿಲ್ಲ. ರಾಜಕೀಯದಲ್ಲಿ ಗಾಡ್‌ಫಾದರ್‌ಗಳಿಲ್ಲದೆ ಸ್ವಸಾಮಾರ್ಥ್ಯದಿಂದ ಅಧಿಕಾರದ ಗದ್ದುಗೆ ಏರಿದ ಧೀಮಂತ ನಾಯಕ. ಕಿಸಾನ್, ಮಜ್ದೂರ್ ಪಕ್ಷ, ಪ್ರಜಾ ಸೋಷಿಯಲಿಸ್ಟ್ ಕಾಂಗೈ, ಕ್ರಾಂತಿ ರಂಗ, ಜನತಾ ಪಕ್ಷ ಮತ್ತು ಜನತಾ ದಳ ಹೀಗೆ ದೇಶದಲ್ಲಿ ಹುಟ್ಟಿದ ಎಲ್ಲಾ ರಾಜಕೀಯ ಪಕ್ಷಗಳಲ್ಲಿಯೂ, ಎಲ್ಲ ನಾಯಕರ ಹೃದಯಗೆದ್ದು ಎಲ್ಲರಿಗೂ ಬೇಕಾದ 'ದಲಿತ ನಾಯಕ' ಎಂಬ ಖ್ಯಾತಿಯನ್ನು ಪಡೆದಿದ್ದರು.

ಹಿರಿಯ ತಲೆಮಾರಿನ ನಾಯಕ ರಾಚಯ್ಯನವರು ಉತ್ತಮ ಸಂಸಾರಿ ಎಂಬುದು ಜನಜನೀತವಾದ ವಿಷಯ. ಇವರ ಮಡದಿ ಮಕ್ಕಳು, ಮೊಮ್ಮಕ್ಕಳು ಮತ್ತು ಸಂಬಂಧಿಕರ ಪರಿವಾರ ರಾಚಯ್ಯನವರ ವ್ಯಕ್ತಿತ್ವಕ್ಕೆ ಹೇಳಿ ಮಾಡಿಸಿದಂತಿದೆ. ಹಾಗಾಗಿಯೇ ದೇಶವೇ ಮೆಚ್ಚುವಂಥ ಸಾಂಸಾರಿಕ ಜೀವನ ರಾಚಯ್ಯನವರದು. ಇಂಥವರಿಗೆ ಐದು ಹೆಣ್ಣು; ಎರಡು ಮಕ್ಕಳಿದ್ದಾರೆ. ಗಂಡು ಮಕ್ಕಳಲ್ಲಿ ಹಿರಿಯರಾದ ಎ.ಆರ್. ಕೃಷ್ಣಮೂರ್ತಿಯವರು ತಂದೆಯವರ ಸ್ವಕ್ಷೇತ್ರವಾದ ಸಂತೇಮರಹಳ್ಳಿಯಿಂದ ಎರಡನೆಯ ಬಾರಿಗೆ ಕರ್ನಾಟಕ ವಿಧಾನ ಸಭೆಗೆ ಆಯ್ಕೆಯಾಗಿದ್ದಾರೆ. ಇವರು ಜನಪ್ರಿಯ ಪ್ರಾಮಾಣಿಕ ಶಾಸಕರಾಗಿದ್ದು, ರಾಚಯ್ಯನವರ ವ್ಯಕ್ತಿತ್ವವನ್ನು ಸದಾ ಉಳಿಸಿ ಬೆಳೆಸುವ ಅವರ ಉತ್ತರಾಧಿಕಾರಿಯಾದ್ದಾರೆ. ಹಾಗೂ ಪ್ರಸ್ತುತ ರಾಜ್ಯ ಪೊಲೀಸ್ ಇಲಾಖೆಯ ಆಡಳಿತ ವಿಭಾಗದ ಹೆಚ್ಚುವರಿ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ಆಗಿ ಸೇವೆ ಸಲ್ಲಿಸುತ್ತಿರುವ ಎಸ್. ಮರಿಸ್ವಾಮಿ ಮತ್ತು ಮಾಜಿ ಸಚಿವ ಬಿ.ಬಿ. ನಿಂಗಯ್ಯ ಅವರು ರಾಚಯ್ಯನವರ ಅಳಿಯಂದಿರು, ಒಟ್ಟಿನಲ್ಲಿ ರಾಚಯ್ಯನವರ ರಾಜಕಾರಣ ಹಾಗೂ ಅವರ ಕೌಟುಂಬಿಕ ಜೀವನ ಬೇರೆಯವರಿಗೆ ಮಾದರಿಯಾಗಿದೆ. ಇಂಥ ತತ್ವನಿಷ್ಠ ರಾಜಕಾರಣಿ ರಾಚಯ್ಯನವರು 2000 ಫೆಬ್ರವರಿ 14ರ ಸೋಮವಾರ ಬೆಳಗಿನ ಜಾವ ನಿಧನ ಹೊಂದಿದರು.

## ಕೆರೆಗಳ ಸಂರಕ್ಷಣೆ ಕುರಿತು - 1952

ಶ್ರೀ ಬಿ. ರಾಚಯ್ಯ (ಯಳಂದೂರು - ಅನುಸೂಚಿತ ಜಾತಿ) ಯಳಂದೂರು ಮತ್ತು ಚಾಮರಾಜನಗರ ತಾಲ್ಲೂಕಿನ ಕೆಲವು ಕಡೆ ಮಾತ್ರ ಈಗ ಮೂರು ವರ್ಷಗಳಿಂದ ಅಲ್ಪ ಸ್ವಲ್ಪ ಬೆಳೆಸಾಗಿದೆ. ಎಲ್ಲಿ ಹೊನ್ನ ಹೊಳೆ ಹರಿಯುತ್ತದೆಯೋ ಆ ಪ್ರದೇಶಗಳಲ್ಲಿ ಮಾತ್ರ ನೀರಿನ ವಸತಿ ಸ್ವಲ್ಪ ಮಟ್ಟಿಗಿದೆ. ಇದು ವಾಸ್ತವವಾದ ಅಂಶ. ಅದನ್ನು ಬಿಟ್ಟು ಬೇರೆಕಡೆಗಳಲ್ಲಿ ಖುಷ್ಕಿ ಬೆಳೆಯಿಲ್ಲದೆ ಈ ಕಳೆದ ಮೂರು ವರ್ಷಗಳಿಂದ ಮಳೆ ಹೋಗಿ ಅನೇಕ ಹೋಬಳಿಗಳಲ್ಲಿ ಜನರು ಪರಿತಪಿಸುತ್ತಿದ್ದಾರೆ. ಅನ್ನ ಆಹಾರಗಳಿಗಾಗಿ ಸಾಮಾನ್ಯ ಜನರು ಗೆಡ್ಡೆ ಗೆಣಸು ಮತ್ತು ಹುರಳಿ ತಿನ್ನುತ್ತಾ ಇದ್ದಾರೆ. ಇಂಥಾದ್ದರಲ್ಲಿ ಅಲ್ಲಿಗೆ ಯಾವ ರೇಷನ್ನನ್ನೂ ಕೊಟ್ಟಿಲ್ಲ. ಪರಿಹಾರ ಮೊದಲೇ ಇಲ್ಲ.

ಈಗ ಕೋಲಾರ ಡಿಸ್ಟ್ರಿಕ್ಟು ಮತ್ತು ಇತರ ಡಿಸ್ಟ್ರಿಕ್ಟುಗಳಲ್ಲಿ ಕ್ಷಾಮ ಪರಿಹಾರಕ್ಕಾಗಿ ಅನೇಕ ಕಾಮಗಾರಿಗಳನ್ನು ಕೈಗೊಂಡಿದ್ದೇವೆಂದು ಮಾನ್ಯ ರೆವಿನ್ಯೂ ಮಂತ್ರಿಗಳು ಪ್ರಶ್ನೋತ್ತರಗಳ ಕಾಲದಲ್ಲಿ ತಿಳಿಸಿದರು. ಇದೇ ರೀತಿ ಪ್ರತಿಯೊಂದು ತಾಲ್ಲೂಕಿನಲ್ಲೂ ಕ್ಷಾಮ ಪರಿಹಾರವನ್ನು ಹಣದ ರೂಪದಲ್ಲಾಗಲಿ, ದವಸದ ರೂಪದಲ್ಲಾಗಲಿ, ಹುಲ್ಲನ್ನು ಒದಗಿಸುವ ರೂಪದಲ್ಲಾಗಲಿ ಕೊಡುವುದು ಬಹಳ ಕಷ್ಟ ಸಾಧ್ಯ. ಅದಕ್ಕೆ ನಾನು ಹೇಳುವುದೇನೆಂದರೆ, ಕಾಮಗಾರಿಗಳು ಎಲ್ಲೆಲ್ಲಿ ನಡೆಯಬೇಕಾಗಿರುವುವೋ, ಎಲ್ಲಿ ಆಗುತ್ತಿವೆಯೋ ಅಂಥ ಪ್ರದೇಶಗಳಲ್ಲಿ ಅವುಗಳನ್ನು ಜರೂರಾಗಿ ಕೈಗೊಳ್ಳುವುದರ ಕಡೆಗೆ ಹೆಚ್ಚಿನ ಗಮನಕೊಟ್ಟರೆ, ಈ ಪ್ರದೇಶಗಳಲ್ಲಿ ಕೆಲಸವಿಲ್ಲದಿರುವವರಿಗೆ ಕೆಲಸವನ್ನೂ ಒದಗಿಸಿದ ಹಾಗೆ ಹಾಗುತ್ತದೆ. ನಿಮ್ಮ ಕಾಮಗಾರಿಗಳು ಚೆನ್ನಾಗಿ ನಡೆದು ಮುಂದಿನ ಸಾಲಿನಲ್ಲಿ ಸರಿಯಾಗಿ ಫಸಲಾಗುವುದಕ್ಕೆ ಸಹಾಯ ಮಾಡಿದಂತೆಯೂ ಆಗುತ್ತದೆ. ಈಗ ನಮ್ಮ ಕಡೆ ಯಳಂದೂರು, ಯರಿಯೂರು, ಕೆಸ್ತೂರುಗಳ ಜನರು ಸುವರ್ಣಾವತಿ ನದಿಗೆ, ಹೊಮ್ಮದ ಊರಿನ ಹತ್ತಿರ ಯಳಂದೂರು ಫೀಡರ್ ಚಾನಲ್‌ನಲ್ಲಿ ನೀರನ್ನೊದಗಿಸಲು ಒಂದು ಅಣೆಕಟ್ಟನ್ನು ಮಾಡಿಸಬೇಕೆಂದು ಪದೇಪದೇ ಮನವಿ ಮಾಡಿಕೊಂಡಿದ್ದಾರೆ. ಇಷ್ಟು ದಿವಸಗಳಾದರೂ ಅದನ್ನು ಮಂಜೂರು ಮಾಡಿಲ್ಲ. ಈ ಸಾರಿಯಾದರೂ ದಯವಿಟ್ಟು ಕೈಗೊಳ್ಳಬೇಕೆಂದು ಒತ್ತಾಯ ಪೂರ್ವಕವಾಗಿ ನಾನು ಕೇಳಿಕೊಳ್ಳುತ್ತೇನೆ. ಹಾಗೆಯೇ ದೊಡ್ಡರಾಯಪೇಟೆ ಕೆರೆ, ಕೋಡಿಮೋಳೆಕೆರೆ, ಹೊಮ್ಮದ ಕೆರೆ, ಕನ್ನೇಗಾಲದ ಕೆರೆಗಳಲ್ಲಿ ಹೂಳು ತುಂಬಿಕೊಂಡು ಭೂಮಿ ಮಟ್ಟಕ್ಕೆ ಹೂಳು ಬಂದು ಬಿಟ್ಟಿದೆ. ಇದನ್ನು ಮಾಡಿಸಿಕೊಡಬೇಕು. ಜನರಿಗೂ ಪರಿಹಾರ ಒದಗಿಸಿದ ಹಾಗಾಗುತ್ತದೆ; ಜಮೀನಸ್ತರಿಗೂ ಕೂಲಿಸಿಕ್ಕಿ ಈ ಕಷ್ಟಕಾಲದಲ್ಲಿ ಹೊಟ್ಟೆಹೊರೆದುಕೊಳ್ಳಲು ಅನುಕೂಲವಾಗುತ್ತದೆ ಆದ್ದರಿಂದ ಆದಷ್ಟು ಇದಕ್ಕೆ ಹೆಚ್ಚಿಗೆ ಗಮನ ಕೊಡಬೇಕೆಂದು ಕೇಳಿಕೊಳ್ಳುತ್ತಾ ನನ್ನ ಪುಟ್ಟ ಭಾಷಣವನ್ನು ಮುಗಿಸುತ್ತೇನೆ.

## ರೈತರ ಜೀವನಕ್ಕೆ ಒತ್ತು - 1952 *

ಶ್ರೀ ಬಿ. ರಾಚಯ್ಯ - ಈಗ ಎರಡು, ಮೂರು ದಿವಸಗಳ ಹಿಂದೆ ಕೆಲವು ಪ್ರಶ್ನೆಗಳಿಗೆ ಸರ್ಕಾರದವರು ಒದಗಿಸಿರುವ ಉತ್ತರವನ್ನು ನೋಡಿದರೆ, ಗ್ರೋಮೋರ್‌ಫುಡ್ ಬಾಬಿಗೆ ನಾವು ಎಷ್ಟು ದುಡ್ಡನ್ನು ಖರ್ಚು ಮಾಡಿದ್ದೆವೋ ಮತ್ತು ಹಾಗೆ ಮಾಡಿರುವ ಖರ್ಚಿಗೆ ನಾವು ಎಷ್ಟು ಪ್ರತಿಫಲವನ್ನು ನಿರೀಕ್ಷಿಸಿದ್ದೆವೋ ಅಷ್ಟು ಪ್ರತಿಫಲ ದೇಶಕ್ಕೆ ಒದಗಲಿಲ್ಲ ಎಂಬ ಅಂಶವನ್ನು ನಾನೀಗ ತಮ್ಮ ಗಮನಕ್ಕೆ ತರಲು ಈ ವಿಚಾರಗಳನ್ನೆಲ್ಲಾ ಹೇಳಿದೇನೆ ವಿನಾ ಮತ್ತೇನೂ ಇಲ್ಲ. ತಾವೇನೋ ಈ ಜಿ.ಎಂ.ಎಫ್ ಯೋಜನೆಗೆ ವಿಶೇಷವಾಗಿ ಹಣವನ್ನು ಹಾಕಿದ್ದೀರಿ. ಇದರಿಂದ ರೈತರಿಗೆ ಗೊಬ್ಬರ, ಬೀಜದಕಾಳು ಇತ್ಯಾದಿ ಸಹಾಯ ದೊರೆತು ಜನರಿಗೆ ಅನುಕೂಲವಾಗಿ ತನ್ಮೂಲಕ ದೇಶಕ್ಕೆ ಒಳ್ಳೆಯದಾಗಲಿ ಎಂಬ ಘನೋದ್ದೇಶದಿಂದಲೇ ತಾವು ಇದನ್ನು ಮಾಡಿದ್ದೀರಿ. ಆದರೆ ಈ ನಿಧಿಯ ಸಹಾಯ ನೇರವಾಗಿ ಯಾವ ವರ್ಗಕ್ಕೆ ಯಾರು ನಿಜವಾಗಿ ರೈತಾಪಿ ಕಸುಬಿನಲ್ಲಿ ತೊಡಗಿದ್ದಾರೋ ಅಂಥವರಿಗೆ, ಅರ್ಹರಾದವರಿಗೆ ಸಲ್ಲಬೇಕಾಗಿತ್ತೋ ಅಂಥವರಿಗೆ ಸಲ್ಲಲಿಲ್ಲ ನಿಜ. ತಾವೇನೋ ಔಷಧಿ ಕೊಟ್ಟಿರಿ. ಆದರೆ ಖಾಯಿಲೆ ಮಾತ್ರ ಗುಣವಾಗಲಿಲ್ಲ. ಈ ರೀತಿಯಾಗಿ ತಾವು ಇರಿಗೇಷನ್ ಬಾಬಿಗೆ ಒದಗಿಸಲಾಗಿದ್ದ ಮೊಬಲಗಿನಿಂದ ನಾಲೆ ಇತ್ಯಾದಿಗಳನ್ನು ರಿಪೇರಿ ಮಾಡುವ ಬದಲು ನಾಲಾ ಪಕ್ಕದಲ್ಲಿ ರಸ್ತೆ ಮಾಡಿಸುವುದಕ್ಕೊ ಮತ್ತು ನಾಲಾ ಪಕ್ಕದಲ್ಲಿರತಕ್ಕ ಗಿಡಗಳನ್ನು ಕಡಿಯಲಿಕ್ಕೊ ಈ ಮೊಬಲಗನ್ನು ಉಪಯೋಗಿಸಿದ್ದಾರೆ. ಹೀಗಾಗಿ ನಮ್ಮ ಕಡೆ ಅನೇಕ ಕೆರೆಗಳ ರಿಪೇರಿ ಕೆಲಸ. ಉದಾಹರಣೆಗೆ ಯಾಳಂದೂರು ಕೆರೆ, ದೊಡ್ಡರಾಯಪೇಟೆ ಕೆರೆ, ಕನ್ನೇಗಾಲದ ಕೆರೆ, ಕೆಸ್ತೂರು ಕೆರೆ, ಇತ್ಯಾದಿ ಅನೇಕ ಕೆರೆಗಳ ಕೆಲಸ ನಿಂತುಹೋಗಿದೆ. ಆದರೆ ನಿಜವಾಗಿ ಈ ವೃತ್ತಿಯಲ್ಲಿ ಶ್ರಮ ವಹಿಸಿ ದುಡಿಯುತ್ತಾ ದೇಶಕ್ಕೆ ಹೆಚ್ಚು ಆಹಾರ ಬೆಳೆದು ಒದಗಿಸುತ್ತಿದ್ದಾರೋ ಅಂಥವರಿಗೆ ಅನಕೂಲವಾಗಲಿ ಎಂಬ ದೃಷ್ಟಿಯಿಂದ ತಾನು ತಮ್ಮಲ್ಲಿ ಈ ವಿಷಯಗಳನ್ನೆಲ್ಲಾ ಮನವಿ ಮಾಡಿಕೊಳ್ಳಬೇಕಾಯಿತು. ಆದರೆ ಹಾಲಿ ಈಗ ನೆಡಯುತ್ತಿರುವ ರೀತಿಯಲ್ಲಿ ಕಲ್ಪಿಸಿರುವುದಿಲ್ಲ ಆದರೆ ಏನೋ ಅಲ್ಪಸ್ವಲ್ಪ ಇತ್ತೀಚಿಗೆ ರೈತನು ಬೆಳೆದವರ ಧಾನ್ಯಗಳಿಗೆ ಧಾರಣೆ ಹೆಚ್ಚಿದ್ದರೆ. ಅದಕ್ಕಾಗಲೆ ಮುನ್ನುಗಿ ಅವುಗಳನ್ನು ತಗ್ಗಿಸಬೇಕೆಂದು ಹಲವರು ಒತ್ತಾಯಪಡಿಸಿದ್ದಾರೆ. ಆದರೆ ಸರ್ಕಾರದವರು ಹಿಂದೆಲ್ಲಾ ರೈತನು ಬೆಳೆದ ಧಾನ್ಯಗಳ ಬೆಳೆ ಬಿದ್ದು ಹೋಗಿದ್ದಾಗ್ಗೆ ಆ ರೈತನನ್ನು ಸಂರಕ್ಷಣೆ ಮಾಡುವಂಥ ಯೋಜನೆಗಳನ್ನೇನೂ ಮಾಡಿರಲಿಲ್ಲ. ಆದರೆ ಈಗ ಅದನ್ನು ಮಾಡಬೇಕಾದ ಕಾಲ ಬಂದಿದೆ. ಅಂದ ಮೇಲೆ ರೈತನಿಗೆ ಇನ್ನೆಲ್ಲಿದೆ ಉತ್ತೇಜನ ? ಇನ್ನು ಕೊನೆಯದಾಗಿ ನಿಮ್ಮ ವರ್ಗದವರ ವಿಚಾರವಾಗಿ ಒಂದು ಮಾತನ್ನು ಹೇಳಲಿಚ್ಛಿಪಡುತ್ತೇನೆ. ಈಗ ನಿಮ್ಮ ವರ್ಗದ ಕ್ಷೇಮಾಬಿವೃದ್ಧಿ ವಿಚಾರಗಳ ಆಡಳಿತವನ್ನೆಲ್ಲಾ ಮಾನ್ಯ ಮುಖ್ಯಮಂತ್ರಿಗಳೇ ವಹಿಸಿಕೊಂಡಿದ್ದಾರೆ. ಇದು ಬಹಳ ಸಂತೋಷದ ವಿಚಾರ. ಸಂಸ್ಥಾನದಲ್ಲಿ ನಮ್ಮ ಜನಸಂಖ್ಯೆ 17 ಲಕ್ಷಕ್ಕೆ ಮೇಲ್ಪಟ್ಟಿದ್ದರೂ ಪಬ್ಲಿಕ್ ಸರ್ವಿಸ್ ಕಮೀಷನ್ನಿನಲ್ಲಿ ನಮಗೊಂದು ಪ್ರಾತಿನಿಧ್ಯ ದೊರೆತಿಲ್ಲ. ಪಬ್ಲಿಕ್ ಸರ್ವಿಸ್ ಕಮೀಷನ್ನಿನ ಕಾರ್ಯದರ್ಶಿಗಳೂ ಸಹ ಒಬ್ಬ ಖಾಸಗೀ

* ವಿಧಾನ ಸಭಾ ನಡವಳಿಕೆ ದಿನಾಂಕ 30ನೇ ಜೂನ್, 1952 ಪುಟ 482-83

ಮನುಷ್ಯರೇ ಇರಬೇಕೆಂದಿದೆ. ಆದರೆ ಅದನ್ನಿನ್ನೂ ತಾವು ಆಚರಣೆಗೆ ತಂದಿಲ್ಲ. ಪಬ್ಲಿಕ್ ಸರ್ವಿಸ್ ಕಮಿಷನ್ನಿಗೆ ಹಾಲಿ ತಾವು ನೇಮಕ ಮಾಡಿರತಕ್ಕ ಮೂರು ಜನಗಳ ಪೈಕಿ. ಒಬ್ಬರು ನಿಮ್ಮ ವರ್ಗದವರಿಗೆ ಪ್ರಾತಿನಿಧ್ಯ ಕೊಡಬೇಕು ನಿಮ್ಮ ಪಂಗಡದವರಿಗೆ ತಾವು ಅನುಕೂಲ ಮಾಡಿಕೊಟ್ಟಿಲ್ಲ. ಆದುದರಿಂದ ತಾವು ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಪಟ್ಟಿ ಮಾಡುವ ಕಾಲಕ್ಕಾದರೂ ತಪ್ಪದೆ ನಿಮ್ಮ ವರ್ಗದವರಿಗೂ ಉತ್ತಮ ಕ್ಯಾಂಪಿನಲ್ಲಿ ಸೇರಿಸುವಂತೆ ಮಾಡಬೇಕೆಂದು ಅರಿಕೆ ಮಾಡಿಕೊಳ್ಳುತ್ತೇನೆ.

ನಿಮ್ಮ ವರ್ಗದ ಹಾಸ್ಟಲುಗಳ ವಿಚಾರವಾಗಿ ಅನೇಕ ಮಾನ್ಯ ಸದಸ್ಯರುಗಳು ಆ ವಿಧವಾದ ವ್ಯತ್ಯಾಸ ಅಥವಾ ತಾರತಮ್ಯವಾದ ಯಾವ ವಿಚಾರಕ್ಕೂ ಉತ್ತೇಜನ ಕೊಡಬಾರದೆಂದು ವಾದ ಮಾಡಿದ್ದಾರೆ. ನಿಜ ನಾನು ಸಹ ಅಂಥ ವ್ಯತ್ಯಾಸಗಳು ಹೋಗಬೇಕೆಂದು ಹೇಳುವವರ ಪೈಕಿ ಒಬ್ಬ. ಆದರೆ ಅದಕ್ಕೂ ಕಾಲ ಬರಬೇಕು. ಒಬ್ಬ ವಿಮಾನದಲ್ಲಿ ಹೋಗುತ್ತಿದ್ದಾನೆ, ಒಬ್ಬ ಮೋಟಾರ್ ಕಾರಿನಲ್ಲಿ ಹೋಗುತ್ತಿದ್ದಾನೆ, ಮತ್ತೊಬ್ಬ ಎತ್ತಿನಗಾಡಿಯಲ್ಲಿ ಹೋಗುತ್ತಿದ್ದಾನೆ. ಇವರೆಲ್ಲರೂ ಒಂದೇ ಸಮನಾಗಿ ಮುಂದುವರಿಯಬೇಕೆಂದರೆ ಅಥವಾ ಒಂದೇ ವೇಗದಲ್ಲಿ ಪ್ರಯಾಣ ಮಾಡಬೇಕೆಂದು ಹೇಳಿದರೆ ಅದು ಹೇಗೆ ಸಾಧ್ಯ ? ಹೇಗೆ ಎಲ್ಲರೂ ಒಂದೇ ಎಲ್ಲರೂ ಏಕೀಭವಿಸಿ ನಡೆಯಬೇಕು, ಈ ತಾರತಮ್ಯ ಭಾವನೆಗಳೂ ವ್ಯತ್ಯಾಸಗಳೂ ಇರಬಾರದೆಂಬುವವರಲ್ಲಿ ನಾನೂ ಒಬ್ಬನಾಗಿದ್ದರೂ ಸದ್ಯಕ್ಕೆ ಇದು ಸಾಧ್ಯವಿಲ್ಲ. ಆದುದರಿಂದಲೇ ರಾಜ್ಯಾಂಗದಲ್ಲೇ ಇದಕ್ಕಾಗಿ ಒಂದು ಪ್ರಾವಿಸೋ ಸೇರಿಸಿದ್ದಾರೆ. ಈ ಸಂದರ್ಭದಲ್ಲಿ ಈ ಜನರ ಮಕ್ಕಳು ವ್ಯಾಸಂಗ ಮಾಡಬೇಕು ಮುಂದುವರಿಯಬೇಕು ಎಂದು ಹೇಳುತ್ತಿರುವಾಗ ನಿಮ್ಮ ವರ್ಗದವರಿಗೆ ಕುಂದುಕೊರತೆಗಳು ಇದ್ದೇ ಇವೆಯೆಂಬುದು ಸ್ಪಷ್ಟವಾಗಿದೆ. ಅವುಗಳಿಗೆ ಪರಿಹಾರ ದೊರೆಯಬೇಕು. ಆದ್ದರಿಂದ ಅವರಿಗೆ ತಕ್ಕಷ್ಟು ಹಾಸ್ಟಲುಗಳನ್ನು ಏರ್ಪಡಿಸಿ ಸೂಕ್ತವಾದ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕು. ಆದ್ದರಿಂದ ಅವರಿಗೆ ತಕ್ಕಷ್ಟು ಹಾಸ್ಟಲುಗಳನ್ನು ಏರ್ಪಡಿಸಿ ಸೂಕ್ತವಾದ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕು. ಮೈಸೂರಿನಲ್ಲಿ ಹಿಂದೆ Central Adi Karnataka Institute ಸ್ಕೂಲು ಬಂದಿತ್ತು. ಅಲ್ಲಿ ಕಸೂತಿ ಕೆಲಸವನ್ನು ಹೇಳಿಕೊಡುತ್ತಿದ್ದರು. ಈಗಲೂ ಕಸೂತಿ ಕೆಲಸ ಮುಂತಾದ್ದನ್ನು ಕಲಿಸಲು ಪುನರ್‌ವ್ಯವಸ್ಥೆ ಮಾಡಬೇಕು ಎಂದು ತಿಳಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## ಕ್ಷೇತ್ರದ ನೀರಿನ ವ್ಯವಸ್ಥೆ ಬಗ್ಗೆ ನೀಡಿದ ವಿವರ *

ಅಧ್ಯಕ್ಷರೇ, ನೀರಾವರಿ ಕಾಮಗಾರಿಗಳಿಗೆ ಸರ್ಕಾರದವರು ಒದಗಿಸತಕ್ಕಂಥ ದುಡ್ಡು ಆಗಾಗ್ಗೆ ಸರಿಯಾದ ರೀತಿಯಲ್ಲಿ ಉಪಯೋಗವಾಗದೆ ಯಾರಿಗಾಗಿ ಯಾವ ರೈತನ ಉಪಯೋಗಕ್ಕಾಗಿ ಈ ದುಡ್ಡನ್ನು ಉಪಯೋಗಿಸುತ್ತಿದೆಯೋ, ಅದು ಅವರಿಗಾಗಿ ಸರಿಯಾಗಿ ಉಪಯೋಗವಾಗುತ್ತಿಲ್ಲವೆಂಬುದನ್ನು ನಾನು ಈ ಸಭೆಯಲ್ಲಿ ಗಮನಕ್ಕೆ ತರುವುದಕ್ಕಾಗಿ ನನ್ನ ಖೋತಾ ನಿರ್ಣಯವನ್ನು ಕಳುಹಿಸಿದ್ದೆ. ಅದರಲ್ಲೂ ಚಾಮರಾಜನಗರ, ಯಳಂದೂರು ತಾಲ್ಲೂಕುಗಳಲ್ಲಿ ಸಾಮಾನ್ಯವಾಗಿ ಕ್ಷಾಮ ಪೀಡಿತವಾದ ಪ್ರದೇಶಗಳಿಗೆ ನಾವು ನೀರನ್ನು ಒದಗಿಸಬೇಕಾದರೆ ಎಷ್ಟು ಕಷ್ಟವೆಂಬುದನ್ನು ಸಭೆಯವರಿಗೆ ಅರಿಕೆ ಮಾಡಿಕೊಳ್ಳ ಬಯಸುತ್ತೇನೆ. ಅಲ್ಲಿ ಸ್ವಾಭಾವಿಕವಾಗಿ ಹರಿಯುವ ಸುವರ್ಣಾವತಿ ನದಿಯು ಸಾಮಾನ್ಯವಾಗಿ ವರ್ಷವೆಲ್ಲಾ ನೀರನ್ನು ತರುವುದಿಲ್ಲ. ವರ್ಷಕ್ಕೆ ಎರಡು ಮೂರು ತಿಂಗಳಲ್ಲಿ ಮಾತ್ರ ಯಥೇಚ್ಛ ನೀರನ್ನು ತರುತ್ತದೆ. ಆಗ ನೆರೆ ಹೆಚ್ಚಾಗಿ ಬರುತ್ತದೆ. ಈ ಸುವರ್ಣಾವತಿ ಆಸರೆಯಲ್ಲೆ ಯಳಂದೂರು, ಚಾಮರಾಜನಗರ ತಾಲ್ಲೂಕುಗಳಲ್ಲಿ ಅನೇಕ ಕೆರೆಗಳಿವೆ. ಹಾಗೆ ನೆರೆ ಬಂದ ಕಾಲದಲ್ಲಿ ಈ ಕೆರೆಗಳಲ್ಲಿ ತುಂಬುವಂತೆ ಮಾಡಿದರೆ ಅನೇಕ ಜನ ರೈತರಿಗೆ ಅನುಕೂಲ ಮಾಡಿಕೊಟ್ಟಹಾಗುತ್ತದೆ. ಇದಕ್ಕಾಗಿ ಏನು ಮಾಡಬೇಕೆಂದರೆ, ಸುವರ್ಣಾ ನದಿಯ ಪ್ರತಿನಾಲೆಯ ಮೂಲೆಯಲ್ಲೂ ಒಂದು ಒಡ್ಡನ್ನು ಕಟ್ಟಿಸಿದರೆ ಎಲ್ಲಾ ಕೆರೆಗಳಿಗೂ ನೀರು ತುಂಬಿಕೊಳ್ಳಬಹುದು........ ಸರ್ಕಾರದವರು ದಯವಿಟ್ಟು ಒಂದು ಖಾಯಂ ಅಣೆಕಟ್ಟನ್ನು ಪ್ರತಿನಾಲೆಯ ಮತ್ತು ಫೀಡರ್ ಕಾಲುವೆಗಳ ಮೂಲೆಯಲ್ಲೂ ಕಟ್ಟಿಸಿಕೊಟ್ಟರೆ ಒಳ್ಳೆಯದು. ಈ ರೀತಿಯಾಗಿ ಮಾಡುವುದಕ್ಕೆ ಮದ್ರಾಸ್ ಪ್ರಾಂತ್ಯದಿಂದ ವಿರೋಧ ಬರಬಹುದು. ಏಕೆಂದರೆ ಮದ್ರಾಸ್ ಪ್ರಾಂತ್ಯಕ್ಕೂ ಮೈಸೂರು ಸರ್ಕಾರದವರಿಗೂ ಹಿಂದೆ 1926ನೇ ಇಸವಿಯಲ್ಲಿ ಒಂದು ಕರಾರಾಗಿ ಮಧ್ಯೆ ಹೀಗೆ ಅಣೆಕಟ್ಟು ಕಟ್ಟುವುದಕ್ಕೆ ಸಾಧ್ಯವಿಲ್ಲವೆಂದು ಹೇಳುತ್ತಿದ್ದಾರೆ. ನನ್ನ ಅಭಿಪ್ರಾಯದಲ್ಲಿ ಈ ಸುವರ್ಣಾವತಿ ನದಿಯ 40 ಮೈಲಿ ಉದ್ದದಲ್ಲಿ 30 ಮೈಲಿಯಷ್ಟು ನಮ್ಮ ಪ್ರಾಂತ್ಯದಲ್ಲೇ ಇದ್ದು ಕೇವಲ 10 ಮೈಲಿ ಮಾತ್ರ ಮದ್ರಾಸ್ ಪ್ರಾಂತ್ಯದಲ್ಲಿ ಹರಿಯುತ್ತಿರುವುದರಿಂದ ಹಿಂದೆ ಆಗಿರುವ ಷರತ್ತುಗಳನ್ನು ಬದಲಾಯಿಸಿ ಪ್ರತಿ ನಾಲೆಯ ಮೂಲದಲ್ಲಿ ಸುವರ್ಣಾವತಿ ನದಿಗೆ ಅಡ್ಡಲಾಗಿ ಒಂದು ಅಣೆಕಟ್ಟನ್ನು ಹಾಕಿಕೊಟ್ಟರೆ ನೀರು ಬಂದಾಗ ಕೆರೆಗಳಿಗೆ ಫೀಡರ್ ಚಾನಲ್ಸ್ ಮುಖಾಂತರ ತುಂಬಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

---

* ವಿಧಾನ ಸಭಾ ನಡವಳಿಕೆ ದಿನಾಂಕ 22ನೇ ಅಕ್ಟೋಬರ್, 1952 ಪುಟ 217-218

.......... ಈ ಸಂದರ್ಭದಲ್ಲಿ ಇನ್ನೊಂದು ಅಂಶವನ್ನು ತಮ್ಮ ಗಮನಕ್ಕೆ ತರಬಹುದು, ಯಳಂದೂರು ಒಂದು ಜಹಗೀರಿ ತಾಲ್ಲೂಕು. ಆದ್ದರಿಂದ ಸರ್ಕಾರದವರು ಆ ಪ್ರದೇಶಕ್ಕೆ ಖರ್ಚು ಮಾಡುವುದಕ್ಕಾಗುವುದಿಲ್ಲವೆಂದು ಹೇಳಬಹುದು. ಆದರೆ ಹಾಲಿ ಯಳಂದೂರು ಜಹಗೀರಿ ಫಂಡಿನಲ್ಲೇ ಮೂರು ಲಕ್ಷ ರೂಪಾಯಿಗಳಿವೆ. ಮಂತ್ರಿಯವರು ಈ ಫಂಡಿನಿಂದ ಕಡೆಯ ಪಕ್ಷ ಒಂದು ಲಕ್ಷ ರೂಪಾಯಿಗಳನ್ನು ಖರ್ಚು ಮಾಡುವುದಕ್ಕೆ ಈ ವರ್ಷವೇ ಸಿದ್ಧವಾಗಿದೆ ಎಂದು ಜನರಿಗೆ ಭರವಸೆಯನ್ನು ಕೊಟ್ಟಿದ್ದಾರೆ. ಆದ್ದರಿಂದ ಈ ವರ್ಷವೇ ಯಳಂದೂರು ಕೆರೆಗೆ ನೀರು ಒದಗಿಸುವ ಅಣೆಕಟ್ಟು, ಅಂಬಳೆ ಕೆರೆಗೆ ನೀರು ಒದಗಿಸುವ ಅಣೆಕಟ್ಟು ಮತ್ತು ಮದ್ದೂರು ಕೆರೆಗೆ ನೀರು ಒದಗಿಸುವ ಅಣೆಕಟ್ಟು ಕಟ್ಟಿಸಿದರೆ ಬಹಳ ಜನರಿಗೆ ಅನುಕೂಲ ಮಾಡಿದಂತಾಗುತ್ತದೆ..........

## ಮಹಾರಾಜರ ಭಾಷಣವನ್ನು ಕುರಿತು *

ಶ್ರೀ ಬಿ. ರಾಚಯ್ಯ (ಯಳಂದೂರು) ಅಧ್ಯಕ್ಷರೇ ನಿನ್ನೆ ಶನಿವಾರ 7ನೇ ತಾರೀಖು ವಿಧಾನ ಪರಿಷತ್ತು ಮತ್ತು ವಿಧಾನ ಸಭೆಗಳ ಜಂಟಿ ಸಮ್ಮೇಳಗಳನ್ನು ಉದ್ದೇಶಿಸಿ ಶ್ರೀ ಮನ್ಮಹಾರಾಜರವರು ದಯಪಾಲಿಸಿರತಕ್ಕ ಬಗ್ಗೆ ತಂದಿರತಕ್ಕ ನಿರ್ಣಯದ ಮತ್ತು ನಮ್ಮ ಪಾರ್ಟಿ ನಾಯಕರು ಸಭೆಯ ಮುಂದಿಟ್ಟಿರತಕ್ಕ ತಿದ್ದುಪಡಿ ಸೂಚನೆಗಳ ಸಂಬಂಧವಾಗಿ ಒಂದೆರಡು ಮಾತುಗಳನ್ನಾಡಬೇಕೆಂದು ನಿಂತಿದ್ದೇನೆ. ಶ್ರೀ ಮನ್ಮಹಾರಾಜರವರು ದಯಪಾಲಿಸಿರತಕ್ಕ ಭಾಷಣದ ಬಗ್ಗೆ ವಂದನಾರ್ಪಣೆಯನ್ನು ಅರ್ಪಿಸಬೇಕೆಂಬ ವಿಚಾರದಲ್ಲಿ ಮತ್ತು ಅವರ ವ್ಯಕ್ತಿತ್ವದಲ್ಲಿ ನಮಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಆದಾಗೂ ಈ ನಿರ್ಣಯದ ಮೇಲೆ ಯಾರು ಭಿನ್ನಾಭಿಪ್ರಾಯವನ್ನು ಸೂಚಿಸದೆ ಸರ್ವರೂ ಏಕಮುಖವಾದ ವಂದನಾರ್ಪಣೆಯನ್ನು ಸೂಚಿಸಲು ಅವಕಾಶ ನೀಡಬೇಕೆಂಬ ಒಂದು ಸಣ್ಣನೀತಿ ಬೋಧೆಯನ್ನು ನಿರ್ಣಯದ ಸೂಚಕರು ಹೇಳಿದರು.

ನಾನು ಹೇಳುವುದಾದರೆ ಸರ್ಕಾರ ಕಳೆದ ಅಧಿವೇಶನದಿಂದ ಈಗಿನ ಅಧಿವೇಶನದವರೆಗೂ ಏನೇನು ಕಾರ್ಯ ಸಾಧನೆ ಮಾಡಿತು ಮುಂದೆ ಕೈಗೊಳ್ಳಬೇಕಾದ ಕಾರ್ಯವನ್ನು ಯಾವ ರೀತಿ ನಿರೂಪಿಸಿದೆ ಎಂಬುದನ್ನು ಶ್ರೀಮನ್ಮಮಹಾರಾಜರವರ ಭಾಷಣದಲ್ಲಿ ಅಡಕ ಮಾಡಿದ್ದಾರೆಂದು ಭಾವಿಸುತ್ತೇನೆ.

ಮೊದಲನೆಯದಾಗಿ ನಾನು ಇದರ ಮೇಲೆ ಈಗಾಗಲೇ ವಿಪುಲವಾಗಿ ಚರ್ಚೆಯಾಗಿರುವುದರಿಂದ, ಅವರು ಬಿಟ್ಟಿರುವ ಕೆಲವು ವಿಷಯಗಳನ್ನು ಮಾತ್ರ ಪ್ರಸ್ತಾಪ ಮಾಡುತ್ತೇನೆ. ಮುಖ್ಯವಾಗಿ ಜಮೀನ್ದಾರಿ ವಿಷಯದಲ್ಲಿ ಈ ಸರ್ಕಾರ ಯಾವುದಾದರೂ ಕ್ರಾಂತಿಕಾರಕವಾದ ಬದಲಾವಣೆಯನ್ನು ತರುತ್ತದೆಂದು ಹೇಳಿ ಈ ಶ್ರೀಮನ್ಮಹಾಜರವರ ಭಾಷಣದಲ್ಲಿ ಸೂಚಿಸಿಲ್ಲ. ಅಂದ ಮೇಲೆ ಸಾಮಾನ್ಯ ವರ್ಗದ ಬಡ ರೈತನ ಕಾರ್ಮಿಕರ ಜೀವನ ಎಷ್ಟರ ಮಟ್ಟಿಗೆ ಈ ಸರ್ಕಾರದ ನೇತೃತ್ವದಲ್ಲಿ ಉತ್ತಮಗೊಳ್ಳುತ್ತದೆಂಬುದನ್ನು ನೀವೇ ಯೋಚಿಸಬಹುದು. ಸಾಮಾನ್ಯ ಮನುಷ್ಯನ ಜೀವನವನ್ನು ಉತ್ತಮಪಡಿಸಿಬೇಕೆಂದು ಎದುರು ಪಕ್ಷದವರು, ಸ್ವತಂತ್ರ ಪಕ್ಷದವರು ಪ್ರತಿಯೊಬ್ಬರೂ ಹೇಳುತ್ತಲೇ ಇದ್ದಾರೆ. ಅಂಥದರಲ್ಲೂ ಆಕಡೆ ಎಷ್ಟು ಮಟ್ಟಿನ ಗಮನಕೊಟ್ಟಿದ್ದಾರೆ, ಬಡರೈತನ ಸ್ಥಿತಿ ಉತ್ತಮಗೊಂಡೀತೇ ಎಂಬುದನ್ನು ನೀವೇ ನೋಡಬಹುದು. ಇಂಥದರಲ್ಲಿ ಸಾಮಾನ್ಯ ಮನುಷ್ಯ ನೈತಿಕ ಪುನರುಜ್ಜೀವನವನ್ನು ಸಾಧಿಸುತ್ತೇವೆಂದು ಸಂಸ್ಕೃತಿ ಪ್ರಚಾರಕ್ಕೆ ಹೊರಟಿದ್ದಾರೆ. ವಾಸ್ತವವಾಗಿ ನೋಡಿದರೆ ಸಾಮಾನ್ಯ ಮನುಷ್ಯನಲ್ಲಿ ಸಂಸ್ಕೃತಿ ಕಳೆದು ಹೋಗಿಲ್ಲ. ಇವತ್ತಿಗೂ ಸತ್ಯ, ಧರ್ಮ ಎಂಬುದಿರುವುದು ಬಡರೈತನಲ್ಲೇ ವಿನಾ ದೊಡ್ಡವರಲ್ಲಿ ಅಲ್ಲ ಎಂದು ಹೇಳಬೇಕು.

---

* ವಿಧಾನ ಸಭಾ ನಡವಳಿಕೆ ದಿನಾಂಕ 11ನೇ ಮಾರ್ಚ್, 1953 ಪುಟ 176-177

ಎರಡನೆಯದಾಗಿ ರಾಜ್ಯಾಂಗದ 32ನೆಯ, 2ನೇ ವಿಧಿಯಂತೆ ಪ್ರತಿವರ್ಷವೂ ಪಬ್ಲಿಕ್ ಸರ್ವಿಸ್ ಕಮಿಷನ್ನಿನವರು ತಮ್ಮ ವರದಿಗಳನ್ನು ಸರ್ಕಾರದ ಅವಗಾಹನೆಗೆ ತರಬೇಕಾಗಿದೆ. ಇಂಥ ವಿಚಾರದಲ್ಲಿ ಕಳೆದ ಮೂರು ವರ್ಷಗಳಿಂದಲೂ ಯಾವ ವಿಧವಾದ ವರದಿಯನ್ನು ತಂದಿಲ್ಲದಿರುವುದನ್ನು ನೋಡಿ ಆಶ್ಚರ್ಯವಾಗುತ್ತದೆ. ಈ ಸಭೆಯಲ್ಲಿ ಪ್ರಶ್ನೋತ್ತರಗಳ ಕಾಲದಲ್ಲಿ ಪಬ್ಲಿಕ್ ಸರ್ವಿಸ್ ಕಮಿಷನ್ನಿನಲ್ಲಿ ಅನೇಕರಿಗೆ ಅನ್ಯಾಯವಾಗುತ್ತಿದೆ. ಅನ್ಯಾಯವಾಗುತ್ತಿಲ್ಲವೆಂದು ಹೇಳುತ್ತಿರುವುದನ್ನು ನೋಡಿ ವಿಷಾದವಾಗುತ್ತಿದೆ. ಸಿವಿಲ್ ಲಿಸ್ಟನ್ನು ಕೋಮುವಾರು ಪ್ರಕಾರ ಏಕೆ ತಯಾರಿಸಲಿಲ್ಲ ಎಂದು ಕೇಳಿದರೂ ಉತ್ತರ ಸರಿಯಾಗಿ ಹೇಳಲಿಲ್ಲ. ಹೀಗೆ ಮಾನ್ಯ ಸಚಿವರು ನ್ಯಾಯ ದೊರಕಿದೆ ಎಂದು ಹೇಳಬೇಕಾಗಿದ್ದರೆ ಯಾವ ಆಧಾರವನ್ನು ಇಟ್ಟುಕೊಳ್ಳದೆ ಹೇಳುತ್ತಿದ್ದಾರೆ. ಇದುವರೆಗೂ ವಾರ್ಷಿಕ ವರದಿಯನ್ನು ಕಮಿಷನ್ನರಿಂದ ತರಿಸದಿರುವುದನ್ನು ನೋಡಿದರೆ ಅನ್ಯಾಯವಾಗಿದೆಯೇ ಅಥವಾ ಇಲ್ಲವೇ ಎಂದು ಗೊತ್ತಾಗುತ್ತದೆ.

ಆಮೇಲೆ ನಿಮ್ಮ ತರಗತಿಯವರ ವಿಚಾರದಲ್ಲಿ ಅನೇಕರು, ಅನೇಕ ವಿಧವಾಗಿ ಮಾತನಾಡುತ್ತಿದ್ದಾರೆ. 9 ತಿಂಗಳುಗಳಲ್ಲಿ 3000 ಮನೆಗಳನ್ನು ಕಟ್ಟಿದ್ದಾರೆಂದು ಹೇಳಿದರು. ಅದನ್ನು ಯಾರಿಗೆ ಕಟ್ಟಿದ್ದಾರೆಂದು ಗೊತ್ತಿಲ್ಲ. ಇದಕ್ಕಾಗಿ ಒಂದು ನಾಮಕಾವಸ್ತೆ ಕಮಿಟಿ ಮಾಡಿದ್ದಾರೆ. ಆ ಕಮಿಟಿಯಿಂದ ಏನೂ ಕೆಲಸವಾಗಿಲ್ಲ. ಮನೆಗಳನ್ನು ಹೊಸದಾಗಿ ಕಟ್ಟಿದ್ದೇವೆಂದು ಹೇಳಿದ್ದು ನಿಜವಲ್ಲ. ಹಿಂದಿನ ವರ್ಷ ಅರೆಬರೆಯಾಗಿ ಕಟ್ಟಿದ್ದನ್ನೇ ಸರಿಪಡಿಸಿ ಹೊಸದಾಗಿ ಕಟ್ಟಿದ್ದೇವೆಂದು ಹೇಳಿದ್ದಾರೆಯೇ ಹೊರತು ನಿಜವಾಗಿಯೂ ಹೊಸದಾಗಿ ಯಾವುದನ್ನು ಕಟ್ಟಿಕೊಟ್ಟಿಲ್ಲ. ಅಲ್ಲದೆ 9 ಲಕ್ಷ ರೂಪಾಯಿಗಳನ್ನು ಒದಗಿಸಿರುವುದರಲ್ಲಿ ಇದುವರೆಗೂ ಕೇವಲ ಏಳು ಲಕ್ಷ ಮಾತ್ರ ಖರ್ಚಾಗಿದೆ. ಇದನ್ನು ನೋಡಿದರೆ ಈಗಿನ ಸರ್ಕಾರ ಯಾವ ರೀತಿ, ಎಷ್ಟು ಮಟ್ಟಿಗೆ ಉತ್ಸಾಹ ಪೂರ್ವಕವಾಗಿ ಕೆಲಸ ಮಾಡುತ್ತಿದ್ದಾರೆಂಬುದು ಗೊತ್ತಾಗುತ್ತದೆ. ಒಂದು ಉದಾಹರಣೆ ಹೇಳುವುದಾದರೆ ಒಂದು ಮನೆಯಲ್ಲಿ ಮೂರು ಜನರಿದ್ದು ಅವರಲ್ಲಿ ಒಬ್ಬನಿಗೆ ಕಾಯಿಲೆ ಬಂದರೂ ಹೇಗೆ ಮನೆಯೇ ಅವ್ಯವಸ್ಥೆಯಲ್ಲಿರುತ್ತದೆಯೋ ಹಾಗೆಯೇ ದೇಶದಲ್ಲಿ ನಿಮ್ಮ ವರ್ಗದವರು ಎಲ್ಲಿಯವರೆಗೆ ಹಿಂದುಳಿದಿರುತ್ತಾರೋ ಅಲ್ಲಿಯವರೆಗೂ ಅದರ ಪರಿಣಾಮವಾಗಿ ಮಿಕ್ಕ ಇತರರೂ ಮುಂದುವರೆಯಲು ಕಷ್ಟವಾಗುತ್ತದೆ. ಸರ್ಕಾರದಲ್ಲಿ ಪ್ರತಿಯೊಬ್ಬರಿಗೂ ಸರ್ಕಾರದ ಆಗು ಹೋಗುಗಳು, ಸರ್ಕಾರದ ಇತರ ಸುಖಸೌಲಭ್ಯಗಳು ದೊರಕುವಂತಾಗಬೇಕು. ಆಗಲೇ ಸಮಾಜದ ಸುಧಾರಣೆಯಾಯಿತೆಂದು ಹೇಳಬಹುದು. ನಿಮ್ಮ ತರಗತಿಯವರಿಗೆ ಸರಿಯಾದ ಏರ್ಪಾಡುಗಲು, ಸಹಾಯ ಸೌಲಭ್ಯಗಳು ದೊರೆಯುತ್ತಿಲ್ಲವೆಂದು ಶ್ರೀಮತಿ ಬಳ್ಳಾರಿ ಸಿದ್ದಮ್ಮನವರು ಹೇಳಿದರು. ಅದಕ್ಕೆ ಸರ್ಕಾರದವರು ದೊರೆಯುತ್ತಿದೆ ಎಂದು ಉತ್ತರ ಕೊಟ್ಟರು. ಆದರೆ ವಾಸ್ತವವಾಗಿ ಅವರಿಗೆ ಬಹಳ ಕಡಿಮೆ ಸಹಾಯ ದೊರೆಯುತ್ತಿದೆಂದು ಹೇಳಿದರೆ ತಪ್ಪಲ್ಲ.

ರೋಡ್ ಟ್ರಾನ್ಸ್‌ಪೋರ್ಟಿನ ವಿಚಾರದಲ್ಲಿ ಶ್ರೀಮನ್ಮಹಾರಾಜರವರ ಭಾಷಣದಲ್ಲಿ ಯಾವ ಸೂಚನೆಯನ್ನು ಕೊಟ್ಟ ಹಾಗೆ ಕಾಣುತ್ತಿಲ್ಲ. ಮೈಸೂರು ಡಿಸ್ಟ್ರಿಕ್ಟಿನಲ್ಲಿ ಪ್ರೈವೇಟ್ ಬಸ್ಸುಗಳನ್ನೆಲ್ಲಾ ನಿಲ್ಲಿಸಿ, ಹಾಲಿ ಮೈಸೂರಿನಿಂದ ನಂಜನಗೂಡಿನ ಕಡೆಗೆ ರೋಡ್ ಟ್ರಾನ್ಸ್‌ಪೋರ್ಟ್ ಬಸ್ಸನ್ನು

ಮನಾಪಲಿ ಮಾಡಿಕೊಂಡು ಓಡಿಸುತ್ತಿದ್ದಾರೆ. ಇದರಿಂದ ಗ್ರಾಮಾಂತರಗಳ ಕಡೆ ಸಂಚಾರಕ್ಕೆ ಎಷ್ಟು ತೊಂದರೆಯಾಗಿದೆ. ಆದ್ದರಿಂದ ಸಂಸ್ಥಾನಾದ್ಯಂತ ರೋಡ್ ಟ್ರಾನ್ಸ್‌ಪೋರ್ಟ್ ಸರ್ವಿಸ್ಸುಗಳನ್ನು ಇನ್ನೂ ಬಹಳವಾಗಿ ಹೆಚ್ಚಿಸಬೇಕು ಇದಕ್ಕೆ ದುಡ್ಡಿಲ್ಲದೆ ಹೋದರೆ ನಾನೊಂದು ಸಲಹೆ ಕೊಡುತ್ತೇನೆ. ಈಗಿರತಕ್ಕ ನಾನಾ ಬಸ್ ಮಾಲೀಕರುಗಳನ್ನೆಲ್ಲಾ ಸೇರಿಸಿ ಒಂದು ಕಾರ್ಪೊರೇಷನ್ ಮಾಡಿ ಅದರಲ್ಲಿ ಬಸ್ ಮಾಲೀಕರುಗಳು ಹಣವನ್ನು ಹಾಕುವುದಕ್ಕೆ ಅವಕಾಶ ಕೊಟ್ಟು ಷೇರ್ ಹೋಲ್ಡರುಗಳನ್ನಾಗಿ ಮಾಡಿ, ಸರ್ಕಾರಕ್ಕೆ ಬರುವ ಉತ್ಪತ್ತಿಯಲ್ಲಿ ಅವರಿಗೂ ಒಂದು ಡಿವಿಡೆಂಡ್ ಕೊಡುವಂತೆ ಮಾಡಿದರೆ ಒಂದೇ ಸಾರಿ ರಾಷ್ಟ್ರೀಕರಣ ಮಾಡುವುದಕ್ಕೆ ಸಾಧ್ಯವಾಗುತ್ತದೆ.

ಆಮೇಲೆ ಪಾನ ನಿರೋಧ ವಿಚಾರವಾಗಿ ನಿಧಾನವಾಗಿ ಹೋಗಬೇಕೆಂದು ಹೇಳುತ್ತಿದ್ದಾರೆ. ಇದರಿಂದ ತಾವೇ ಕಳ್ಳಭಟ್ಟಿ ವ್ಯಾಪಾರಕ್ಕೆ ಪ್ರೋತ್ಸಾಹ ಕೊಟ್ಟಂತಾಗುತ್ತದೆ. ಆದ್ದರಿಂದ ತಾವು ಪಾನ ನಿರೋಧವನ್ನು ಇಟ್ಟುಕೊಳ್ಳಬೇಕೆಂದಿದ್ದರೆ. ಸಂಸ್ಥಾನಾದ್ಯಂತ ಜಾರಿಗೆ ತನ್ನಿ; ಇಲ್ಲದಿದ್ದರೆ ಪೂರ್ತಿ scrap ಮಾಡಿಬಿಡುವುದು ಒಳ್ಳೆಯದು ಎಂದು ಹೇಳುತ್ತೇನೆ.

## ಅಪ್ರೋಪ್ರಿಯೇಷನ್ ಬಿಲ್ ಮೇಲಿನ ಚರ್ಚೆ *

ಶ್ರೀ ಬಿ. ರಾಚಯ್ಯ (ಯಳಂದೂರು) ಸ್ವಾಮಿ ವಿರೋಧ ಪಕ್ಷದಲ್ಲಿದ್ದುಕೊಂಡು ಈ ಅಪ್ರೋಪ್ರಿಯೇಷನ್ ಬಿಲ್ಲನ್ನು ಕೇವಲ ವಿರೋಧ ಮಾಡಬೇಕೆಂಬ ಒಂದೇ ದೃಷ್ಟಿಯಿಂದ ನಾನು ವಿರೋಧಿಸುತ್ತಿದ್ದೇನೆಂದು ಯಾರು ತಿಳಿದುಕೊಳ್ಳುವುದಿಲ್ಲವೆಂದು ನಂಬಿದ್ದೇನೆ. ಮೈಸೂರು ದೇಶದಲ್ಲಿ ಪ್ರಜಾಪ್ರಭುತ್ವ ಬಂದ ಮೇಲೆ, ಪ್ರಜೆಗಳು ಬೇರೆ ಸರ್ಕಾರ ಬೇರೆ ಎಂಬ ಭಾವನೆಯನ್ನು ಬಿಟ್ಟು ಪ್ರಜಾ ಸರ್ಕಾರದಲ್ಲಿ ಪ್ರತಿಯೊಬ್ಬರೂ ಕೈಹಾಕಿ, ಅದರ ಆಗುಹೋಗುಗಳಲ್ಲಿ ತಮ್ಮದೇ ಆದ ಒಂದು ಕರ್ತವ್ಯವನ್ನು ಮಾಡಬೇಕಾದುದು ನಾಗರಿಕರಾದ ಪ್ರತಿಯೊಬ್ಬರ ಕರ್ತವ್ಯವೆಂದು ನನ್ನ ಭಾವನೆ. ಈ ದೃಷ್ಟಿಯಿಂದ ನಮ್ಮ ಕಾಂಗ್ರೆಸ್ ಸರ್ಕಾರ ಅನುಸರಿಸುತ್ತಿರುವ ನೀತಿ ಮತ್ತು ತೋರಿಸುತ್ತಿರುವ ಧೋರಣೆ, ವಿರೋಧ ಪಕ್ಷಕ್ಕೆ ಕಾಂಗ್ರೆಸ್ ಸರ್ಕಾರ ತೋರಿಸುತ್ತಿರುವ ಸಹಕಾರ ಸಹಾನುಭೂತಿ ಇವುಗಳ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕೆಂದಿದ್ದೇನೆ.

ವಿರೋಧ ಪಕ್ಷದವರು ಯಾವಾಗಲೂ ರಚನಾತ್ಮಕ ಸಲಹೆಗಳನ್ನು ಕೊಡದೆ ಬರಿಯ ವಿರೋಧ ಮಾಡುವುದರಲ್ಲಿ ಕಾಲಕಳೆಯುತ್ತಿದ್ದಾರೆ. ನಾನು 'ಹೌಸ್ ಆಫ್ ಕಾಮನ್ಸ್' ನಡವಳಿಕೆಗಳನ್ನು ನೋಡಿದ್ದೇನೆ ಎಂದು ಹೇಳಿದರು ...........

ಶ್ರೀ ಪಿ.ಆರ್. ರಾಮಯ್ಯ: ನೋಡಿದ್ದೇನೆ ಎಂದು ಹೇಳಲಿಲ್ಲ ...........

ಶ್ರೀ ಬಿ. ರಾಚಯ್ಯ: ತಿಳಿದುಕೊಂಡಿದ್ದೇನೆಂದು ಹೇಳಿದರು. ನಾವು ಎಷ್ಟೇ ರಚನಾತ್ಮಕ ಸಲಹೆಗಳನ್ನು ಕೊಟ್ಟರೂ ಕಿವುಡ ಕಿವಿಗಳ ಮೇಲೆ ಬಿದ್ದಂತಾಗುತ್ತದೆ. ಕಳೆದ ಹದಿನೈದು ದಿವಸಗಳಿಂದಲೂ ಈ ಸಭೆಯಲ್ಲಿ ಚರ್ಚೆ ನಡೆಯುತ್ತಿದೆ. ಇದರಲ್ಲಿ ವಿರೋಧಪಕ್ಷದವರು ತಮಗೆ ತಿಳಿದ ರಚನಾತ್ಮಕ ಸಲಹೆಗಳನ್ನು ಕೊಟ್ಟಿದ್ದಾರೆ. ಆದರೂ ಸರ್ಕಾರ ತನ್ನ ಸಂಪೂರ್ಣ ಸಹಾನುಭೂತಿಯನ್ನು ತೋರಿಸಿಲ್ಲವೆಂದು ವ್ಯಸನದಿಂದ ಹೇಳಬೇಕಾಗಿದೆ. ಸರ್ಕಾರ ಒಂದು ಕಡೆ ಆದಾಯವನ್ನು ಹೆಚ್ಚಿಸಬೇಕು, ಮತ್ತೊಂದು ಕಡೆ ಖರ್ಚನ್ನು ಕಡಿಮೆ ಮಾಡಬೇಕೆಂದು ಹೇಳುವಾಗ, ನಾನು ತಿಳಿದು ಕೊಂಡಿದ್ದೆ. ಹೊಸ ಮಂತ್ರಿ ಮಂಡಲ ಅಧಿಕಾರಕ್ಕೆ ಬಂದ ಮೇಲೆ ಆದಷ್ಟು ಮಟ್ಟಿಗೂ ಕೆಲವು ಇಲಾಖೆಗಳಲ್ಲಿ ಸಿಬ್ಬಂದಿಯ ಖರ್ಚು ಕಡಿಮೆ ಮಾಡುತ್ತಾರೆ, ಇದರ ಮೂಲಕ ಖರ್ಚು ಕಡಿಮೆ ಮಾಡಿ ಉತ್ಪತ್ತಿ ಹೆಚ್ಚಿಸುತ್ತ ಇನ್ನೊಂದು ಕಡೆ ರಚನಾತ್ಮಕ ಕಾರ್ಯಗಳನ್ನು ಸಾಧಿಸುತ್ತಾರೆಂದು ಮೊದಲು ಉತ್ಪತ್ತಿ ಬರುವ ಕಾರ್ಯಗಳಿಗೆ 'ಪ್ರಿಯಾರಿಟಿ' ಕೊಟ್ಟು ಅದರಿಂದ ಬಂದ ಹಣವನ್ನು ದೇಶದ ಉತ್ಪತ್ತಿಗಾಗಿ ತೆಗೆದುಕೊಳ್ಳಬೇಕೆಂದು ಅಭಿಪ್ರಾಯಪಟ್ಟೆವು. ಖರ್ಚು ಕಡಿಮೆ ಮಾಡಲು ಉದಾಹರಣೆಗೆ ಅಗ್ರಿಕಲ್‌ಚರ್, ವೆಟರಿನೆರಿ ಮತ್ತು ಹಾರ್ಟಿಕಲ್ಚರ್ ಇಲಾಖೆಗಳನ್ನು ಒಟ್ಟಿಗೆ ಸೇರಿಸಿ ಒಬ್ಬರೇ ಮುಖ್ಯಾಧಿಕಾರಿಗಳನ್ನು ಮಾಡಿದರೆ ಸ್ವಲ್ಪ ಮಟ್ಟಿಗೆ ಖರ್ಚು ಕಡಿಮೆ ಮಾಡಬಹುದೆಂದು ಹೇಳಿದೆವು. ಅದಕ್ಕೆ ಅವರು ಇದು ಸಾಧ್ಯವಿಲ್ಲ ಎಂದು ಹೇಳಿದರು. ಇನ್ನೊಂದು ಕಡೆ ವಯಸ್ಕರ ವಿದ್ಯಾಭ್ಯಾಸ, ಸಂಸ್ಕೃತಿ ಪ್ರಸಾರ ಮತ್ತು ಸೇವಾದಳ ಈ

* ವಿಧಾನ ಸಭಾ ನಡವಳಿಕೆ ದಿನಾಂಕ 30ನೇ ಮಾರ್ಚ್, 1953 ಪುಟ 1351-1352

ಮೂರು ಶಾಖೆಗಳೂ ಮಾಡುವುದು ಒಂದೇ ರೀತಿಯ ಕೆಲಸವಾಗಿರುವುದರಿಂದ ವಯಸ್ಕರ ವಿದ್ಯಾಸಂಸ್ಥೆಗಳಲ್ಲಿರುವ ಒಂದು ಲಕ್ಷ ವಿದ್ಯಾರ್ಥಿಗಳನ್ನು ಪ್ರೈಮರಿ ಸ್ಕೂಲುಗಳಿಗೆ ಸೇರಿಸಿದರೆ ಪ್ರೈಮರಿ ಸ್ಕೂಲುಗಳಲ್ಲಿ ಕೆಲಸ ಮಾಡುತ್ತಿರುವ ಉಪಾಧ್ಯಾಯರಿಗೂ ಒಂದು ವಿಧದಲ್ಲಿ ಸಂಬಳ ಸಾರಿಗೆಗಳನ್ನು ಹೆಚ್ಚು ಮಾಡಿದ ಹಾಗಾಗುತ್ತದೆ. ಅವರ ಬೇಡಿಕೆಗಳನ್ನೂ ಪ್ರಜಾ ಸರ್ಕಾರ ಈಡೇರಿಸಿದ ಹಾಗಾಗುತ್ತದೆ. ಜೊತೆಗೆ ಅಧಿಕಾರಿಗಳನ್ನು ಕಡಿಮೆ ಮಾಡುವುದರಿಂದ ಅಲ್ಲಿಯೂ ಕೂಡ ಹಣ ಉಳಿತಾಯವಾಗುತ್ತದೆ. ಈ ದೃಷ್ಟಿಯಿಂದ ಒಟ್ಟುಗೂಡಿಸುವುದಕ್ಕೆ ಅವಕಾಶವಿದೆ ಎಂದು ನಮ್ಮಲ್ಲಿ ಅನೇಕರು ಸಲಹೆಯನ್ನು ಕೊಟ್ಟರು. ಆದರೂ ಸರ್ಕಾರ ಇನ್ನೂ ಸರಿಯಾದ ಉತ್ತರವನ್ನು ಕೊಟ್ಟಿಲ್ಲ. ಇನ್ನು ಸೆಕ್ರೆಟೇರಿಯಟ್ಟಿನಲ್ಲಿರುವ ಸಿಬ್ಬಂದಿಯನ್ನು ಕಡಿಮೆ ಮಾಡುವುದಕ್ಕೆ ಅವಕಾಶವಿದೆ; ಆದರೂ ಮಾಡಿಲ್ಲ ಇದಕ್ಕೆ ಕಾರಣವನ್ನು ಊಹಿಸುವುದು ಕಷ್ಟವೇನೂ ಇಲ್ಲ. ಏನೋ ಹಿಂದಿನಿಂದ ನಡೆದುಕೊಂಡು ಬಂದಿದೆ. ನಮ್ಮ ಕಾಲದಲ್ಲಿ ನಾವು ರಿಟ್ರೆಂಚ್ ಮಾಡಿದರೆ, ಕೆಲವು ಅಧಿಕಾರಿಗಳ ವಿಶ್ವಾಸವನ್ನು ಕಳೆದುಕೊಳ್ಳಬೇಕಾಗುತ್ತದೆ ಎಂದು ಸರ್ಕಾರಕ್ಕೆ ಶಂಕೆಯಿದೆಯೋ ಏನೋ! ಸೆಕ್ರೆಟೇರಿಯಟ್ಟಿನಲ್ಲಿ ಕೇಸ್‌ವರ್ಕರ್‌ಗಳ ಮೇಲೆ ಸೂಪರಿನ್‌ಟೆಂಡೆಂಟುಗಳು, ಅಸಿಸ್ಟೆಂಟ್ ಸೆಕ್ರೆಟರಿಗಳು, ಅಂಡರ್ ಸೆಕ್ರೆಟರಿಗಳು ಆಮೇಲೆ ಸೆಕ್ರೇಟರಿಗಳು! ಹೀಗೆ ಅನೇಕ ದೊಡ್ಡ, ದೊಡ್ಡ ಹುದ್ದೆಗಳು ಬಹಳ ಜಾಸ್ತಿ ಇವೆ. ದೊಡ್ಡ ಹುದ್ದೆಗಳನ್ನು ಕಡಿಮೆ ಮಾಡುವುದಕ್ಕೆ ಅವಕಾಶವಿದ್ದು, ಈ ಸಲಹೆಗಳನ್ನು ನಾವು ಕೊಡುತ್ತಿದ್ದರೂ ಇದಕ್ಕೆ ಸರ್ಕಾರ ಸಹಾನುಭೂತಿಯಿಂದ ಗಮನಕೊಡುತ್ತಿಲ್ಲ ನಾವು ಸಹಕಾರಸ್ತವನ್ನು ನೀಡುತ್ತಿದ್ದೇವೆ; ಈಗಲಾದರೂ ಸರ್ಕಾರ ಕಣ್ಣುತೆರೆದು ನೋಡಲಿ ಎಂದು ಇದನ್ನೆಲ್ಲಾ ಹೇಳುತ್ತಿದ್ದೇನೆ.

ಸರ್ಕಾರಿ ಹುದ್ದೆಗಳನ್ನು ಕಡಿಮೆ ಮಾಡುತ್ತಾ ಹೋಗುವುದರಿಂದ ನಿರುದ್ಯೋಗ ಸಮಸ್ಯೆ ನಮ್ಮ ಮುಂದೆ ನಿಂತರೆ, ಅವಷ್ಟನ್ನು ಯಾವ ರೀತಿ ನಿವಾರಿಸುವುದು ಎಂದು ಅವರ ಮನಸ್ಸಿಗೆ ಶಂಕೆ ಬರಬಹುದು. ಆದಾಗ್ಗೂ, ಹೆಚ್ಚಿನ ಸಂಬಳಗಳನ್ನು ತೆಗೆದುಕೊಳ್ಳುವ ಅಧಿಕಾರಿಗಳಲ್ಲಿ ಒಂದೇ ಅಧಿಕಾರಿ ಬೇರೆ, ಬೇರೆ ಶಾಖೆಗಳ ಕೆಲಸಗಳನ್ನು ಮಾಡಲು ಅವಕಾಶವಿದೆ. ....... ಆದುದರಿಂದ ಒಬ್ಬರಿಗೆ ಎರಡು ಇಲಾಖೆಗಳ ಕೆಲಸಗಳನ್ನು ಒದಗಿಸುವುದರಲ್ಲಿ ಅಧಿಕಾರಿಗಳ ಮನಸ್ಸಿಗೆ ನೋವಾದರೂ, ದೇಶದ ಹಿತದೃಷ್ಟಿಯಿಂದ ಅವರು ಸ್ವಲ್ಪ ಹೆಚ್ಚು ಕೆಲಸ ಮಾಡಬೇಕಾಗುತ್ತದೆ. ಹೀಗೆ ಮಾಡುವುದರಿಂದ ಸರ್ಕಾರದ ಖರ್ಚನ್ನು ಕಡಿಮೆ ಮಾಡಬಹುದು.

ಇನ್ನೊಂದು ವಾದವನ್ನು ಹೇಳುತ್ತಾರೆ ರಚನಾತ್ಮಕ ಕಾರ್ಯಗಳಿಗೆ ಹಣ ಹಾಕಬೇಕಾಗುತ್ತದೆ. ಸ್ಕೂಲುಗಳು, ರಸ್ತೆಗಳು, ಆಸ್ಪತ್ರೆಗಳು, ನೀರಾವರಿ ಕಾಮಗಾರಿಗಳು ಮುಂತಾದ ಕಾರ್ಯಗಳಿಗೆ ಹೆಚ್ಚು ಮೊಬಲಗನ್ನು ಒದಗಿಸುತ್ತಿದ್ದೇವೆ. ಇವಕ್ಕೆಲ್ಲಾ ಹಣ ಒದಗಿಸಬೇಕಾದರೆ ಹೊಸ ತೆರಿಗೆಯನ್ನು ವಿಧಿಸಬೇಕಾಗುತ್ತದೆಂದು ಹೇಳುತ್ತಾರೆ. ಹೀಗೆ ಮಾಡುವಾಗ ನಾವು ವಿರೋಧ ಪಕ್ಷದಲ್ಲಿರುವವರು ಸರ್ಕಾರವನ್ನು ವಿರೋಧಿಸಿ ಎಷ್ಟೇ ಮಾತನಾಡಿದರೂ, ಸರ್ಕಾರದವರು ಮಸೂದೆಗಳನ್ನು ಮಾಡಕೂಡದೆಂದು ನಾವು ಈ ರೀತಿಯ ಮಾರ್ಗವನ್ನು ಅನುಸರಿಸುತ್ತಿಲ್ಲ. ಒಂದು ತೆರಿಗೆಯನ್ನು ಹಾಕಬೇಕೆಂದು ಅವರು ತಂದರೆ ಎಲ್ಲಿ ಅದನ್ನು ಹಾಕುವುದು, ಯಾರ ಮೇಲೆ ಆ ಹೊರೆಯನ್ನು

ಹೇರುವುದು ಎಂದು ಯೋಚನೆ ಮಾಡಿ ನೋಡಿದರೆ, ಅವಕಾಶವೇ ಸಿಕ್ಕುವುದಿಲ್ಲ. ನಾವು ಒಪ್ಪಲಿ ಅಥವಾ ಒಪ್ಪದೆ ಇರಲಿ ನಾವು ಮಾಡಿದ್ದನ್ನು ಮಾಡಿಯೇ ಮಾಡುತ್ತೇವೆಂಬ ಧೋರಣೆಯನ್ನು ಸರ್ಕಾರ ತೋರಿಸಿದರೆ ಅದರಿಂದ ಒಳ್ಳೆಯದಾಗುವುದಿಲ್ಲ. ವೆಲ್‌ಫೇರ್ ಸ್ಟೇಟ್ ಎಂದು ಹೇಳುವಾಗ ಅನೇಕ ತೆರಿಗೆಗಳನ್ನು ನಾವು ಹೊರಬೇಕಾಗುತ್ತದೆ ನೀಜ. ಆದರೆ ತೆರಿಗೆ ಹಾಕುವಾಗ ಪ್ರಜಾಭಿಪ್ರಾಯವನ್ನೂ ತಿಳಿಯದೆ ಪ್ರಜೆಗಳ ಪ್ರತಿನಿಧಿಗಳಾಗಿ ಬಂದಿರತಕ್ಕ ಸದಸ್ಯರ ಅಭಿಪ್ರಾಯವನ್ನು ಅರಿಯದೆ, ನಾವು ಹೆಚ್ಚಿನ ಸಂಖ್ಯೆಯಲ್ಲಿದ್ದೇವೆ ಎಂಬ ಒಂದು ಧೋರಣೆಯಿಂದ ಹೊರಟರೆ, ಅದು ಒಳ್ಳೆಯದಲ್ಲ. ಇರತಕ್ಕ ಹಣದಲ್ಲಿ ಜನರ ಮೇಲೆ ಹೆಚ್ಚು ತೆರಿಗೆಯನ್ನು ಹಾಕದೆ, ಖರ್ಚು ಕಡಿಮೆ ಮಾಡಿ ಆಯವ್ಯಯವನ್ನು ಸರಿತೂಗಿಸುವುದಕ್ಕೆ, ವೆಲ್‌ಫೇರ್ ಸ್ಟೇಟಿನಲ್ಲಿ ಸಾಧ್ಯವಿದೆ. ಮೊದಲಿನಿಂದಲೂ ಒಂದೊಂದು ಸರ್ಕಾರ ಬಂದಾಗ ಒಂದೊಂದು ಎಕ್ಸ್‌ಪೆರಿಮೆಂಟ್ ಎಂದರೆ ಪರೀಕ್ಷಾ ಪ್ರಯೋಗ ಮಾಡುತ್ತಾ ಬಂದರು. ಬುಲ್‌ಡೋಜರುಗಳ ಪ್ರಯೋಗವಾಯಿತು, ರೇಡಿಯೋಗಳನ್ನು ಹಳ್ಳಿಯವರಿಗೆ ಕೊಟ್ಟಿದ್ದಾಯಿತು - ಇದರಲ್ಲಿ ಎಷ್ಟು ಉಳಿದಿದೆಯೋ ಏನೋ, ಏನಾಗಿದೆಯೋ ಗೊತ್ತಿಲ್ಲ - ಆಮೇಲೆ ಸಂಸ್ಕೃತಿ ಪ್ರಸಾರವೂ ನಮ್ಮ ಒಪ್ಪಿಗೆ ಇಲ್ಲದೆ ಪ್ರಾರಂಭವಾಯಿತು. ಬೇರೊಂದು ಲೆಜಿಸ್ ಲೇಚರ್ ಕಟ್ಟಡವನ್ನು, ನಾವು ಒಂದು ಭವ್ಯವಾದ ಮಂದಿರದಲ್ಲಿರಬೇಕೆಂದು ಆಸೆಪಟ್ಟು ಕಟ್ಟಲು ಪ್ರಾರಂಭ ಮಾಡಿದರು. ಹೀಗೆ ದೇಶ ಕಷ್ಟದಲ್ಲಿರುವಾಗ ಸರ್ಕಾರದ ಹಣಕಾಸಿನ ಪರಿಸ್ಥಿತಿ ಕಷ್ಟವಾಗಿರುವಾಗ ಇದನ್ನು ಮಾಡುವುದೆ! ಮೊದಲು ಯಾವುದು ಹೆಚ್ಚು ಉತ್ಪತ್ತಿ ಕೊಡುತ್ತದೆ ಎಂಬುದನ್ನು ನೋಡಿ ಅಂಥ ಕೆಲಸಗಳನ್ನು ಕೈಗೊಳ್ಳುವುದನ್ನು ಬಿಟ್ಟು ಇದನ್ನೆಲ್ಲಾ ಮಾಡುವುದೆ? ಮೊದಲು ಇರುವ ಕಟ್ಟಡಗಳಲ್ಲೇ ಮಾಡುತ್ತಿರಲಿಲ್ಲವೆ? ಶೇಷಾದ್ರಿ ಮೆಮೋರಿಯಲ್ ಹಾಲ್ ಇದೆ. ಮೈಸೂರಿನಲ್ಲಿ ಕ್ರಾಫರ್ಡ್ ಹಾಲ್ ಇದೆ, ಜಗನ್ಮೋಹನ ಪ್ಯಾಲೇಸ್ ಇದೆ. ಸದ್ಯಕ್ಕೆ ನಮ್ಮ ಸಭೆಯ ಕಾರ್ಯ ಕಲಾಪಗಳನ್ನು ಇರುವ ಕಟ್ಟಡದಲ್ಲೇ ನಡೆಸಿಕೊಳ್ಳುವುದು ಸಾಧ್ಯವೆಂದು ಹೇಳಿದರೂ ಕೂಡ ಹೊಸಕಟ್ಟಡವನ್ನು ಇಷ್ಟು ದೊಡ್ಡ ಖರ್ಚಿನಿಂದ ಏಕೆ ಕಟ್ಟಿಸಬೇಕು, ಅನಿವಾರ್ಯವಾದ ಖರ್ಚಾದರೆ ಮಾಡಬೇಕೆ ಹೊರತು ಮಿಕ್ಕದಕ್ಕೆ ಏಕೆ ಮಾಡಬೇಕು? ನೀರಾವರಿ ಕೆಲಸಗಳಲ್ಲಿ ಯಾವುದನ್ನು ಮೊದಲು ಮಾಡಬೇಕು, ಯಾವುದನ್ನು ನಿಧಾನವಾಗಿ ಮಾಡಬೇಕು ಎಂಬ ವಿವೇಚನೆಯನ್ನು ಉಪಯೋಗಿಸದೆ, ಒಂದೇ ಸಾರಿ ಎಲ್ಲಾ ಯೋಜನೆಗಳನ್ನು ತೆಗೆದುಕೊಂಡಿದ್ದಾರೆ. ........... ಸಣ್ಣ ನೀರಾವರಿ ಯೋಜನೆ ತೆಗೆದುಕೊಂಡು ಅವುಗಳನ್ನು ಒಂದೇ ವರ್ಷ ಪೂರ್ತಿ ಮಾಡಿ ಅದರಿಂದ ಬರತಕ್ಕ ಉತ್ಪತ್ತಿಯನ್ನು ಹಾಕಿ ಬೇರೆ ಯೋಜನೆಗಳನ್ನು ಕಾರ್ಯಗತ ಮಾಡುವುದಕ್ಕೆ ಸಾಧ್ಯವಾದೀತೆಂದು ಅನೇಕರು ಅಭಿಪ್ರಾಯಪಟ್ಟರು. ಆ ರೀತಿ ಅಭಿಪ್ರಾಯಪಟ್ಟವರಲ್ಲಿ ನಾನು ಒಬ್ಬನು. ಪ್ರಜಾಪ್ರತಿನಿಧಿಗಳಿಂದ ಬಂದಿರುವ ಅಭಿಪ್ರಾಯವನ್ನು ಕ್ರೋಢೀಕರಿಸಿ ಯಾವುದನ್ನು ಮೊದಲು ಕೈಗೊಳ್ಳಬೇಕು, ಯಾವುದು ಬೇಡ ಎಂಬುದನ್ನು ನಿರ್ಧರಿಸಬೇಕೆಂಬ ಮನೋಭಾವವನ್ನು ಸರ್ಕಾರ ತೋರಿಸುತ್ತಿಲ್ಲ. ವಿವೇಚನೆಯಿಂದ ಖರ್ಚು ಮಾಡುತ್ತಿಲ್ಲವಾದುದರಿಂದ ಇಂಥ ಸರ್ಕಾರಕ್ಕೆ ಬೆಂಬಲ ಕೊಡುವುದು ನ್ಯಾಯವಲ್ಲ. ಆದಕಾರಣ ಈ ಮಸೂದೆಯನ್ನು ವಿರೋಧಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಐ.ವಿ.ಸಿ. ರಸ್ತೆಗಳಿಗೆ ಹೆಚ್ಚು ಹಣಕ್ಕಾಗಿ ಒತ್ತಾಯ *

ಶ್ರೀ ಬಿ. ರಾಚಯ್ಯ (ಯಳಂದೂರು) ಈ ಖೋತಾ ಸೂಚನೆಯನ್ನು ಮಂಡಿಸುತ್ತೇನೆ. 50 ಸಿವಿಲ್ ಕಾಮಗಾರಿಗಳು ಎಂಬ ಬಾಬಿನಲ್ಲಿ ಕೋರಿರತಕ್ಕ 15,20,500 ರೂಪಾಯಿಗಳ ಡಿಮ್ಯಾಂಡ್ ಮನವಿಯ ಸಂದರ್ಭದಲ್ಲಿ 100 ರೂಪಾಯಿಗಳನ್ನು ಕಡಿಮೆ ಮಾಡಬೇಕು (ಚಾಮರಾಜನಗರ ಮತ್ತು ಯಳಂದೂರು ತಾಲ್ಲೂಕುಗಳಲ್ಲಿ ರಸ್ತೆಗಳು ಬಹಳ ಹೀನಸ್ಥಿತಿಯಲ್ಲಿರುವುದರ ವಿಷಯದಲ್ಲಿ ಚರ್ಚೆ ನಡೆಯುವಂತೆ ಮಾಡುವುದಕ್ಕಾಗಿ).

ಸ್ವಾಮಿ ಚಾಮರಾಜನಗರ ಮತ್ತು ಯಳಂದೂರು ತಾಲ್ಲೂಕುಗಳಲ್ಲಿ ವಿಶೇಷ ಮಳೆ ಬಂದುದರಿಂದಲೂ ಮತ್ತು ವಾಹನಗಳ ಸಂಚಾರ ಹೆಚ್ಚಾಗಿರುವುದರಿಂದಲೂ ಅಲ್ಲಿರತಕ್ಕ ರಸ್ತೆಗಳು ಎಂದರೆ ಚಾಮರಾಜನಗರದಿಂದ ಟಿ. ನರಸೀಪುರದ ಮಾರ್ಗವಾಗಿ ಬರುವ ರಸ್ತೆ ಚಾಮರಾಜನಗರ - ಸತ್ಯಮಂಗಲ ರಸ್ತೆ, ಯಳಂದೂರು ಮಾರ್ಗವಾಗಿ ಸಂತೇಮರಹಳ್ಳಿಯಿಂದ ಕೊಳ್ಳೇಗಾಲಕ್ಕೆ ಹೋಗುವ ರಸ್ತೆಗಳು ಮತ್ತು ಡಿಸ್ಟ್ರಿಕ್ಟ್ ಬೋರ್ಡಿನವರ ಆಡಳಿತದಲ್ಲಿರುವ ರಸ್ತೆಗಳು ಬಹಳ ಹೀನಸ್ಥಿತಿಯಲ್ಲಿವೆ. ಅದರಲ್ಲಿಯೂ ಡಿಸ್ಟ್ರಿಕ್ಟ್ ಬೋರ್ಡಿನಿಂದ ಮೇನ್‌ಟೇನ್ ಮಾಡುತ್ತಿರುವ ರಸ್ತೆಗಳು ಬಹಳ ಹೀನಸ್ಥಿತಿಯಲ್ಲಿವೆ. ಅಲ್ಲಿ ಜಿಲ್ಲಾ ಬೋರ್ಡ್ ರಸ್ತೆ ಎಂಬ ಬೋರ್ಡ್‌ನ್ನು ಮಾತ್ರ ನೋಡುತ್ತೇವೆ. ಅಲ್ಲಿ ರಸ್ತೆಗಳಿವೆಯೋ, ಇಲ್ಲವೋ ಎಂಬ ಅನುಮಾನ ಬರುತ್ತದೆ. ಪಬ್ಲಿಕ್ ವರ್ಕ್ಸ್ ಇಲಾಖೆಯವರನ್ನು ಕೇಳಿದರೆ, ಈಗ ಕೆಲವು ರಸ್ತೆಗಳನ್ನು ಡಿಸ್ಟ್ರಿಕ್ಟ್ ಬೋರ್ಡಿಗೆ ಕೊಡುತ್ತಿದ್ದೇವೆ. ಆದ್ದರಿಂದ ಮಾಡಿಸಿಲ್ಲ ಎಂದು ಹೇಳುತ್ತಾರೆ; ಡಿಸ್ಟ್ರಿಕ್ಟ್ ಬೋರ್ಡಿನವರನ್ನು ಕೇಳಿದರೆ, ಕೆಲವು ರಸ್ತೆಗಳನ್ನು ಸರ್ಕಾರಕ್ಕೆ ವಹಿಸುತ್ತಿರುವುದರಿಂದ ಯಾವ ರಸ್ತೆಗಳ ಕೆಲಸವನ್ನು ತೆಗೆದುಕೊಳ್ಳುವುದೂ ಕಷ್ಟವಾಗಿದೆ ಎಂದು ಹೇಳುತ್ತಿದ್ದಾರೆ. ಈ ಮಧ್ಯದಲ್ಲಿ ಯಾವ ಕೆಲಸವೂ ನಡೆಯುತ್ತಿಲ್ಲ. ಈ ಸ್ಥಳಗಳು ಕಪ್ಪುಮಣ್ಣಿನಿಂದ ಕೂಡಿರುವುದರಿಂದ ಇಲ್ಲಿ ಹೆಚ್ಚಾಗಿ ಮಳೆಗಾಲದಲ್ಲಿ ರಸ್ತೆಗಳು ಕೆಸರಿನಿಂದ ಕೂಡಿರುತ್ತವೆ. ಇದರಿಂದ ಜನರ ಮತ್ತು ವಾಹನಗಳ ಸಂಚಾರಕ್ಕೆ ಬಹಳ ಕಷ್ಟವಾಗಿದೆ. ಯಳಂದೂರಿನಿಂದ ಬಿಳಿಗಿರಿರಂಗನ ಬೆಟ್ಟಕ್ಕೆ ಒಂದು ರಸ್ತೆಯನ್ನು ಮಾಡಿಸಬೇಕೆಂದು ಈಗಾಗಲೇ ಅಂದಾಜು ತಯಾರಾಗಿ ಸರ್ಕಾರ ಅವಗಾಹನೆಗೆ ಬಂದಿದೆ. ಆದರೂ ಕೂಡ ನಾಲ್ಕೈದು ವರ್ಷಗಳಿಂದಲೂ ಇದನ್ನು ಮಾಡಿಸುತ್ತೇವೆಂದು ಹೇಳುತ್ತಿದ್ದಾರೆಯೇ ಹೊರತು ಈ ಪ್ರದೇಶದಲ್ಲಿ ಯಾವ ಯಾವ ಹೊಸ ರಸ್ತೆಯನ್ನೂ ಮಾಡುತ್ತಿಲ್ಲ.

ಎರಡನೆಯದಾಗಿ, ದೊಡ್ಡರಾಯ ಪೇಟೆಯಿಂದ ಕುಡ್ಲೂರು, ಆಲೂರಿನಿಂದ ಕಾಗಲವಾಡಿಗೆ ಜಿಲ್ಲಾ ಬೋರ್ಡ್ ರಸ್ತೆ ಮಾಡಿದ್ದಾರೆ. ಆ ರಸ್ತೆಯಲ್ಲಿ ಒಂದು ಸೇತುವೆಯನ್ನು ಕಟ್ಟಬೇಕೆಂದು ಒಂದು ಅಂದಾಜು ತಯಾರಾಗಿತ್ತು. ಕಳೆದ ಅಕ್ಟೋಬರ್ ಅಧಿವೇಶನದಲ್ಲಿ ಮಾನ್ಯ ಮಂತ್ರಿಗಳು, ಕೂಡಲೇ ಈ ಸೇತುವೆಯ ಕೆಲಸವನ್ನು ತೆಗೆದುಕೊಳ್ಳಲು ಸೂಪರಿಂಟೆಂಡಿಂಗ್ ಇಂಜಿನಿಯರಿಗೆ ಬರೆಯುವುದಾಗಿ ಹೇಳಿ 116ನೆಯ ಪ್ರಶ್ನೆಗೆ ಉತ್ತರವನ್ನು ಕೊಟ್ಟಿದ್ದರು. ಆದರೂ ಕೂಡ ಇದುವರೆಗೂ

---

* ವಿಧಾನ ಸಭಾ ನಡವಳಿಕೆ ದಿನಾಂಕ 17ನೇ ಜುಲೈ, 1953 ಪುಟ 2258-2259

ಆ ಸಂಬಂಧವಾಗಿ ಯಾವ ಕೆಲಸ ಕಾರ್ಯಗಳೂ ನಡೆದಿಲ್ಲದಿರುವುದನ್ನು ನೋಡಿದರೆ ಬಹಳ ವಿಷಾದವಾಗುತ್ತದೆ. ಮೈಸೂರು ಜಿಲ್ಲೆಯಲ್ಲಿ ಈಗಾಗಲೇ ಆರು ಸೇತುವೆಗಳಾಗಿವೆ. ಆದುದರಿಂದ ಸುವರ್ಣಾವತಿಗೆ ಸೇತುವೆಯನ್ನು ಕಟ್ಟಿದರೆ ಖರ್ಚು ಹೆಚ್ಚಾಗುತ್ತದೆಂದು ಸೂಪರಿಂಟೆಂಡಿಂಗ್ ಇಂಜಿನಿಯರು ಬರೆದಿದ್ದಾರೆಂದು ತಿಳಿದು ಬಂದಿದೆ. ಸುವರ್ಣಾವತಿ ನದಿ ಹರಿಯುವುದು ಮೈಸೂರು ದೇಶದಲ್ಲಿ. ಯಳಂದೂರು, ಚಾಮರಾಜನಗರ ತಾಲ್ಲೂಕುಗಳಲ್ಲಿ ನದಿಯ ಎರಡು ಕಡೆ ಇರುವ ಹಳ್ಳಿಗಾಡಿನ ಜನರು ಸಂಚಾರ ಮಾಡಬೇಕಾದರೆ ಚಂದಕವಾಡಿ ಸೇತುವೆಯನ್ನು ಸುತ್ತಿಕೊಂಡು ಬರಬೇಕಾಗಿದೆ. ಮೂವತ್ತು ಮೈಲಿ ದೂರ ಹೆಚ್ಚಾಗಿ ಸುತ್ತಿಕೊಂಡು ಬರಬೇಕಾಗಿದೆ. ಇದರಿಂದ ಬಹಳ ಕಷ್ಟವಾಗಿದೆ.

ಐ.ವಿ.ಸಿ. ರಸ್ತೆಗಳಿಗೆ ಹೆಚ್ಚು ಹಣ ಒದಗಿಸಬೇಕೆಂದು ಆಗಾಗ ಕೇಳುತ್ತಿದ್ದೇವೆ. ನಮ್ಮ ಪ್ರದೇಶದಿಂದ ಬರುತ್ತಿರುವ ಇತರರೂ ಕೇಳುತ್ತಿದ್ದಾರೆ. ಆದರೂ ಏನೂ ಮಾಡಿಲ್ಲ. ಆ ಪ್ರದೇಶದಿಂದ ಕಾಂಗ್ರೆಸ್ ಸದಸ್ಯರು ಬಂದಿಲ್ಲವೆಂತಲೋ ಏನೋ, ನಮ್ಮ ಮಾತಿಗೆ ಮನ್ನಣೆ ಕೊಡಬಾರದೆಂದು ಭಾವನೆಯಿಂದಲೋ ಏನೋ ಯಾವುದನ್ನು ಮಾಡಿಲ್ಲ.

**Mr. Speaker:** What is the estimate of that project ?

ಶ್ರೀ ಬಿ. ರಾಚಯ್ಯ: ಒಂದು ಲಕ್ಷ ಹದಿಮೂರು ಸಾವಿರ ರೂಪಾಯಿಗಳು. ತಾವೂ ಸಹ ಹಿಂದೆ ಆಲೂರಿಗೆ ಕಾಲು ನಡಿಗೆಯಲ್ಲೇ ಬಂದಿದ್ದೀರಿ, ಆ ವೇಳೆಯಲ್ಲಿ ತಾವೂ ಸಹ ಇದನ್ನು ಮಾಡಿಸಿಕೊಡುವುದಾಗಿ ವಾಗ್ದಾನ ಮಾಡಿದ್ದೀರಿ. ಆಗ ಇದಕ್ಕೆ ಒಂದು ಲಕ್ಷ 13 ಸಾವಿರದ ಅಂದಾಜು ತಯಾರಿಸಲಾಗಿತ್ತು. ಇದು ಬಹಳ ಅವಶ್ಯಕವಾದ ಸೇತುವೆ. ಈ ಸೇತುವೆ ಆಗಬೇಕಾದುದು ಅವಶ್ಯಕವೆಂದು ತಾವು ಕೂಡ ಆಗ ಒಪ್ಪಿಕೊಂಡಿದ್ದೀರಿ.

**Sri Kadidal Manjappa:** The cut motion relates to the condition of roads and the member is talking about projects.

ಶ್ರೀ ಬಿ. ರಾಚಯ್ಯ: ಆ ರೋಡಿನ ಮಧ್ಯದಲ್ಲೇ ಈ ಸೇತುವೆ ಇರುವುದು ತಾವು ಹಿಂದೆ ಮಾಡಿರತಕ್ಕ ವಾಗ್ದಾನವನ್ನು ಉಳಿಸಿಕೊಳ್ಳತಕ್ಕ ಬಗ್ಗೆ ಈ ಕೆಲಸವನ್ನು ಈ ವರ್ಷವೇ ಕೈಗೊಳ್ಳಬೇಕೆಂದು ಸರ್ಕಾರದವರನ್ನು ಒತ್ತಾಯಪಡಿಸತಕ್ಕ ಬಗ್ಗೆ ನಾನೀಗ ಈ ಖೋತಾ ಸೂಚನೆಯನ್ನು ಸಭೆಯ ಮುಂದೆ ಮಂಡಿಸುತ್ತೇನೆ.

## ಕೈಗಾರಿಕೆ ಇಲಾಖೆಯ ಮೇಲಿನ ಚರ್ಚೆ *

ಶ್ರೀ ಬಿ. ರಾಚಯ್ಯ (ಯಳಂದೂರು) ಈ ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟಿನ ವಿಚಾರವಾಗಿ ಮಾತನಾಡುವಾಗ ಒಂದು ಮುಖ್ಯವಾದ ಅಂಶವನ್ನು ತಿಳಿಸಬೇಕಾಗಿದೆ. ಈ ಇಂಡಸ್ಟ್ರೀಸ್ ಸ್ಥಾಪನೆ ಮಾಡತಕ್ಕದ್ದು ಯಾವ ಉದ್ದೇಶದಿಂದ ಎಂಬುದನ್ನು ನಾವು ಆಲೋಚನೆ ಮಾಡಬೇಕಾಗಿದೆ. ಇದರಲ್ಲಿ ಮುಖ್ಯವಾದದ್ದು ಮೊದಲನೆಯದು ದೇಶದ ಸಂಪತ್ತನ್ನು ಹೆಚ್ಚು ಮಾಡತಕ್ಕದ್ದು, ಎರಡನೆಯದು ದೇಶದಲ್ಲಿ ಜನಗಳಿಗೆ ಉದ್ಯೋಗವನ್ನು ಒದಗಿಸುವುದು. ಈ ಎರಡು ಮೂಲ ಉದ್ದೇಶಗಳನ್ನಿಟ್ಟುಕೊಂಡು ಈ ಇಂಡಸ್ಟ್ರೀಸನ್ನು ಸ್ಥಾಪನೆ ಮಾಡುತ್ತೇವೆ. ಈಗ ನಮ್ಮ ದೇಶದಲ್ಲಿ ಪ್ಲಾನಿಂಗ್ ಕಮಿಷನ್ನಿನವರು ಈ ಎರಡು ಉದ್ದೇಶಗಳನ್ನಿಟ್ಟುಕೊಂಡು ಅವರ ಪ್ಲಾನು ತಯಾರು ಮಾಡಿದ್ದಾರೆ. ಅದರಲ್ಲಿ ಇರತಕ್ಕ ಮುಖ್ಯವಾದ ಅಂಶ ಯಾವುದು ಎಂದರೆ ಜನಗಳಿಗೆ ಉದ್ಯೋಗವನ್ನು ಕಲ್ಪಿಸುವುದು. ಉದ್ಯೋಗವನ್ನು ಕಲ್ಪಿಸತಕ್ಕ ವಿಷಯದಲ್ಲಿ ಹೆಚ್ಚು ಗಮನ ಕೊಡಬೇಕು. ಯಾವ ಯಾವ ಉದ್ಯೋಗವನ್ನು ಯಾವ ಯಾವ ಜನಗಳಿಗೆ ಯಾವ ಯಾವ ರೀತಿ ಏರ್ಪಡಿಸಬೇಕೆಂಬ ವಿಷಯವನ್ನು ಆಯಾ ಸಂಸ್ಥಾನಗಳ ಸರ್ಕಾರದವರೇ ಆಲೋಚನೆ ಮಾಡಬೇಕೆಂಬುದಾಗಿ ಸೂಚನೆ ಕೊಟ್ಟಿದ್ದಾರೆ. ತಮಗೆಲ್ಲರಿಗೂ ತಿಳಿದಿರುವಂತೆ ನಿರುದ್ಯೋಗ ಸಮಸ್ಯೆ ಬಹಳ ತೊಡಕಾದ ಸಮಸ್ಯೆ. ಇದು ಬಹಳ ಕಠಿಣವಾದ ಸ್ಥಿತಿಯನ್ನು ತಾಳುತ್ತಾ ಇದೆ. ನಮಗೆ ಸರ್ಕಾರದವರು ಒದಗಿಸಿದ ಒಂದು ಉತ್ತರದಲ್ಲಿ ಹೋದ ವರ್ಷಕ್ಕಿಂತ ಈ ವರ್ಷ ನಿರುದ್ಯೋಗಿಗಳ ಸಂಖ್ಯೆ ಜಾಸ್ತಿಯಾಗಿದೆ. ಸುಮಾರು 10 ಸಾವಿರದಷ್ಟು ಜನರು ಸರ್ಕಾರಿ ನೌಕರಿಗಳಿಗೆ ಅರ್ಜಿ ಹಾಕಿಕೊಂಡಿದ್ದಾರೆ ಎಂದು ತಿಳಿಸಿದರು. ಇದರಿಂದ ಈ ನಿರುದ್ಯೋಗ ಇರತಕ್ಕದ್ದು ಎಷ್ಟು ಪ್ರಮಾಣದಲ್ಲಿ ಏರುತ್ತಾ ಇದೆ ಎಂಬುದನ್ನು ನಾವು ಆಲೋಚನೆ ಮಾಡಬಹುದು. ಈಗ ಸರ್ಕಾರದವರು ಆಹಾರ ಇಲಾಖೆಯಲ್ಲಿ ರೇಷನಿಂಗ್ ವಜಾ ಮಾಡಿದ್ದರಿಂದ ಅನೇಕರನ್ನು ಮನೆಗೆ ಕಳುಹಿಸಬೇಕಾದ ಪ್ರಸಂಗ ಬಂದಿದೆ. ಈಗಾಗಲೇ ಅನೇಕರನ್ನು ಮನೆಗೆ ಕಳುಹಿಸಿದ್ದಾರೆ. ಇಂಥ ವಿಷಯದಲ್ಲಿ ನಾವು ಯಾವ ರೀತಿಯಾಗಿ ಅವರಿಗೆ ಉದ್ಯೋಗವನ್ನು ಕಲ್ಪಿಸಬಹುದೆಂಬುದನ್ನು ಯೋಚನೆ ಮಾಡಬೇಕಾಗಿದೆ. ನಾವು ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡಿ ಅನೇಕ ದೊಡ್ಡ ದೊಡ್ಡ ಕೈಗಾರಿಕೆಗಳನ್ನು ಸ್ಥಾಪನೆ ಮಾಡಿದ್ದೇವೆ. ಆದರೆ ಈಗ ನಾವು ಮಧ್ಯಮ ತರಗತಿಯವರಿಗೆ ಅವರ ವೃತ್ತಿಗೆ ತಕ್ಕಂತೆ, ಅವರ ಅರ್ಹತೆಗೆ ತಕ್ಕಂತೆ, ಅವರವರ ಯೋಗ್ಯತೆಗೆ ತಕ್ಕಂತೆ, ಹೊಸ ಹೊಸ ಕೈಗಾರಿಕೆಗಳನ್ನು ಸ್ಥಾಪನೆ ಮಾಡಬೇಕಾಗಿದೆ. ಆ ರೀತಿ ಮನೆಗಳಲ್ಲಿದ್ದುಕೊಂಡು ಯಾವ ಕೈಗಾರಿಕೆಗಳನ್ನು ಮಾಡಬಹುದು ಎಂಬುದನ್ನು ನಾವು ಚೆನ್ನಾಗಿ ಆಲೋಚನೆ ಮಾಡಬೇಕು. ಇವತ್ತಿನ ದಿವಸ ನಾವು ಮಾಡತಕ್ಕ 5 ನಿಮಿಷದ ಭಾಷಣದಲ್ಲಿ ಹೇಗೆ ಈ ಕೆಲಸಗಳನ್ನೆಲ್ಲಾ ಮಾಡಬಹುದು ಎಂಬುದನ್ನು ಹೇಳಬೇಕಾದರೆ ಸಾಧ್ಯವಾಗುವುದಿಲ್ಲ. ಇದು ಅತ್ಯಧಿಕವಾದ ಸಮಸ್ಯೆ ಇದನ್ನು ಸರ್ಕಾರದವರೇ ಆಲೋಚನೆ ಮಾಡಬೇಕು. ಮಧ್ಯಮ ತರಗತಿಯವರ ಸ್ಥಿತಿ ದಿನ ದಿನಕ್ಕೆ

* ವಿಧಾನ ಸಭಾ ನಡವಳಿಕೆ ದಿನಾಂಕ 26ನೇ ಮಾರ್ಚ್, 1954 ಪುಟ 1333-1334

ಶೋಚನೀಯ ಸ್ಥಿತಿಗೆ ಬರುತ್ತಾ ಇದೆ. ಅವರ ಮಟ್ಟ ಕೆಳಕ್ಕೆ ಹೋಗುತ್ತಾ ಇದೆ. ಇದನ್ನು ಯಾವ ರೀತಿ ತಪ್ಪಿಸಬೇಕು, ಯಾವ ಯಾವ ಹೊಸ ಉದ್ಯೋಗಗಳನ್ನು ಒದಗಿಸಬೇಕು, ಹೊಸ ಉದ್ಯೋಗಗಳನ್ನು ಅವಲಂಬಿಸಬೇಕಾದರೆ ಅವರಿಗೆ ಯಾವ ಸೌಕರ್ಯಗಳನ್ನು ಒದಗಿಸಬೇಕು ಎಂಬುದನ್ನೆಲ್ಲಾ ಆಲೋಚನೆ ಮಾಡಬೇಕು. ಪ್ಲಾನಿಂಗ್ ಕಮಿಷನ್‌ನವರ ಪುಸ್ತಕ ನನ್ನ ಹತ್ತಿರ ಇಲ್ಲ. ಅದರಲ್ಲಿ ಇದನ್ನೆಲ್ಲಾ ಸೂಚನೆ ಮಾಡಿದ್ದಾರೆ.

ನಿರುದ್ಯೋಗಿಗಳ ಒಂದು ತಃಖ್ತೆ ತಯಾರು ಮಾಡಿ ಯಾರು ಯಾರಿಗೆ ಯಾವ ಉದ್ಯೋಗ ಕಲ್ಪಿಸಬಹುದು, ಎಷ್ಟೆಷ್ಟು ಸಹಾಯ ಮಾಡಬಹುದು ಎಂಬುದನ್ನು ಸರಿಯಾಗಿ ಒಂದು ಶಾಸ್ತ್ರೀಯವಾದ ರೀತಿಯಲ್ಲಿ ಆಲೋಚನೆ ಮಾಡಬೇಕು. ಇದಕ್ಕೆ ಒಂದು ಸಮಿತಿಯನ್ನು ರಚನೆ ಮಾಡಬೇಕೆಂದು ಹೇಳಿದ್ದಾರೆ. ಈ ರೀತಿ ಮಾಡಬೇಕಾದ ಅಗತ್ಯವಿದೆ ಎಂಬುದಕ್ಕೆ ಕಾರಣ ಹೇಳುತ್ತೇನೆ. ಈ ವಿದ್ಯಾವಂತ ನಿರುದ್ಯೋಗಿಗಳ ಸಮಸ್ಯೆಯನ್ನು ಪರಿಹಾರ ಮಾಡಬೇಕಾದರೆ ಆ ರೀತಿ ಎಷ್ಟು ಜನ ಇದ್ದಾರೆ ಎಂಬ ತಃಖ್ತೆ ತಯಾರು ಮಾಡಿ ಉದ್ಯೋಗಗಳನ್ನು ಕಲ್ಪಿಸಿಕೊಳ್ಳಲು ಅವರಿಗೆ ಧನಸಹಾಯ ಮಾಡಬೇಕು. ಅವರಿಗೆ ಎಷ್ಟು ಹಣ ಬೇಕಾಗುತ್ತದೆಯೋ ಅಷ್ಟು ಹಣವನ್ನು ಸಾಲದ ರೂಪವಾಗಿ ಕೊಟ್ಟು ಅದನ್ನು ಸುಲಭವಾದ ಕಂತುಗಳಲ್ಲಿ ವಸೂಲು ಮಾಡಿಕೊಳ್ಳಬಹುದು. ಈ ಕೆಲಸ ಬಹಳ ತುರ್ತಾಗಿ ಆಗಬೇಕೆಂಬುದಾಗಿ ಅನೇಕರು ಹೇಳಿದ್ದಾರೆ. ಈ ವಿಷಯಕ್ಕೆ ಸರ್ಕಾರದವರು ಗಮನ ಕೊಡಬೇಕು. ಬೆಂಗಳೂರು ನಗರದಲ್ಲಿ ನಿರುದ್ಯೋಗ ಸಮಸ್ಯೆ ಎಂಬುದು ಬಹಳವಾಗಿ ವಿಷಮಿಸುತ್ತಾ ಇದೆ. ಈಗಾಗಲೇ ಒಂದು ದಿವಸಕ್ಕೆ ಏನಿಲ್ಲಾ ಎಂದರೂ ಹತ್ತು ಇಪ್ಪತ್ತು ಜನ ಹೆಚ್ಚಾಗುತ್ತಾ ಇದ್ದಾರೆ. ಇದನ್ನು ಲೆಕ್ಕಾಚಾರ ಮಾಡಿದರೆ ವರ್ಷಕ್ಕೆ ಎಷ್ಟಾಗುತ್ತದೆ ಎಂಬುದನ್ನು ಗಮನಿಸಬೇಕು. ಆದ್ದರಿಂದ ನಿರುದ್ಯೋಗಕ್ಕೂ ಕೈಗಾರಿಕೆಗಳ ಬೆಳವಣಿಗೆಗೂ ಎಷ್ಟು ನಿಕಟ ಸಂಬಂಧವಿದೆ ಎಂಬುದನ್ನು ಸರ್ಕಾರದವರು ಚೆನ್ನಾಗಿ ಆಲೋಚನೆ ಮಾಡಬೇಕು. ಅದಕ್ಕೆ ಈ ಸಭೆಯಲ್ಲಿರತಕ್ಕ ಅನೇಕ ಮಾನ್ಯ ಸದಸ್ಯರು ಮತ್ತು ಅನುಭವ ಶಾಲಿಗಳಾಗಿರತಕ್ಕವರನ್ನೊಳಗೊಂಡ ಒಂದು ಸಮತಿಯನ್ನು ರಚನೆ ಮಾಡಿ ತುರ್ತಾಗಿ ಗಮನ ಕೊಡಬೇಕೆಂಬುದಾಗಿ ಪ್ರಾರ್ಥಿಸುತ್ತೇನೆ.

ಸ್ವಾಮಿ ಸರ್ಕಾರದಿಂದ ನೇರವಾಗಿ ತಂದಿರತಕ್ಕಂಥ ಇಂಡಸ್ಟ್ರೀಯಲ್ ಕನ್‌ಸರ್ನ್‌ಗಳು - ಎಂದರೆ Government aided Industrial concerns ಗಳು ಸರ್ಕಾರದವರು ಹೆಚ್ಚಿನ ನಿಗ ತೆಗೆದುಕೊಳ್ಳದೆ ಸರಿಯಾದ ರೀತಿಯಲ್ಲಿ ನಡೆಸುತ್ತಿಲ್ಲ. ಸರ್ಕಾರದವರು ಹಾಕಿರುವ ಬಂಡವಾಳದ ಮೇಲೆ ಹೆಚ್ಚಿನ ಉತ್ಪತ್ತಿ ಬರುವ ರೀತಿಯಲ್ಲಿ ಕೆಲಸ ಕಾರ್ಯಗಳನ್ನು ನಡೆಸುತ್ತಾ ಇಲ್ಲ ಎಂದು ಹೇಳುವುದಕ್ಕೋಸ್ಕರ ಈಗ ಸಭೆಯ ಮುಂದೆ ನಿಂತಿದ್ದೇನೆ ಸರ್ಕಾರ ಯಾವ ಯಾವ ಇಂಡಸ್ಟ್ರೀಯಲ್ concern ಮೇಲೆ ಹೆಚ್ಚಿನ ಹಣವನ್ನು ಹಾಕಿದೆಯೋ ಅಂಥ ಕಂಪನಿಗಳಲ್ಲಿ ಸರ್ಕಾರದ ಒಬ್ಬರು ಸರ್ಟಿಫೈಡ್ ಆಡಿಟರು ಮತ್ತು ಸರ್ಕಾರದ ಮೇಲ್ವಿಚಾರಕರು ಅಲ್ಲಿದ್ದು ಸರ್ಕಾರ ಹಣ ಹೆಚ್ಚಿನ ದುರುಪಯೋಗವಾಗದೇ ಇರುವಂತೆ ನೋಡಿಕೊಳ್ಳಬೇಕಾದುದು ಸರ್ಕಾರದ ಕರ್ತವ್ಯವಾಗಿದೆ ಎಂದು ಹೇಳುತ್ತೇನೆ. ಸರ್ಕಾರದವರು 27 ಗವರ್ನ್‌ಮೆಂಟ್ ಏಡೆಡ್ ಇಂಡಸ್ಟ್ರಿಗಳಲ್ಲಿ ಇದುವರೆಗೂ 1,43,52,870 ರೂಪಾಯಿಗಳಷ್ಟು ಷೇರುಗಳನ್ನು ಹಾಕಿದ್ದಾರೆ ಎಂದು ಹೇಳಿ ಈ ವರ್ಷದ

ಬಡ್ಜೆಟ್ ಮೆಮೋರ್ಯಾಂಡಂನಲ್ಲಿ ತಿಳಿಸಿದ್ದೀರಿ. ಇದರಲ್ಲಿ ಸರ್ಕಾರದ ವಸೂಲು ಮತ್ತು ಅದರ ಮೇಲೆ ಎಷ್ಟು ವಸಲಾಗುತ್ತಾ ಇದೆ ಎಂಬ ವಿವರ, ಆಡಿಟರ್ ರಿಪೋರ್ಟ್ ಬ್ಯಾಲೇನ್ಸ್ ಷೀಟ್ ಇವು ಯಾವುದನ್ನು ಈ ಸಭೆಯ ಸದಸ್ಯರಿಗೆ ಒದಗಿಸದೇ ಇರುವುದರಿಂದ ಸರ್ಕಾರದ ಹಣ ದುರುಪಯೋಗವಾಗಿದೆಯೋ ಅಥವಾ ಸರಿಯಾದ ರೀತಿಯಲ್ಲಿ ಉಪಯೋಗವಾಗುತ್ತಾ ಇದೆಯೇ ಎಂಬುದು ಅನುಮಾನಾಸ್ಪದವಾಗಿದೆ. ಇದಕ್ಕೆ ಉದಾಹರಣೆ ಹೇಳಬೇಕಾದರೆ, ಸಕ್ಕರೆ ಕಂಪನಿಯ ಖಾಸಗಿ ಅಧ್ಯಕ್ಷರಾಗಿದ್ದ ಶ್ರೀಮಾನ್ ಬಂದೀ ಗೌಡರನ್ನು ನಿವೃತ್ತಿ ಮಾಡಿದ್ದೇವೆ ಎಂದು ಸರ್ಕಾರದವರು ಒಂದು ಪ್ರೆಸ್ ನೋಟ್ ಕೊಟ್ಟು ತಿಳಿಸಿದ್ದಾರೆ. ಆದರೆ ನಾನು ಕೆಲವು ಪತ್ರಿಕೆಗಳಲ್ಲಿ ನೋಡಿದ ಹಾಗೆ ಅವರೇ ಈ ಸಕ್ಕರೆ ಕಂಪನಿಯ ಛೇರ್ಮನ್‌ಷಿಪ್‌ಗೆ ರಾಜೀನಾಮೆ ಕೊಟ್ಟಿದ್ದಾರೆ ಎಂದು ಹೇಳಿ ಬಂದಿರುವುದನ್ನು ನೋಡಿದ್ದೇನೆ. ಸರ್ಕಾರ ಈ ವಿಷಯದಲ್ಲಿ ಯಾವ ಒಂದು ನಿಲುವು ತೆಗೆದುಕೊಂಡಿದೆ ಎಂಬುದು ನಮಗೆಲ್ಲರಿಗೂ ಅರ್ಥವಾಗದ ರೀತಿಯಲ್ಲಿದೆ. ಸರ್ಕಾರದವರು ಶ್ರೀಮಾನ್ ಬಂದೀ ಗೌಡರ ಮೇಲೆ ವೈಯಕ್ತಿಕವಾದ ಅಭಿಪ್ರಾಯವನ್ನೇನು ಇಟ್ಟುಕೊಂಡು ಅವರನ್ನು ನಿವೃತ್ತಿ ಮಾಡಿದರು.

ಈ ರೀತಿಯಾಗಿ ಸರ್ಕಾರದವರು ಹಣವನ್ನು ಯಾವ ಯಾವ ಕೈಗಾರಿಕಾ ಸಂಸ್ಥೆಗಳ ಮೇಲೆ ಹಾಕಿದ್ದಾರೋ ಆ ಸಂಸ್ಥೆಗಳ ಲೆಕ್ಕ ಪತ್ರಗಳನ್ನು ಆಡಿಟ್ ಮಾಡಿಸಿದ್ದಾರೆಯೇ, ಅವುಗಳಿಂದ ಲಾಭ ಬಂದಿದೆಯೇ ಅಥವಾ ನಷ್ಟವಾಗಿದೆಯೇ ಎಂಬುದನ್ನು ಸಹ ಈ ಸಭೆಯ ಗಮನಕ್ಕೆ ತರಲಿಲ್ಲ. ಆದಕಾರಣ ನಾನು ಈ ಒಂದು ಉದಾಹರಣೆ ಹೇಳಬೇಕಾಯಿತು. ಈ ವಿಚಾರದಲ್ಲಿ ಮಾನ್ಯ ಸಚಿವರನ್ನೂ ಕೇಳುವುದಿಷ್ಟೆ. ಈ ವಿಷಯದಲ್ಲಿ ಸರ್ಕಾರವೇನು ಕಾರ್ಯಕ್ರಮ ಕೈಗೊಂಡಿದೆ ಎಂಬುದಕ್ಕೆ ಒಂದು ಸ್ಟೇಟ್‌ಮೆಂಟ್ ಕೊಡಬೇಕು ಈ ರೀತಿಯಾಗಿ ಸರ್ಕಾರದ ಹಣದ ಪೈಕಿ 6 ಕೋಟಿ ರೂಪಾಯಿಗಳನ್ನು ಸಾಲದ ಅನೇಕ ಕೈಗಾರಿಕೆಗಳಿಗೆ ಕೊಟ್ಟಿದ್ದಾರೆ. ಅದನ್ನು ಸರಿಯಾದ ರೀತಿಯಲ್ಲಿ ವಸೂಲು ಮಾಡಿದ್ದರೆ, ಸರಿಯಾದ ರೀತಿಯಲ್ಲಿ, ಸರಿಯಾದ ರೀತಿಯಲ್ಲಿ ಆ ಹಣವನ್ನು ಉಪಯೋಗಿಸಿದ್ದರೆ ಈ ವರ್ಷ ಹೊಸ ತೆರಿಗೆಯನ್ನು ಹಾಕಬೇಕಾದ ಅಗತ್ಯವೇ ಇರಲಿಲ್ಲ. ಈ ರೀತಿಯಾಗಿ ಸರ್ಕಾರದ ಒಂದು ಕಂಪನಿಯ ಷೇರನ್ನು ತೆಗೆದುಕೊಳ್ಳುವಾಗಿ ಅಥವಾ ಹೊಸ ಕೈಗಾರಿಕೆ ಸ್ಥಾಪನೆ ಮಾಡುವಾಗ ಅದರಿಂದ ಹೆಚ್ಚಾಗಿ ಲಾಭ ಬಂದಿದೆಯೆ ಅಥವಾ ಇಲ್ಲವೆ ಎಂದು ವಿವೇಚನೆ ಮಾಡಿ ನೋಡದೆ ಕೈಹಾಕಿ ಸರ್ಕಾರದ ಹಣ ದುರುಪಯೋಗ ಮಾಡುತ್ತಿರುವುದು ಸಾರ್ವಜನಿಕರೆಲ್ಲರ ಮೇಲೂ ಹೊರೆಯಾಗಿದೆ. ಇದರ ಫಲಿತಾಂಶವು ಸಾರ್ವಜನಿಕರೆಲ್ಲರ ಮೇಲೂ ತೆರಿಗೆಯ ರೂಪದಲ್ಲಿ ಹೊರೆಯಾಗಿದೆ ಎಂದು ಕಾಣುತ್ತಿರುವುದರಿಂದ ಈ ಡಿಮ್ಯಾಂಡ್ ಮನವಿಯನ್ನು ವಿರೋಧಿಸುತ್ತೇನೆ.

## ಪಬ್ಲಿಕ್ ಸರ್ವಿಸ್ ಕಮಿಷನ್‌ನಲ್ಲಿ ಪರಿಶಿಷ್ಟ ಜಾತಿ ಸದಸ್ಯರ ನೇಮಕಾತಿ ಕುರಿತು ನೀಡಿದ ವಿವರ *

ಶ್ರೀ ಬಿ. ರಾಚಯ್ಯ (ಯಳಂದೂರು) ಸ್ವಾಮಿ, ಮಾನ್ಯ ಸ್ನೇಹಿತರು ತಂದಿರತಕ್ಕಂಥ ಈ ನಿರ್ಣಯ ನಿಮ್ಮ ತರಗತಿಯ ಜನಗಳಿಗೆ ಸಂಬಂಧಪಟ್ಟದ್ದು. ಆದ್ದರಿಂದ ಇದು ಬಹಳ ಮುಖ್ಯವಾದುದೆಂದು ನಾನು ಹೇಳಬೇಕಾಗಿದೆ. ಪಬ್ಲಿಕ್ ಸರ್ವಿಸ್ ಕಮಿಷನ್ ರಚನೆಯಾಗಿ ಈಗಾಗಲೆ ಕೆಲವು ವರ್ಷಗಳಾಗಿವೆ. ಅದರ ವಾಯಿದೆಯು ಮುಗಿಯುವವರೆಗೆ ಈ ಮಧ್ಯ ಯಾವ ಅಡಿಷನಲ್ ಮೆಂಬರನ್ನು ಕೂಡ ಸೇರಿಸುವುದಕ್ಕಾಗುವುದಿಲ್ಲ. ಈಗ ಸೇರಿಸುವುದು ರಾಜ್ಯಾಂಗಕ್ಕೆ ಬಹುಶಃ ವಿರುದ್ಧವಾಗಿದೆ ಎಂದು ಸರ್ಕಾರದವರು ಅಭಿಪ್ರಾಯ ಪಟ್ಟಿದ್ದಾರೆಂದು ನಾನು ತಿಳಿದುಕೊಂಡಿದ್ದರೂ ಕೂಡ ಈಗಿರತಕ್ಕಂಥ ಕಮಿಷನ್ನಿನಲ್ಲಿ ನಿಮ್ಮ ತರಗತಿಯವರಿಗೆಷ್ಟು ನ್ಯಾಯ ದೊರಕುತ್ತಿದೆ ಎನ್ನತಕ್ಕಂಥದನ್ನು ಈ ಸಂದರ್ಭದಲ್ಲಿ ನಾನು ಒಂದೆರಡು ಉದಾಹರಣೆಗೆ ಮುಖಾಂತರ ತಿಳಿಸಬೇಕಾಗಿದೆ. ಸರ್ಕಾರದವರೇನೋ ನಿಮ್ಮ ವರ್ಗದ ಉಮೇದುವಾರರಿಗೆ ಶೇ. 16 2/3 ಭಾಗದ ಹುದ್ದೆಗಳನ್ನು ಮೀಸಲಾಗಿಟ್ಟಿರುವುದಾಗಿ ಒಂದು ಆಜ್ಞೆ ಹೊರಡಿಸಿರುತ್ತಾರೆ. ಆದರೆ ಇದು ಏನಿದ್ದರೂ Direct recruitment ಗೆ ಮಾತ್ರ ಅನ್ವಯವಾಗುತ್ತದೆಂದೂ Promotional appointments ಗೆ ಅನ್ವಯವಾಗುವುದಿಲ್ಲವೆಂದೂ ತಿಳಿದುಬಂದಿದೆ. Direct recruitment ಆಗಿರುವ ಸಂದರ್ಭಗಳಲ್ಲಿಯೇ ಈ ನೀತಿಯನ್ನು ಕೆಲವು ಇಲಾಖಾಧಿಕಾರಿಗಳು ಪರಿಪಾಲಿಸಿಲ್ಲವೆಂದು ತಿಳಿಯಲು ವಿಷಾದವಾಗುತ್ತದೆ. ರೋಡ್ ಟ್ರಾನ್ಸ್‌ಪೋರ್ಟ್ ಡಿಪಾರ್ಟ್‌ಮೆಂಟಿನಲ್ಲಿ ಹೊಸದಾಗಿ ಕೆಲವು appointments ಆಗಿವೆ. ಅದರಲ್ಲಿ ಅನುಸರಿಸುವ ಕ್ರಮ ನೋಡಿದರೆ ಪಬ್ಲಿಕ್ ಸರ್ವಿಸ್ ಕಮೀಷನ್ ರೂಲ್ಸಿಗೆ ಅನುಸಾರವಾಗಿಲ್ಲದೆ ಅವರ ಇಷ್ಟಬಂದ ಹಾಗೆ ನೇಮಕ ಮಾಡಿಕೊಂಡಿರುವ ಹಾಗಿದೆ. ಉದಾಹರಣೆಗೆ, ನಿಮ್ಮ ವರ್ಗದವರ ಪೈಕಿ ಒಬ್ಬರಿಗಾದರೂ ಡ್ರೈವರ್ ಕೆಲಸ ಆ ಇಲಾಖೆಯಲ್ಲಿ ಸಿಕ್ಕುತ್ತಿಲ್ಲ. ಆ ಕಂಪನಿಯಲ್ಲಿಯೇ ಕೆಲಸ ಮಾಡಿ ಇಲಾಖಾಧಿಕಾರಿಗಳ ಮೆಚ್ಚುಗೆಗೆ ಪಾತ್ರರಾಗಿದ್ದರೂ ಸಹ ಈ ಕೆಲಸ ಅವರಿಗೆ ದೊರಕುತ್ತಿಲ್ಲ. ಇದೇ ರೀತಿ ನ್ಯಾಷನಲ್ ಎಕ್ಸ್‌ಟೆನ್‌ಷನ್ ಸರ್ವಿಸ್‌ಗಾಗಿ ತಾಲ್ಲೂಕುಗಳಲ್ಲಿ ಬ್ಲಾಕ್ ಡೆವಲಪ್‌ಮೆಂಟ್ ಆಫೀಸರುಗಳನ್ನು ತೆಗೆದುಕೊಂಡಿರುತ್ತಾರೆ. ಆ ಪೈಕಿ ಒಬ್ಬರಾದರೂ ಡಿಪ್ರಸ್ಸ್ಡ್ ಕ್ಲಾಸ್‌ನವರಿಲ್ಲ. ವಿಧಾನ ಸೌಧ ಕಟ್ಟಡಕ್ಕಾಗಿ ವರ್ಕ್ ಇನ್ಸ್‌ಪೆಕ್ಟರ್ ಹುದ್ದೆಗಳಿಗೆ 60 ಜನರನ್ನು ನೇಮಿಸಿಕೊಂಡಿರುತ್ತಾರೆ. ಈ ಕೆಲಸಕ್ಕೆ ಹೋದ ಡಿಪ್ರಸ್ಸ್ಡ್ ಕ್ಲಾಸ್ ಉಮೇದುವಾರರನ್ನು ನೀವೇನು ಸರ್ಕಾರದ ಹಣ ಲೂಟಿ ಮಾಡಿರುವುದಕ್ಕೆ ಬಂದಿದ್ದೀರಾ ಎಂಬುದಾಗಿ ಪ್ರಶ್ನೆ ಕೇಳುತ್ತಾರೆ. ಪೊಲೀಸ್ ಡಿಪಾರ್ಟ್‌ಮೆಂಟ್‌ನಲ್ಲಿ ದಫೇದಾರ್, ಕಾನ್‌ಸ್ಟೇಬಲ್ ಹುದ್ದೆಗಳು ಈ ನಿಮ್ಮ ವರ್ಗದವರಿಗೆ ಸಿಕ್ಕುವುದು ಕಷ್ಟವಾಗಿದೆ. ಈ ಬಗ್ಗೆ ಪಬ್ಲಿಕ್ ಸರ್ವಿಸ್ ಕಮೀಷನ್ ರೂಲ್ಸ್ ಸ್ಪಷ್ಟವಾಗಿದ್ದರೂ ಸಹ ಎಷ್ಟರ ಮಟ್ಟಿಗೆ ಅದು ಕಾರ್ಯರೂಪಕ್ಕೆ ಬಂದಿದೆ ಎಂಬುದಕ್ಕಾಗಿ ನಾನು ಈ ಕೆಲವು ದೃಷ್ಟಾಂತಗಳನ್ನು ಕೊಡಬೇಕಾಯಿತು.

---

* ವಿಧಾನ ಸಭಾ ನಡವಳಿಕೆ ದಿನಾಂಕ 19ನೇ ಅಕ್ಟೋಬರ್, 1954 ಪುಟ 367 ರಿಂದ 368

ಇದೇ ರೀತಿ ಮೆಡಿಕಲ್ ಪ್ರೊಬೇಷನರುಗಳನ್ನು ನೇಮಕ ಮಾಡಿಕೊಳ್ಳುವುದರಲ್ಲಿ ಸಹ ಡಿಪ್ರೆಸ್ಡ್ ಕ್ಲಾಸ್‌ಗೆ ಸಂಬಂಧಪಟ್ಟಿರುವ ಶ್ರೀ ಚಾಮರಾಜ್ ಎಂಬುವರಿಗೆ 18ನೆಯ ರ್‍ಯಾಂಕ್ ಆಗಿ ಲಿಸ್ಟ್ ಹಾಕಿರುತ್ತಾರೆ. ಇವರನ್ನು 'General Test' ಗೆ ಒಳಪಡಿಸಿದರೆ ಇವತ್ತಿಗೂ ಯಾರಿಗಿಂತಲೂ ಕಡಿಮೆ ಬೀಳುವುದಿಲ್ಲ. ಮೊದಲಿನಿಂದಲೂ ಸಹ ಯಾರಿಗಿಂತಲೂ ಕಡಿಮೆಯಾಗಿರದೆ ಉತ್ತಮ ತರಗತಿಯಲ್ಲಿಯೇ ತೇರ್ಗಡೆಯಾಗಿರುತ್ತಾರೆ. ಹೀಗಿದ್ದರೂ ಸಹ ನಿಮ್ಮ ವರ್ಗದವರಿಗೆ ಸರ್ಕಾರ ಹುದ್ದೆಗಳಲ್ಲಿ ಅನ್ಯಾಯವಾಗುತ್ತಿರುವುದು ಕಂಡುಬರುತ್ತಿದೆ. ಈ ದೃಷ್ಟಿಯಿಂದ ಈ ಬಗ್ಗೆ ಕಂಡು ಬಂದಿರುವ ಲೋಪ ದೋಷಗಳನ್ನು ತಡೆಗಟ್ಟಿ ತಕ್ಕ ಸೌಕರ್ಯವನ್ನು ಇವರಿಗೆ ಕಲ್ಪಿಸಲು ನಿಮ್ಮ ವರ್ಗದವರೊಬ್ಬರು ಪಬ್ಲಿಕ್ ಸರ್ವಿಸ್ ಕಮಿಷನ್ನಿನಲ್ಲಿದ್ದರೆ ಒಳ್ಳೆಯದು. ಈ ಬಗ್ಗೆ ಸರ್ಕಾರದವರು ಬರಿ ಮಾತಿನ ಆಶ್ವಾಸನೆ ಕೊಡದೆ ಕಾರ್ಯರೂಪವಾಗಿ ಈ ನಮ್ಮ ಆಸೆಯನ್ನು ನೆರವೇರಿಸಿ ಕೊಡಬೇಕೆಂದು ಕೋರುತ್ತೇನೆ.

## ನ್ಯಾಯಾಂಗ ನೇಮಕಾತಿ ಕುರಿತು ನೀಡಿದ ವಿವರ *

ಶ್ರೀ ಬಿ. ರಾಚಯ್ಯ (ಯಳಂದೂರು) ಸ್ವಾಮಿ, ನ್ಯಾಯಾಂಗದಲ್ಲಿ ಹೆಚ್ಚಿಗೆ ಪ್ರಾತಿನಿಧ್ಯವಿಲ್ಲದಿರುವ ಅಥವಾ ಕಡಿಮೆ ಪ್ರಾತಿನಿಧ್ಯವಿರತಕ್ಕ ಕೋಮುಗಳಿಗೆ ಸೇರಿದಂಥ ಉಮೇದುವಾರರನ್ನು ಮುನ್ಸೀಫ್‌ರಾಗಿಯೂ, ಜಡ್ಜ್ ಮತ್ತು ಸಬ್‌ಜಡ್ಜ್‌ಗಳಾಗಿಯೂ ತೆಗೆದುಕೊಳ್ಳುವ ಸಂದರ್ಭದಲ್ಲಿ ಅವರಿಗೆ ಇರತಕ್ಕ ಕೆಲವು ನ್ಯೂನತೆಗಳನ್ನು ತೆಗೆದು ನೇಮಕ ಮಾಡಿಕೊಳ್ಳಬೇಕೆಂದು ಹೇಳಿ ನಾನು ಸರ್ಕಾರದವರಿಗೆ ಅರಿಕೆ ಮಾಡಿಕೊಳ್ಳ ಬಯಸುತ್ತೇನೆ. ಹೀಗೆ ಹೇಳುವಾಗ, ನಾನು ನ್ಯಾಯಾಂಗದ ಆಡಳಿತದ ವಿಷಯದಲ್ಲಿ ಕುಂದುಂಟಾಗುವಂತೆ ದಕ್ಷತೆಯಿಲ್ಲದಿರುವವರನ್ನಾಗಲಿ, ಅನುಭವಿಗಳನ್ನಾಗಲಿ, ತೆಗೆದುಕೊಂಡು ಆಡಳಿತ ದಕ್ಷತೆಯನ್ನು ಕಡಿಮೆ ಮಟ್ಟಕ್ಕೆ ತಳ್ಳುವ ಉದ್ದೇಶ ಪಡುತ್ತಿಲ್ಲ. ಈ ಪ್ರಾತಿನಿಧ್ಯವಿಲ್ಲದಿರುವ ಕೋಮುಗಳಲ್ಲೂ ಕೂಡ ಒಂದೆರಡು ನ್ಯೂನತೆಗಳೇನೋ ಇದ್ದರೂ, ದಕ್ಷರಾಗಿರುವವರು, ಅನುಭವಿಗಳು ಅನೇಕರಿದ್ದಾರೆಂಬುದನ್ನು ಸರ್ಕಾರದವರಿಗೂ ಮಾನ್ಯ ಸದಸ್ಯರಿಗೂ, ಗೊತ್ತಿರುವ ವಿಷಯವಾಗಿದೆ. ಮೈಸೂರು ಸಂಸ್ಥಾನಗಳಲ್ಲಿರತಕ್ಕ ನ್ಯಾಯಧೀಶರುಗಳ, ಪಬ್ಲಿಕ್ ಪ್ರಾಸಿಕ್ಯೂಟರುಗಳ ಮತ್ತು ಮುನ್ಸೀಫ್‌ಗಳ ಸಂಖ್ಯೆಯನ್ನು ಬಡ್ಜೆಟ್ಟಿನ (Vol. I) 222ನೆಯ ಪುಟದಲ್ಲಿ ಕಾಣಬಹುದು. ಹೈಕೋರ್ಟಿನಲ್ಲಿ ಆರು ಜನ ನ್ಯಾಯಾಧೀಶರಿದ್ದಾರೆ. ಒಬ್ಬರು ಅಡ್ವೋಕೇಟ್ ಜನರಲ್, ಪಬ್ಲಿಕ್ ಪ್ರಾಸಿಕ್ಯೂಟರು ಮತ್ತು ಅಸಿಸ್ಟೆಂಟ್ ಪಬ್ಲಿಕ್ ಪ್ರಾಸಿಕ್ಯೂಟರು 16 ಜನ, ಡಿಸ್ಟ್ರಿಕ್ಟ್ ಜಡ್ಜ್‌ಗಳು 11, ಸಬ್ ಜಡ್ಜ್‌ಗಳು 8 ಮತ್ತು ಮುನ್ಸೀಫರುಗಳು 33 ಜನ - ನ್ಯಾಯಾಂಗ ಶಾಖೆಯಲ್ಲಿದ್ದಾರೆಂದು ಗೊತ್ತಾಗುತ್ತದೆ. ಇಷ್ಟು ಜನರಲ್ಲಿ ಹಿಂದುಳಿದ ಕೋಮಿನವರು ಯಾರು ಇಲ್ಲ; ನಿಮ್ನ ತರಗತಿಯವರಾಗಿ ಒಬ್ಬರು ಮಾತ್ರ ಪಬ್ಲಿಕ್ ಪ್ರಾಸಿಕ್ಯೂಟರಾಗಿದ್ದಾರೆ. ಇತ್ತೀಚೆಗೆ ಇವರನ್ನಾದರೂ ಒಬ್ಬರನ್ನು ನೇಮಿಸಿಕೊಂಡದ್ದಕ್ಕೆ ನಾನು ಸರ್ಕಾರದವರನ್ನು ಅಭಿನಂದಿಸುತ್ತೇನೆ.

ಶ್ರೀ ಬಿ. ಶಿವಪ್ಪ (ಹೊಳಲ್ಕೆರೆ): ಮಾನ್ಯ ಸದಸ್ಯರು ಬಿ.ಎಂ. ಎಲ್.ಎಲ್.ಬಿ. ಮಾಡಿದ್ದಾರೆಂದು ಹೇಳಿ ಮಂತ್ರಿಗಳಾಗುವುದಕ್ಕೆ ಅಪೇಕ್ಷೆ ಪಡುವುದರಲ್ಲಿ ಅಭ್ಯಂತರವೇನು ಇಲ್ಲ. ಆದರೆ ಕೆಲಸ ಹೇಗೆ ನಡೆಯಬೇಕು?

ಶ್ರೀ ಬಿ. ರಾಚಯ್ಯ: ಹಿಂದುಳಿದ ಪಂಗಡದವರ ಪೈಕಿ ಲಾ-ಡಿಗ್ರಿ ತೆಗೆದು ಕೊಂಡಿರುವವರೆಲ್ಲರೂ ಇಲ್ಲಿಗೆ ಅಸೆಂಬ್ಲಿ ಮೆಂಬರಾಗಿ ಬಂದಿಲ್ಲ. ಈಗಲೂ ನಮ್ಮವರಲ್ಲಿ ಕೋರ್ಟಿನಲ್ಲಿ ಪ್ರಾಕ್ಟಿಸ್ ಮಾಡತಕ್ಕ ಅಡ್ವೋಕೇಟುಗಳೂ ಕೆಲವರಿದ್ದಾರೆ. ಲೆಜಿಸ್ಲೇಟಿವ್ ಸೆಕ್ರೆಟೇರಿಯಟ್ಟಿನಲ್ಲಿ, ಲಾ ಸೆಕ್ರೆಟೇರಿಯೆಟ್ಟಿನಲ್ಲಿ ಮತ್ತು ಜುಡಿಷಿಯರಿನಲ್ಲಿ ಕೆಲಸ ಮಾಡುವವರು ನಿಮ್ನ ಪಂಗಡಕ್ಕೆ ಸೇರಿದವರು ಎಷ್ಟೋ ಜನರಿದ್ದಾರೆ. ಕಾರಣಾಂತರದಿಂದ ಇವರುಗಳು ಕೋರ್ಟುಗಳಲ್ಲಿ ಕೆಲಸ ಮಾಡಲು ಕಷ್ಟವಾಗಿ ಸರ್ಕಾರಿ ನೌಕರಿಯಲ್ಲಿ ಸೇರಿಕೊಂಡಿರುತ್ತಾರೆ ಅಷ್ಟೆ. ಕೆಲವರಿಗೆ ವಯಸ್ಸು ಜಾಸ್ತಿಯಾಗಿರುತ್ತದೆಯಾದರೂ ಕೋರ್ಟಿನಲ್ಲಿ ಕೆಲವಾರು ವರ್ಷಗಳಿಂದ

* ವಿಧಾನ ಸಭಾ ನಡವಳಿಕೆ ದಿನಾಂಕ 15ನೇ ಮಾರ್ಚ್, 1955 ಪುಟ 1035-1036

ಲಾಯರಾಗಿಯೋ ಅಡ್ವೋಕೇಟರಾಗಿಯೋ ಕೆಲಸ ಮಾಡುತ್ತಿದ್ದಾರೆ ಇವರುಗಳನ್ನೂ ಜಡ್ಜ್ ಆಗಿ ತೆಗೆದುಕೊಳ್ಳಲು ಬೇರೆ ರೀತಿಯಲ್ಲಿ ದಕ್ಷತೆಯಿದ್ದರೂ ಕೆಲವು ನ್ಯೂನತೆಗಳ ವಿಷಯದಲ್ಲಿ ರಿಯಾಯಿತಿ ಕೊಡಬೇಕಾಗುತ್ತದೆ. ಆ ನ್ಯೂನತೆಗಳನ್ನು ತೆಗೆದು ಇವರುಗಳನ್ನು ನೇಮಿಸಿಕೊಂಡಲ್ಲಿ ಅವರೂ ಚೆನ್ನಾಗಿ ಕೆಲಸ ನಿರ್ವಹಿಸಬಲ್ಲರು. ಈಗ ಕೆಲವು ವರ್ಷಗಳ ಹಿಂದೆ ನಮ್ಮವರೊಬ್ಬರನ್ನು ಪಬ್ಲಿಕ್ ಪ್ರಾಸಿಕ್ಯೂಟರಾಗಿ ತೆಗೆದುಕೊಂಡಿದ್ದಾರೆಂದು ಗೊತ್ತಾಗಿದೆ. ಅವರು ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆಂದೂ ಗೊತ್ತಾಗಿದೆ. ಅದೇ ರೀತಿ ನಮ್ಮಲ್ಲಿರುವ ಇನ್ನು ಇತರ ಬಿ.ಎ. ಎಲ್.ಎಲ್.ಬಿ. ಮಾಡಿರುವವರನ್ನು ನೇಮಿಸಿಕೊಂಡರೆ ಅವರೂ ತಮ್ಮ ನಿರೀಕ್ಷೆಯಂತೆ ಕೆಲಸ ಮಾಡಬಲ್ಲರೆಂದು ಹೇಳಬಹುದು. ಆದ್ದರಿಂದ ಆಡಳಿತ ದಕ್ಷತೆಗೆ ಕುಂದುಬಾರದ ರೀತಿಯಲ್ಲಿ ನೋಡಿಕೊಂಡು ಯಾವ ಯಾವ ಕೋಮುಗಳಿಗೆ ನ್ಯಾಯಾಂಗದಲ್ಲಿ ಇನ್ನೂ ಸಾಕಾದಷ್ಟು ಪ್ರಾತಿನಿಧ್ಯ ದೊರಕಿಲ್ಲವೋ ಅವುಗಳಿಗೆ ಪ್ರಾತಿನಿಧ್ಯ ಕೊಡುವುದಕ್ಕಾಗಿ ಕೆಲವು ನ್ಯೂನತೆಗಳನ್ನು ತೆಗೆದು ಅನುಕೂಲ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಹಾಗೆ ಪ್ರಾತಿನಿಧ್ಯ ಕೊಡುವುದರಲ್ಲಿ ಮಾನ್ಯ ಶಿವಪ್ಪನವರು ಹೇಳಿದ ಹಾಗೆ, ಹಿಂದೆ ಅಸೆಂಬ್ಲಿ ಸದಸ್ಯರಾಗಿರತಕ್ಕವರನ್ನೂ ಕೂಡ ಜಡ್ಜಿಗಳಾಗಿ ತೆಗೆದುಕೊಂಡಿದ್ದೀರಿ. ಆದ್ದರಿಂದ ಅಸೆಂಬ್ಲಿ ಮೆಂಬರುಗಳಾದರೂ ಇಷ್ಟಪಟ್ಟರೆ ಹೋಗಬಹುದು. ಒಟ್ಟಿನಲ್ಲಿ ಯಾರು, ಯಾರಿಗೆ ಇದುವರೆಗೂ ನ್ಯಾಯಾಂಗದಲ್ಲಿ ಹೆಚ್ಚಿನ ಪ್ರಾತಿನಿಧ್ಯ ದೊರಕಿಲ್ಲವೋ ಅವರ ವಿಷಯದಲ್ಲಿ ಕೆಲವು ರಿಯಾಯಿತಿ ತೋರಿಸಿ ನ್ಯಾಯಾಧೀಶರಾಗಿಯೂ, ಪಬ್ಲಿಕ್ ಪ್ರಾಸಿಕ್ಯೂಟರುಗಳಾಗಿಯೂ ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ.

ಇನ್ನೊಂದು ವಿಷಯವೇನೆಂದರೆ untouchability ಸಂಬಂಧದಲ್ಲಿ ಬರತಕ್ಕ ಕೇಸುಗಳ ವಿಷಯದಲ್ಲಿ ಅವರ ಪರವಾಗಿ ವಾದ ನಡೆಸಲು ಸರ್ಕಾರದವರು ಒಬ್ಬ ಪ್ಲೀಡರನ್ನು ನೇಮಕ ಮಾಡಿಕೊಟ್ಟು ಉಚಿತ ರೀತಿಯಲ್ಲಿ ಕೇಸುಗಳನ್ನು ನಡೆಸಲು ಅವಕಾಶ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

## ರಾಜ್ಯ ಪುನರ್ ವಿಂಗಡಣೆ ಆಯೋಗದ ವರದಿ *

ಶ್ರೀ ಬಿ. ರಾಚಯ್ಯ (ಯಳಂದೂರು)- ಸ್ವಾಮಿ, ಈ ರಾಜ್ಯಗಳ ಪುನರ್ ವಿಂಗಡಣೆಯ ವರದಿಯ ಮೇಲೆ ಚರ್ಚೆಯಾಗುತ್ತಾ ಇರುವುದನ್ನು ನಾನು ಬಹಳ ಸಂತೋಷದಿಂದ ಕೇಳಿದೆ. ಇದರಲ್ಲಿ ಕರ್ನಾಟಕ ಆಗಬೇಕೆ ಅಥವಾ ಎರಡು ಕರ್ನಾಟಕವಾಗುವುದರಿಂದ ನಮಗೆ ಹೆಚ್ಚಿನ ಅನುಕೂಲವಾಗುತ್ತದೆಯೇ ಎನ್ನುವ ಒಂದು ಧಾಟಿಯಲ್ಲಿ ಭಾಷಣವಾಗುತ್ತಿವೆ. ಹೀಗೆ ಭಾಷಣಗಳು ಆಗುವಾಗ ಒಂದು ಕರ್ನಾಟಕವಾಗಬೇಕು ಎಂದು ಹೇಳತಕ್ಕವರು ಕೂಡ ಯಾವ ವಿಧವಾದ ಒಂದು ಸ್ವಾರ್ಥವನ್ನಾಗಲಿ ನಾನು ಕಾಣಲಿಲ್ಲ. ಇದಕ್ಕೆ ಕಾರಣವಿಷ್ಟೆ. ರಾಜ್ಯಗಳನ್ನು ಪುನರ್ ವಿಂಗಡಣೆ ಮಾಡುವಾಗ ಇದು ಸಾಮಾನ್ಯವಾಗಿ 10 ವರ್ಷಕ್ಕೆ 20 ವರ್ಷಕ್ಕೊಂದು ಸಾರಿ ಬರುವುದಿಲ್ಲ 100-200 ವರ್ಷಗಳಿಗೊಮ್ಮೆ ಇಂತಹ ಸಂದರ್ಭಗಳು ಬರುತ್ತವೆ. ಎಂದು ಈ ನಿರ್ಣಯವನ್ನು ಮಂಡಿಸುವಾಗ ಹೇಳಿದರು. ಇಡೀ ಇಂಡಿಯಾ ದೇಶದ ಒಂದು ನಕ್ಷೆಯನ್ನು ಬದಲಾಯಿಸುವಾಗ ನಮ್ಮ Sentiments ಏನಿವೆಯೋ ಅವನ್ನು ಬದಿಗೊತ್ತಿ ಇಡೀ ರಾಷ್ಟ್ರದ ಹಿತದೃಷ್ಟಿಯಿಂದ ಈಗ ಈ ವರದಿಯಲ್ಲಿ ನಿರೂಪಿಸಿರತಕ್ಕ ಪ್ರಾಂತ್ಯಗಳು, ಪ್ರಾಂತ್ಯಗಳ ಅಭಿವೃದ್ಧಿ ಮತ್ತು ಇಂಡಿಯಾ ದೇಶದ ಒಂದು ಭದ್ರತೆಗೆ ಧಕ್ಕೆ ಬಾರದ ರೀತಿಯಲ್ಲಿ ಇದನ್ನು ನೋಡಬೇಕಾಗಿದೆ. ಎಂದು ಹೇಳಿದರು. ಎರಡು ಕರ್ನಾಟಕಬೇಕು. ಆಡಳಿತ ದೃಷ್ಟಿಯಿಂದ ಅದು ಬಹಳ ಅನುಕೂಲವಾಗಿದೆ ಮತ್ತು ಹಣಕಾಸಿನ ಪರಿಸ್ಥಿತಿಯಲ್ಲೂ ಕೂಡ ಅನುಕೂಲವಾಗಿದೆ. ಮುಂದೆ ಬರತಕ್ಕ ಕರ್ನಾಟಕದಲ್ಲಿ ಹಣಕಾಸಿನ ಕಷ್ಟವಾಗುತ್ತದೆ. ಆಡಳಿತದ ಸಲುವಾಗಿ, ಬಹಳವಾಗಿ ಅಷ್ಟರ ಮಟ್ಟಿಗೆ ನಡೆಯುವುದಿಲ್ಲ ಎಂದು ಅವರು ಮುಂದೆ ಬರತಕ್ಕ ಕರ್ನಾಟಕದಲ್ಲಿ ಆಗಬಹುದಾದ ಒಂದು ಮುನ್ಸೂಚನೆಯನ್ನು ಕೊಟ್ಟಿರುವುದು ನಿಜವಾಗಿಯೂ ದೇಶಭಕ್ತಿಯನ್ನು ತೋರಿಸುತ್ತದೆ ಎಂದು ತಿಳಿದುಕೊಂಡಿದ್ದೇನೆ. ಏತಕ್ಕೆಂದರೆ ಮುಂದೆ ಕರ್ನಾಟಕವಾಗಬೇಕು. ಆಗಿಯೇ ಆಗುತ್ತೆ ಎಂಬುದು ಗೊತ್ತಿದೆ. ಈ ವಿಷಯದಲ್ಲಿ ಕಾಂಗ್ರೆಸ್ ಹೈಕಮ್ಯಾಂಡ್ whip ಕೂಡ ಕೊಟ್ಟಿರುವುದರಿಂದ ಮುಂದೆ ಯಾವ ರೀತಿ ಆಗಬಹುದೋ ಅದು ಆಗಿಯೇ ಆಗುತ್ತದೆ. ಕೇಂದ್ರ ಸರ್ಕಾರದ ನೆರವು ಇಲ್ಲದೆ ಯಾವ ಪ್ರಾಂತ್ಯಗಳೂ ಇರುವುದಕ್ಕೆ ಸಾಧ್ಯವಿಲ್ಲ. ಪ್ರಾಂತ್ಯಗಳ ಪುನರ್ವಿಂಗಡಣೆ ಆದ ಮೇಲೆ ಆಯಾ ಪ್ರಾಂತ್ಯಗಳ ನೆರವಿಗೆ ಕೇಂದ್ರ ಸರ್ಕಾರ ಇದ್ದೇ ಇದೆ. ಈಗಲೇ ನಾವು ಅವರಿಗೆ ಎಚ್ಚರಿಗೆ ಕೊಟ್ಟರೆ, ಮುಂದೆ ಆಗತಕ್ಕ ಕರ್ನಾಟಕಕ್ಕೆ ಸಾಧ್ಯವಾದಷ್ಟು ಕೇಂದ್ರ ಸರ್ಕಾರದವರು ನೆರವಾಗುವುದಕ್ಕೆ ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಅವರು ಹೇಳಿದ್ದಾರೆ. ಮತ್ತು ಅವರೂ ಕೂಡ ಕರ್ನಾಟಕ ವಾಗುವುದಕ್ಕೆ ಬೆಂಬಲ ಕೊಡುತ್ತಿದ್ದಾರೆಂದು ಭಾವಿಸುತ್ತೇನೆ. ಕರ್ನಾಟಕ ಪ್ರಾಂತ್ಯ ಇಷ್ಟು ಬೇಗನೆ ಏತಕ್ಕೆ ಆಗಬೇಕಾಗಿದೆ ಕೆಲವಾರು ವರ್ಷಗಳು ಕಾಯುವುದಕ್ಕೆ ಸಾಧ್ಯವಿಲ್ಲವೇ? ಹೀಗೆ 1913 ನೆಯ ಇಸವಿಯಿಂದಲೂ ಕೂಡ ಎಷ್ಟೇ ಕಮಿಟಿಗಳು ಆಗುತ್ತಾ ಬಂದಿವೆ.ಮಾಂಟೆಗೊ ಚೆಲ್ಮಸ್‌ಫರ್ಡ್, ದಾರ್‌ಕಮಿಷನ್, Statutory Commission J.V.P. ಕಮಿಟಿ ಮುಂತಾದವು ಈ ವಿಷಯದಲ್ಲಿ ವರದಿ ಮಾಡಿವೆ.

---

* ವಿಧಾನ ಸಭಾ ನಡವಳಿಕೆ ದಿನಾಂಕ 1ನೇ ಡಿಸೆಂಬರ್, 1955 ಪುಟ 1275-1277

ಆ ವರದಿಯ ಶಿಫಾರಸ್ಸುಗಳನ್ನು ಕಾರ್ಯಗತ ಮಾಡದೆ ಸ್ವಲ್ಪ ಕಾಲ ದುಡಿದರು. ಉತ್ತರ ಇಂಡಿಯಾವನ್ನು ನೋಡಿದ್ದೇ ಆದರೆ ಪ್ರತಿಯೊಂದು ಪ್ರಾಂತ್ಯವನ್ನೂ ಕೂಡ ಹೆಚ್ಚು ಕಡಿಮೆ ಭಾಷಾವಾರು ಆಧಾರದ ಮೇಲೆ ರಚಿಸಿಕೊಂಡು ಬಂದಿದ್ದಾರೆ. ಅಂದ ಮಾತ್ರಕ್ಕೆ ಏಕ ಭಾಷೆ (Unilingual State) ಎಂದು ತಿಳಿದುಕೊಂಡು ಹೇಳುತ್ತಿಲ್ಲ. ಹೆಚ್ಚು ಕಡಿಮೆ ಒಂದು ಪ್ರಾಂತ್ಯದಲ್ಲಿರತಕ್ಕ ಜನರು ಹೆಚ್ಚಾಗಿ ಯಾವ ಭಾಷೆಯನ್ನು ಮಾತನಾಡುತ್ತಾರೋ ಅದರಲ್ಲಿ ಆಡಳಿತ ನಡೆಯಬೇಕು ಎನ್ನುವ ದೃಷ್ಟಿಯಿಂದ ಉತ್ತರ ಇಂಡಿಯಾದರಲ್ಲಿರುವ ಪ್ರಾಂತ್ಯಗಳು ಕೂಡ ಸ್ವಲ್ಪ ಹೆಚ್ಚು ಕಡಿಮೆ ಭಾಷೆಯ ಆಧಾರದ ಮೇಲೆ ನಡೆದುಕೊಂಡು ಬಂದಿವೆ. ದಕ್ಷಿಣ ಇಂಡಿಯಾದಲ್ಲಿ 1953ನೇ ಅಕ್ಟೋಬರ್ 1ರವರೆಗೂ ನಾವು ಬಾಷಾವಾರು ಪ್ರಾಂತ್ಯಗಳಿಗೆ ಬೆಂಬಲ ಕೊಡುವುದನ್ನು ಮುಂದಕ್ಕೆ ಹಾಕಿದೆವು. ಯಾವಾಗ ಆಂಧ್ರ ಪ್ರಾಂತ್ಯವನ್ನು ನೀವು ಒಪ್ಪಿ ಆಂಧ್ರ ಪ್ರಾಂತ್ಯ ಮಾಡಿ, ತೆಲಗು ಮಾತನಾಡುವವರಿಗೆ ಒಂದು ಪ್ರಾಂತ್ಯ, ತಮಿಳು ಮಾತನಾಡುವವರಿಗೆ ಉಳಿದಿರತಕ್ಕ ಮದ್ರಾಸ್ ಪ್ರಾಂತ್ಯ ಎಂದು ಮಾಡಿ. ದಿರೋ ಇನ್ನುಳಿದಿರತಕ್ಕದ್ದು ಮಲೆಯಾಳಿ ಬಾಷೆ ಮಾತನಾಡತಕ್ಕ ಕೇರಳ ಪ್ರಾಂತ್ಯ ಅಥವಾ ಮಹಾರಾಷ್ಟ್ರ ಅಥವಾ ಕರ್ನಾಟಕ. ಹೀಗೆ ಕನ್ನಡ ಮಾತನಾಡತಕ್ಕ ಪ್ರದೇಶಗಳನ್ನು ಒಟ್ಟು ಗೂಡಿಸಿ ಕನ್ನಡ ಪ್ರಾಂತ್ಯವನ್ನಾಗಿ ಮಾಡಬೇಕು ಈ ವರದಿಯಲ್ಲಿಲ್ಲದಿದ್ದರೆ ಇವತ್ತು ಎಷ್ಟೆ ಆಂದೋಲನ ವಾಗುತ್ತಿತ್ತು. ಈ ದೇಶದಲ್ಲಿ ಎಷ್ಟೋ ಚಳವಳಿ ಆಗುತ್ತಿತ್ತು ಎನ್ನುವುದನ್ನು ಕೂಡ ಅವರು ತಮ್ಮ ವರದಿಯಲ್ಲಿ ಹೇಳಿದ್ದಾರೆ.

-------- ಈ ಇಡೀ ಇಂಡಿಯಾ ದೇಶದ ನಕ್ಷೆಯನ್ನು ಬದಲಾವಣೆ ಮಾಡಬೇಕಾದ ಸಂದರ್ಭ ಬಂದಿರುವುದರಿಂದ ಇಡೀ ಇಂಡಿಯಾ ದೇಶದಲ್ಲಿರುವ ಎ.ಬಿ.ಸಿ. ಸ್ಟೇಟುಗಳು ಎನ್ನುವ Federal Section ಏನು ಇದೆ ಅದನ್ನು ಈ ದಿನ ಬದಲಾವಣೆ ಮಾಡಿ ಒಂದೇ ವಿಧವಾದಂಥ ಸ್ಥಾನಮಾನಗಳನ್ನು Federal section ನಲ್ಲಿ ಕೊಟ್ಟಿರತಕ್ಕದ್ದು ನಿಜವಾಗಿಯೂ ಸ್ವಾಗತಾರ್ಹವಾಗಿದೆ. ಅದರಲ್ಲೂ ಕೂಡ ಕಾಂಗ್ರೆಸ್ ಅಧಿವೇಶನದಲ್ಲಿ ಒಂದು ನಿರ್ಣಯವನ್ನು ಪಾಸ್ ಮಾಡಿ Socialistic pattern of society ಅನುಗುಣವಾಗಿ ರಾಜ ಪ್ರಮುಖರ ಸ್ಥಾನವನ್ನು ರದ್ದು ಮಾಡಬೇಕೆಂದು ಹೇಳಿರುವುದು. Socialistic principle ಮೇಲೆ ಹೆಚ್ಚಿಗೆ ಅಭಿಮಾನವಿರುವ ನನಗೆ ಬಹಳ ಸಂತೋಷವಾಗಿದೆ. ಆಡಳಿತ ಬಿಗಿತಪ್ಪಿ ಹೋಗುತ್ತದೆ ಎಂದು ಮಾನ್ಯ ಗೆಳೆಯರು ಹೇಳುತ್ತಿದ್ದಾರೆ. ಉತ್ತರ ಪ್ರದೇಶ ವಿಸ್ತಾರವಾಗಿದ್ದರೂ ಅವು ಆಡಳಿತ ಬಿಗಿಯಿಂದ ಮುಂದುವರಿದಿಲ್ಲವೇ, ಹೆಚ್ಚು ಪ್ರಾತಿನಿಧ್ಯವನ್ನು ಕೇಂದ್ರದಲ್ಲಿ ಪಡೆದು ಇಂಡಿಯಾ ದೇಶವನ್ನೇ ಆಲ್ಲಾಡಿಸುತ್ತಾ ಕುಳಿತಿದ್ದಾರೆ. ನಮ್ಮ ಪಾರ್ಲಿಮೆಂಟಿನಲ್ಲಿ ಉತ್ತರ ಪ್ರದೇಶದ ಪ್ರತಿನಿಧಿಗಳ ಸಂಖ್ಯೆ ಜಾಸ್ತಿ ಇದೆ. ಮೈಸೂರಿನಿಂದ ಹೋಗಿರುವವರ ಮಾತು ಅಲ್ಲಿ ಏನು ನಡೆಯುತ್ತದೆ? ಮೈಸೂರು ಲೆಜಿಸ್ಲೇಟಿವ್ ಅಸೆಂಬ್ಲಿಯಾಗಲಿ, ಕೌನ್ಸಿಲ್ ಆಗಲಿ, ಮೈಸೂರು ಪ್ರಾದೇಶಿಕ ಕಾಂಗ್ರೆಸ್ ಆಗಲಿ ನಮ್ಮದೇ ಆದ ಒಂದು ಅಂತಿಮ ತೀರ್ಮಾನವನ್ನು ತೆಗೆದುಕೊಳ್ಳುವ ಹಾಗಿದ್ದರೆ, ನಾವು ಕಂಠ ಶೋಷಣೆ ಮಾಡುತ್ತಿದ್ದೇವೆ, ಎಂದು ಹೇಳಬಹುದು. ನಾವು 'Consuitative body' ಆಗಿರುವುದರಿಂದ ಎಷ್ಟೋ ಅಭಿಪ್ರಾಯಗಳನ್ನು ಅವರ ಮುಂದೆ ಇಡಬೇಕೋ ಅದನ್ನು ಇಡುತ್ತಾ

ಇಲ್ಲ ----- ಮೈಸೂರು, ಮೈಸೂರಾಗಿ ಉಳಿಯಬೇಕೆ ಅಥವಾ ಕರ್ನಾಟಕ ಆಗಬೇಕೆ ಎಂಬ ವಿಚಾರದಲ್ಲಿ ಪ್ರಾಂತ್ಯಗಳ ಪುನರ್ವಿಂಗಡಣಾ ಸಮಿತಿಯವರು ಮೈಸೂರಿನಲ್ಲಿ ಕರ್ನಾಟಕದ ಪರವಾಗಿ ಮೆಜಾರಿಟಿ ಅಭಿಪ್ರಾಯ ಎಷ್ಟಿದೆ ಎಂಬುದನ್ನು ತಿಳಿದುಕೊಳ್ಳಬೇಕು.

------ ಮೈಸೂರು ಸಂಸ್ಥಾನದಲ್ಲಿ ಈ ರೀತಿ ಎರಡು ಕರ್ನಾಟಕವಾಗಬೇಕು ಎಂಬ ಅಭಿಪ್ರಾಯವಿದ್ದ ಪಕ್ಷದಲ್ಲಿ ಯಾವ ಕೋಮಿಗೂ, ಯಾವ ಪಂಗಡಕ್ಕೂ ಸೇರದೆ ಇರುವಂತಹ ವ್ಯಕ್ತಿಗಳು ಈ ರೀತಿ ವರದಿ ಕೊಡುತ್ತಿದ್ದಾರೆ. ಅವರು ಕರ್ನಾಟಕವಾಗಬೇಕೆಂದು ಸಲಹೆ ಮಾಡಿರುವುದರಿಂದ ಅದು ಪಕ್ಷಾತೀತವಾಗಿದೆ ಎಂದು ಭಾವಿಸುತ್ತೇನೆ. ------- ಮೈನಾರಿಟಿ ಹಿತ ದೃಷ್ಟಿಯಿಂದ ವಿಚಾರವನ್ನು ಕೂಡ ಈ ವರದಿಯಲ್ಲಿ ಹೇಳಿದ್ದಾರೆ. ಶ್ರೀಮತಿ ಬಳ್ಳಾರಿ ಸಿದ್ದಮ್ಮನವರೂ ಮಾತನಾಡುತ್ತಾ ಕರ್ನಾಟಕವಾದರೆ ಎಲ್ಲಿ convert ಮಾಡುತ್ತಾರೆಯೋ, ಶಿವಶಿವ ಎಂದು ಹೇಳಿದರು. ಶ್ರೀಮತಿ ಬಿ.ಎಲ್. ಸುಬ್ಬಮ್ಮನವರು ಅಯಯ್ಯೋ ರಾಮ ರಾಮ ಎಂದು ಹೇಳಿದರು. ಬೆಂಕಿ ಇಲ್ಲದೆ ಹೊಗೆ ಆಡುವುದಿಲ್ಲ. ಕೋಮುಗಳಿಂದ ದೂರವಾಗಿದ್ದೇವೆ. ಕೋಮವಾರು ಬಾವನೆಯಿಲ್ಲ ಎಂದು ಎಷ್ಟೋಸಾರಿ ನಾವು ಹೇಳಿದಾದರು, ಕೂಡ ಭಾಷಣಗಳನ್ನು ಮಾಡತಕ್ಕ ರೀತಿನೀತಿಗಳನ್ನು ನೋಡಿದರೆ ಕೋಮುರಾರು ಬಾವನೆ ಎರಡು ಕಡೆಯೂ ಇದ್ದೇ ಇದೆ. ಅದು ಇಲ್ಲ ಎಂದರೆ ನಾನು ಆತ್ಮಸಾಕ್ಷಿಯಾಗಿ ಒಪ್ಪುವುದಿಲ್ಲ. ಇಲ್ಲದೇ ಇರುವುದನ್ನೆಲ್ಲಾ ಈ ವರದಿಯಲ್ಲಿ ತಂದು ಲಿಂಗಾಯಿತರು, ಒಕ್ಕಲಿಗರು, ಎಂದೇಕೆ. ಇಲ್ಲಿ ಹೇಳಿದ್ದಾರೆಂದು ಕೆಲವರು ಕೇಳಿದರು. ಇದ್ದುದನ್ನು ಇದ್ದ ಹಾಗೆ ಅವರು ಬರೆದಿದ್ದಾರೆ. ಒಂದು ವೇಳೆ ಉತ್ತರ-ಕರ್ನಾಟಕವನ್ನೇ ಬೇರೆ ಮಾಡಿಕೊಳ್ಳಿ ಎಂದರೆ, ಅಲ್ಲಿ ಪೂರ್ತಿ ಲಿಂಗಾಯಿತರೇ ಆಗುತ್ತಾರೆ. ಇಲ್ಲಿ ಮೈಸೂರಿಗೆ, ಮಂಗಳೂರು, ಕೊಳ್ಳೇಗಾಲ ಸತ್ಯಮಂಗಲದವರೆಗೆ ಇರುವ ಪ್ರದೇಶವನ್ನೆಲ್ಲಾ ಸೇರಿಸಿದರೆ, ಇವರು ಶೇ 40 ರಷ್ಟಾಗುತ್ತಾರೆ. ಇದನ್ನೆಲ್ಲಾ ನೋಡಿ ಕಜ್ಜಾಯ ವಿಷಯದಲ್ಲಿ ಕೋತಿನ್ಯಾಯ ತೀರ್ಮಾನ ಮಾಡಿದ ಹಾಗೆ ಯಾರೂ ಹೆಚ್ಚಾಗಿಲ್ಲದೇ ಇರುವ ಹಾಗೆ ಎಲ್ಲವನ್ನೂ ಸೇರಿಸಿ ಒಂದೇ ಮಾಡಬೇಕೆಂದು ಸೂಚಿಸಿದ್ದಾರೆ. ಇನ್ನು ಬಳ್ಳಾರಿ ಆಂಧ್ರಕ್ಕೆ ಕೊಡಿ, ಕೋಲಾರವನ್ನು ಇಲ್ಲಿಯೇ ಇಟ್ಟುಕೊಳ್ಳಿ, ಎಂದು ಹೇಳಿದ್ದಾರೆ. ಈ ಸಲಹೆಯನ್ನು ಮೈಸೂರು ದೇಶದ ಜನರ ಅಭಿಪ್ರಾಯಕ್ಕನುಗುಣವಾಗಿ ಕೊಟ್ಟಿದ್ದಾರೆಯೋ, ಹೊರಗಿನವರ ಅಭಿಪ್ರಾಯಕ್ಕೆ ಅನುಗುಣವಾಗಿ ಕೊಟ್ಟಿದ್ದಾರೆಯೋ ಗೊತ್ತಾಗುವುದಿಲ್ಲ. ಅಂತೂ ಒಟ್ಟಿನಲ್ಲಿ ಕೋಮು ಪ್ರಾಧಾನ್ಯಕ್ಕೆ ಬರದೆ ಇರುವ ಹಾಗೆ ಮಾಡಿದ್ದಾರೆ. ಈ ವರದಿ ಅಂಗೀಕಾರಾರ್ಹವಾಗಿದೆ. ಇದನ್ನು ಎಲ್ಲಾರೂ ಒಪ್ಪಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

## ಪಾನ ನಿರೋಧ ಜಾರಿ ಕುರಿತು *

ಶ್ರೀ ಬಿ. ರಾಚಯ್ಯ (ಯಳಂದೂರು)- ಸ್ವಾಮಿ, ನಮ್ಮ ಮೈಸೂರು ಸಂಸ್ಥಾನದಲ್ಲಿ ಸ್ವರಾಜ್ಯ ಬರುವುದಕ್ಕೆ ಮುಂಚಿತವಾಗಿಯೇ, ಎಂದರೆ 1938 ನೆಯ ಇಸವಿಯಲ್ಲಿಯೇ ರಾಮನಗರ, ಚೆನ್ನಪಟ್ಟಣ ಮುಂತಾದ ಕೆಲವು ಬಾಗಗಳು ಪಾನ-ನಿರೋಧವನ್ನು ಜಾರಿಗೆ ತಂದಿದ್ದರು. ಇದು ಕೆಲವು ಕಾಲ ನಡೆದ ಮೇಲೆ 1947 ನೆಯ ಇಸವಿಯಿಂದೀಚೆಗೆ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಮದ್ಯ ಪಾನದಿಂದಾಗತಕ್ಕ ಕೆಡಕನ್ನು ಸಮಾಜದಲ್ಲಿ ತೊಡೆದುಹಾಕುವುದಕ್ಕಾಗಿ ದೇಶಾದ್ಯಂತ ಪಾನ-ನಿರೋಧವನ್ನು ಕ್ರಮೇಣ ಜಾರಿಗೆ ತರತಕ್ಕದೆಂಬು ತತ್ವವನ್ನು ನಮ್ಮ ಸರ್ಕಾರ ಅಂಗೀಕರಿಸುತ್ತಾ ಬಂದಿದೆ. ಈ ಪಾನನಿರೋಧದಿಂದ ಸಂಸ್ಥಾನಕ್ಕಾಗತಕ್ಕ ನಷ್ಟವನ್ನು ಸರಿತೂಗಿಸುವುದಕ್ಕಾಗಿ ಸರ್ಕಾರ 1918ನೆಯ ಇಸವಿಯಲ್ಲಿ ಮಾರಾಟ ತೆರಿಗೆ ಎಂಬ ಒಂದು ತೆರಿಗೆಯನ್ನು ಕೂಡ ಹಾಕಿದರು. ಈ ತೆರಿಗೆ ಹಾಕಿದ ಮೇಲೆ ಇದರ ಕಾನೂನು ಸಂಸ್ಥಾನಾದ್ಯಂತ ಜಾರಿಯಲ್ಲಿದೆ. ಮಾರಾಟ ತೆರಿಗೆಯನ್ನು ಎಲ್ಲ ಕಡೆಯೂ ವಸೂಲು ಮಾಡುತ್ತಿದ್ದಾರೆ. ಆದರೆ ಯಾವ ಉದ್ದೇಶಕ್ಕಾಗಿ ಈ ಮಾರಾಟ ತೆರಿಗೆಯನ್ನು ಸರ್ಕಾರದವರು ವಸೂಲು ಮಾಡುತ್ತಿದ್ದಾರೋ ಆ ಉದ್ದೇಶವನ್ನು ಮಾತ್ರ ಪೂರ್ಣವಾಗಿ ಅವರು ಜಾರಿಗೆ ತರಲಿಲ್ಲ. ಈಗ ಮೈಸೂರು ಸಂಸ್ಥಾನದ ಕೋಲಾರ, ಚಿತ್ರದುರ್ಗ, ಶಿವಮೊಗ್ಗ, ತುಮಕೂರು, ಹಾಸನ ಜಿಲ್ಲೆಯ ಕೆಲವು ಭಾಗಗಳು ಮತ್ತು ರಾಮನಗರ, ಚನ್ನಪಟ್ಟಣ ತಾಲ್ಲೂಕುಗಳಲ್ಲಿ ಪಾನನಿರೋಧ ಜಾರಿಯಲ್ಲಿದೆ. ಇದು ಜಾರಿಯಲ್ಲಿರುವ ಕಡೆ ಸರ್ಕಾರದವರು ಸಾಧ್ಯವಾದ ಮಟ್ಟಿಗೆ, ಈ ವರದಿಯಿಂದ ತಿಳಿದುಬರುವ ಮಟ್ಟಿಗೆ ಕುಡಿತದಿಂದ ಆಗುವ ಕೆಡಕುಗಳು ಕಡಿಮೆಯಾಗುತ್ತಾ ಬರುವಂತೆ ಮಾಡಿದ್ದಾರೆ. ಕುಡಿತದ ಅಭ್ಯಾಸಕ್ಕೆ ಸಿಕ್ಕಿಕೊಂಡಿದ್ದ ಜನ ಅದನ್ನು ಬಿಟ್ಟ ಮೇಲೆ ಆರ್ಥಿಕ ಮಟ್ಟದಲ್ಲಿ ಉತ್ತಮ ಗೊಂಡಿದ್ದಾರೆ. ಅವರು ಜೀವನದಲ್ಲಿ ಮಾಡುತ್ತಿದ್ದ ತಪ್ಪಿತಗಳು ಎಂದರೆ 'crimes' ಕೂಡ ಕಡಿಮೆಯಾಗುತ್ತಾ ಬಂದಿವೆ ಎಂದು ವರದಿಮಾಡಿದ್ದಾರೆ. ಹೀಗಿದ್ದಾಗ್ಯೂ ಕೂಡ ಸರ್ಕಾರದವರು ಸಂಸ್ಥಾನದ ಆಯವ್ಯಯವನ್ನು ನೋಡಿಕೊಂಡು ಅದಕ್ಕೆ ತಕ್ಕಂತೆ ಈ ನೀತಿಯನ್ನು ಜಾರಿಗೆ ಕೊಡಬೇಕು. ಕ್ರಮೇಣ ಪಾನನಿರೋಧ ಜಾರಿಗೆ ಬರಬೇಕೆಂದು ಒಪ್ಪಿಕೊಂಡು ಬಂದಿದ್ದರೂ ಇದನ್ನು ಯಶಸ್ವಿಯಾಗಿ ನಡಸದೇ ಇರುವುದು ಶೋಚನೀಯವಾದ ವಿಷಯ. 1948ನೆಯ ಇಸವಿಯಲ್ಲಿ ಪಾನನಿರೋಧ ಜಾರಿಗೆ ಬಂದ ಕೆಲವು ಜಿಲ್ಲೆಗಳಲ್ಲಿ 1949ರಲ್ಲಿ ಮುಂದುವರೆಯಿತು, ಅಲ್ಲಿಂದೀಚೆಗೆ 1953ರಲ್ಲಿ ಮಾತ್ರ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ಜಾರಿಗೆ ತಂದಿದ್ದಾರೆ. ಅಲ್ಲಿಂದೀಚೆಗೆ ಒಂದು ಹೆಜ್ಜೆ ಕೂಡ ಮುಂದಿಟ್ಟಂತೆ ಕಾಣಲಿಲ್ಲ. ಈ ಕಾರಣದಿಂದ ಸರ್ಕಾರಕ್ಕೆ ಪಾನನಿರೋಧದಲ್ಲಿ ಮೊದಲಿದ್ದ ನಂಬಿಕೆ ಇದೆಯೋ ಇಲ್ಲವೋ ಎಂದು ಪ್ರಶ್ನೆಮಾಡಬೇಕಾಗಿದೆ. ಒಂದು ವೇಳೆ ಸಂಸ್ಥಾನದ ಹಣಕಾಸಿನ ಪರಿಸ್ಥಿತಿಯಿಂದ ಮುಂದುವರೆಸಲಾಗದೆ ಅಲ್ಲಿಗೆ ನಿಲ್ಲಿಸಿದ್ದೇವೆ. ನಮ್ಮ ಸಹಾಯಕ್ಕೆ ಕೇಂದ್ರ ಸರ್ಕಾರ ಬಂದರೆ ಆಗ ಮಿಕ್ಕ ಕಡೆ ಜಾರಿಗೆ ಕೊಡುತ್ತೇವೆ ಎಂದು ಸರ್ಕಾರ ಹೇಳುವುದಾದರೆ, ಕೇಂದ್ರ ಸರ್ಕಾರದ ಅಪ್ಪಣೆಯನ್ನು ಪಡೆದೂ ನೀವು ಪಾನ ನಿರೋಧ ನೀತಿಯನ್ನು

* ವಿಧಾನ ಸಭಾ ನಡವಳಿಕೆ ದಿನಾಂಕ 28ನೇ ಮಾರ್ಚ್, 1956.

ಒಪ್ಪಿಕೊಳ್ಳಲಿಲ್ಲವೆಂದು ಹೇಳಬೇಕಾಗುತ್ತದೆ. ಕೇಂದ್ರದವರು ದೇಶಾದ್ಯಂತ ಪಾನನಿರೋಧವನ್ನು ಜಾರಿಗೆ ತರಬೇಕೆಂದು ಹೇಳುವುದಕ್ಕೆ ಮೊದಲೇ ಮೈಸೂರು ಸರ್ಕಾರದವರು ಈ ನೀತಿಯನ್ನೊಪ್ಪಿಕೊಂಡು ಮುಂದುವರೆಸಿಕೊಂಡು ಬಂದಿದ್ದಾರೆ. ಈ ಇಲಾಖೆಯಲ್ಲಿ ಕಳ್ಳಭಟ್ಟಿ ಸಾರಾಯಿ ಜಾಸ್ತಿಯಾಗುತ್ತಿದೆ. ಅದುದರಿಂದ ಈ ನೀತಿಯನ್ನು ಯಶಸ್ವಿಯಾಗಿ ಮುಂದುವರಿಸುವುದಕ್ಕೆ ಆಗಲಾರದು, ಮಧ್ಯವರ್ತಿ ಜನರಿಗೆ ಲಾಭ ದೊರೆಯುತ್ತದೆ, ಸರ್ಕಾರಕ್ಕೆ ದೊರೆಯುವುದಿಲ್ಲ ಎಂದು ಹೇಳುವುದಾದರೆ, ಅದಕ್ಕೆ ನಾನೊಂದು ಹೇಳುತ್ತೇನೆ. ನಮ್ಮ ದೇಶಾದ್ಯಂತ ಅನೇಕ ಕಾನೂನುಗಳನ್ನು ಮಾಡಿದ್ದೇವೆ. ಇಂಡಿಯನ್ ಪೀನಲ್ ಕೋಡ್, ಕ್ರಿಮಿನಲ್ ಪ್ರೊಸೀಜರ್ ಕೋಡ್ ಮುಂತಾದ ಅನೇಕ ಕಾನೂನುಗಳನ್ನು ಮಾಡಿದ್ದೇವೆ. ಇವುಗಳಿದ್ದರೂ ಕೂಡ ನಿತ್ಯಜೀವನದಲ್ಲಿ ಅನೇಕ ತಪ್ಪಿತಗಳು ನಡೆಯುತ್ತಿವೆ. ಹಾಗೆ ಜನರು ತಪ್ಪು ಮಾಡುತ್ತಿರುವುದರಿಂದ ಈ ಕಾನೂನುಗಳನ್ನು ಮಾಡಿದ್ದೇವೆ. ಇವುಗಳಿದ್ದರೂ ಕೂಡ ನಿತ್ಯ ಜೀವನದಲ್ಲಿ ಅನೇಕ ತಪ್ಪಿತಗಳು ನಡೆಯುತ್ತಿವೆ. ಹಾಗೆ ಜನರು ತಪ್ಪು ಮಾಡುತ್ತಿರುವುದರಿಂದ ಈ ಕಾನೂನುಗಳನ್ನೇ ಬಿಟ್ಟುಬಿಡಬೇಕೆಂದು ಹೇಳುವುದಕ್ಕಾಗುವುದಿಲ್ಲ. ಕಾನೂನುಗಳಿದ್ದರೂ ಕೂಡ ಕೆಲವು ತಪ್ಪುಗಳಾಗಿಯೇ ಆಗುತ್ತವೆ. ನಮ್ಮ ನೀತಿಯನ್ನು ಯಶಸ್ವಿಗೊಳಿಸಬೇಕೆ ವಿನಾ ನಮ್ಮ ನೀತಿಯನ್ನು ಮಧ್ಯದಲ್ಲಿ ಬದಲಾಯಿಸುವುದಕ್ಕಾಗುವುದಿಲ್ಲ. ಅಂದ ಮೇಲೆ ಪಾನ ನಿರೋಧದಲ್ಲಿಯೂ ಕೂಡ ಅನೇಕ ಎಡರು ತೊಡರುಗಳಿವೆ. ಇಡೀ ದೇಶಾದ್ಯಂತ ಜಾರಿಗೆ ತಂದಿದ್ದರೆ ಒಳ್ಳೆಯದಾಗುತ್ತಿತ್ತು. ಆದರೆ ನಮ್ಮ ಸರ್ಕಾರದವರು ಒಂದು ನೀತಿಗನುಗುಣವಾಗಿ ಎಷ್ಟರ ಮಟ್ಟಿಗೆ ಮುಂದುವರೆಸಿಕೊಂಡು ಹೋಗಬಹುದೋ ಅಷ್ಟರಮಟ್ಟಿಗೆ ಮುಂದುವರೆಸಿಕೊಂಡು ಹೋಗಬೇಕೆಂದು, ಒಂದು ರೀತಿಯಲ್ಲಿ ಜಾರಿಗೆ ತಂದಿದ್ದಾರೆ. ಈ ವರ್ಷ ನಂಜನಗೂಡು ಸಬ್ ಡಿವಿಷನ್ ನಲ್ಲಿ ಜಾರಿಗೆ ತರಬೇಕೆಂದು ನಾನು ಈ ಠರಾವು ತಂದಿದ್ದೇನೆ. ಈ ಸಬ್ ಡಿವಿಷನ್‌ನಲ್ಲಿ ಈ ಬಾಬಿನಿಂದ ಸುಮಾರು ಹದಿನಾರು ಲಕ್ಷ ರೂಪಾಯಿ ಮಾತ್ರ ಉತ್ಪತ್ತಿಯಾಗುತ್ತಿದೆ. ಅಲ್ಲಿ ಕುಡಿತದ ಹಾವಳಿಯಿಂದ ಬಹಳ ಜನರು ನೊಂದಿದ್ದಾರೆ. ಇದರಿಂದ ಅವರು ತಮ್ಮ ಆರ್ಥಿಕ ಪರಿಸ್ಥಿತಿಯಲ್ಲಿ ಹಿಂದೆ ಬೀಳುವುದಕ್ಕವಕಾಶವಾಗಿದೆ. ಅಲ್ಲದೆ ಮದರಾಸು ಪ್ರಾಂತ್ಯದಲ್ಲಿ ಪಾನನಿರೋಧ ಜಾರಿಯಲ್ಲಿರುವುದರಿಂದ ನಮ್ಮ ಮೈಸೂರು ಸಂಸ್ಥಾನದಲ್ಲಿರತಕ್ಕ ಪ್ರದೇಶಗಳ ಅಂಗಡಿಗಳಿಗೆ ಅಲ್ಲಿಂದ ಜನ ಬಂದು ಕುಡಿದು ಹೊಗುವುದು ಜಾಸ್ತಿಯಾಗುತ್ತಿದೆ. ಅಲ್ಲಿ ಪಾನನಿರೋಧ ಯಶಸ್ವಿಯಾಗಿ ನಡೆಯುವುದಕ್ಕೂ ಇಲ್ಲಿ ಕಳ್ಳತನದಿಂದ ಮಾರಾಟಮಾಡುವುದನ್ನು ತಪ್ಪಿಸುವುದಕ್ಕೂ ಈ ಸಬ್-ಡಿವಿಷನ್‌ನಲ್ಲಿ ಪಾನನಿರೋಧವನ್ನು ಕೂಡಲೇ ಜಾರಿಗೆ ತರಬೇಕೆಂದು ಹೇಳಿ ಈ ನಿರ್ಣಯವನ್ನು ಸಭೆಯ ಅನುಮೋದನೆಗಾಗಿ ಮಂಡಿಸಿದ್ದೇನೆ.

## ವಿಶ್ವವಿದ್ಯಾನಿಲಯದ ತಿದ್ದುಪಡಿ*

ಶ್ರೀ ಬಿ. ರಾಚಯ್ಯ (ಚಾಮರಾಜನಗರ)- ಮಾನ್ಯ ಅಧ್ಯಕ್ಷರೇ, ಈಗ ನಮ್ಮ ಮುಂದೆ ಇರತಕ್ಕ ಮೈಸೂರು ವಿಶ್ವವಿದ್ಯಾನಿಲಯದ ಎರಡನೆಯ ತಿದ್ದುಪಡಿ ಮಸೂದೆಯ ವಿಷಯದಲ್ಲಿ ಈಗಾಗಲೇ ಬಹಳ ಚರ್ಚೆಯಾಗಿದೆ. ರಾಜ್ಯ ಪುನರ್ ವಿಂಗಡಣೆಯಾದ ನಂತರ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಕಾಲೇಜುಗಳು ಮದ್ರಾಸ್ ಯೂನಿವರ್ಸಿಟಿಗೆ ಅಫಿಲಿಯೇಟ್ ಆಗಿದ್ದ ಎಲ್ಲ ಕಾಲೇಜುಗಳು ಒಟ್ಟಿಗೆ ಕರ್ನಾಟಕ ಯೂನಿವರ್ಸಿಟಿಗೆ ಸೇರಬೇಕೆಂದು ಇರುವ ಒಂದು ಮಸೂದೆ ಇದ್ದದ್ದನ್ನು ನಾನು ನೋಡಿದ್ದೇನೆ. ಎರಡನೆಯ ಸಾರಿ ಮಸೂದೆಯು ಬರುವ ಮುಂಚಿತವಾಗಿ ಕರ್ನಾಟಕ ಯೂನಿರ್ವಸಿಟಿ ಮತ್ತು ಮೈಸೂರು ಯೂನಿವರ್ಸಿಟಿ ಇವು ಎರಡೂ ಅಟಾನಮಸ್ ಆಗಿರುವುದರಿಂದ ಯಾವ, ಯಾವ ಕಾಲೇಜುಗಳು, ಯಾವ, ಯಾವ ಯೂನಿವರ್ಸಿಟಿಗೆ ಅಫಿಲಿಯೇಟ್ ಆಗಬೇಕೆಂಬ ವಿಚಾರದಲ್ಲಿ ಅವರಿಗೆ ಒಂದು option ಕೊಟ್ಟಿರುವ ಸ್ಟಾಟುಟರಿ ಆರ್ಡಿನೆನ್ಸ್ ಇದೆ. ಒಂದು ಭಾಗದ ಯಾವ ಯಾವ ಜಿಲ್ಲೆಗಳಲ್ಲಿಯ ಕಾಲೇಜುಗಳನ್ನು ಒಂದು ಯೂನಿವರ್ಸಿಟಿಗೆ ಸೇರಿಸಬೇಕು ಎಂಬ ಬಗ್ಗೆ ಗೊತ್ತು ಮಾಡುವುದು ಸೂಕ್ತ. ಈ ಮಸೂದೆಯ ಪ್ರಕಾರ 12 ಜಿಲ್ಲೆಗಳ ಕ್ಷೇತ್ರದಲ್ಲಿರುವ ಕಾಲೇಜುಗಳು ಮೈಸೂರು ಯೂನಿವರ್ಸಿಟಿಗೆ ಸೇರತಕ್ಕದ್ದು ಎಂದು ಇದೆ. ಇದರಲ್ಲಿ ಒಂದು ಸಂಶಯ ಉದ್ಭವಿಸುತ್ತದೆ. ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಮೂರು ಕಾಲೇಜುಗಳು ಮೊದಲು ಅಫಿಲಿಯೇಟ್ ಆಗಿದ್ದವು. ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿದ್ದ ಎಲ್ಲಾ ಕಾಲೇಜುಗಳೂ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇರಬೇಕು ಎಂದು ಇರುವುದು ಸರಿಯಾದುದು ಎಂದು ಕಾಣುತ್ತದೆ, ಮಣಿಪಾಲ ಎಂಜಿನಿಯರಿಂಗ್ ಕಾಲೇಜು, ಲಾಕಾಲೇಜು, ಇವು ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಸೇರಬೇಕೆಂದು ಮಾಡಿರುವ ತಿದ್ದುಪಡಿಯಲ್ಲಿ ಕಾಲೇಜು ಮ್ಯಾನೇಜ್‌ಮೆಂಟಿನ ಕೈವಾಡ ಇದ್ದ ಹಾಗೆ ಕಾಣುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯ ಜನಾಭಿಪ್ರಾಯವನ್ನು ತೆಗೆದುಕೊಳ್ಳಬೇಕೆಂದು ಶ್ರೀ ಮಂಜಯ್ಯ ಶೆಟ್ಟಿಯವರು ಮಾತನಾಡುವಾಗ ಹೇಳಿದರು. ಕಾಲೇಜುಗಳ ಮ್ಯಾನೇಜ್‌ಮೆಂಟಿಗೆ ಅಭಿಪ್ರಾಯ ತೆಗೆದುಕೊಂಡು ಬಹುಶಃ ಈ ಬಿಲ್ಲನ್ನು ತಂದಿದ್ದಾರೆಂದು ನನಗೆ ಭಾಸವಾಗುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯು ಮೈಸೂರಿಗೆ ಹೊಂದಿಕೊಂಡಿರುವುದರಿಂದಲೂ ಮತ್ತು ಎಲ್ಲಾ ಕಾಲೇಜುಗಳೂ ಒಂದೇ ವಿಶ್ವವಿದ್ಯಾನಿಲಯಕ್ಕೆ ಒಳಪಡುತ್ತಿರುವುದರಿಂದಲೂ ವಿದ್ಯಾಭ್ಯಾಸ ಕ್ರಮದಲ್ಲಿ, ಪಾಠಪ್ರವಚನದಲ್ಲಿ ಭಿನ್ನಾಭಿಪ್ರಾಯ ಬರುವುದಿಲ್ಲ. ವಿದ್ಯಾಭ್ಯಾಸಕ್ಕೆ ಅನುಕೂಲವಾಗುತ್ತದೆ. ಟೆಕ್ನಿಕಲ್ ಕಾಲೇಜುಗಳಲ್ಲಿ ಪ್ರವೇಶ ದೊರೆಯುವುದಕ್ಕೂ ಅನುಕೂಲವಾಗುತ್ತದೆ. ಎಲ್ಲಾ ದೃಷ್ಟಿಯಿಂದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇರ್ಪಡೆಯಾಗುವುದು ತುಂಬ ಅನುಕೂಲವಾಗುತ್ತದೆ. ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆಯೋ ವಿನಾ ಯಾವ ರಾಜಕೀಯ ಕಾರಣದ ಸಲುವಾಗಿಯೂ ಅಲ್ಲ. ನಮ್ಮ

* ವಿಧಾನ ಸಭೆ ನಡವಳಿಕೆ ದಿನಾಂಕ ಅಕ್ಟೋಬರ್, 1957 ಪುಟ: 2475-2476.

ಮೈಸೂರು ರಾಜ್ಯದಲ್ಲಿ ಈಗ ಎರಡು ವಿಶ್ವವಿದ್ಯಾನಿಲಯಗಳು ನಡೆಯುತ್ತಿವೆ. ಈ ಎರಡೂ ವಿಶ್ವವಿದ್ಯಾನಿಲಯಗಳಿಗೆ ಹೆಚ್ಚಾಗಿ ಗ್ರಾಂಟು ಕೊಡಬೇಕಾಗುವುದು, ಹಾಗೂ ಆಡಳಿತ ಕೂಡ ಸರಿಯಾಗಿ ನಡೆಯುವಂತೆ ನೋಡಬೇಕಾದುದು ನಮ್ಮ ಕರ್ತವ್ಯ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯ ಜನಾಭಿಪ್ರಾಯ ತೆಗೆದುಕೊಂಡು ಅಲ್ಲಿಯ ಕಾಲೇಜುಗಳನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇರಿಸಬಹುದು. ಒಂದು ವೇಳೆ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಅಫಿಲಿಯೇಟ್ ಆಗಿರುವ ಕಾಲೇಜುಗಳು ಸಾಕಷ್ಟು ಇಲ್ಲದಿದ್ದರೆ ಅದಕ್ಕೆ ಸೇರಿಸಬಹುದಾಗಿತ್ತು. ಮೈಸೂರು ವಿಶ್ವವಿದ್ಯಾನಿಲಯ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶ ಕೊಡುವಾಗ ರಾಜಕೀಯ ಸಂಕುಚಿತ ಮನೋಭಾವನೆಯಿಂದ ವರ್ತಿಸಬಾರದೆಂದು ಶ್ರೀ ಷಂಶುದ್ದೀನ್‌ರವರು ಹೇಳಿದರು. ಆದರೆ ಈ ರೀತಿ ಮಾಡಿಲ್ಲ. ಪ್ರಿಫರೆನ್ಸ್ ಕೊಡಬೇಕು ಎಂದು ಇದೆ. ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಂದು ಪ್ರವೇಟ್ ಟೆಕ್ನಿಕಲ್ ಕಾಲೇಜು ಇದೆ. ಮಣಿಪಾಲ್ ಮತ್ತು ಹುಬ್ಬಳ್ಳಿ ಮೆಡಿಕಲ್ ಕಾಲೇಜುಗಳು ಇವೆ. ಹಿಂದುಳಿದ ವರ್ಗದವರಿಗೆ ಕೆಲವೊಂದು ಪ್ರಮಾಣದಲ್ಲಿ ಸೀಟು ಕೊಡಬೇಕೆಂದು ನಿಗದಿ ಮಾಡಿದ್ದಾರೆ. ಅದಕ್ಕೆ ಒಪ್ಪಿದ್ದರೆ ಅಫಿಲಿಯೇಟ್ ಮಾಡಿಕೊಂಡಿದ್ದಾರೆ. ಹಿಂದುಳಿದ ವರ್ಗಗ ವಿದ್ಯಾರ್ಥಿಗಳಿಗೆ ಕಾಲೇಜುಗಳಲ್ಲಿ ನಿಗದಿ ಮಾಡಿದ ಒಂದು ಪ್ರಮಾಣದಲ್ಲಿ ಸೀಟು ಕೊಡದಿದ್ದರೆ ಅನ್ಯಾಯ ಮಾಡಿದ ಹಾಗೆ ಆಗುತ್ತದೆ. ಕೆಲವು ಜನ ಅನುಕೂಲಸ್ಥರಾದವರು. ಡೊನೇಷನ್ ಕೊಟ್ಟರೆ ಅವರಿಗೆ ಕಾಲೇಜು ಆಡಳಿತದಲ್ಲಿ ಭಾಗ ದೊರೆಯುತ್ತದೆ ಮತ್ತು ಸೀಟು ಸಹ ಕೊಡಲಾಗುತ್ತದೆ. ಇದರಿಂದ ಅನುಲಕೂಲಸ್ಥರಾದವರಿಗೆ ಮಾತ್ರ ಲಾಭವಾಗುತ್ತದೆ. ಬೇರೆಯವರಿಗೆ ಕಾಲೇಜಿನಲ್ಲಿ ಆಡ್ಮಿಷನ್ ಸಿಕ್ಕುವುದಿಲ್ಲ. ಆದರೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಯಾವ ಸಂಕುಚಿತ ಮನೋಭಾವನೆಯಿಂದ ಏನನ್ನೂ ಮಾಡಿಲ್ಲ. ಮುಖ್ಯವಾಗಿ ಟೆಕ್ನಿಕಲ್ ಕಾಲೇಜುಗಳ ಆಡಳಿತವನ್ನು ಸರ್ಕಾರ ತೆಗೆದುಕೊಳ್ಳಬೇಕು. ಎರಡೂ ವಿಶ್ವವಿದ್ಯಾನಿಲಯಕ್ಕೆ ಒಂದೇ ಕಾನೂನು ಇರುವಂತೆ ಮಾಡಬೇಕು. ಬೇರೆ,ಬೇರೆ ರೀತಿಯ ಆಡಳಿತ ವ್ಯವಸ್ಥೆಯು ಎರಡು ವಿಶ್ವವಿದ್ಯಾನಿಲಯಕ್ಕೂ ಇರುವುದು ಸರಿಯಲ್ಲ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯ ಕಾಲೇಜುಗಳು ಮದ್ರಾಸ್ ವಿಶ್ವವಿದ್ಯಾನಿಲಯಗಳಿಗೆ ಈ ಮೊದಲು ಅಫಿಲಿಯೇಟ್ ಆಗಿದ್ದವು. ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು, ಮೆಡಿಕಲ್ ಕಾಲೇಜು, ಮಣಿಪಾಲ ಇಂಜನಿಯರಿಂಗ್ ಕಾಲೇಜು, ಲಾ ಕಾಲೇಜು ಇವು ಜನರಲ್ ಅಕಾಡೆಮಿಕ್ ಸೊಸೈಟಿಯ ಆಡಳಿತಕ್ಕೆ ಒಳಪಟ್ಟಿವೆ. ಸ್ವಾಭಾವಿಕವಾಗಿ ಜನಾಭಿಪ್ರಾಯ ಈ ವಿಚಾರದಲ್ಲಿ ಏನು ಇದೆ ಎಂಬುದನ್ನು ತಿಳಿದುಕೊಳ್ಳಬೇಕು ಎಂದು ನಾನು ಹೇಳುತ್ತೇನೆ.

ಈ ದೃಷ್ಟಿಯಿಂದ ಆ ಜಿಲ್ಲೆಯನ್ನು ಒಂದು ಆಡಳಿತ ಯೂನಿಟ್ ಆಗಿ ತೆಗೆದುಕೊಂಡಿದ್ದಾರೆ. ಮ್ಯಾನೇಜ್ ಮೆಂಟ್ ಪ್ಲೀಸ್ ಮಾಡುವುದಕ್ಕೆ ಕೆಲವು ಕಾಲೇಜುಗಳನ್ನು ಇಲ್ಲಿ, ಮತ್ತೆ ಕೆಲವು ಕಾಲೇಜುಗಳನ್ನು ಅಲ್ಲಿ ಹಾಕಿದ್ದಾರೆಂದು ರಾಜಕೀಯ ಕಾರಣ ಹೇಳಿದರು. ಅವರಿಗೆ ಪ್ರಶ್ನೆ ಮಾಡುತ್ತೇನೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಈ ಜಿಲ್ಲೆಯ ಜನಗಳ ಅಭಿಪ್ರಾಯವನ್ನು ತೆಗೆದುಕೊಂಡು ಈ ಮೂರು ಕಾಲೇಜುಗಳನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇರಿಸತಕ್ಕದ್ದು ಒಳ್ಳೆಯದು ಎಂದು ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತೇನೆ.

## ಮೈಸೂರು ಗೇಣಿ ಮತ್ತು ಕೃಷಿ ಭೂ ಕಾಯಿದೆ ಸಮಿತಿ ಕುರಿತ ವರದಿ*

Report of the Mysore Tenancy and Agricultural Lands laws committee (Discussion continued)

Mr. Speaker- Further debate on the report of the Mysore Tenancy and Agricultural lands laws committee.

ಶ್ರೀ ಬಿ. ರಾಚಯ್ಯ (ಚಾಮರಾಜನಗರ)- ಮಾನ್ಯ ಸಭಾಪತಿಗಳೇ, ಜತ್ತಿ ಸಮಿತಿಯವರು ಒಪ್ಪಿಸಿರತಕ್ಕಂಥ ಮೈಸೂರು ಜಮೀನ್ದಾರಿ ವರದಿಯ ಮೇಲೆ ಈಗಾಗಲೇ ವಿಪುಲವಾದ ಚರ್ಚೆ ಆಗಿದೆ. ಈ ಚರ್ಚೆ ನಡೆಯುವಾಗ ನಾನು ಈ ವರದಿಯ ಮೇಲೆ ಬಂದಂಥ ಕೆಲವು ಸೂಚನೆಗಳನ್ನು ಮತ್ತು ಸಲಹೆಗಳನ್ನು ಕೇಳಿದ್ದೇನೆ. ಅದರಲ್ಲಿ ಬಹಳ ಮಟ್ಟಿಗೆ ಹೆಚ್ಚಿಗೆ ಈ ಭೂಸುಧಾರಣೆ ಸಮಿತಿಯನ್ನು ಸರ್ಕಾರ ನೇಮಿಸುವಾಗ ಮೈಸೂರಿನಲ್ಲಿ ವಿಲೀನವಾದ ನಾನಾ ಪ್ರದೇಶಗಳಲ್ಲಿ ಬಂದಿರತಕ್ಕಂಥ ಗೇಣಿ ಶಾಸನವನ್ನು ಸಮನ್ವಯ ಮಾಡಬೇಕು ಎಂದು ಕೊಟ್ಟಿರುವ ಒಂದು ಆದೇಶವನ್ನು ಎಲ್ಲರೂ ಒಪ್ಪುತ್ತಾರೆ. ಈ ರೀತಿಯಾಗಿ ಒಂದು ವರದಿಯನ್ನು ಕೊಡುವುದಕ್ಕೋಸ್ಕರ ಸರ್ಕಾರ ಈ ಸಮಿತಿಯನ್ನು ನೇಮಕ ಮಾಡಿದ್ದರೆಂಬುದು ತಮಗೆ ತಿಳಿದ ವಿಷಯವಾಗಿದೆ.

ಈಗೇಣಿ ಶಾಸನ ಮತ್ತು ಭೂ ಶಾಸನಕ್ಕೆ ಸಂಬಂಧಪಟ್ಟಂಥ ವಿಚಾರ ಮೈಸೂರಿಗಾಗಲಿ ಅಥವಾ ಐದು ಭಾಗಗಳಿಂದ ಬಂದಂಥ ಪ್ರದೇಶಗಳಿಗಾಗಲಿ ಹೊಸದಾಗಿ ಹೊರಡಿಸಿದ ಕಾನೂನು ಅಲ್ಲವೆನ್ನುತಕ್ಕಂಥಾದ್ದನ್ನು ನಾನು ಸ್ಪಷ್ಟಪಡಿಸಲು ಇಷ್ಟ ಪಡುತ್ತೇನೆ. ಹೀಗೆ ಹೇಳುವಾಗ ಈ ಐದು ಭಾಗಗಳಲ್ಲಿ ವೈಯಕ್ತಿಕ ರೀತಿಯಾದ ಕಾನೂನುಗಳು ಜಾರಿಯಲ್ಲಿದ್ದವು. ಒಂದೊಂದು ಭಾಗದಲ್ಲಿ ಒಂದೊಂದು ರೀತಿಯಾಗಿದ್ದರಿಂದ, ಗೇಣಿದಾರರಿಂದಾಗಲೀ, ಭೂಮಾಲೀಕರಿಗಾಗಲೀ, ಏನೊಂದೂ ತೊಂದರೆಯಾಗಬಾರದೆಂಬ ರೀತಿಯಲ್ಲಿ ಏಕರೀತಿಯಾದ ಒಂದು ಕಾನೂನು ಮಾಡುವಾಗ, ಅದನ್ನು ತರಾತುರಿಯಿಂದ ಮಾಡಬಾರದೆಂದೂ, ಈ ವರದಿ ಪ್ರಚಾರವಾಗಬೇಕು ಮತ್ತು ಜನಾಭಿಪ್ರಾಯವನ್ನು ಕೊಡಿಸಬೇಕು ಎಂಬ ದೃಷ್ಟಿಯಿಂದ ಮೈಸೂರು ಸರ್ಕಾರದವರು ಮನಸ್ಸು ಮಾಡಿ ಈ ಸಮಿತಿಯನ್ನು ನೇಮಿಸಿದರು. ಅದರಂತೆಯೇ ಜತ್ತಿ ಸಮಿತಿಯವರು ತಮಗೆ ಇದ್ದಂಥ ಅವಕಾಶದಲ್ಲಿ ಬಹಳ ಮಟ್ಟಿಗೆ ಈ ಮಾನ್ಯ ಸಭೆಯ ಬಹು ಮಂದಿಗೆ ಒಪ್ಪು ರೀತಿಯಲ್ಲಿ ಒಂದು ವರದಿಯನ್ನು ಸಲ್ಲಿಸಿದ್ದಾರೆ. ಅದಕ್ಕಾಗಿ ನಾನು ಸಂತೋಷವನ್ನು ವ್ಯಕ್ತಪಡಿಸುತ್ತಾ, ನನಗೆ ತಿಳಿದ ಕೆಲವು ವಿಚಾರಗಳನ್ನು ಈ ಮಾನ್ಯ ಸಭೆಯಲ್ಲಿ ನಿವೇದಿಸಿಕೊಳ್ಳಲು ಇಚ್ಛಿಸುತ್ತೇನೆ.

ಈ ಜತ್ತಿ ಸಮಿತಿಯವರು ವರದಿಯನ್ನು ತಯಾರಿಸುವಾಗ ಗೇಣಿ ಶಾಸನಕ್ಕೆ ಸಂಬಂಧಪಟ್ಟಂತೆ, ಗೇಣಿಯ ಒಂದು ಸ್ಥಿರತೆ, ಗೇಣಿ ಮೊಬಲಗು, ಭೂ ಮಾಲೀಕರು ತಾವು ಸ್ವಂತ ಸಾಗುವಳಿ ಸಲುವಾಗಿ ಗೇಣಿದಾರರಿಂದ ಎಷ್ಟು ಜಮೀನು ವಾಪಸು ತೆಗೆದುಕೊಳ್ಳಬಹುದು, ಗೇಣಿದಾರರಿಗೆ ಭೂಮಾಲೀಕರಿಂದ ಜಮೀನನ್ನು ಕೊಂಡುಕೊಳ್ಳುವ ಹಕ್ಕನ್ನು ಎಷ್ಟರ ಮಟ್ಟಿಗೆ

* ವಿಧಾನ ಸಭೆಯ ನಡವಳಿಕೆ ದಿನಾಂಕ 23ನೇ ಮಾರ್ಚ್ 1958 ಪುಟ: 948-951.

ಕೊಡಬೇಕು, ಹಾಗೆ ಕೊಡಬೇಕಾದ ಪಕ್ಷದಲ್ಲಿ, ಈ ಪರಿಹಾರದ ಹಣವನ್ನು ಯಾವ ರೀತಿಯಿಂದ ಪಾವತಿ ಮಾಡಬೇಕು, ಅದಕ್ಕೆ ಎಷ್ಟು ಮೊಬಲಗನ್ನು ನಿರ್ಧರಿಸಬೇಕು. ಇದರಲ್ಲಿ ಯಾರ್‍ಯಾರಿಗೆ ಏನೇನು ರಿಯಾಯಿತಿ ಗಳನ್ನು ಕೊಡಬೇಕು ಎಂಬ ಈ ಅಂಶಗಳನ್ನು ವಿಮರ್ಶೆ ಮಾಡುವಂತೆ ಸರ್ಕಾರದವರು ಸೂಚನೆ ಕೊಟ್ಟಿದ್ದರು. ಈ ಒಂದು ಚೌಕಟ್ಟಿನಲ್ಲಿ ಜತ್ತಿ ಸಮಿತಿಯವರು ವರದಿಯನ್ನು ತಯಾರಿಸಿ ನಮ್ಮ ಮೆಚ್ಚುಗೆಯನ್ನು ಪಡೆದಿದ್ದಾರೆ.

ಬಹಳ ಮಟ್ಟಿಗೆ ಮಾತನಾಡಿದ ಮಾನ್ಯ ಸದಸ್ಯರೆಲ್ಲರೂ ಕೂಡ ಈ ವಿಷಯದಲ್ಲಿ ಒಂದು ರೀತಿಯಾದ ಗೇಣಿ ಶಾಸನವನ್ನು ತರತಕ್ಕುದೆಂದು ಒಪ್ಪಿದರೂ ಕೂಡ, ಹೆಚ್ಚಾಗಿ ವಿವಾದಕ್ಕೆ ಆಸ್ಪದ ಕೊಟ್ಟಂಥ ಒಂದು ವಿಷಯವೆಂದರೆ ಕುಟುಂಬಕ್ಕೆ ನಿರ್ದಿಷ್ಟವಾಗಿ ಎಷ್ಟು ಜಮೀನನ್ನು ನಿಗದಿ ಮಾಡಬೇಕು, ಎನ್ನುವ ವಿಷಯ. ಆ ವಿಷಯದಲ್ಲಿ ಅನೇಕ ರೀತಿಯ ಸೂಚನೆಗಳು ಬಂದುವು. ಈ ಕುಟುಂಬ ಹಿಡುವಳಿ ಮಿತಿ ವಿಷಯದಲ್ಲಿ ವಿರೋಧವಾಗಿ ಮಾತನಾಡಿದ ಮಹನೀಯರೆಲ್ಲರೂ ಕೂಡ ಈ ವರದಿಯನ್ನು ಅಂಕಿ ಅಂಶಗಳ ಮುಖಾಂತರ ಜರಿದಿದ್ದರೆ ಎಷ್ಟು ಜಮೀನು ಕುಟುಂಬ ಹಿಡುವಳಿ ಯಾಗುತ್ತಿತ್ತೆಂದು ಗೊತ್ತಾಗುತ್ತಿತ್ತು. ಸ್ವಲ್ಪ ಮಟ್ಟಿಗೆ ಲೆಕ್ಕ ಹಾಕಿದರೆ 3,600 ರೂಪಾಯಿ ಗ್ರಾಸ್ ಇನ್‌ಕಮ್ ಅಂದರೆ ಒಟ್ಟು ಉತ್ಪತ್ತಿ ಎಂದು ಹೇಳಿದರೆ ಒಂದು (ಫ್ಯಾಮಿಲಿ ಹೋಲ್ಡಿಂಗ್) ಕುಟುಂಬದ ಹಿಡುವಳಿಯು ಆಗಿರಬೇಕು ಮತ್ತು ಇದರ ಮೂರರಷ್ಟು ಒಂದು ಕುಟುಂಬ ಹಿಡುವಳಿ ಮಿತಿ (ಫ್ಯಾಮಿಲಿ ಸೀಲಿಂಗ್) ಆಗಿರಬೇಕು, 3,600 ರೂಪಾಯಿನ ನಾಲ್ಕುವರೆಯಷ್ಟು ಒಂದು ಸಂಸಾರದ ಸ್ವಂತ ಬೇಸಾಯಕ್ಕೆ ಅವಕಾಶವಿರಬೇಕು; ಅದರ ಎರಡರಷ್ಟು ಅವಿಭಕ್ತ ಕುಟುಂಬದ ಸ್ವಂತ ಬೇಸಾಯಕ್ಕೆ ಕೊಡುವುದಕ್ಕೆ ಜತ್ತಿ ಸಮಿತಿ ವರದಿಯಲ್ಲಿ ಸಲಹೆ ಮಾಡಿದ್ದಾರೆ. ಉತ್ಪನ್ನವನ್ನು ಲೆಕ್ಕಹಾಕಲು 1952-53 ನೆಯ ಸಾಲಿನ ಧಾನ್ಯಗಳ ಬೆಲೆಯನ್ನು ನಿಗಧಿಯಾಗಿ ಇಟ್ಟುಕೊಳ್ಳಬೇಕು ಎಂದು ಹೇಳಿದ್ದಾರೆ. ಒಂದು ಎಕರೆ ಖುಷ್ಕಿ ಜಮೀನಿನಲ್ಲಿ ಸುಮಾರು ಸುಮಾರು ಮೂರುಪಲ್ಲ ದಿನಸಿ ಎಂದು ಇಟ್ಟು ಲೆಕ್ಕ ಹಾಕಿ ನೋಡಿದರೆ, ಒಂದು ಎಕರೆಗೆ ಮೂರು ಪಲ್ಲ ಎಂದರೆ 75 ರೂಪಾಯಿ ಆಗುತ್ತದೆ. ಅಲ್ಲಿಗೆ 144 ಎಕರೆ ಖುಷ್ಕಿ ಜಮೀನು ಆಗುತ್ತದೆ. ಅವಿಭಕ್ತ ಕುಟುಂಬಕ್ಕೆ 288 ಎಕರೆ ಆಗುತ್ತದೆ. ಒಂದು ಸಂಸಾರದ ಸ್ವಂತ ಸಾಗುವಳಿಗೆ 216 ಎಕರೆ ಜಮೀನು ಬರುತ್ತದೆ. ಅದೇ ರೀತಿಯಾಗಿ, ಅದರ ಎರಡರಷ್ಟು ಅಂದರೆ 432 ಎಕರೆ ಜಮೀನನ್ನು ಒಂದು ಅವಿಭಕ್ತ ಕುಟುಂಬದ ಸ್ವಂತ ಸಾಗುವಳಿಗೆ ಕೊಡಬಹುದು, ಎಂದು ಜತ್ತಿ ಸಮಿತಿಯವರು ಶಿಫಾರಸು ಮಾಡಿದ್ದಾರೆ.

ಆ ದೃಷ್ಟಿಯಿಂದ ನೋಡುವುದಾದರೆ ಇದರಿಂದ ಎಷ್ಟು ಜನಕ್ಕೆ ತೊಂದರೆಯಾಗುತ್ತದೆ ಅಥವಾ ಎಷ್ಟು ಜನ ಜಮೀನ್ದಾರರು ಈ ವರದಿಯ ಪರಿಮಿತಿಯಲ್ಲಿ ಬರುತ್ತಾರೆ ಎಂಬುದನ್ನು ಲೆಕ್ಕ ಹಾಕಿದರೆ ಅವರು ಕೊಟ್ಟಿರತಕ್ಕ ಅಂಕಿ ಅಂಶಗಳ ಪ್ರಕಾರ 200, 300 ಎಕರೆವರೆಗೂ 1,693 ಜನ ಹಿಡುವಳಿದಾರರು ಇದ್ದಾರೆ. ಹಾಗೆಯೇ 800 ರಿಂದ 500 ಎಕರೆ ವರೆಗೂ 838 ಜನರಿದ್ದಾರೆ. 500 ರಿಂದ 1000ದವರೆಗೂ 379 ಜನ ಇದ್ದಾರೆ. 1000 ಎಕರೆ ಇರುವವರು 153 ಜನ ಇದ್ದಾರೆ. ಇಲ್ಲಿರುವ ರೀತಿಯಲ್ಲಿ ಕಾನೂನು ಮಾಡಿದ್ದೇ ಆದರೆ ಇಷ್ಟು ಜನಕ್ಕೆ ಇದು

ಅಳವಡಿಸುತ್ತದೆ ಎಂದು ನನ್ನ ಭಾವನೆ. ಈ ರೀತಿ ಆಗುವುದರಿಂದ ಈ ವರದಿ ಪ್ರಗತಿ ಪರವಾಗಿಯೋ ಅಥವಾ ಇನ್ನು ಹಿಂದಕ್ಕೆ ಹೋಗಿದೆಯೋ ಎಂದು ಹೇಳಿದರೆ, ಹೈದರಾಬಾದ್, ಮುಂಬೈ, ಕರ್ನಾಟಕದಲ್ಲಿ ಏನು ಗೇಣಿ ಕಾನೂನು ಮಾಡಿದ್ದಾರೋ ಅದಕ್ಕಿಂತ ಬಹಳ ಹಿಂದೆ ಹೋಗಿದೆ ಎಂದು ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಈ ರೀತಿಯಾಗಿ ಒಂದು ಕುಟುಂಬಕ್ಕೆ ನಾವು 216 ಎಕರೆ ಮತ್ತು ಅವಿಭಕ್ತ ಕುಟುಂಬಕ್ಕೆ 432 ಎಕರೆ ಖುಷ್ಕಿ ಜಮೀನನ್ನು ಕೊಡುವುದಾದರೆ ನೀವು ಯಾವ ರೀತಿಯಲ್ಲೂ, ಕೂಡ ಗೇಣಿದಾರರಿಗಾಗಲೀ, ಗೇಣಿಯನ್ನು ಅವಲಂಬಿಸಿಕೊಂಡಿರತಕ್ಕ ಜನಗಳಿಗೆ ಯಾವ ವಿಧವಾದ ಸೌಕರ್ಯವನ್ನು ಕೂಡ ಒದಗಿಸಿ ಕೊಟ್ಟಂತೆ ಆಗುವುದಿಲ್ಲ. ಇದು ಅಂತಹ ಪ್ರಗತಿಪರವಾದ ಕಾಯಿದೆಯಾಗುವುದಿಲ್ಲ ಎಂದು ಹೇಳುತ್ತೇನೆ. ಈ ರೀತಿ ಗೇಣೀ ಶಾಸನವನ್ನು ಮಾಡಿದ್ದೇ ಆದರೆ ದೇಶದಲ್ಲಿ ಅಲ್ಲೋಲ, ಕಲ್ಲೋಲವಾಗುತ್ತದೆ. ನಾವು ಜನತೆಗೆ ಏನು ಬರವಸೆ ಕೊಟ್ಟು ಬಂದಿದ್ದೇವೆಯೋ ಅದನ್ನು ಈಡೇರಿಸಿದ ಹಾಗಾಗುವುದಿಲ್ಲ. ಕಾಂಗ್ರೆಸ್ ನವರು ಮೊದಲನೆಯ ಚುನಾವಣೆ ಘೋಷಣೆಯಲ್ಲಿ ಹೇಳಿದ್ದಾರೆ. ಹಾಗೂ ಎರಡನೆಯ ಚುನಾವಣೆಯಲ್ಲೂ ಹೇಳಿದ್ದಾರೆ. ನಾವು ಇಂಡಿವಿಜ್ಯುಯಲ್ ಹೋಲ್ಡಿಂಗ್‌ನ ಮೇಲೆ ಸೀಲಿಂಗ್ ಹಾಕುತ್ತೇವೆಂದು ಹೇಳಿ ಇವತ್ತಿನ ದಿವಸ ಕಾಂಗ್ರೆಸ್‌ನವರಾದ ನಾವು ಈ ರೀತಿ ಕಾನೂನು ಮಾಡುವುದಾದರೆ ಆಹಾರದ ಉತ್ಪಾದನೆಗೆ ಅಡಚಣೆಯಾಗುತ್ತದೆ. ದೇಶದಲ್ಲಿ ಆಹಾರ ಪರಿಸ್ಥಿತಿ ಇನ್ನೂ ಕೆಳಮಟ್ಟಕ್ಕೆ ಹೋಗುತ್ತದೆ ಎನ್ನುವ ವಾದ ಸರಿ ಎಂದು ಸ್ವಲ್ಪ ಮಟ್ಟಿಗೆ ಕಂಡರೂ ಒಂದು ವಿಷಯ ಹೇಳಬೇಕಾಗಿದೆ. ಶ್ರೀಮಾನ್ ಚನ್ನಬಸಪ್ಪನವರು ಮಾತನಾಡುವಾಗ ಕೆಲವು ಅಂಕಿ ಅಂಶಗಳನ್ನು ಕೊಟ್ಟರು. ಆ ಅಂಕಿ ಅಂಶ ಕೊಡುವಾಗ ಅವರು ಬಹಳ ಬುದ್ಧಿವಂತರು, ಅನುಭವಶಾಲಿಗಳು ಮತ್ತು ಸ್ವಂತಃ ಭೂಮಿಯನ್ನು ಅವಲಂಬಿಸಿ ಕೊಂಡಿರ ತಕ್ಕವರು. ಅವರು ಹೆಚ್ಚು ಭೂಮಿಯನ್ನು ಅವಲಂಬಿಸಿಕೊಂಡಿದ್ದರೂ ಸಹ ನಾನೂ ಕೂಡ ಅವರಂತೆಯೇ ಸಣ್ಣದಾಗಿ ಭೂಮಿಯನ್ನು ಅವಲಂಬಿಸಿಕೊಂಡಿರತಕ್ಕ ರೈತನ ಮಗ. ಇವತ್ತೂ ಕೂಡ ರೈತನಾಗಿ ಜೀವನ ನಡೆಸುತ್ತಿರುವವನು. ಜಪಾನ್, ಚೈನಾ, ಇಂಡಿಯಾ, ಇಲ್ಲೆಲ್ಲಾ ಯಾವ ಯಾವ ಕಡೆ ಭೂಮಿ ಮೇಲೆ ಎಷ್ಟೆಷ್ಟು ಜನರ ಒತ್ತಡ ಇದೆ. ಎಂಬುದನ್ನು ಹೇಳಿ ಅದನ್ನು ಕಮ್ಮಿ ಮಾಡದ ಹೊರತು ಉತ್ಪಾದನೆ ಹೆಚ್ಚು ಮಾಡುವುದಕ್ಕಾಗುವುದಿಲ್ಲ ಎಂದು ಅವರು ಹೇಳಿದರು. ಜಪಾನಿನಲ್ಲಿ ಭೂಮಿಯ ಮೇಲೆ ಹೆಚ್ಚಿನ ಒತ್ತಡ ಇರುವುದರಿಂದಲೇ ಜಪಾನ್ ಮಾದರೀ ಕಲ್ಟಿವೇಷನ್ ಅಂತಹೇಳಿ ಜಪಾನ್‌ನವರು ಹೆಚ್ಚು ಆಹಾರ ಬೆಳೆಯನ್ನು ಮಾಡುತ್ತಾ ಇದ್ದಾರೆ. ಅದನ್ನು ನಾವು ನೋಡುತ್ತಾ ಇದ್ದೇವೆ. ಅವರ ಜನ ಸಾಂದ್ರತೆ ಹೆಚ್ಚಾಗಿರುವುದರಿಂದ ಬೆಳೆಯನ್ನು ಯಾರ ರೀತಿ ಹೆಚ್ಚು ಮಾಡುವುದಕ್ಕೆ ಸಾಧ್ಯವಾಗುತ್ತದೆಯೋ ಅಂತಹ ಸಾಧನೆಯನ್ನು ಕಂಡು ಹಿಡಿದು ಅದರ ಪ್ರಕಾರ ಹೆಚ್ಚು ಉತ್ಪಾದನೆ ಮಾಡುವುದಕ್ಕೆ ಅವರು ಪ್ರಯತ್ನಮಾಡಿದ್ದಾರೆ. ಇಲ್ಲೂ ಕೂಡ ನಾನು ಅಂಕಿಅಂಶ ಕೊಟ್ಟ ರೀತಿಯಲ್ಲಿ ಹೆಚ್ಚು ಜಮೀನು ಇರತಕ್ಕವರು ಜಮೀನು ಸಾಗುವಳಿ ಮಾಡದೇ ಹಾಗೆಯೇ ಬಂಜರು ಬಿದ್ದಿರುವುದರಿಂದ ಇವತ್ತು ಆಹಾರದ ಉತ್ಪಾದನೆಗೆ ಧಕ್ಕೆ ಬಂದಿದೆ. ಇಂಥಾ ಪರಿಸ್ಥಿತಿಯನ್ನು ಅವರು ಹೀಗೆಯೇ ಇಟ್ಟುಕೊಂಡು ಹೋಗಿ ಎಂದು ಹೇಳುತ್ತಾರೆಯೇ?

* * * * *

ಅವರು ಕೊಟ್ಟಿರತಕ್ಕ ಅಂಕಿ ಅಂಶದ ಪ್ರಕಾರ ಜಪಾನಿನಲ್ಲಿ 300 ಜನ ಇದ್ದಾರೆ. ಚೈನಾದಲ್ಲಿ 200 ಜನ ಇದ್ದಾರೆ. ಇಂಡೋಚೈನಾದಲ್ಲಿ 126 ಜನ ಇದ್ದಾರೆ. ಕೇರಳದಲ್ಲಿ 160 ಜನ ಇದ್ದಾರೆ. ಆಂಧ್ರದಲ್ಲಿ 81 ಜನ ಇದ್ದಾರೆ ಎಂದು ಹೇಳಿದರು. ಆದ್ದರಿಂದ ಚೈನಾದಲ್ಲಿ ಜಪಾನಿಗಿಂತ ಹೆಚ್ಚಾಗಿಲ್ಲ. ಇವತ್ತಿನ ದಿವಸ ಜಪಾನ್‌ನಲ್ಲೇ ಹೆಚ್ಚು ಉತ್ಪಾದನೆ ಮಾಡುತ್ತ ಇರುವುದು. ಆದ್ದರಿಂದ ನಾನು ಹೇಳುವುದೇನೆಂದರೆ, ಹೆಚ್ಚು ಜಮೀನು ಇದ್ದಷ್ಟು ಹೆಚ್ಚು ಸಾಧನಗಳ ಮುಖಾಂತರ ಹೆಚ್ಚು ಬೆಳೆಯನ್ನು ಮಾಡುತ್ತೇವೆ. ಎಂದು ಹೇಳುವುದರಲ್ಲಿ ನನ್ನ ಅನುಭವ ಹೇಳುವುದಾದರೆ ಯಾವನು ಭೂಮಿಯಲ್ಲಿ ತನ್ನ ಸರ್ವಸ್ವವನ್ನು ಇಟ್ಟು ಕೆಲಸಮಾಡುತ್ತಾನೆಯೋ ಅಲ್ಲಿ ಹೆಚ್ಚು ಬೆಳೆಗಳನ್ನು ಮಾಡಲಿಕ್ಕೆ ಅವಕಾಶವಾಗುತ್ತದೆ. ಈ ದೃಷ್ಟಿಯಿಂದ ಕಡಿಮೆ ಜಮೀನು ಇದ್ದು ಹೆಚ್ಚು ಬೆಳೆಯನ್ನು ಉತ್ಪಾದನೆ ಮಾಡತಕ್ಕ ದಾರಿಯಲ್ಲಿ ನಾವು ಈ ಹತ್ತು ವರ್ಷಗಳಲ್ಲಿ ಹೋಗಿಲ್ಲ. ಯಾವನು ಭೂಮಿಯನ್ನು ಅವಲಂಬಿಸಿಕೊಂಡಿದ್ದಾನೆ, ಹಾಗೂ ಹೆಚ್ಚು ಉತ್ಪಾದನೆ ಮಾಡುವ ಶಕ್ತಿ ಇದೆ ಅವನ ಕೈಯಲ್ಲಿ ಭೂಮಿ ಇಲ್ಲದೆ ಹೆಚ್ಚು ಐಶ್ವರ್ಯವಂತರ, ಮತ್ತು ನಾನು ಕೇಳಿದ ಅಂಕಿ ಅಂಶದ ಪ್ರಕಾರ ಕೆಲವೇ ಜನರ ಹಿಡಿತದಲ್ಲಿ ಭೂಮಿ ಸಿಕ್ಕಿ ಉತ್ಪಾದನಾ ಶಕ್ತಿ ಕಡಿಮೆಯಾಗಿದೆ. ಎಂದು ಹೇಳಿ ಈ ಸಂದರ್ಭದಲ್ಲಿ ಸೂಚಿಸುತ್ತಾ ಇದ್ದೇನೆ. ಹೆಚ್ಚು ಭೂಮಿಯನ್ನು ಇಟ್ಟುಕೊಂಡು ಏನೂ ಕೆಲಸ ಮಾಡದೆ ಭೂಮಿಯಲ್ಲಿ ಸಾಗುವಳಿ ಮಾಡಿ ಹೆಚ್ಚು ಉತ್ಪಾದನೆ ಮಾಡದೇ ಹಾಗೆಯೇ ಇಟ್ಟುಕೊಂಡು ಇರಬೇಕೆಂದು ಅವರು ಹೇಳುತ್ತಾರೆಯೇ ಅಥವಾ ಸರ್ಕಾರ ವಹಿಸಿಕೊಳ್ಳಬೇಕೆಂದು ಹೇಳುತ್ತಾರೆಯೇ? ಈ ರೀತಿ ಹಿಡುವಳಿ ನಿಗದಿ ಮಾಡಿರುವುದನ್ನು ಜತ್ತಿ ಸಮಿತಿಯವರು ಕೆಲವು ರಿಯಾಯಿತಿಗಳನ್ನು ತೋರಿಸಿದ್ದಾರೆ 216 ಎಕರೆ ಒಂದು ಕುಟುಂಬಕ್ಕೆ 432 ಎಕರೆ ಖುಷ್ಕಿ ಅವಿಭಕ್ತ ಕುಟುಂಬಕ್ಕೆ ಇದು ಬಹಳ ಜಾಸ್ತಿ. ಹೈದರಾಬಾದ್, ಮುಂಬೈ ಕರ್ನಾಟಕದಲ್ಲಿ ಏನು ಸ್ಟಾö್ಯಂಡರ್ಡ್ ಎಕರೆ ಫಿಕ್ಸ್ ಮಾಡಿದ್ದಾರೆ ಆ ರೀತಿ ಮಾಡಿ. ಕೆಲವು ಸದಸ್ಯರು ಈ ನಿವ್ವಳ ಆದಾಯ 1,200 ರೂಪಾಯಿ ಇರುವುದು ಕೆಲವು ಸಂದರ್ಭದಲ್ಲಿ ಹತ್ತು ಎಕರೆ ಇದ್ದರೂ ಸಹ ಮಾಡುವುದಕ್ಕಾಗುವುದಿಲ್ಲ ಎಂದು ಹೇಳಿದರು. ಅದಕ್ಕೆ ಈ ಮೊಬಲಗನ್ನು ನಿಗಧಿಮಾಡುವುದರಿಂದ ಆಯಾಯಾ ಪ್ರದೇಶದ ಪರಿಸ್ಥಿತಿ ಬೇರೆಯಾಗಿದ್ದು ಅನೇಕರಿಗೆ ತೊಂದರೆಯಾಗುತ್ತದೆ. ತರೀಜಮೀನಿನಲ್ಲಿ ಒಂದು ಎಕರೆಗೆ 8 ಪಲ್ಲಾ ದವಸ ಬರುತ್ತದೆ. ಎಂದು ಏನು ಹೇಳಿದ್ದಾರೆ ಅದನ್ನು ಒಂದು ಸ್ಟಾö್ಯಂಡರ್ಡ್ ಆಗಿಟ್ಟುಕೊಂಡು, ಖುಷ್ಕಿ ಜಮೀನಿನ ಸ್ಟಾö್ಯಂಡರ್ಡ್ ಹೈದರಾಬಾದ್ ಅಥವಾ ಮುಂಬೈ ಕರ್ನಾಟಕದಲ್ಲಿರುವುದನ್ನೇ ಸ್ವಲ್ಪ ಹೆಚ್ಚು ಕಡಿಮೆ ಮಾಡಿಕೊಂಡು ಇಡುವುದಕ್ಕೆ ಪ್ರಯತ್ನ ಮಾಡಬೇಕೆಂದು ಈ ಸಂದರ್ಭದಲ್ಲಿ ಸೂಚನೆ ಕೊಡುತ್ತ ಇದ್ದೇನೆ. ಶ್ರೀಮಾನ್ ಚನ್ನ ಬಸಪ್ಪನವರ ಡೆಫಿನಿಷನ್ ಪ್ರಕಾರ ಪರ್ಸನಲ್ ಕಲ್ಟಿವೇಷನ್‌ಗೆ ತಾನಾಗಲೀ ತನ್ನ ಕುಟುಂಬವಾಗಲೀ ಅಥವಾ ಕೂಲಿಯಿಂದ ಮಾಡಿಸಿದವರಾಗಲೀ ಅದಕ್ಕೆ ಸೀಲಿಂಗ್ ಲಿಮಿಟ್ ಇಡಕೂಡದೆಂದು ಅವರು ಸೂಚನೆ ಮಾಡುತ್ತಾರೆ.

ಹೀಗೆ ಮಾಡುವುದಾದರೆ ತಾವು ಸ್ವಂತ ಸಾಗುವಳಿ ಮಾಡದೇ, ಇತರರಿಗೂ ಜಮೀನನ್ನು ಕೊಡದೆ ಆಹಾರ ಉತ್ಪಾದನೆ ಕಡಿಮೆಯಾಗುವುದಕ್ಕೆ ಅವಕಾಶವಾಗುತ್ತದೆ. ಈ ದೃಷ್ಟಿಯಿಂದ

ಪರ್ಸನಲ್ ಕಲ್ಟಿವೇಷನ್‌ಗೂ ಕೂಡ ಕಾಂಗ್ರೆಸ್ ಮ್ಯಾನಿಫೆಸ್ಟೋನಲ್ಲಿ ಹೇಳಿರುವ ಪ್ರಕಾರ ಸೀಲಿಂಗ್ ಹಾಕುವುದನ್ನು ಒಪ್ಪಲೇಬೇಕು. ಜತ್ತಿ ಸಮಿತಿಯವರು ಹೇಳಿರುವ ರೀತಿಯಲ್ಲಿಯಾದರು ಕುಟುಂಬ ಹಿಡುವಲಿ ಇಡೀ ದೇಶದಲ್ಲಿ ಎಷ್ಟು ಜನಗಳಿಗೆ ಇದು ಅನ್ವಯವಾಗುತ್ತದೆ ಎಂದು ಹೇಳುವುದಾದರೆ ಕೆಲವೆ ಜನರು ನಾನಾ ರೀತಿಯಲ್ಲಿ ಮೆಮೋರ್‍ಯಾಂಡಂಗಳು, ಮನವಿಗಳನ್ನು ಸರ್ಕಾರದವರಿಗೆ ಸಲ್ಲಿಸುತ್ತ ಇದ್ದಾರೆ. ಈ ಸೀಲಿಂಗ್ ಲಿಮಿಟ್ ತರೀ, ಬಾಗಾಯ್ತು, ಕಾಫೀ ಮತ್ತು ರಬ್ಬರು ಪ್ಲಾಂಟೇಷನ್ ಇವೆಲ್ಲಕ್ಕೂ ಅನ್ವಯರಾಗುತ್ತದೆ ಎಂತಲೇ ನಿನ್ನೆ ದಿವಸ ಶ್ರೀಮಾನ್ ಮಲ್ಲಪ್ಪನರರು ಮಾತನಾಡುವುದಕ್ಕೆ ಮುಂಚೆ ನನ್ನ ಅಭಿಪ್ರಾಯ ಇತ್ತು. ಅವರು ಮಾತನಾಡುತ್ತ ಹೇಳಿದರು. ಹಿಂದೆ 1788ರಲ್ಲಿ ಸುಮಾರು 3 ಲಕ್ಷ ಎಕರೆ ಇದ್ದಂಥ ಕಾಫೀ ಎಸ್ಟೇಟನ್ನು ಇವತ್ತಿನ ದಿವಸ ಬಹಳ ಕಡಿಮೆ ಭಾಗಗಳಾಗಿ ಮಾಡಿ, ಕಾಫಿ ಎಸ್ಟೇಟ್ಸ್‌ನಲ್ಲಿ ಸಾಗುವಳಿಗೆ ಜಮೀನು ಇಲ್ಲದೆ ಹಾಗೆ ಮಾಡಿದ್ದಾರೆ. ಅದು ಅಲ್ಲದೆ ಎಷ್ಟೋ ಕಾಫಿ ಎಸ್ಟೇಟ್‌ಗಳಲ್ಲಿ ಸುಮಾರು 80 ಲಕ್ಷ ರೂಪಾಯಿಗಳವರೆಗೂ ಸರ್ಕಾರಕ್ಕೆ ವರಮಾನ ತೆರಿಗೆ ಬರುತ್ತ ಇದೆ. ಕಾಫಿಯನ್ನು ಬೆಳೆಯ ಬೇಕಾದರೆ, ಇದರಲ್ಲಿ chance ಎಂದು ಹೇಳುವ ಹಾಗೆ, ಬೆಳೆಯಬೇಕೆ ಹೊರತು ಸ್ವಾಭಾವಿಕವಾಗಿ ಬೆಳೆಯುವ ಹಾಗಿಲ್ಲ. ಡಾಲರ್ ಸಂಪಾದನೆಯ ಉದ್ದೇಶದಿಂದ ಕೇರಳ, ಮದ್ರಾಸ್ ಮತ್ತು ಇತರ ಎಲ್ಲ ಕಡೆಗಳಲ್ಲಿಯೂ ಪರಿಮಿತಿಯನ್ನಿಡದೆ ವ್ಯವಸಾಯ ವರಮಾನ ತೆರಿಗೆಯನ್ನು ಹೆಚ್ಚು ಹಾಕಿದ್ದಾರೆ. ಇದರಲ್ಲಿ ವ್ಯವಸಾಯಗಾರರು ಮತ್ತು ಗೇಣಿದಾರರು ಎಂದಿಲ್ಲ, ಜಮೀನ್ದಾರರಿದ್ದಾರೆ. ಕೂಲಿ ಗಾರರಿದ್ದಾರೆ, ಗೇಣಿದಾರರು ಮತ್ತು ಜಮೀನಿಗೆ ಸಂಬಂಧಪಟ್ಟವರ ಸಂಬಂಧ ವೇನಿದೆಯೋ ಅದನ್ನು ಯೋಚನೆ ಮಾಡಬೇಕಾಗಿದೆ. ಎಲ್ಲಿ ಗೇಣಿದಾರ ಜಮೀನ್ದಾರನೆಂದಿಲ್ಲವೋ ಅಲ್ಲಿಗೆ ಇದು ಅನ್ವಯಿಸುವುದಿಲ್ಲ ಎಂದು ಹೇಳಿ, ಈಗಿರುವ ಕಾಫಿ ಎಸ್ಟೇಟ್‌ಗಳಿಗೆ ವಿನಾಯಿತಿ ಕೊಟ್ಟು ಮುಂದೆ ಆಕ್ವೈರ್ ಆಗುವ ಕಾಫಿ ಎಸ್ಟೇಟ್‌ಗಳಿಗೆ ಮಾತ್ರ ಮೂರು ಫ್ಯಾಮಿಲಿ ಹಿಡುವಳಿಯ ಮಿತಿ ಅನ್ವಯಿಸುತ್ತದೆಂದು ಹೇಳಿದ್ದಾರೆ. ಈ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕೆ ಈಗ ಸಾಧ್ಯವಿಲ್ಲ. ಏಕೆಂದರೆ ನಾನು ಪೂರ್ಣವಾಗಿ ಪರಿಶೀಲಿಸಿ ಸ್ಪಷ್ಟವಾದ ಅಭಿಪ್ರಾಯಕ್ಕೆ ಬಂದಿಲ್ಲ. ಕಾನೂನು ಮಾಡುವಾಗ ಈ ವಿಷಯದಲ್ಲಿ ಬಹುಮಂದಿಯ ಅಭಿಪ್ರಾಯ ಯಾವ ರೀತಿ ಇರುತ್ತದೆಯೋ ಆ ರೀತಿ ಮಾಡಬಹುದು.

ಗೇಣಿ ಮೂರನೆಯ ಒಂದು ಭಾಗ ಗೊತ್ತು ಮಾಡಬೇಕೆಂದು ಶ್ರೀ ಚನ್ನಬಸಪ್ಪನವರು ತಿಳಿಸಿದರು. ಬೊಂಬಾಯಿ, ಹೈದರಾಬಾದ್, ಮದ್ರಾಸ್ ಕೊಡಗು ಮತ್ತು ಹಳೆಯ ಮೈಸೂರು ಈ ಐದು ಭಾಗಗಳಲ್ಲಿರುವ ಪರಿಸ್ಥಿತಿಗಳನ್ನೂ ಗಮನಿಸಿದರೆ, ಜತ್ತಿ ಸಮಿತಿಯವರ ಸಲಹೆಯನ್ನು ಒಪ್ಪಿಕೊಳ್ಳುವುದು ನ್ಯಾಯ. ಏಕೆಂದರೆ, ಗೇಣಿಯನ್ನು ಕೊಡುವಾದ ಗೇಣಿ ಮಾಡತಕ್ಕ ಜನ ವ್ಯವಸಾಯದ ಖರ್ಚನ್ನೂ ಹಾಕಿಕೊಳ್ಳಬೇಕಾಗಿದೆ. ಖರ್ಚನ್ನು ಕಳೆದು ಮೂರನೆಯ ಒಂದು ಭಾಗ ಕೊಡಬೇಕೆಂದು ಮಾಡಿದರೆ ನನ್ನ ಅಭ್ಯಂತರವಿಲ್ಲ. ಉಳಿಕೆಯಾಗುವ ಭೂಮಿಯನ್ನು ಗೇಣಿದಾರನಿಗೆ ಕೊಡುವುದಕ್ಕೆ ಏನು ಏರ್ಪಾಡಾಗಬೇಕು, ಸರ್ಕಾರದಲ್ಲಿ ಹಣವೆಲ್ಲಿದೆ ಬಾಂಡುಗಳನ್ನು ಕೊಡುವುದಕ್ಕೆ ಬದಲು ಒಂದೇ ಸಾರಿ ಹಣವನ್ನು ಜಮೀನ್ದಾರರಿಗೆ ಕೊಡುವ

ಏರ್ಪಾಡಾಗಬೇಕೆಂದು ಅನೇಕರು ಹೇಳಿದರು. ಸಣ್ಣ ಪುಟ್ಟ ಜಮೀನ್ದಾರರಿಗೆ ಆಗತಕ್ಕ ತೊಂದರೆಗಳ ವಿಚಾರ ಹೇಳಿದರು. ಈ ವರದಿಯ ಪ್ರಕಾರ 200 ಎಕರೆ ವರೆಗೆ ಮಿತಿಹೋಗುವುದರಿಂದ ಇವರೆಲ್ಲರೂ ಸಣ್ಣ ಪುಟ್ಟ ಜಮೀನ್ದಾರರು ಎಂದು ನಾನು ಭಾವಿಸುವುದಿಲ್ಲ. ರಾಜ್ಯಾಂಗವಿಧಿಯ ಪ್ರಕಾರ ಪರಿಹಾರವಿಲ್ಲದೆ ಜಮೀನನ್ನು ವಶಪಡಿಸಿಕೊಳ್ಳುವುದಕ್ಕಾಗುವುದಿಲ್ಲ. ಹೀಗಿರುವಾಗ ಸಮಿತಿಯವರು ಸೂಚಿಸಿರುವ ರೀತಿಯಲ್ಲಿ ಪರಿಹಾರವನ್ನು ಲೆಕ್ಕಹಾಕಿಸಿ ಕೊಡುವುದಕ್ಕೆ ಬದಲು ಆ ಜಮೀನನ್ನು ಮಾರ್ಕೆಟ್ ರೇಟಿನ ಶೇ. 50 ರಷ್ಟು ಕಡಿಮೆಕೊಡಬೇಕೆಂದು ಮಾಡಲಿ. ಕೆಲವು ಕಡೆ ಮಾರ್ಕೆಟ್ ರೇಟು ಕಡಿಮೆ ಇರುತ್ತದೆ. ಕೆಲವು ಕಡೆ ಹೆಚ್ಚಾಗಿರುತ್ತದೆ. ಆದ್ದರಿಂದ ಮಾರ್ಕೆಟ್ ರೇಟಿನ ಶೇ. 50 ರಷ್ಟು ಕಡಿಮೆ ಗೊತ್ತುಮಾಡಿ ಒಟ್ಟು ಮೊತ್ತವನ್ನು ಒಂದೇ ಸಾರಿ ಕೊಡಲು ಸಾಲವನ್ನೆತ್ತಿ ಕೊಡಲು ಪ್ರಯತ್ನ ಮಾಡುವುದಜಕ್ಕೆ ನನ್ನ ಅಭ್ಯಂತರವಿಲ್ಲ.

**Sri H.M. Channa basappa -** What is the Justification for fixing the compensation 50 percent less than the market rate?

ಶ್ರೀ ಬಿ. ರಾಚಯ್ಯ - ಮಾರ್ಕೆಟ್ ಬೆಲೆಯ ಶೇ. 50 ರಷ್ಟು ಕೊಡಬೇಕೆಂದು ಏಕೆ ಹೇಳುತ್ತೇನೆಂದರೆ, ಆ ಜಮೀನನ್ನು ಬಹುಶಃ 25 ವರ್ಷಗಳಿಂದ ಅನುಭವಿಸಿರುತ್ತಾನೆ. ಯಾವ, ಯಾವ ರೀತಿಯಲ್ಲೋ, ಯಾವ, ಯಾವ, ದರದಲ್ಲೋ ಆ ಜಮೀನನ್ನು ತೆಗೆದುಕೊಂಡಿರುತ್ತಾರೆ. ಇದನ್ನೆಲ್ಲಾ ಗಮನಿಸಿದರೆ, ನಾನು ಈಗ ಸೂಚಿಸಿದಷ್ಟು ಕೂಡ ಜಾಸ್ತಿಯಾಗುತ್ತದೆ. ಆದರೂ ಅವರು ಜಮೀನಿಗೆ ಮಾಡಿರುವ ಅಭಿವೃದ್ಧಿ ಕೆಲಸಗಳಿಗಾಗಿ ಸ್ವಲ್ಪ ಹೆಚ್ಚು ಕೊಡಬೇಕೆಂದು ನಾನು ಸೂಚಿಸಿದ್ದೇನೆ. ಹೀಗೆ ಶೇ. 50 ರಷ್ಟು ಕಡಿಮೆ ಕೊಡಬಹುದು. ಅಲ್ಲದೆ ಟೆನೆಂಟು ತನ್ನ ಶ್ರಮದಿಂದ ಭೂಮಿ ಈಗಿನ ಪರಿಸ್ಥಿತಿಗೆ ಬರಲು ಕಷ್ಟಪಟ್ಟಿರುತ್ತಾನೆ. ಆದುದರಿಂದ ಈ ರೀತಿ ಮಾರ್ಕೆಟ್ ರೇಟಿಗೆ ಶೇ. 50 ರಷ್ಟು ಕಡಿಮೆ ಕೊಡಬೇಕೆಂದು ಹೇಳಿದ್ದೇನೆ. ಈ ಸಲಹೆಯನ್ನು ಒಪ್ಪಬಹುದು ಅಥವಾ ಬಿಡಬಹುದು.

ಇನ್ನು ಕೆಲವು exemptions ಅಥವಾ ವಿನಾಯಿತಿಗಳ ವಿಚಾರ ಹೇಳಿದ್ದಾರೆ. family holding ಕಡಿಮೆ ಇರುವ ಜನರಿಗೆ ಅವರು ಎಲ್ಲಿಯೇ ಇರಲಿ, ಏನೇ ಕೆಲಸದಲ್ಲಿರಲಿ, ತಮ್ಮ ಜಮೀನನ್ನು ಗೇಣಿಗೆಕೊಟ್ಟು ಇಟ್ಟುಕೊಳ್ಳಲು ಅವಕಾಶ ಮಾಡಿಕೊಡಬೇಕೆಂದು ನನ್ನ ಅಭಿಪ್ರಾಯ. ಏಕೆಂದರೆ ಭೂಮಿಯನ್ನವಲಂಬಿಸಿಕೊಂಡಿರುವವರು ಈ ಹೊತ್ತು ಕಾರಣಾಂತರಗಳಿಂದ ಬೇರೆ ಕೆಲಸದಲ್ಲಿರಬಹುದು, ನಾಳೆ ವ್ಯವಸಾಯಕ್ಕೇ ಬರಬಹುದು. ಉದಾಹರಣೆಗೆ, ನಾನು ರೈತನ ಮಗ ಸರ್ಕಾರಿ ನೌಕರಿಗೆ ಅಥವಾ ವಕೀಲಿ ವೃತ್ತಿಗೆ ಈ ಹೊತ್ತು ಬಂದಿದ್ದೇನೆ. ಕೆಲವು ಕಾಲವಾದ ಮೇಲೆ ನನ್ನ ಹಿರಿಯರು ಮಾಡಿರುವ ಜಮೀನಿಗೇ ಹೋಗಬೇಕೆಂದು ಇಚ್ಛಿಸಿದರೆ, ಜಮೀನನ್ನು ಪಡೆಯಲು ಅವಕಾಶವಿರಬೇಕು. ಗೇಣಿ ಮೂಲಕ, ವಾರದ ಮೂಲಕ ಸಾಗುವಳಿಗೆ ಕೊಟ್ಟು ಕೊಂಡಿರುವುದಕ್ಕೆ ಅವಕಾಶವಿರಬೇಕು. ಉಳುವವನೇ ಜಮೀನಿನ ಒಡೆಯ ಎನ್ನುವ slogan ಕೂಗು ಕಿವಿಗೆ ಇಂಪಾಗಿರಬಹುದು. ನಾನು ಹೇಳುವುದು ಕಮ್ಯೂನಿಸ್ಟ್ ತತ್ವವೇನಲ್ಲ. ಸಣ್ಣಪುಟ್ಟ

ಹಿಡುವಳಿಯನ್ನಿಟ್ಟು ಕೊಂಡಿರುವ ಜನರಿಗೆ, ಅವರು ತಮ್ಮ ಜಮೀನಿನ ಮೇಲೆ ಹೋಗಬೇಕೆಂದು ಇಚ್ಛೆಪಟ್ಟರೆ, ಅದಕ್ಕೆ ಅವಕಾಶವಿರುವುದು ಒಳ್ಳೆಯದು ಆದುದರಿಂದ ಇಂಥಾ ವಿನಾಯಿತಿಯನ್ನಿಟ್ಟು ಕೊಂಡಿರುವುದು ಒಳ್ಳೆಯದು.

ಇನ್ನು resumption for personal cultivation ವಿಷಯ ಕೆಲವು ಟೆನೆಂಟುಗಳು ಜಮೀನ್ದಾರರಿಗಿಂತ ದೊಡ್ಡವರಾಗಿದ್ದಾರೆ. ಒಬ್ಬ ಮನುಷ್ಯ ಗುಮಾಸ್ತನೋ, ಪ್ರೈಮರಿ ಶಾಲೆಯ ಉಪಾಧ್ಯಾಯನೋ ಆಗಿರಬಹುದು. ಆತ ತನಗಿರುವ ಒಂದೆರಡು ಎಕರೆ ಭೂಮಿಯನ್ನು ತನ್ನ ಪಕ್ಕದಲ್ಲಿರುವ ಜಮಿನ್ದಾರನಿಗೆ ವ್ಯವಸಾಯಕ್ಕೆ ಕೊಟ್ಟಿರುತ್ತಾನೆ. Family holding ಮತ್ತು personal cultivationಗೆ ಎಷ್ಟು ಜಮೀನು ಬಿಡಬೇಕೋ ಅಷ್ಟು ಜಮೀನು ಮಾತ್ರ ಗೇಣಿದಾರನಿಗಿರಬೇಕು.

ಶ್ರೀ ಡಿ. ಮೂಕಪ್ಪ (ಸಾಗರ)- ಗೇಣಿದಾರನಿಗೆ ಜಮೀನು ಹೆಚ್ಚಾಗಿದೆ, ಎಂದು ಹೇಳಿದಿರಿ, ಅವರ ಆರ್ಥಿಕ ಮಟ್ಟ ಹೆಚ್ಚಾಗಿದೆಯೋ ಅಥವಾ ಜಮೀನು ಮಾತ್ರ ಹೆಚ್ಚಾಗಿದೆಯೋ.

ಶ್ರೀ ಬಿ. ರಾಚಯ್ಯ - ನನ್ನ ಅನುಭವದಲ್ಲಿ ದೊಡ್ಡ ಜಮೀನ್ದಾರರು ತೀರ ಬಡವರಾಗಿರುವವರಾಗಿದ್ದಾರೆ. ಗೇಣಿದಾರರಿಗೆ ಒಂದು ಮಿತಿ ಇಡದೆ ಇದ್ದರೆ, ಗೇಣಿದಾರರು ದೊಡ್ಡ ಜಮೀನ್ದಾರರಾಗಿರುತ್ತಾರೆ. ಈ ದೃಷ್ಟಿಯಿಂದ ಗೇಣಿದಾರನಿಗೆ personal cultivation ಮತ್ತು ಕುಟುಂಬ ಹಿಡುವಳಿ ಸೀಲಿಂಗ್ ಗೊತ್ತುವಳಿ ಮಾಡಬೇಕು.

ಇನ್ನು 'security of tenure' ಎಂದರೆ ಸ್ಥಿರತೆ ಇಲ್ಲದಿದ್ದರೆ, ಭೂ ಮಾಲೀಕನಿಗೂ, ಗೇಣಿದಾರನಿಗೂ ಹೆಚ್ಚು ಉತ್ಪತ್ತಿ ಮಾಡುವುದಕ್ಕೆ ಅವಕಾಶವಿರುವುದಿಲ್ಲ. ಗೇಣಿದಾರನಿಗೆ ತನಗೆ ಕೊಟ್ಟಿರುವ ಜಮೀನನ್ನು ಬೇಗ ಬಿಡಿಸಿಕೊಳ್ಳುತ್ತಾನೆಂಬ ಭಯ ಬರುತ್ತದೆ. ಇದರಿಂದ ಜಮೀನಿನಲ್ಲಿ ಉತ್ಪತ್ತಿ ಕಡಿಮೆ ಬರುತ್ತದೆ. ಈ ದೃಷ್ಟಿಯಿಂದ ಸ್ಥರತೆ ಇರಬೇಕು.

ಮಾನ್ಯ ಮಿತ್ರರು ಅನೇಕರು ದೊಡ್ಡ, ದೊಡ್ಡ ಹಿಡುವಳಿಗಳನ್ನು ಇಟ್ಟು ಕೊಂಡಿದ್ದಾರೆ. ಅವರು ಎಲ್ಲರೂ ಸ್ವಂತ ಸಾಗುವಳಿ ಮಾಡುತ್ತಾರೆಯೇ? ಎಂಬುದನ್ನು ಇನ್ನೂ ದೊಡ್ಡಲ್ಯಾಂಡ್ ಲಾರ್ಡ್ ಆಗುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಯಾರು ಭೂಮಿಯನ್ನು ಜೀವನಾಧಾರವಾಗಿ ಅವಲಂಬಿಸಿಕೊಂಡಿಲ್ಲವೋ ಅಂಥವರ ಭೂಮಿಯನ್ನು ತೆಗೆದುಕೊಂಡು ಕೇವಲ ಭೂಮಿಯನ್ನೇ ಅವಲಂಬಿಸಿಕೊಂಡಿರತಕ್ಕಂಥವರಿಗೆ ಪ್ರಯಾರಿಟಿಕೊಟ್ಟು ಭೂಮಿ ಹಂಚಿಕೊಡಬೇಕು, ಇನ್ನು ಮುಂದೆ ಕಾನೂನು ತಯಾರು ಮಾಡುವಾಗ ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಆ ರೀತಿಯಾಗಿ ಸರ್ಕಾರದವರು ಕಾನೂನು ರಚಿಸುವರೆಂದು ನಾನು ಭಾವಿಸಿಕೊಂಡಿದ್ದೇನೆ. ಮಂಗಳೂರು ಜಿಲ್ಲೆಯ ನೆರೆಯಲ್ಲಿರುವ ಕೇರಳ ರಾಜ್ಯದಲ್ಲಿ ಕಮ್ಯೂನಿಷ್ಟರು ಈ ರೀತಿ ಮಾಡುತ್ತಿದ್ದಾರೆಂದು ಕೆಲವರು ಹೇಳಿದರು. ಭೂ ಸುಧಾರಣೆಯನ್ನು ಕಾಂಗ್ರೆಸ್ ಸರ್ಕಾರ ಮಾಡದೇ ಇದ್ದರೆ ಮತ್ತು ಯಾರು ಮಾಡುತ್ತಾರೆ? ಈ ಕಾನೂನು ಜಾರಿಗೆ ತರುವುದಕ್ಕೆ ಭೂಮಾಲೀಕರು

ತಡೆಗಟ್ಟಲು ಸಾಧ್ಯವಾಗುವುದಿಲ್ಲ. ಆದುದರಿಂದ ಈ ಅಧಿವೇಶನ ಮುಗಿಯುವ ದೊರಳಗಾಗಿ ಕಾನೂನನ್ನು ರಚಿಸಿ, ಸಭೆಯ ಮುಂದೆ ತಂದು ಪಾಸ್ ಮಾಡಿ ಶೀಘ್ರವಾಗಿ ಜಾರಿಗೆ ತರಬೇಕೆಂದು ಹೇಳಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

## 1961-62ನೇ ಸಾಲಿನ ಆಯವ್ಯಯ ಅಂದಾಜು ಪಟ್ಟಿ ಮೇಲಿನ ಚರ್ಚೆ *

ಶ್ರೀ ಬಿ. ರಾಚಯ್ಯ (ಚಾಮರಾಜನಗರ)- ಮಾನ್ಯ ಸಭಾಪತಿಗಳೇ, 1961-62ನೇ ಸಾಲಿನ ಆಯವ್ಯಯ ಅಂದಾಜು ಪಟ್ಟಿಯ ಮೇಲೆ ಕಳೆದ ಮೂರು ನಾಲ್ಕು ದಿನಗಳಿಂದ ಈ ಸಬೆಯಲ್ಲಿ ಚರ್ಚೆ ನಡೆಯುತ್ತಾ ಇದೆ. ಅನೇಕ ಮಾನ್ಯ ಸದಸ್ಯರು ತಮಗೆ ತೋರಿದ ಒಳ್ಳೆಯ ಸಲಹೆಗಳನ್ನು, ಅನೇಕ ವಿಷಯಗಳ ಬಗ್ಗೆ ಪ್ರಸ್ತಾಪ ಮಾಡಿ ಈ ಸಬೆಯ ಗಮನಕ್ಕೆ ತಂದಿದ್ದಾರೆ. ಈ ಆಯವ್ಯಯ ಪಟ್ಟಿಯಲ್ಲಿ ಇರತಕ್ಕ ಪ್ರತಿಯೊಂದು ವಿಷಯದ ಮೇಲೆ ನನ್ನ ಅಭಿಪ್ರಾಯಗಳನ್ನು ಈ ಸಂದರ್ಭದಲ್ಲಿ ಹೇಳ ಬೇಕೆಂದಿದ್ದೇನೆ. ಇಷ್ಟೇ ಅಲ್ಲದೆ ಕೆಲವು ಮೂಲಭೂತವಾದ ವಿಷಯಗಳ ಮೇಲೆ ನನ್ನ ವಿಚಾರಗಳನ್ನು ಹೇಳುತ್ತೇನೆ. ಕಳೆದ ಮೂರು ನಾಲ್ಕು ವರ್ಷಗಳಲ್ಲಿ ಸಭೆಯ ಮುಂದಿಟ್ಟ ಆಯವ್ಯಯ ಪಟ್ಟಿ ಒಂದಕ್ಕಿಂತ ಮತ್ತೊಂದು ಬಹಳ ಉತ್ತಮವಾಗಿದೆ. ನಮ್ಮ ಅರ್ಥ ಸಚಿವರು ನಮ್ಮ ಸಂಸ್ಥಾನದ ಹಣಕಾಸಿನ ಪರಿಸ್ಥಿತಿಯ ಒಂದು ನೈಜವಾದ ಚಿತ್ರವನ್ನು ಕೊಟ್ಟಿದ್ದಾರೆ. ಮೊದಲನೆಯ ಮತ್ತು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಎಷ್ಟೆಷ್ಟು ಹಣ ಖರ್ಚ್‌ಮಾಡಲಾಗಿದೆ ಎಂಬುದನ್ನು ತಿಳಿಸಿದ್ದಾರೆ. ಹಳೇ ಮೈಸೂರಿನ ವಿಚಾರದಲ್ಲಿ ಮೊದಲನೆಯ ಯೋಜನೆಯಲ್ಲಿ ಸುಮಾರು 47 ಕೋಟಿ ರೂಪಾಯಿ ವೆಚ್ಚ, ಎರಡನೆಯ ಯೋಜನೆಯಲ್ಲಿ 140 ಕೋಟಿ ರೂಪಾಯಿ ವೆಚ್ಚ ಮಾಡಲಾಗಿದೆ ಎಂದು ತಿಳಿದು ಬಂದಿದೆ. ಮೂರನೆಯ ಯೋಜನೆಯಲ್ಲಿ 250 ಕೋಟಿ ರೂಪಾಯಿ ವೆಚ್ಚ ಮಾಡಬಹುದೆಂದು ಅಂದಾಜು ಮಾಡಲಾಗಿದೆ. ಕಲೆದ ಎರಡು ಪಂಚವಾರ್ಷಿಕ ಯೋಜನೆಗಳಲ್ಲಿ ಪ್ರಾರಂಭಿಸಲಾಗಿರುವ ಕೆಲವು ಯೋಜನೆಗಳು ಪರಿಪೂರ್ಣವಾಗುತ್ತಿವೆ. ಮೂರನೆಯ ಪಂಚ ವಾರ್ಷಿಕ ಯೋಜನೆಯಲ್ಲಿ ಕೆಲವು ಯೋಜನೆಗಳನ್ನು ಪೂರ್ತಿಗೊಳಿಸುವುದಕ್ಕೆ ಅಳವಡಿಸಿಕೊಳ್ಳಬೇಕಾಗಿದೆ. ಸಂಬಳ-ಸಾರಿಗೆಯ ಪುನರ್ವ್ಯವಸ್ಥೆಯಿಂದ 3 1/2 ಕೋಟಿ ರೂಪಾಯಿ ಹೆಚ್ಚಿಗೆ ಒದಗಿಸಬೇಕಾಗಿದೆ. ಅಲ್ಲದೆ ನಮ್ಮ ಸಂಸ್ಥಾನದಲ್ಲಿರುರ ಬಡ ವಿದ್ಯಾರ್ಥಿಗಳಿಗೆ ವಿಶೇಷ ಸಹಾಯ ಕೊಟ್ಟಿರುವುದಕ್ಕಾಗಿ ಸುಮಾರು 35 ಲಕ್ಷ ರೂಪಾಯಿಯಷ್ಟು ನಷ್ಟವಾಗಿದೆ. ಇದಲ್ಲದೆ ಗ್ರಾಮಾಂತರ ಪ್ರದೇಶದಲ್ಲಿ ರಸ್ತೆಗಳನ್ನು ಉತ್ತಮ ಪಡಿಸುವದಕ್ಕೋಸ್ಕರ ಸುಮಾರು 30 ಲಕ್ಷ ರೂಪಾಯಿಗಳ ಹೆಚ್ಚಿನ ಹೊರೆ ಸರಕಾರದ ಮೇಲೆ ಬಿದ್ದಿದೆ. ಮದ್ಯಪಾನ ನಿರೋಧವನ್ನು ಮುಂದುವರೆಸಿಕೊಂಡು ಹೋಗುತ್ತಿರುವುದರಿಂದ ಸರಕಾರಕ್ಕೆ ನಷ್ಟ ಉಂಟಾಗುತ್ತಿದೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ವಿಚಾರ ಮಾಡಿದರೆ. ಈ ವರ್ಷದ ಹಣಕಾಸಿನ ಪರಿಸ್ಥಿತಿಯಲ್ಲಿ ಸುಮಾರು 4 ಕೋಟಿ 31 ಲಕ್ಷ ರೂಪಾಯಿಗಳ ಕೊರತೆ ಬರುತ್ತದೆ ಎಂದು ತಿಳಿಸಿದ್ದಾರೆ. ರಾಜ್ಯದ ಉತ್ಪತ್ತಿಯನ್ನು ಹೆಚ್ಚಿಸುವುದಕ್ಕೆ ಇನ್ನೂ ಅವಕಾಶವಿದೆ. ತೆರಿಗೆಯ ರೂಪದಲ್ಲಿ ವರಮಾನ ಹೆಚ್ಚಿಸಿಕೊಳ್ಳಬಹುದು. small savings scheme ನಿಂದ ಹಣಕಾಸಿನ ಪರಿಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಬಹುದೆಂಬ ಸಲಹೆ ಅವರು ಕೊಟ್ಟಿದ್ದಾರೆ. ಕೆಲವು ಇಲಾಖೆಗಳಲ್ಲಿ ಇನ್ನೂ ಹೆಚ್ಚಿನ ರೀತಿಯಲ್ಲಿ ಆದಾಯವನ್ನು ಹೆಚ್ಚಿಸಿಕೊಳ್ಳಲು ಅವಕಾಶವಿದೆ. ರೋಡ್ ಟ್ರಾನ್ಸ್‌ಪೋರ್ಟ್ ಇಲಾಖೆಯಲ್ಲಿ ಉತ್ಪತ್ತಿ ಹೆಚ್ಚಿಸಬಹುದು. ಆದರೆ

---

* ವಿಧಾನ ಸಭಾ ನಡುವಳಿಕೆ ದಿನಾಂಕ 25ನೇ ಮಾರ್ಚ್, 1961 ಪುಟ: 1196-1203

ಹೋದ ವರ್ಷಕ್ಕಿಂತ ಈ ವರ್ಷ ಉತ್ಪತ್ತಿ ಕಡಿಮೆ ಬರುತ್ತದೆಂದು ಹಾಕಿಕೊಂಡಿದ್ದಾರೆ. ಈ ಇಲಾಖೆಯಲ್ಲಿಯ ಲೀಕೇಜಸ್ ಸರಿಪಡಿಸಬಹುದು. ಟ್ಯೂರಿಸ್ಟ್ ಸರ್ವಿಸ್ ಒದಗಿಸಿಕೊಟ್ಟರೆ ಹೆಚ್ಚು ಲಾಭ ಬರುವ ನಿರೀಕ್ಷೆಯಿದೆ. ಸರ್ಕಾರದವರು ಟ್ಯೂರಿಸ್ಟ್ ಬಸ್ ಸರ್ವಿಸ್ ಇರುವ ಪಕ್ಷದಲ್ಲಿ ಈ ಬಾಬಿನಿಂದ ಹೆಚ್ಚು ಉತ್ಪತ್ತಿ ಬರುವುದಕ್ಕೆ ಅವಕಾಶವಿದೆ.

ನಮ್ಮ ಸಂಸ್ಥಾನದಲ್ಲಿ ಅರಣ್ಯ ಸಂಪತ್ತು ವಿಶೇಷವಾಗಿದೆ. ಅದು ಪೋಲು ಆಗುವುದನ್ನು ತಡೆಗಟ್ಟಬೇಕು. ಗಣಿ ಸಂಪತ್ತನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿ ಕೊಂಡರೆ ಹೆಚ್ಚು ಉತ್ಪತ್ತಿ ಬರುತ್ತದೆ. ಕಬ್ಬಿಣದ ಅದುರು ಹೆಚ್ಚಾಗಿ ದೊರೆಯುತ್ತದೆ. ಆದರೆ ಅದನ್ನು ಹೋರಗಡೆ ಕಳಿಸುವುದಕ್ಕೆ ಒಂದು ಸರಿಯಾದ ಬಂದರು ಇಲ್ಲ, ರೈಲ್ವೆ ಮಾರ್ಗವಿಲ್ಲ, ಆದುದರಿಂದ ಹೊಸರೈಲ್ವೆ ಮಾರ್ಗದ ಯೋಜನೆ ಮತ್ತು ಒಂದು ಪೋರ್ಟ್ ಆಗಬೇಕೆಂದು ನಾನು ಮುಖ್ಯ ಮಂತ್ರಿಗಳಿಗೆ ಕೇಳಿಕೊಳ್ಳುತ್ತೇನೆ. ಮಂಗಳೂರು ಬಂದರನ್ನು ಸರ್ವಋತು ಬಂದರನ್ನಾಗಿ ಮಾಡುವುದಕ್ಕೆ ಭಾರತ ಸರ್ಕಾರ ಒಪ್ಪಿಕೊಂಡಿದೆ ಎಂದು ತಿಳಿದು ಬಂದಿದೆ.

ಶ್ರೀ ಬಿ.ಡಿ. ಜತ್ತಿ – ಪರದೇಶಗಳಿಗೆ ಕಳಿಸುವ ಐರನ್ ಓರ್ ಪರಿಶುದ್ಧ ಮಾಡಿ ಪಿಗ್ ಐರನ್ ಮಾಡಿ ಕಳಿಸಬೇಕೆಂಬ ವಿಚಾರವಿದೆ.

ಶ್ರೀ ಬಿ. ರಾಚಯ್ಯ – ಯಾವುದರಿಂದ ನಮ್ಮ ದೇಶದ ಆದಾಯ ಹೆಚ್ಚಿಗೆ ಆಗುತ್ತದೆಯೋ ಅದನ್ನು ಮಾಡಬೇಕಾದುದು ಅಗತ್ಯ ಎಂದು ನನ್ನ ಅಭಿಪ್ರಾಯ ತಿಳಿಸಿದ್ದೇನೆ. ಇದಕ್ಕಾಗಿ ಬಂದರುಗಳ ಅಭಿವೃದ್ಧಿ ಪಡಿಸಬೇಕಾಗಿದೆ. ಇದರಿಂದ ಗಣಿ ಸಂಸತ್ತಿನಿಂದ ಉತ್ಪತ್ತಿ ಹೆಚ್ಚಾಗುತ್ತದೆ. ಇದಕ್ಕೆ ಅನುಕೂಲಕರವಾಗುವ ಹಾಗೆ ಹೊಸ ರೈಲ್ವೆ ಮಾರ್ಗ ರಚನೆಯಾಗಬೇಕು. ಕೇಂದ್ರ ಸರ್ಕಾರದ ಫೈನಾನ್ಸ್ ಕಮಿಷನ್ ಮುಂದೆ ನಮ್ಮ ಮೈಸೂರು ರಾಜ್ಯದ ಬೇಡಿಕೆಗಳನ್ನು ಸರಿಯಾಗಿ ಮಂಡಿಸಬೇಕು. ಯಾಕೆಂದರೆ ಕಎಣದ ಹತ್ತಾರು ವರ್ಷಗಳಲ್ಲಿ ನಮ್ಮ ರಾಜ್ಯದಲ್ಲಿ ಯಾವ ಹೊಸರೈಲ್ವೆ ಮಾರ್ಗವು ರಚನೆಯಾಗಿಲ್ಲ. ಖನಿಜ ಸಂಪತ್ತನ್ನು ಉಪಯೋಗಿಸಿ ರಾಜ್ಯದ ಆದಾಯವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಹೊಸರಾಜ್ಯದಲ್ಲಿ ಬೇರೆ, ಬೇರೆ ಐದು ಪ್ರದೇಶಗಳಿಂದ ಬಂದಿರುವ ಭಾಗಗಳನ್ನೂ ಉತ್ತಮಪಡಿಸಲು ಕೇಂದ್ರ ಸರ್ಕಾರದ ಸಹಾಯ ಪಡೆಯಬೇಕು. ಕೇಂದ್ರ ಕಾರ್ಯದ ಸಹಾಯದಿಂದ ನಮ್ಮ ಹಣಕಾಸಿನ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಉತ್ತಮವಾಗಿದೆ. ಈ ವಿಚಾರದಲ್ಲಿ ಹಣಕಾಸಿನ ಸಚಿವರಿಗೆ ದಿನೇ ದಿನೇ ಕಾತರತೆ ಹೆಚ್ಚಾಗುತ್ತಿದೆ. ಆದರೂ ಕೂಡ ಅಷ್ಟು 'we need not be alarmed' ಎಂದು ಹೇಳಿದ್ದಾರೆ.

ನಾವು ಯೋಜನೆಗಳ ಮುಖಾಂತರ ಇಟ್ಟುಕೊಂಡಿರತಕ್ಕ Development activities ಏನಿದೆ assets build up ಮಾಡುವುದು, ಅದನ್ನು ಶ್ರೀಮಾನ್ ಮಲ್ಲಾರಾಧ್ಯರು ತಿಳಿಸಿದರು. ಕೆಲವು ಸರ್ವಿಸ್‌ನಲ್ಲಿ ರಸ್ತೆಗಳನ್ನು ರಿಪೇರಿ ಮಾಡುವುದರಲ್ಲಿ ಉತ್ಪತ್ತಿ ಬರುತ್ತದೆಯೇ? ಅವು assets ಆಗುತ್ತದೆಯೇ ಎಂದು ತಿಳಿಸಿದರು. ಉತ್ತಮವಾದ ರಸ್ತೆಗಳನ್ನಾಗಿ ಪರಿವರ್ತಿಸಿದರೆ ಅದರಲ್ಲಿ ಓಡಾಡತಕ್ಕ ವಾಹನಗಳಿಂದ ಬರುವ ತೆರಿಗೆಗಳು ಮತ್ತು ಇತರ ತೆರಿಗೆಗಳು ಸರ್ಕಾರಕ್ಕೆ

ಬರುವುದಕ್ಕೆ ಅವಕಾಶವಿದೆ. ಆದ್ದರಿಂದ ಅದೂಕೂಡ ಒಂದು asset ಎಂದು ಭಾವಿಸುವುದಕ್ಕಾಗುವುದಿಲ್ಲವೇ ಎಂದು ಸ್ವಲ್ಪ ಅನುಭವ ಶಾಲಿಗಳಾದ ಅವರನ್ನು ಕೇಳಬೇಕೆಂದಿದ್ದೇನೆ.

ಅದೇ ರೀತಿ ಪಬ್ಲಿಕ್ ಸೆಕ್ಟಾರ್ ಮತ್ತು ಪ್ರೈವೇಟ್ ಸೆಕ್ಟಾರ್ ಗಳನ್ನು ತೆಗೆದುಕೊಂಡರೆ ಕೈಗಾರಿಕೆಗಳಿಗೆ ಪ್ರೈವೇಟ್ ಸೆಕ್ಟಾರಿನಲ್ಲಿ ಹೆಚ್ಚು ಪ್ರೊತ್ಸಾಹ ಕೊಡುತ್ತಿಲ್ಲ. ಪಬ್ಲಿಕ್ ಸೆಕ್ಟಾರುಗಳನ್ನು ಜಾಸ್ತಿ ಮಾಡುತ್ತಿದ್ದಾರೆ. ಅದರಲ್ಲಿಯೂ ಕೂಡ ಹೊರಗಡೆಯ ಪ್ರಾಂತ್ಯದಿಂದ ಬಂದಿರುವವರಿಗೆ ಹೆಚ್ಚು ಕೊಡುತ್ತಿದ್ದಾರೆಂದು ಹೇಳಿದರು. ನಮ್ಮ ದೇಶದಲ್ಲಿ -------

ಶ್ರೀ ಜೆ.ಬಿ. ಮಲ್ಲಾರಾಧ್ಯ - ಪಬ್ಲಿಕ್ ಸೆಕ್ಟಾರ್‌ಗಳಿಗೆ ಹೆಚ್ಚು ಪ್ರೋತ್ಸಾಹ ಕೊಡುತ್ತಾರೆಂದು ಹೇಳಲಿಲ್ಲ. ಅದು ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದು ಹೇಳಿದ್ದೇನೆ.

ಶ್ರೀ ಬಿ. ರಾಚಯ್ಯ - ನಾವು ಒಪ್ಪಿಕೊಂಡಿರುವ ತತ್ವದ ಪ್ರಕಾರ ಸಮತಾವಾದ ಸಮಾಜವನ್ನು ಸ್ಥಾಪನೆಮಾಡಬೇಕೆಂದು ಹೇಳುವಾಗ-ವಿರೋಧಪಕ್ಷದವರು ಕೂಡ ನಮಗಿಂತ ಈ ವಿಷಯ ವ್ಯವಸ್ಥಿತವಾದ ರೀತಿಯಲ್ಲಿ ಕೆಲಸ ಕಾರ್ಯಗಳು ನಡೆಯದೆ ಇದ್ದರೆ, ಪೂಜಾರಿ ಕೆಟ್ಟವನು ಎಂದು ದೇವಸ್ಥಾನದ ಬಾಗಿಲನ್ನು ಮುಚ್ಚಿದ ಹಾಗೆ ಆಗುತ್ತದೆ. ಈ ದೃಷ್ಟಿಯಿಂದ ಪಬ್ಲಿಕ್ ಸೆಕ್ಟಾರನ್ನು ಸಾಧ್ಯಾವಾದ ಮಟ್ಟಿಗೂ ಹೆಚ್ಚು ಹೆಚ್ಚು ಮಾಡುವುದರಿಂದ ಹಣ ಒಂದೇ ಕಡೆ ಕೇಂದ್ರೀಕೃತವಾಗುವುದಕ್ಕೆ ಬದಲಾಗಿ ವಿಕೇಂದ್ರೀಕೃತವಾಗುವುದಕ್ಕೆ ಅವಕಾಶವಾಗುತ್ತದೆ. ಮತ್ತು ಎಲ್ಲ ಜನರ ಹಿತವನ್ನೂ ಕಾಪಾಡಿದ ಹಾಗೆ ಆಗುತ್ತದೆ ಎಂದು ಈ ಸಂದರ್ಭದಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಒಂದು ವೇಳೆ, ಮೈಸೂರು ಸಂಸ್ಥಾನದಲ್ಲಿ ಐಶ್ವರ್ಯ ವಂತ ರಾಗಿರುವವರು ಮುಂದೆ ಬಂದು ಜಾಯಿಂಟ್ ಸ್ಟಾಕ್ ಬೇಸಿನ್ ಮೇಲೆ ಕಂಪನಿಗಳನ್ನು ಮಾಡಿ, ಕಾರ್ಖಾನೆಗಳನ್ನು ಸ್ಥಾಪನೆಮಾಡಿ ಉತ್ಪತ್ತಿ ಮಾಡಬೇಕೆಂದು ಹೇಳುವಾಗ ಯಾವುದೇ ರೀತಿಯ ಪ್ರಭಾವಕ್ಕೆ ಒಳಗಾಗದೆ ಅಂಥ ಜನರಿಗೆ ಪ್ರೋತ್ಸಾಹ ಕೊಡುವುದು ಸಾಧ್ಯವಾಗಿದೆ ಎಂದು ಈ ಸಂದರ್ಭದಲ್ಲಿ ಸೂಚನೆ ಮಾಡುತ್ತೇನೆ. ಪಬ್ಲಿಕ್ ಸೆಕ್ಟಾರಿನಲ್ಲಿ ಮೊದಮೊದಲು ಅನೇಕ ರೀತಿಯ ಲೋಪದೋಷಗಳು ಬರುತ್ತವೆ. ಅಂದ ಮಾತ್ರಕ್ಕೆ ಟೀಕೆ ಮಾಡುವುದು ಸರಿಯಲ್ಲ.

ನಾವು ಹಾಕಿಕೊಂಡಿರತಕ್ಕ ಎಲ್ಲ ಯೋಜನೆಗಳ 'physical target' ಸಾಧಿಸಿದರೆ ಸಾಲದು ನಾವು ಇಟ್ಟುಕೊಂಡಿರುವ ಗುರಿಸಾಧನೆಯಾಗಬೇಕಾದರೆ ಒಳ್ಳೆಯ ಅಡ್ಮಿನಿಸ್ಟ್ರೇಷನ್ ಬೇಕು. ಒಳ್ಳೆಯ ಆಡಳಿತ ಬೇಕಾದರೆ ಜನರಲ್ ಅಡ್ಮಿನ್ಸ್‌ಸ್ಟ್ರೇಷನ್‌ಲ್ಲಿ security of service, recruitment ಮುಂತಾದವೆಲ್ಲ ಸರಿಯಾದ ರೀತಿಯಲ್ಲಿ ನಡೆಯಬೇಕು. ಇದಕ್ಕೆ ಮೈಸೂರು ಪಬ್ಲಿಕ್ ಸರ್ವಿಸ್ ಕಮಿಷನ್ ಇದೆ. ಅದಕ್ಕೋಸ್ಕರ ಯಾವ, ಯಾವ ರೀತಿಯಿಂದ ನಾನು ಸರ್ಕಾರದ ನೌಕರಿಗೆ ಜನರನ್ನು ನೇಮಿಸಿಕೊಳ್ಳಬೇಕೆಂದು ಕಾನೂನುಗಳನ್ನು ಮಾಡಿದ್ದಾರೆ. ಯಾವ ಯೂನಿಟ್ ಆಫೀಸರ್ ಕೈಯಲ್ಲಿ ಕೂಡ ಸರ್ಕಾರಿ ನೌಕರರನ್ನು ನೇಮಕಮಾಡುವ ಅದಿಕಾರವಿರಕೂಡದು, ಕೆಳದರ್ಜೆ ನೌಕರರನ್ನು ನೇಮಿಸುವ ಅಧಿಕಾರ ಸಹ ಇರಕೂಡದು. ಎಲ್ಲ ಪಬ್ಲಿಕ್ ಸರ್ವಿಸ್ ಕಮಿಷನ್ ಕರೆಗೆ ಹೋಗಬೇಕು, ಪಬ್ಲಿಕ್ ಸರ್ವಿಸ್ ಕಮಿಷನ್ನಿಗೆ ಜಾಸ್ತಿ

ದೊರಯುವವರೆಗೂ ಹೆಚ್ಚಿಗೆ ಪ್ರಾತಿನಿಧ್ಯ ವಿರುವವರನ್ನು ತಡೆಗಟ್ಟಿ ಹಿಂದುಳಿದವರಿಗೆ ಅವಕಾಶ ಮಾಡಿಕೊಟ್ಟರೆ ನ್ಯಾಯ ದೊರಕುತ್ತದೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ನೌಕರರಲ್ಲಿ ತೃಪ್ತಿಇರಬೇಕೆಂದು ಮೊದಲೇ ತಿಳಿಸಿದ್ದೇನೆ. ಇದಕ್ಕೆ recruitment policy ಸರಿಯಾಗಿರಬೇಕು, Inter-State Seniority list ಬೇಗ ಇತ್ಯರ್ಥ ಮಾಡಬೇಕು. ಅಲ್ಲದೆ security of services ಇರಬೇಕು. Frequent Transfers ಇರಬಾರದು. ಒಂದು ಕಡೆಗೆ ವರ್ಗ ಮಾಡಿದ ಮೇಲೆ ಎರಡು-ಮೂರು ವರ್ಷದ ವರೆಗಾದರೂ ಒಂದು ಕಡೆ ಇರುತ್ತಾನೆಂಬಗ್ಯಾರೆಂಟಿ ಇದ್ದರೆ, ನಿಷ್ಪ್ರಹತೆಯಿಂದ ದುಡಿಯತಕ್ಕ ಮನೋಭಾವ ಅಧಿಕಾರಿಗಳಲ್ಲಿ ಬೆಳೆಯುತ್ತದೆ. ಆರು ತಿಂಗಳಿಗೆ, ಮೂರು ತಿಂಗಳಿಗೆ ಬದಲಾವಣೆ ಮಾಡುತ್ತಾ ಬಂದರೆ ಏನೂ ಪ್ರಯೋಜನವಿಲ್ಲ. ಒಬ್ಬರ ಮೇಲೆ ದೂರುಗಳು ಬಂದುವು ಎಂದು ಅವನನ್ನು ವರ್ಗಮಾಡಿದರೆ, ಇನ್ನೊಂದು ಕಡೆ ಅವನು ಅದೇ ರೀತಿ ನಡೆದು ಕೊಂಡರೆ ಅಲ್ಲಿಯವರೆಗೆ ತೊಂದರೆ ಇದ್ದೇ ಇರುತ್ತದೆ. ಈ ದೃಷ್ಟಿಯಿಂದ ನಿಷ್ಪ್ರಹತೆಯಿಲ್ಲದೆ ಇರುವವರು ಕೆಲವು ಕಾಲ ಅದೇ ಸ್ಥಳದಲ್ಲಿದ್ದರೆ ಅಂಥವರ ತಪ್ಪುಗಳನ್ನು ಕಂಡು ಹಿಡಿದು ಅದಕ್ಕೆ ತಕ್ಕ ಶಿಕ್ಷೆಯನ್ನು ಕೊಡುವುದಕ್ಕೆ ಅನುಕೂಲವಾಗುತ್ತದೆ. ಅದಿಲ್ಲದೆ ದೂರುಗಳು ಬಂದುವೆಂದು ಬೇರೆ ಕಡೆಗೆ ವರ್ಗ ಮಾಡುವುದರಿಂದ ಏನೂ ಪ್ರಯೋಜನವಿಲ್ಲ. ಕೊನೆಯ ಪಕ್ಷ ಒಬ್ಬರು ಎರಡು ವರ್ಷವಾದರೂ ಇರಬೇಕು, ಮತ್ತು ಆಯಾ ಸ್ಥಳದಲ್ಲಿಯೇ ದಾಕ್ಷಿಣ್ಯವಿಲ್ಲದೆ ಸರ್ಕಾರದಿಂದ ಕ್ರಮ ತೆಗೆದು ಕೊಳ್ಳುವುದಕ್ಕೆ ಅವಕಾಶವಿರಬೇಕು, security of services ನೌಕರರಿಗೆ ಒದಗಿಸಿಕೊಡಬೇಕು.

ಇನ್ನು ನಾನ್ ಗೆಜೆಟೆಡ್ ಅಧಿಕಾರಿಗಳಿಗೆ ಹೆಚ್ಚಿನ ರೀತಿಯಲ್ಲಿ ಸಂಬಳ ಸಾರಿಗೆಗಳು ಸಿಕ್ಕುತ್ತಿಲ್ಲವೆಂದು, ಈ ದೃಷ್ಟಿಯಿಂದ ಅತೃಪ್ತಿ ಹೆಚ್ಚುತ್ತಿದೆ. ಇದರಿಂದ ಲಂಚಕೋರತನ ಉಂಟಾಗುತ್ತದೆ ಎಂದು ಹೇಳುತ್ತಲೇ ಇದ್ದುದನ್ನು ನೋಡಿ ಕಳೆದ 57ನೇ ಸಾಲಿನಲ್ಲಿ ಸರಕಾರದ ಆರ್ಥಿಕ ಸ್ಥಿತಿಗೆ ಅನುಸಾರವಾಗಿ ಸ್ವಲ್ಪಮಟ್ಟಿಗೆ ಬದಲಾವಣೆ ಮಾಡಿ ಸಂಬಳ-ಸಾರಿಗೆಗಳನ್ನು ಕೊಡಲು ಸುಮಾರು ಮೂರುವರೆ ಕೋಟಿಯಷ್ಟು ವೆಚ್ಚ ಮಾಡಿ, ಈಗ ಪುನಃ ವಿಮರ್ಶೆ ಮಾಡಲು ಸ್ವಲ್ಪ ಎಂದರೆ ಸುಮಾರು ಎಂಟು ಒಂಬತ್ತು ಕೋಟಿ ರೂಪಾಯಿಗಳಷ್ಟು ಸಂಬಳ-ಸಾರಿಗೆಗಳನ್ನು ಪುನರ್ ವಿಮರ್ಶಿಸಿ ಆರ್ಥಿಕ ಪರಿಸ್ಥಿತಿಯನ್ನು ಪುನರ್ವಿಮರ್ಶಿಸಿ ಆರ್ಥಿಕ ಸ್ಥಿತಿಯು ಉತ್ತಮವಾಗುವ ರೀತಿಯನ್ನು ಸರಕಾರ ಪ್ರಯತ್ನ ಮಾಡಿಕೊಟ್ಟಿದೆ. ಆದರೆ ಇದರಲ್ಲಿ ಹೊಸದಾಗಿ ಸರ್ವಿಸ್ಸಿಗೆ ಸೇರಿದವರಿಗೆ ಮಾತ್ರ ಅನುಕೂಲವಿದೆ. ಹೆಚ್ಚಿಗೆ ಸರ್ವಿಸ್ಸು ಮಾಡಿರುವ ನೌಕರರುಗಳು ಎಂದರೆ, ಸ್ಕೂಲ್ ಟೀಚರುಗಳೇ ಆಗಲಿ ಪೊಲೀಸ್ ಕಾನ್ಸ್‌ಟೇಬಲ್ಸ್ ಆಗಲಿ, ಅಥವಾ ಇನ್ನಿತರ ಕೆಳದರ್ಜೆಯ ನೌಕರರೇ ಆಗಲಿ, 10-20 ವರ್ಷಗಳ ಸರ್ವಿಸ್ಸಾದವರಿಗೆ ಒಂದೆರಡು ವೈಟೇಜ್ ಇನ್‌ಕ್ರಿಮೆಂಟ್‌ನ್ನಾದರೂ ಕೊಟ್ಟಿದ್ದರೆ ಇವರುಗಳಿಗೆ ತೃಪ್ತಿ ಉಂಟಾಗುತ್ತಿತ್ತೋ ಏನೋ ಎಂದು ನನಗೆ ಕಾಣುತ್ತೆ. ನಾವು ಇನ್ನೂ ಎಷ್ಟು ಹೆಚ್ಚು ಸಂಬಳ-ಸಾರಿಗೆ ಕೊಡಲಿ, ಇವರಲ್ಲಿ ಅತೃಪ್ತಿ ಇದ್ದೇ ಇರುತ್ತದೆ. ಈ ನೌಕರ ವರ್ಗದವರು ಹಳ್ಳಿಗಾಡಿನಲ್ಲಿರುವ ಲಕ್ಷಾಂತರ ಜನರ ಕಡೆಗೆ ಲಕ್ಷ್ಯ ಕೊಟ್ಟಿಲ್ಲ. ಅವರ ಜೀವನವನ್ನು ಇವರು ಹೋಲಿಸಿಕೊಂಡ ಪಕ್ಷದಲ್ಲಿ ಇವರ ಜೀವನವು

ಅವರ ಜೀವನಕ್ಕಿಂತ ಎಷ್ಟೋ ಉತ್ತಮವಾಗಿದೆ ಎನ್ನುವುದು ತಿಳಿಯುತ್ತದೆ. ಈ ದೃಷ್ಟಿಯಿಂದ ನಮ್ಮ ನೌಕರರು ತೃಪ್ತಿಪಟ್ಟುಕೊಂಡು ದೇಶಭಕ್ತಿಯಿಂದ ಕೆಲಸಮಾಡಬೇಕು ಎಂದು ಈ ಸಂದರ್ಭದಲ್ಲಿ ಅವರನ್ನು ಮನವಿ ಮಾಡಿಕೊಳ್ಳುತ್ತೇನೆ.

ಇನ್ನು ಕೋ-ಆಪರೇಟಿವ್ ಬೇಸಿಸ್ ಮೇಲೆ ಭೂಮಿಯನ್ನು ಬಡರೈತರಿಗೆ ಹಂಚುವಂತೆ ಏರ್ಪಾಡು ಮಾಡಬೇಕು ಎನ್ನುವುದು ಈ ಕಾಂಗ್ರೆಸ್ಸಿನ ನೀತಿಯಾಗಿದೆ. ಈ ರೀತಿ ಮಾಡಬೇಕಾದರೆ, ಮೊದಲು ಸರ್ಕಾರದಲ್ಲಿರುವ ಜಮೀನನ್ನು ಸಹಕಾರ ತತ್ವದ ಮೇಲೆ ವ್ಯವಸಾಯ ಮಾಡುವವರಿಗೆ ಕೊಟ್ಟು ಅವರಿಗೆ ಬೇಕಾದ ವ್ಯವಸಾಯದ ಉಪಕರಣಗಳನ್ನೂ ಎತ್ತು, ಇತ್ಯಾದಿಗಳನ್ನು ಒದಗಿಸಿಕೊಟ್ಟು ಸಹಾಯ ಮಾಡಬೇಕು. ಈ ರೀತಿಯಾಗಿ ಮಾಡಿದರೆ 'co-operartive Farming' ಯಶಸ್ವಿಯಾಗುವಂತೆ ಮಾಡಬಹುದು. ಇನ್ನು ಲ್ಯಾಂಡ್ ರಿಫಾರ್ಮ್ಸ್ ಬಿಲ್ಲೂ ಬಂದ ಮೇಲೆ ಕೆಲವು ಕಡೆ ಜನರೆಲ್ಲಾ ಸೇರಿ ಕೋ-ಆಪರೇಟಿವ್ ಫಾರ್ಮಿಂಗ್ ರೀತಿಯಲ್ಲಿ ವ್ಯವಸಾಯ ಮಾಡಿಕೊಳ್ಳಬಹುದು. ಇದರಂತೆ ಮಾಡಿಕೊಳ್ಳಲು ಸರಿಯಾದ ಸಹಕಾರ-ಸೌಕರ್ಯಗಳನ್ನು ಸರ್ಕಾರ ಕೊಡಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ.

ಇನ್ನು ವಿದ್ಯಾಭ್ಯಾಸದ ಇಲಾಖೆಯಲ್ಲಿ ಮುಂದಿನ ವರ್ಷದಿಂದ ಕಡ್ಡಾಯ ಶಿಕ್ಷಣವನ್ನು ಮೈಸೂರು ಸಂಸ್ಥಾನದಾದ್ಯಂತ ತರಬೇಕಾಗಿದೆ ಎಂದು ನಿರ್ಧಾರವಾಗಿದೆ. ಇದರಂತೆ ನಡೆಸಿಕೊಂಡು ಹೋಗಲು ಸ್ವಲ್ಪ ಕಷ್ಟವಾಗುತ್ತದೆ. ಸ್ಕೂಲು ಕಟ್ಟಡಗಳು ಇಲ್ಲದೆ ಇರುವುದು. ಆದರೂ ಕೂಡ ಅವರು ಮಾಡಿರುವ ಪ್ರಯತ್ನ ಹಿಂದೆಯೇ ಆಗಬೇಕಾಗಿತ್ತು. ಈಗಲಾದರೂ ಬಂದೀತು. ಇದಕ್ಕೋಸ್ಕರ ಎಲ್ಲರೂ ಸಂತೋಷಪಡಬೇಕಾಗಿದೆ. ಹೀಗೆ ಮಾಡುವಾಗ ಅನೇಕ ಕಡೆ ವಿದ್ಯಾರ್ಥಿಗಳಿಗೆ ವಿಶೇಷವಾದ ಅನುಕೂಲವನ್ನು ಮಾಡಿ ತೋರಿಸಿದ್ದಾರೆ. ಅದು 1,200 ರೂಪಾಯಿಗಳಷ್ಟು ಉತ್ಪತ್ತಿ ಬರತಕ್ಕ ಎಲ್ಲ ತಂದೆ ತಾಯಿಗಳ ಮಕ್ಕಳಿಗೂ ಈ ತರದ ಕನ್ ಸೆಷನ್ನುಗಳನ್ನು ಕೊಟ್ಟಿರುವುದು. ಇದೇನೋ ಕೊಡುವುದು ಸಾಧುವಾದುದು. ಆದರೆ ಇದರ ಜೊತೆಯಲ್ಲಿ ಹತ್ತಾರು ವರ್ಷಗಳಿಂದ ಸರ್ಕಾರದವರು ನಿಮ್ನ ತರಗತಿಯವರಿಗೆ ವಿದ್ಯಾಭ್ಯಾಸಕ್ಕಾಗಿ ಕೊಡುವ ಫೀಸನ್ನು ಎಕ್ಸಂಪಷನ್ ಮಾಡಿದಂತೆ ಈಗ ಮಾಡಿಲ್ಲ. ಮೈಸೂರು ಸರ್ಕಾರ ಹಾಗಿರಲಿ ಎಲ್ಲಾ ರಾಜ್ಯಗಳ ಲೆಜಿಸ್ಲೇಚರುಗಳಲ್ಲಿಯೂ, ಪಾರ್ಲಿಮೆಂಟಿನಲ್ಲಿಯೂ, ಇಲ್ಲಿಯ ವರೆಗೆ ಈ ವರ್ಗದವರಿಗೆ ಒಂದು ರಿಸರ್ವೇಷನ್ನನ್ನು ಕೊಟ್ಟಿದ್ದರು. ಹೀಗಿರುವಾಗ ಈಗಲೂ ಸಹ ಈ ನಿಮ್ನ ತರಗತಿಯ ವಿದ್ಯಾರ್ಥಿಗಳಿಗಾಗಿ ಫೀಜುಗಳಲ್ಲಿ ವಿನಾಯಿತಿ ಕೊಡುವುದನ್ನು ಇನ್ನೂ ಹಾಗೇ ಮುಂದುವರೆಸಿಕೊಂಡು ಬರಬೇಕು ಎಂದು ನಾನು ಸರಕಾರದಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಜನರಲ್ ಹಾಸ್ಟಲ್‌ಗಳು ಮತ್ತು ಹಿಂದುಳಿದವರಿಗಾಗಿ ಹಾಸ್ಟಲುಗಳನ್ನು ತೆರೆದು ವಿದ್ಯಾರ್ಥಿಗಳಿಗೆ ಸೌಕರ್ಯವನ್ನು ಒದಗಿಸುತ್ತಿದ್ದಾರೆ. ಇದರಲ್ಲಿ ಸೋಷಿಯಲ್ ವೆಲ್‌ಫೇರ್ ಇಲಾಖೆಯವರು ಪೂರ್ಣವಾಗಿ ಮನೆಗಳನ್ನು ಕಟ್ಟುವುದಕ್ಕೆ ಮತ್ತು ಇತರ 'Economic Aids' ಗಳನ್ನು ಕೊಡುವುದರ ಕಡೆಗೆ ಈಗ ಹೆಚ್ಚಿಗೆ ಗಮನ ಕೊಡದೆ, ವಿದ್ಯಾಭ್ಯಾಸ ಈ ಹಿಂದುಳಿದ ಜನಕ್ಕೆ ಹೆಚ್ಚಾಗಲಿ ಎನ್ನುವ ದೃಷ್ಟಿಯಿಂದ ಈ ಜನರ ಶಿಕ್ಷಣದ ಕಡೆಗೆ ಹೆಚ್ಚಿಗೆ ವೆಚ್ಚ ಮಾಡುತ್ತಿದ್ದಾರೆ.

ಆದರೆ ಈ ಸೋಷಿಯಲ್ ವೆಲ್‌ಫೇರ್ ಎನ್ನುವ Headನ 37 Education ನಲ್ಲಿ ಜನರಲ್ ಹಾಸ್ಟೆಲ್ ಸ್ಕೀಮ್‌ಗಳಿಗಾಗಿ ಹೆಚ್ಚು ಹೆಚ್ಚಾಗಿ ಪ್ರೋತ್ಸಾಹ ಕೊಡುತ್ತಿರುವಾಗ ಇದರಲ್ಲಿ ಪ್ರತ್ಯೇಕವಾಗಿ ಯಾವ ಉದ್ದೇಶಕ್ಕಾಗಿ ಹಣವನ್ನಿಟ್ಟಿದ್ದಾರೆಂದು ನಾನು ನೋಡಲಿಲ್ಲ. ಈ ಕಡೆ ಬದಲಾವಣೆ ಮಾಡಿ ಹಾಕಿರುವುದಕ್ಕೆ ಬಹುಶಃ ಈ ಜನರಲ್ ಎಜುಕೇಷನ್ನಿಗಾಗಿ ಶೇಕಡ 25ರಷ್ಟನ್ನು ಲೋಕಲ್ ಕಾಂಟ್ರಿಬ್ಯೂಷನ್ನು ಬಾರದೆ ಇರುವುದರಿಂದ ಈ ಹಿಂದುಳಿದವರ ವಿದ್ಯಾಭ್ಯಾಸಕ್ಕಾಗಿ ಅಲ್ಲಿ ಕೊಟ್ಟಿದ್ದಾರೆಂದು ನನಗೆ ತೋರುತ್ತದೆ. ಇದಕ್ಕೋಸ್ಕರ ಮಾನ್ಯ ಮಂತ್ರಿಗಳು ನಮ್ಮವರಾಗಿರುವುದರಿಂದ ಅವರು ಕ್ಯಾಬಿನೆಟ್ಟಿನಲ್ಲಿ ತಮ್ಮ ಶಕ್ತಿಯನ್ನು ಉಪಯೋಗಿಸಿ ಈ ಹಿಂದುಳಿದ ಜನಗಳಿಗಾಗಿ "without expecting contribution from the local people" ಸರಕಾರದವರೇ ಸೆಂಟ್ ಪರ್ಸೆಂಟ್ ಗ್ರಾಂಟನ್ನು ಈ ಹರಿಜನರಿಗಾಗಿ ಕೊಡಬೇಕೆಂದು ಸೂಚನೆ ಮಾಡುತ್ತೇನೆ. ಜನರಲ್ ಎಜುಕೇಷನ್ನಿನಲ್ಲಿ ಶೇ 10 ರಷ್ಟು ಎಂದು ಕೊಟ್ಟು ಜನರಲ್ ಹಾಸ್ಟಲಿನಲ್ಲಿ ಹಿಂದುಳಿದವರು ಇದ್ದರೆ ಅವರ ವಿದ್ಯಾಭ್ಯಾಸಕ್ಕಾಗಿ ಏನು ಕನ್‌ಸೆಷನ್ನುಗಳು ಇರುತ್ತವೆಯೋ ಅವೆಲ್ಲ ಅಲ್ಲಿನ ಮ್ಯಾನೇಜುಮೆಂಟಿಗೆ ಹೋಗುತ್ತವೆ. ಆದುದರಿಂದ ಅಲ್ಲಿ ಇನ್ನೂ ಹೆಚ್ಚು ಹೆಚ್ಚಾಗಿ ವಿದ್ಯಾರ್ಥಿಗಳನ್ನು ಸೇರಿಸುವುದಕ್ಕೂ ಅವಕಾಶವಾಗುತ್ತದೆ. ಅಲ್ಲದೆ ಬೇರೆ ಕೋಮಿನ ವಿದ್ಯಾರ್ಥಿಗಳು ನಿಮ್ಮ ವರ್ಗದ ಹಾಸ್ಟಲುಗಳಲ್ಲಿ ಕಲೆತು ಅವರ ಜೊತೆಯಲ್ಲಿ ವಿದ್ಯಾಭ್ಯಾಸ ಮಾಡಲು ಬಂದರೂ ಅವರಿಗೂ ಸಹಾಯ ಮಾಡಬಹುದು.

**Sri D. Devaraj Urs-** I want to know the opinion of the Hon'ble Member about General Hostels, in the name of General Hostels, they perpe ctuate communalism. Just to get aid. they do this but perpetuate communalism. I want to know your opinion.

ಶ್ರೀ ಬಿ. ರಾಚಯ್ಯ- ನನ್ನ ಅಭಿಪ್ರಾಯವನ್ನು ಕಳೆದೆರಡು ವರ್ಷಗಳ ಬಡ್ಜೆಟ್ಟು ಸೆಷನ್ನಿನಿಂದಲೂ ಹೇಳುತ್ತಲೇ ಬಂದಿದ್ದಾರೆ. ಹಿಂದೆ ಶ್ರೀಮಾನ್ ಸಿ.ಆರ್. ರೆಡ್ಡಿಯವರು ಮೈಸೂರು ಸಂಸ್ಥಾನದ D.P.I ಆಗಿದ್ದಾಗ-1909-13ರಲ್ಲೋ ಏನೋ ಒಂದು ಸಾರಿ ಅವರು ಕೆಲವು ನ್ಯಾಷನಲ್ ಇನ್‌ಸ್ಟಿಟ್ಯೂಷನ್‌ಗಳು ಶುರುವಾಗಿದೆ ಎಂದರು. ಅವರು ಹೇಳುವಾಗ "They were national in out-look but they were communal core" ಎನ್ನುವುದನ್ನೇ ಹೇಳಿದರು. ಈಗ ಹಾಸ್ಟಲುಗಳ ಮ್ಯಾನೇಜ್‌ಮೆಂಟಿನವರು ಶೇ. 80 ರಷ್ಟು ವಿದ್ಯಾರ್ಥಿಗಳನ್ನು ಇಟ್ಟುಕೊಳ್ಳಲು ಅವಕಾಶವಿದೆ. ಜನರಲ್ ಹಾಸ್ಟಲುಗಳಲ್ಲಿ ಶೇ. 90 ರಷ್ಟು ಮಿಕ್ಕವರು ಹಿಂದುಳಿದವರು ಶೇ 10 ಬಾಗ ಎಂದಿರುವುದಕ್ಕೆ ಬದಲು ಸರ್ಕಾರದವರೇ ವಹಿಸಿಕೊಂಡು ಎಲ್ಲಿ ಷೆಡ್ಯೂಲ್ಡ್ ಕ್ಯಾಸ್ಟ್ ಹಾಸ್ಟಲುಗಳನ್ನು ಜನರಲ್ ಹಾಸ್ಟಲುಗಳಾಗಿ ಬೇಕಾದರೂ ಮಾಡಿ ಎಂದು ಹೇಳುತ್ತೇನೆ. ಈಗ ಜಾತ್ಯಾತೀತ ರಾಜ್ಯವಾಗಬೇಕು ಎಂದು ಹೇಳುವಾಗ ವಿದ್ಯಾಭ್ಯಾಸಕ್ಕಾಗಿ ಸರ್ಕಾರದವರು ಈ ಅವಕಾಶವನ್ನು ಮಾಡಿಕೊಟ್ಟರೂ ಬಹಳ ಸಂತೋಷ. ಈ ದೃಷ್ಟಿಯಿಂದ ಹಿಂದುಳಿದ ಈ ಜನಕ್ಕಾಗಿ ಹೆಚ್ಚು ಹೆಚ್ಚಾಗಿ ಸರಕಾರ ಪ್ರೋತ್ಸಾಹ ಕೊಡಬೇಕು. ಹರಿಜನರ ವಿದ್ಯಾಭ್ಯಾಸಕ್ಕಾಗಿ

ಮತ್ತು ಇನ್ನಿತರ ಹಾಸ್ಟಲುಗಳಲ್ಲಿರುವ ಮ್ಯಾನೇಜ್‌ಮೆಂಟಿನ ಆಡಳಿತ ಸರಿಯಾಗಿರಬೇಕು. ಇದಷ್ಟು ಸೋಷಿಯಲ್ ವೆಲ್‌ಫೇರು ಇಲಾಖೆಯೇ ಆಗಲಿ, ತಮ್ಮಲ್ಲಿ ಎಷ್ಟು ವಿದ್ಯಾರ್ಥಿಗಳಿಗಾಗಿ ಎಷ್ಟು ಹಣ ಖರ್ಚಾಗಿದೆ ಯಾವ ರೀತಿ ಲೆಕ್ಕಾಚಾರ ಇಟ್ಟಿದ್ದಾರೆನ್ನುವುದನ್ನು ತನಿಖೆ ಮಾಡಲು Inspection Authority ಇರಬೇಕು. ಇದರಿಂದ ಎಲ್ಲೆಲ್ಲಿ ಲೋಪದೋಷಗಳಿವೆ ಎನ್ನುವುದನ್ನು ತಿಳಿದುಕೊಂಡು ಇದಕ್ಕಾಗಿ ಒಂದು ಕಮಿಟಿಯನ್ನು ನೇಮಿಸಿ ಎಲ್ಲ ಪ್ರದೇಶಗಳಿಗೂ ಹೋಗಿ ಅಲ್ಲಿರುವ ಹಾಸ್ಟಲುಗಳೆಲ್ಲಾ ಸರಿಯಾಗಿ ನಡೆಯುತ್ತವೆಯೋ, ಇಲ್ಲವೇ ಎನ್ನುವುದನ್ನೆಲ್ಲ ಪರಿಶೀಲನೆ ಮಾಡಲು ಅನುಕೂಲವಾಗುತ್ತದೆ. ಈ ರೀತಿ ಮಾಡುವುದು ಸೂಕ್ತವೆಂದು ಈ ಸಂದರ್ಭದಲ್ಲಿ ಸೂಚನೆ ಮಾಡುತ್ತೇನೆ. ಆದರೆ ಈ ಸ್ಯಾಂಡಲ್‌ವುಡ್ ಆಯಿಲ್ ಫ್ಯಾಕ್ಟರಿ, ಸೋಪ್ ಫ್ಯಾಕ್ಟರಿ, ಭದ್ರಾವತಿ ಐರನ್ ಅಂಡ್ ಸ್ಟೀಲ್ ವರ್ಕ್ಸ್, ಎಲೆಕ್ಟ್ರಿಕ್ ಫ್ಯಾಕ್ಟರಿ, ರೆಂಕೋ ಇತ್ಯಾದಿ ಫ್ಯಾಕ್ಟರಿಗಳಲ್ಲಿ ಹೆಚ್ಚಿನ ಉತ್ಪತ್ತಿಯನ್ನು ಮಾಡುವುದಕ್ಕೆ ಅವಕಾಶವಾಗಿದೆ. ಸ್ಯಾಂಡಲ್‌ವುಡ್ ಈಚೀಚೆಗೆ ವಿಶೇಷವಾಗಿ ಸ್ಮಗಲ್ ಆಗುತ್ತಿದೆ. ಅದನ್ನು ತಪ್ಪಿಸಬೇಕು. ಸರ್ಕಾರದವರು ಇದನ್ನು ನ್ಯಾಷನಲೈಸ್ ಮಾಡಬೇಕು. ಹಳೆಯ ಮೈಸೂರಿನಲ್ಲಿ ಅಲ್ಲದೆ ಬೇರೆ ಪ್ರಾಂತ್ಯಗಳಲ್ಲಿ ಪ್ರೈವೇಟ್ ಏಜೆನ್ಸಿಗಳು ಸ್ಯಾಂಡಲ್‌ವುಡ್ಡನ್ನು ತೆಗೆದುಕೊಳ್ಳುವುದಕ್ಕೆ ಅವಕಾಶವಿದೆ. ಹಳೆಯ ಮೈಸೂರಿನಲ್ಲಿ ಸರ್ಕಾರದವರೇ ತೆಗೆದುಕೊಂಡು ಫ್ಯಾಕ್ಟರಿಗೆ ಕೊಡುವುದರಿಂದ ಸ್ಮಗಲ್ ಆಗುವುದಕ್ಕೆ ಅವಕಾಶವಿದೆ. ಆದ್ದರಿಂದ ಸರ್ಕಾರದವರೇ ಈ ಗಂಧದ ಮರದ ಫ್ಯಾಕ್ಟರಿ ಏಜೆನ್ಸಿಯನ್ನು ಇತರರಿಗೆ ಯಾರಿಗೂ ಕೊಡದೆ ತಾವೇ ಮನಪಾಲಿ ಮಾಡಿಕೊಂಡು ಆ ಕೈಗಾರಿಕೆಯನ್ನು ಅಭಿವೃದ್ಧಿ ಪಡಿಸಬೇಕೆಂದು ನಾನು ಮುಖ್ಯಮಂತ್ರಿಗಳನ್ನು ಕೇಳಿಕೊಳ್ಳುತ್ತೇನೆ. ಬೇರೆಯವರಿಗೆ ಈ ಏಜೆನ್ಸಿಯನ್ನು ತೆಗೆದುಕೊಳ್ಳುವುದಕ್ಕೆ ಖಂಡಿತವಾಗಿ ಅವಕಾಶವನ್ನು ಕೊಡಬಾರದು ಎಂದು ನಾನು ಸಲಹೆ ಮಾಡುತ್ತೇನೆ. ಶ್ರೀಮಾನ್ ಕಡಿದಾಳ್ ಮಂಜಪ್ಪನವರೂ ಸಹ ರೈತರ ಅಭಿವೃದ್ಧಿ ಬಗ್ಗೆ ಹೆಚ್ಚಿನ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕೆಂದು ನಾನು ಹೇಳುತ್ತೇನೆ. ಇನ್ನು ಮುಂದೆ ನಮ್ಮ ಸರ್ಕಾರದವರು ಮಂಡಿಸತಕ್ಕ ಆಯವ್ಯಯ ಅಂದಾಜು ಖೋತಾ ಬೀಳುವುದಿಲ್ಲವೆಂದು ದೃಢವಾದ ನಂಬಿಕೆಯಿಂದ ಹೇಳುತ್ತೇನೆ. ಈಗ ಆಗಿರತಕ್ಕ ಖೋತಾವನ್ನು ಸರಿದೂಗಿಸುವುದಕ್ಕೋಸ್ಕರ ಸರ್ಕಾರದವರು ಒಂದು ಹೊಸ ತೆರಿಗೆಯನ್ನು ಹಾಕಬೇಕೆಂದು ಉದ್ದೇಶಪಟ್ಟಿದ್ದಾರೆ. ಅದು ಲ್ಯಾಂಡ್ ರೆವಿನ್ಯೂ ಮೇಲೆ ಸರ್ ಛಾರ್ಜು ಹಾಕಬೇಕು ಎಂಬುದು. ಈಗ್ಗೆ ಹತ್ತಾರು ವರ್ಷಗಳಿಂದ ಸರ್ವೆ ಸೆಟಲ್‌ಮೆಂಟ್ ಕೆಲಸ ಮಾಡದೆ ಖುಷ್ಕಿಯನ್ನು ತರೀ ಮಾಡುವುದಕ್ಕೂ ತರಿಯನ್ನು ಖುಷ್ಕಿ ಮಾಡುವುದಕ್ಕೂ, ಖುಷ್ಕಿ ಮತ್ತು ತರಿಯನ್ನು ಬಾಗಾಯಿತು ಮಾಡುವುದಕ್ಕೂ ಪ್ರಯತ್ನ ಮಾಡಿ ಸರ್ಕಾರಕ್ಕೆ ಆದರಿಂದ ಸಾಕಷ್ಟು ಉತ್ಪತ್ತಿಯಾಗದೆ ಎಷ್ಟೋ ಹಣ ಪೋಲಾಗುತ್ತಿದೆ. ಈ ದೃಷ್ಟಿಯಿಂದ ನಾಲ್ಕಾಣೆ ಇದ್ದುದ್ದು 2 ರೂಪಾಯಿಗಳವರೆಗೆ ಖುಷ್ಕಿ ಕಂದಾಯವಾಗಿದೆ. ನಾಲ್ಕು ರೂಪಾಯಿಗಳಿಂದ 10-12 ರೂಪಾಯಿಗಳವರೆಗೆ ತರೀ ಕಂದಾಯವಾಗಿರುತ್ತದೆ. ಹೀಗೆ ಬೇರೆ, ಬೇರೆ ರೀತಿಯಲ್ಲಿ ಕಂದಾಯ ವ್ಯವಸ್ಥೆ ಇರುವುದರಿಂದ ಇಡೀ ಸಂಸ್ಥಾನದಲ್ಲಿ ಸರ್ವೆ ಸೆಟಲ್‌ಮೆಂಟ್ ಪೂರ್ತಿ ಆಗುವುದು ನಮ್ಮ ಸರ್ಕಾರಕ್ಕೆ ಇನ್ನೂ ಹತ್ತಾರು ವರ್ಷಗಳಾದರೂ ಹಿಡಿಯಬಹುದು. ಈ ದೃಷ್ಟಿಯಿಂದ

ಸರ್‌ಛಾರ್ಜನ್ನು ಸರ್ಕಾರದವರು ಹಾಕಿದರೆ ಆಗ ಅದರಿಂದ ಎರಡು ಕೋಟಿ ರೂಪಾಯಿಗಳ ಉತ್ಪತ್ತಿಯಾಗುವಂತೆ ಮಾಡಬಹುದು ಎಂದು ರೈತರ ತಲೆ ಮೇಲೆ ಭಾರಿ ಹೊರೆಯನ್ನು ಹಾಕುತ್ತಿದ್ದೀರಿ. ಇದರಿಂದ ರೈತರ ಬೆನ್ನುಮೂಳೆ ಮುರಿದಿದೆ. ಒಟ್ಟಿನಲ್ಲಿ ರೈತರಿಗೆ ಬೇಕಾದಷ್ಟು ಸೌಲಭ್ಯ ಒದಗಿಸಿಕೊಡದಿದ್ದರೆ ಆಗಲೇ ಸರ್ಕಾರದವರನ್ನು ಮತ್ತು ನಮ್ಮನ್ನು ರೈತರು ಬೈಯುತ್ತಾರೆ. ಈ ದೃಷ್ಟಿಯಿಂದ ಸರ್ವತೋಮುಖವಾದಂಥ ಅಬಿವೃದ್ಧಿಗಾಗಿ ನಮ್ಮ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕು. ಆದಷ್ಟು ಮಟ್ಟಿಗೆ ರೈತರಿಗೆ ಹೆಚ್ಚಿನ ಸೌಕರ್ಯಗಳನ್ನು ಕೊಡುವ ಧೈರ್ಯವನ್ನು ಸರ್ಕಾರದವರು ಈ ಕೂಡಲೇ ಮಾಡಬೇಕು. ವಿದ್ಯುಚ್ಛಕ್ತಿಯನ್ನು ಹೆಚ್ಚಿಗೆ ಉಪಯೋಗ ಮಾಡುವವರ ಮೇಲೆಯೂ ಹೆಚ್ಚಿನ ತೆರಿಗೆಯನ್ನು ಹಾಕಬೇಕು ಎಂದು ನಮ್ಮ ಸರ್ಕಾರದವರು ಯೋಚಿಸಿದ್ದಾರೆ. ಅಲ್ಲದೆ ಟೌನಿನಲ್ಲಿರತಕ್ಕ ಹೆಚ್ಚು, ಹೆಚ್ಚು ಸಂಪಾದನೆ ಮಾಡಿ ಜಾಸ್ತಿ ಆಸ್ತಿಯನ್ನು ಹೊಂದಿದವರ ಮೇಲೆ ಆಸ್ತಿ ತೆರಿಗೆಯನ್ನು ಹಾಕಬೇಕೆಂಬ ಮಾರ್ಗವನ್ನು ನಮ್ಮ ಸರ್ಕಾರದವರು ಇಟ್ಟುಕೊಂಡಿದ್ದಾರೆ. ಈ ಮಧ್ಯೆ ನಾಲ್ಕು ಕೋಟಿ ರೂಪಾಯಿಗಳು ಖೋತಾ ಆಗಿದೆ. ಅದನ್ನು ಸರಿದೂಗಿಸುವ ಪ್ರಯತ್ನ ಮಾಡುತ್ತಿದ್ದೇವೆ ಎಂದು ತಿಳಿಸಿದ್ದಾರೆ. ಇನ್ನು ಮುಂದೆ ಎಂದಿಗೂ ಖೋತಾ ಬಾರದ ಹಾಗೆ ನಾವೆಲ್ಲರೂ ಕೊಟ್ಟಿರತಕ್ಕ ಸಲಹೆಗಳನ್ನು ಕಾರ್ಯ ರೂಪಕ್ಕೆ ತಂದು ಹೇಗಾದರೂ ಮಾಡಿ ಸರ್ಪ್ಲಸ್ ಬಡ್ಜೆಟ್ ಆಗುವುದಕ್ಕೆ ಏನು ವ್ಯವಸ್ಥೆ ಮಾಡಬೇಕೋ ಅದನ್ನು ಕೂಡಲೇ ಸರ್ಕಾರದವರು ಮಾಡಬೇಕೆಂದು ಹೇಳುತ್ತೇನೆ. ಕೊನೆಯದಾಗಿ ನಾನು ಅಧ್ಯಕ್ಷರನ್ನು ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಕಡ್ಡಾಯ ಮತ್ತು ಉಚಿತ ಪ್ರಾಥಮಿಕ ಶಿಕ್ಷಣ ಮಸೂದೆ *

ಶ್ರೀ ಬಿ. ರಾಚಯ್ಯ (ಚಾಮರಾಜನಗರ)- ಸ್ವಾಮಿ, ಈ ದಿವಸ ಸರ್ಕಾರದವರು ಈ ಸಭೆಯ ಮುಂದೆ ತಂದಿರತಕ್ಕ ಕಡ್ಡಾಯ ಮತ್ತು ಉಚಿತ ಪ್ರಾಥಮಿಕ ಶಿಕ್ಷಣ ಮಸೂದೆಯನ್ನು ಸ್ವಾಗತಿಸುತ್ತಾ ಕೆಲವು ವಿಷಯಗಳನ್ನು ಈ ಮಾನ್ಯ ಸಭೆಯ ಗಮನಕ್ಕೆ ತರಬೇಕೆಂದು ಇಚ್ಛಿಸುತ್ತೇನೆ. ಈಗಾಗಲೇ ಈ ಮಸೂದೆಯ ವಿಚಾರವನ್ನು ಪ್ರಸ್ತಾಪಿಸಿರತಕ್ಕ ವಿರೋಧ ಪಕ್ಷದ ಮಾನ್ಯ ನಾಯಕರು ಮತ್ತು ಇನ್ನೂ ಅನೇಕ ಸದಸ್ಯರು ಈ ಬಿಲ್ಲಿನ ಬಗ್ಗೆ ಅನೇಕ ಉಪಯುಕ್ತ ಸಲಹೆಗಳನ್ನಿತ್ತಿದ್ದಾರೆ. ಆದರೆ ನಮ್ಮ ವಿರೋಧ ಪಕ್ಷದ ನಾಯಕರು ಈ ಪ್ರಶ್ನೆಯನ್ನು ಒಂದು ಪಾರ್ಟಿ ಪ್ರಶ್ನೆಯನ್ನಾಗಿ ತೆಗೆದುಕೊಳ್ಳದೆ ಇದನ್ನು ಸ್ವಾಗತಿಸಿರುವುದು ಬಹಳ ಸಂತೋಷದ ವಿಚಾರ. ಆದರೆ ಈ ಮಸೂದೆಯನ್ನು ರಾಜ್ಯಾಂಗ ಜಾರಿಗೆ ಬಂದ ಹತ್ತು ವರ್ಷಗಳ ಅವದಿಯೊಳಗೆ ತರಬೇಕಾಗಿತ್ತು. ಆದರೆ ಈಗಲಾದರೂ ಇಂಥ ಒಂದು ಮಸೂದೆಯನ್ನು ತಂದುದಕ್ಕಾಗಿ ನಾವು ನಮ್ಮ ವಿದ್ಯಾಮಂತ್ರಿಗಳಾದ ಶ್ರೀ ಅಣ್ಣಾರಾಯರನ್ನು ಮತ್ತು ವಿದ್ಯಾಉಪಮಂತ್ರಿಯನ್ನು ಅಭಿನಂದಿಸಬೇಕಾಗಿದೆ. ಸರ್ಕಾರದವರು ಈ ಮಸೂದೆಯನ್ನು ಜಾರಿಗೆ ತರುವ ಮುನ್ನ ಇದರ ಬಗ್ಗೆ ಮಾಡಿಕೊಳ್ಳಬೇಕಾಗಿರುವ ಎಲ್ಲ ಸಿದ್ಧತೆಗಳನ್ನು ಎಂದರೆ ಶಾಲಾ ಕಟ್ಟಡಗಳೂ, ಉಪಾಧ್ಯಾಯರೂ ಮತ್ತು ಇತರ ಅಗತ್ಯವಾದ ಸಲಕರಣೆಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ಈ ಯೋಜನೆಯನ್ನು ಸರ್ಕಾರದವರೇನೆ ಒಂದು ನಿಗದಿಯಾದ ಕಾಲದಲ್ಲಿ ಯಶಸ್ವಿಗೊಳಿಸಬೇಕೆಂದು ಅಂದಾಜು ಮಾಡಿಕೊಂಡಿದ್ದಾರೋ ಆ ಅವಧಿಯೊಳಗೆ ಅದನ್ನು ಯಶಸ್ವಿಗೊಳಿಸಲು ಎಲ್ಲವನ್ನೂ ಸಿದ್ಧಪಡಿಸಿಕೊಂಡು ತಂದಿದ್ದಾರೋ-ಇಲ್ಲವೋ ಎನ್ನತಕ್ಕ ಒಂದು ಸಂಶಯವನ್ನು ಕೆಲವರು ವ್ಯಕ್ತಪಡಿಸಿದರು ಈಗಾಗಲೆ 400 ಹೊಸ ಸ್ಕೂಲು ಕಟ್ಟಡಗಳಿಗೆ ಅಂದಾಜು ತಯಾರಿಸಿದ್ದಾರೆ. ಇನ್ನು ಇದರ ಜೊತೆಗೆ ಹಾಲಿ ಇರತಕ್ಕ ಶಾಲೆಗಳೇ ಸಾವಿರಾರು ಇರುತ್ತವೆ. ಅನೇಕ ಕಡೆಗಳಲ್ಲಿ ಸ್ಕೂಲಿಗೆ ತಕ್ಕಷ್ಟು ವಿದ್ಯಾರ್ಥಿಗಳ ಸಂಖ್ಯೆ ಇರುವುದಿಲ್ಲ. ಇಂಥ ಕಡೆಗೆ ಎಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿ ಕಟ್ಟಡದ ಕೊರತೆ ಉಂಟಾಗುತ್ತೋ ಅಂಥ ಕಡೆಯ ವಿದ್ಯಾರ್ಥಿಗಳನ್ನು ಕಡಿಮೆ ವಿದ್ಯಾರ್ಥಿಗಳ ಸಂಖ್ಯೆ ಇರುವ ಕಡೆಗೆ ಆ ವಿದ್ಯಾರ್ಥಿಗಳನ್ನು ತೆಗೆದುಕೊಂಡು ಕೆಲಸ ನಡೆಸುವುದಕ್ಕೂ ಕೆಲವು ಕಡೆ ಅವಕಾಶವಿದೆ. ಆದುದರಿಂದ ಈಗ ಈ ಕಟ್ಟಡಗಳ ತೊಂದರೆಯೇನು ಇರುವುದಿಲ್ಲ. ತರಪೇತಾದ ಉಪಧ್ಯಾಯರುಗಳನ್ನು ಈ ಪಾಠಶಾಲೆಗಳಿಗೆ ಒದಗಿಸತಕ್ಕ ಮಾರ್ಗದಲ್ಲಿ ಉಪಾಧ್ಯಾಯರುಗಳಿಗೆ ಟ್ರೈನಿಂಗ್ ಕೊಡತಕ್ಕ ವೆಚ್ಚ ಸೇರಿದೆಯೋ ಅದನ್ನು ನೂರಕ್ಕೆ ನೂರು ಭಾಗ ಕೇಂದ್ರ ಸರ್ಕಾರ ವಹಿಸಿಕೊಂಡಿದೆ. ಈಗಾಗಲೇ ನಮ್ಮಲ್ಲಿ ಅನೇಕ ಟೀಚರುಗಳಿಗೆ ಈ ಟ್ರೈನಿಂಗನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಡಲಾಗುತ್ತಿದೆ. ಹೆಚ್ಚು ಟ್ರೈನಿಂಗ್ ಶಾಲೆಗಳನ್ನು ತೆರೆಯಬೇಕೆಂಬ ಯೋಜನೆ ಸಹ ನಮ್ಮ ಸರ್ಕಾರಕ್ಕಿದೆ. ಆದರೆ ಇಂಥ ಒಂದು ಸ್ಕೀಮನ್ನು ತರತಕ್ಕವರಿದ್ದೇವೆ ಎಂಬ ಅಂಶ ಗೊತ್ತಾದ ಕೂಡಲೆ ಎಂದು ಈ ಸ್ಕೀಮನ್ನು ಜಾರಿಗೆ ಕೊಡಬೇಕೋ ಅದಕ್ಕೆ ಪೂರ್ವಭಾವಿಯಾಗಿಯೆ ನಮಗೆ ಸಾಕಾದಷ್ಟು ತರಪೇತು ಪಡೆದ ಉಪಾಧ್ಯಾಯರನ್ನು ಶೇಕರಣೆ ಮಾಡಿಟ್ಟುಕೊಂಡಿರತಕ್ಕದ್ದು ಬಹಳ ಒಳ್ಳೆಯದು. ಈಗಲಾದರೋ ಈ ವಿಷಯಕ್ಕೆ ಸರ್ಕಾರದವರು ತೀವ್ರ ಗಮನ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

* ವಿಧಾನ ಸಭಾ ನಡವಳಿಕೆ ದಿನಾಂಕ 21ನೇ ಏಪ್ರಿಲ್, 1961 ಪುಟ 2833-2836

ಇನ್ನು ಎರಡನೆಯದಾಗಿ ಈ ಎಲಿಮೆಂಟರಿ ಎಜುಕೇಷನನ್ನು ಉಚಿತ ಹಾಗೂ ಕಡ್ಡಾಯವಾಗಿ ರಾಜ್ಯದಲ್ಲಿ ಜಾರಿಗೆ ತರತಕ್ಕ ವಿಭಾಗದಲ್ಲಿ ಸರ್ಕಾರದವರು ಯಾವಾಗ ಅಪೇಕ್ಷೆಪಟ್ಟರೆ, ಆಗಲೇ ಮದ್ರಾಸ್ ಮತ್ತು ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಈ ವಿದ್ಯಾಭ್ಯಾಸವನ್ನು ನಡೆಸುತ್ತಿರುವ ಡಿಸ್ಟ್ರಿಕ್ಟ್ ಸ್ಕೂಲ್ ಬೋರ್ಡ್‌ಗಳು ಅಥರೈಸ್ಡ್ ಮುನಿಸಿಪಾಲಿಟಿಗಳೂ ಮತ್ತು ಮುನಿಸಿಪಾಲ್ ಕೌನ್‌ಸಿಲ್‌ಗಳು ತಮ್ಮ ಒಪ್ಪಿಗೆಯನ್ನು ಕೊಡುತ್ತೇವೆಂಬುದಾಗಿ ಮಂತ್ರಿಗಳು ಹೇಳಿದ್ದಾರೆ. ಆದರೆ ಹಾಗೆ ಲೋಕಲ್ ಸೆಲ್ಫ್ ಇನ್‌ಸ್ಟಿಟ್ಯೂಷನ್ನಿನವರು ಒಂದು ಸ್ಕೀಮನ್ನು ತಯಾರುಮಾಡಿ ನಮ್ಮ ಸರ್ಕಾರಕ್ಕೆ ಕಳುಹಿಸುವ ತನಕ ನಮ್ಮ ಸರ್ಕಾರ ಕಾಯದೆ ಸರ್ಕಾರದವರೇ ಎಲ್ಲಾ ಭಾಗಗಳಿಗೂ ಅನ್ವಯಿಸುವಂಥ ಒಂದು ಯೂನಿಫಾರಂ ಸ್ಕೀಮನ್ನು ತಯಾರಿಸಿ ಇದನ್ನು ಜಾರಿಗೆ ತಂದರೆ ಚೆನ್ನಾಗಿರುತ್ತದೆಂದು ಕಾಣುತ್ತದೆ. ಆದರೆ ಕೆಲವು ಕಾಲ ಈ ಅಥರೈಸ್ಡ್ ಮುನಿಸಿಪಾಲಿಟಿಗಳೂ ಮತ್ತು ಮುನಿಸಿಪಾಲ್ ಕೌನ್ಸಿಲ್‌ಗಳು ಎಷ್ಟರ ಮಟ್ಟಿಗೆ ಈ ಕಾರ್ಯವನ್ನು ಫಲಕಾರಿಯಾಗಿ ನೆರವೇರಿಸಬಲ್ಲವು ಎಂಬುದನ್ನು ನೋಡಿಕೊಂಡು ಆನಂತರ ಬೇಕಾದರೆ ಈ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ಮುಂದೆ ತಾಲ್ಲೂಕ್ ಬೋರ್ಡ್‌ಗಳಿಗೂ ಮತ್ತು ವಿಲೇಜ್ ಪಂಚಾಯಿತಿಗಳಿಗೂ ವಹಿಸತಕ್ಕದ್ದು ಒಳ್ಳೆಯದೆಂದು ಹೇಳುತ್ತೇನೆ.

ಈಗ ದೇಶಾದ್ಯಂತವೂ ಒಂದು ಯೂನಿಫಾರ್ಮಿಟಿಯನ್ನು ತರಬೇಕೆಂಬ ನೆಪದಲ್ಲಿ ಈ ಬಗ್ಗೆ ಒಂದು ರಾಜಕೀಯ ಒಳಸುಗ್ಗಿರುವಂತೆ ಭಾಸವಾಗುತ್ತಿದೆ. ಆದರೆ ಕೆಲವರು ನಾವು ಈ ದಿವಸ ನಿರೀಕ್ಷಿಸಿರತಕ್ಕ ಪೆನಾಲ್ಟಿ ಲಿಷ್ಟು ಡಿಟರೆಂಟ್ ಆಗಿಲ್ಲ ಇದನ್ನು ಇನ್ನೂ ಬಲಪಡಿಸಿ ಒತ್ತಾಯ ಮಾಡಬೇಕೆಂದು ಕೆಲವರು ಹೇಳಿದ್ದಾರೆ. ಆದರೆ ಈ ವಿಚಾರದಲ್ಲಿ ನನಗಾದರೂ ಅನ್ನಿಸುತ್ತದೆ. ನಾನು ಈ ಮೊದಲೆ ತಿಳಿಸಿದಂತೆ ಈಗ ಈ ಕಡ್ಡಾಯ ಹಾಗೂ ಉಚಿತ ಪ್ರಾಥಮಿಕ ಶಿಕ್ಷಣ ಮಸೂದೆಯನ್ನು ತಂದಿರತಕ್ಕ ಉದ್ದೇಶವೇನಿದೆ ಅದು ಸಫಲವಾಗಬೇಕಾಗಿದ್ದರೆ ಕೇವಲ ವಿದ್ಯಾರ್ಥಿಗಳ ಹಾಜರಾತಿಯನ್ನು ಸ್ಟ್ರಿಕ್ಟ್ ಆಗಿ ನೋಡಿಕೊಳ್ಳಲು ಅಧಿಕಾರಿಗಳನ್ನು ನೇಮಿಸಿದ ಮಾತ್ರಕ್ಕೆ ಇದು ಫಲಕಾರಿ ಆಗುತ್ತೆಂದರೆ ಅದು ನಂಬತಕ್ಕ ಮಾತಲ್ಲ. ಈ ಸ್ಕೀಮ್ ಜಯಪ್ರದವಾಗಬೇಕಾಗಿದ್ದರೆ ಈ ಕಾರ್ಯದಲ್ಲಿ ಸಾರ್ವಜನಿಕ ಮುಖಂಡರೆಲ್ಲರೂ ಉತ್ಸಾಹದಿಂದ ದೇಶದಲ್ಲಿ ಎಲ್ಲಿ ಮೂಢತ್ವ ಹೆಚ್ಚಾಗಿರುತ್ತದೋ ಅಂಥ ಕಡೆ ಜನರಿಗೆ ಹೆಚ್ಚಿನ ರೀತಿಯಲ್ಲಿ ಇದರ ಪ್ರಚಾರ ನಡೆಸಲು ಮುಂದೆ ಬರಬೇಕು. ಈ ಬಗ್ಗೆ ನಮ್ಮ ಸೋಷಿಯಲ್ ವೆಲ್‌ಫೇರ್ ಮಂತ್ರಿಗಳು ಮತ್ತು ಡೆಪ್ಯೂಟಿ ಹೋಂ ಮಿನಿಸ್ಟರೂ ಈ ವಿಚಾರಕ್ಕೆ ಹೆಚ್ಚಿನ ಗಮನಕೊಡಬೇಕು. ಈಗಾಗಲೇ ಅವರು ಈ ಸೋಷಿಯಲ್ ಬಾಬನ್ನು ಹರಿಜನ ವಿದ್ಯಾರ್ಥಿಗಳಿಗೆ ಹಾಸ್ಟಲುಗಳನ್ನು ಕಟ್ಟಿಸತಕ್ಕ ಕಾರ್ಯವನ್ನು ನಿಲ್ಲಿಸಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಕೊಡಬೇಕೆಂಬ ಒಂದು ವಿಚಾರವನ್ನು ಅಲ್ಲಲ್ಲೇ ತಿಳಿಸಿದ್ದಾರೆ. ಹೀಗೆ ಮಾಡುವುದು ಈ ಪ್ರೈಮರಿ ಸ್ಕೂಲಿಗೆ ಬರತಕ್ಕ 6 ರಿಂದ 11 ವರ್ಷದ ವಯಸ್ಸಿನೊಳಗಿರತಕ್ಕ ಮಕ್ಕಳೆಷ್ಟು ಇರುತ್ತಾರೋ ಅವರಲ್ಲಿ ಹರಿಜನ ವಿದ್ಯಾರ್ಥಿಗಳಿಗೂ ಮತ್ತು ಹಿಂದುಳಿದ ವಿದ್ಯಾರ್ಥಿಗಳಿಗೂ ಎಲ್ಲರಿಗೂ ಉಚಿತವಾಗಿ ಬಟ್ಟೆ ಪುಸ್ತಕ ಮತ್ತು ಮಿಡ್

ಡೇ ಮೀಲ್ ಸ್ಕಾಲರ್ ಷಿಪ್-ಇವುಗಳನ್ನು ಕೊಟ್ಟ ಪಕ್ಷದಲ್ಲಿ ಆಗ ಏನಾದರೂ ಈ ಬಡತನದ ಕುಲುಮೆಗೆ ಸಿಕ್ಕಿ ಬಳಲಿ-ಬೆಂದು ಬೆಂಡಾಗಿರತಕ್ಕ ಆ ವಿದ್ಯಾರ್ಥಿಗಳ ತಂದೆ ತಾಯಿಗಳಿಗೆ ಸ್ವಲ್ಪ ಅನುಕೂಲ ಆದೀತು. ಈ ವಿದ್ಯಾಭ್ಯಾಸವೂ ನಡೆದೀತು. ಆಗಲೆ ಈ ಬಡತನದ ತಂದೆ ತಾಯಿಗಳು ತಮ್ಮ ಹೊಟ್ಟೆಪಾಡಿಗಾಗಿ ತಮ್ಮ ಮಕ್ಕಳನ್ನು ಬೇರೆಯವರಲ್ಲಿ ಜೀತಕ್ಕೆ ಇಡುವುದು ಕಡಿಮೆಯಾಗುತ್ತದೆ. ಈ ದೃಷ್ಟಿಯಿಂದ ನಾವೀಗ ಈ ಪ್ರೈಮರಿ ಶಾಲೆಗೆ ಬರತಕ್ಕ ಎಲ್ಲಾ ಮಕ್ಕಳಿಗೂ ಮಿಡ್ಡೇ ಮೀಲ್ಸನ್ನು, ಸ್ಕಾಲರ್ ಷಿಪನ್ನು ಕೊಡತಕ್ಕ ಏರ್ಪಾಟನ್ನು ಸರ್ಕಾರದವರು ಮಾಡಬೇಕೆಂದು ನಾನು ಅವರಲ್ಲಿ ಕೇಳಿಕೊಳ್ಳುತ್ತೇನೆ.

ಇನ್ನು ಈ ಅಟೆಂಡೆನ್ಸ್ ಅಥಾರಿಟಿ ವಿಚಾರದಲ್ಲಿ ಈಗಾಗಲೇ ವಿರೋಧ ಪಕ್ಷದ ನಾಯಕರು ಹೇಳಿದ ಹಾಗೆ ಮಿಡಲ್ ದರ್ಜೆಯ ಉಪಾಧ್ಯಾಯರನ್ನು ಈ ಅಟೆಂಡೆನ್ಸ್ ಅಧಿಕಾರಿಗಳನ್ನಾಗಿ ನೇಮಿಸುವುದನ್ನು ಅನುಸರಿಸುವಂತೆ ಕಾಣುತ್ತೆ. ಹಾಗಾಗುವುದರಿಂದ ಸಾರ್ವಜನಿಕರು ಇವರ ಅಪ್ಪಣೆಯನ್ನು ಪ್ರೀತಿ ಗೌರವಗಳಿಂದ ಕಾಣುತ್ತಾರೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಈ ಅಧಿಕಾರವನ್ನು ಪದವೀಧರರಿಗೆ ವಹಿಸುವುದು ಒಳ್ಳೆಯದೆಂದು ಹೇಳುತ್ತೇನೆ. ಇನ್ನು ಈ ಅಟೆಂಡೆನ್ಸ್ ಅಧಿಕಾರಿ ಕೆಲಸಕ್ಕೆ ಅವರನ್ನು ನೇಮಕ ಮಾಡತಕ್ಕ ಕೋರ್ಟ್ ಯಾವುದೆಂದರೆ ಗ್ರಾಮಾಂತರ ಪ್ರದೇಶಗಳಲ್ಲಿ ಗ್ರಾಮ ಪಂಚಾಯ್ತಿಯ ಛೇರ್ಮನ್, ವೈಸ್ ಛೇರ್ಮನ್ ಮತ್ತು ಒಬ್ಬ ಮಹಿಳಾ ಸದಸ್ಯೆಯಿಂದ ಒಳಗೊಂಡಿರತಕ್ಕ ಒಂದು ಸಮಿತಿಯನ್ನು ಡಿಸ್ಟ್ರಿಕ್ಟ್ ಎಜುಕೇಷನ್ ಆಫೀಸರು ನೇಮಿಸಬೇಕಾಗಿದೆ ಅಂತ ಹೇಳಿದೆ. ಆದರೆ ಈ ಸದಸ್ಯರುಗಳೆಲ್ಲ ಬಹಳ ಮಟ್ಟಿಗೆ ಮುಂದುವರಿದ ಜನಾಂಗಕ್ಕೆ ಸೇರಿದವರೇ ಆಗಿರುತ್ತಾರೆ. ಅವರ ಮಧ್ಯೆಯಲ್ಲಿ ಬಹಳ ಹಿಂದುಳಿದ ಹರಿಜನ ಪಂಗಡದ ಸದಸ್ಯರು ಈ ಸಮಿತಿಯಲ್ಲಿ ಯಾರೂ ಇರುವುದಿಲ್ಲ. ಏಕೆಂದರೆ ಈ ಛೇರ್ಮನ್ ಮತ್ತು ವೈಸ್ ಛೇರ್ಮನ್ ಸಂಸ್ಥಾನದಲ್ಲಿ ಹರಿಜನರಿರುವುದು ಬಹಳ ಅಪರೂಪ. ಅವಿದ್ಯಾವಂತರ ಕಷ್ಟನಷ್ಟಗಳು ಇವರಿಗೆ ಅರಿವಾಗುವುದು ಕಷ್ಟ. ಈ ಪೀನಲ್ ಕ್ಲಾಸಿನಿಂದ ಹರಿಜನರಿಗೆ ತೊಂದರೆಯಾಗಬಹುದು. ಈ ದೃಷ್ಟಿಯಿಂದ ಈಗ ಸರ್ಕಾರದವರೇನು 16ನೇ ಕ್ಲಾಜಿನ ಒಳ ಕ್ಲಾಜ್ (2) ರಲ್ಲಿ ತಿಳಿಸಿದ್ದಾರೋ, ಆ ಮೂರು ಜನ ಸದಸ್ಯರ ಜೊತೆಗೆ ಒಬ್ಬ ಹರಿಜನ ಸದಸ್ಯರನ್ನು ಸೇರಿಸಲೇಬೇಕೆಂದು ಹೇಳುತ್ತೇನೆ. ಸಾಧ್ಯವಾದರೆ ಈ ಕ್ಲಾಸನ್ನೇ ಸೂಕ್ತ ರೀತಿಯಲ್ಲಿ ತಿದ್ದುಪಡಿ ಮಾಡುವುದಕ್ಕೆ ಅವಕಾಶವಿದ್ದರೆ ಮತ್ತೂ ಒಳ್ಳೆಯದೇ. ಹಾಗೆ ಅವಕಾಶವಿಲ್ಲದ ಭಾಗದಲ್ಲಿ ಒಬ್ಬ ನಿಮ್ನ ವರ್ಗದ ಸದಸ್ಯರನ್ನು ಈ ಸಮಿತಿಯಲ್ಲಿರುವ ಹಾಗೆ ಮಾಡಬೇಕು. ಆಗಲೇ ಈ ವಿದ್ಯಾರ್ಥಿಗಳ ಅಟೆಂಡೆನ್ಸನ್ನು ಒಂದು ಹೆಚ್ಚಿನ ರೀತಿಯಲ್ಲಿ ಉತ್ತಮಗೊಳಿಸಲು ಒಂದು ಹೆಚ್ಚಿನ ಅವಕಾಶ ಉಂಟಾಗುತ್ತದೆ.

ಇದನ್ನು ಪ್ರಚಾರ ಮಾಡಿದರೆ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಶಾಲೆಗೆ ಬರುತ್ತಾರೆಂದು ನಾನು ಹೇಳುತ್ತೇನೆ. ಕಡ್ಡಾಯವಾಗಿ ಸದಸ್ಯರನ್ನು ಸಹ ಸೇರಿಸಬೇಕು ಎಂದು ಸರ್ಕಾರಕ್ಕೆ ಒತ್ತಾಯ ಮಾಡುತ್ತೇನೆ. ಇದರಲ್ಲಿ ಕೇವಲ 37 ಲಕ್ಷ ರೂ. ಧನ ಸಹಾಯ ಸ್ಕಾಲರ್ ಶಿಪ್ ಯೋಜನೆಯಲ್ಲಿ ಕೇಂದ್ರ ಸರ್ಕಾರದಿಂದ ಬರುತ್ತದೆ. ನಮ್ಮ ಮೈಸೂರು ಸರ್ಕಾರ 76,70,870 ರೂಪಾಯಿ

ವಿದ್ಯಾಭ್ಯಾಸಕ್ಕಾಗಿ ಖರ್ಚು ಮಾಡುತ್ತಿದ್ದಾರೆ. ಪ್ರಾಥಮಿಕ ಶಿಕ್ಷಣಕ್ಕೆ 35,86,500 ರೂ. ಖರ್ಚಾಗುತ್ತಿದೆ. ಇದರ ಜೊತೆಯಲ್ಲಿ 40 ಲಕ್ಷ ರೂಪಾಯಿ compulsory education expenditure ಎಂದು ಹಾಕಿಕೊಂಡಿದ್ದಾರೆ. ಐದು ವರ್ಷಗಳಲ್ಲಿ ಕಡ್ಡಾಯ ಶಿಕ್ಷಣ ಜಾರಿಗೆ ತರಬೇಕು ಎಂದಿದೆ. ಶಿಕ್ಷಣದ ಜೊತೆ ಕುಡಿಯುವುದನ್ನು ಸಹ ನಿಲ್ಲಿಸುವುದಕ್ಕೆ ಪ್ರಾಧಾನ್ಯಕೊಟ್ಟಿದ್ದಾರೆ. ಅದರ ಜೊತೆಯಲ್ಲಿ ಇದೂ ಆಗಬೇಕು. ಪ್ರೊಹಿಬಿಷನ್ ಇದು directive principle ನಲ್ಲಿ ಸೇರಿದೆ.

**Sri M.C. Narasimhan -** Supposing you had seriously taken the Directive principles of state policy, then you would have definitely assured free education for age-group of 6-14, you have got to come back to 6-11.

ಶ್ರೀ ಬಿ. ರಾಚಯ್ಯ- ಇಲ್ಲ ಸ್ವಾಮಿ, ಅದು ಸಾಧ್ಯವಿಲ್ಲ ಯಾರು ವಿದ್ಯಾಭ್ಯಾಸದ ಸವಿಯನ್ನು ಅನುಭವಿಸಿದ್ದಾರೋ ಮತ್ತು ದೊಡ್ಡ ದೊಡ್ಡ ಅಧಿಕಾರಿಗಳಾಗಿ ಬಂದಿದ್ದಾರೆಯೋ ಅಂಥವರಿಂದ ಆಗಬಹುದಾಗಿತ್ತು. ಈ ದೃಷ್ಟಿಯಿಂದ ಕಡ್ಡಾಯ ಶಿಕ್ಷಣ ಜಾರಿಗೆ ತರುವ ನೀತಿಯನ್ನು ಇಟ್ಟುಕೊಂಡಿದ್ದಾರೆ. ಇದು ಸಂತೋಷ ಪಡತಕ್ಕ ವಿಚಾರ. ನಾಲ್ಕು ವರ್ಷಗಳಲ್ಲಿ ಈ ಕ್ರಮವನ್ನು ಪೂರ್ತಿ ಮಾಡಲಿ ಎಂದು ಹಾರೈಸಿ ಈ ಮಸೂದೆಯನ್ನು ಸ್ವಾಗತಿಸುತ್ತೇನೆ.

## ಮೀನುಗಾರಿಕೆ ಇಲಾಖೆಯ ಅಭಿವೃದ್ಧಿ ಬಗ್ಗೆ *

ಶ್ರೀ ಬಿ. ರಾಚಯ್ಯ (ಅರಣ್ಯ ಮತ್ತು ಮೀನುಗಾರಿಕೆ ಇಲಾಖೆ ಮಂತ್ರಿಗಳು)- ಮಾನ್ಯ ಅಧ್ಯಕ್ಷರೇ, ನನಗೆ ಸಂಬಂಧ ಪಟ್ಟ ಖಾತೆಯಾದ ಮೀನುಗಾರಿಕೆಯ ಇಲಾಖೆಯ ಮೇಲೆ ಈ ಮಾನ್ಯ ಸಭೆಯಲ್ಲಿ ಯಾವ ವಿಧವಾದ ಟೀಕೆ ಟಿಪ್ಪಣಿಗಳೂ ಕೂಡ ಬಾರದೇ ಇರುವುದಕ್ಕೆ ಮೊಟ್ಟ ಮೊದಲನೆಯದಾಗಿ ಈ ಮಾನ್ಯ ಸಭೆಯ ಸದಸ್ಯರಿಗೆ ಅತ್ಯಂತ ಅಭಿನಂದನೆಗಳನ್ನು ಅರ್ಪಿಸುತ್ತೇನೆ. ಮಾನ್ಯ ಶ್ರೀ ಮದ್ದರಾಜ್ ಮತ್ತು ವಿರೋಧ ಪಕ್ಷದ ಒಬ್ಬಿಬ್ಬರು ಮಾನ್ಯ ಸದಸ್ಯರು ಕೆಲವು ಸಲಹೆಗಳನ್ನು ಕೊಟ್ಟಿದ್ದಾರೆ. ಮನವಿಗಳು ಬಂದಂಥ ಕಾಲದಲ್ಲಿ ಸಂಬಂಧಪಟ್ಟ ಮಂತ್ರಿಗಳು ಉತ್ತರ ಕೊಡುತ್ತಾರೆಂದು ಹಣಕಾಸಿನ ಸಚಿವರು ಹೇಳಿದ್ದಾರೆ. ಇವತ್ತೂ ಕೂಡ ಕಾಲಾವಕಾಶವಿಲ್ಲದೇ ಇರುವುದರಿಂದ ಕಳೆದ ವರ್ಷದಲ್ಲಿ ಈ ಇಲಾಖೆ ಏನೇನು ಸಾಧಿಸಿದೆ ಎಂಬುದನ್ನು ಮಾತ್ರ ಒಂದೆರಡು ಮಾತುಗಳಲ್ಲಿ ತಿಳಿಸಬೇಕೆಂದು ತಮ್ಮ ಅಪ್ಪಣೆ ಬೇಡುತ್ತೇನೆ. ಮೈಸೂರು ಸಂಸ್ಥಾನದಲ್ಲಿ ವಿಶಾಲ ಕರ್ನಾಟಕವಾದ ಮೇಲೆ ನಮಗೆ 180 ಮೈಲಿಗಳಷ್ಟು ಸಮುದ್ರ ತೀರವಿದೆ. ಅದು ನಮ್ಮ ಸೌಭಾಗ್ಯ. ಸಮುದ್ರ ತೀರದಿಂದ ಸುಮಾರು ಹತ್ತು ಸಾವಿರ ಚ.ಕಿ.ಮಿಗಳಲ್ಲಿ ವರ್ಷಪೂರ್ತಿ ಮೀನುಗಳನ್ನು ಹಿಡಿಯುವ ಅವಕಾಶ ಸಿಕ್ಕಿದೆ. 20 ಸಾವಿರ ಜನ ನೇರವಾಗಿ ಮೀನು ಹಿಡಿಯುವ ಜನರಿದ್ದಾರೆ. ಒಂದು ಲಕ್ಷ ಜನರಿದ್ದಾರೆ. ಅವರೆಲ್ಲರ ಜೀವನವನ್ನೂ ಕೂಡ ಉತ್ತಮ ಮಾಡಬೇಕಾಗಿದ್ದರೆ, ಕೈಗಾರಿಕೆಯಲ್ಲಿ ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಬೇಕಾದರೆ, ಹಳೆಯ ಕಂದಾಚಾರದಿಂದ ಏನು ಮೀನುಗಳನ್ನು ಹಿಡಿಯುತ್ತೇವೋ, ಹಳೇ ಬಲೆಗಳು, ಹಳೆಯ ದೋಣಿಗಳು ಯಾವ ವಿಧವಾದ ತರಬೇತಿ ಇಲ್ಲದೆ ನಡೆಯತಕ್ಕ ಕೈಗಾರಿಕೆಯನ್ನು ಹೆಚ್ಚಿನ ಮಟ್ಟದಲ್ಲಿ ನಾವು ನಡೆಸಿ ದೇಶದಲ್ಲೆಲ್ಲಾ ಜನರಿಗೆ ಬೇಕಾಗಿರತಕ್ಕ ಆಹಾರವನ್ನು ಇನ್ನೂ ಹೆಚ್ಚು ಹೆಚ್ಚು ಒದಗಿಸುವುದಕ್ಕೆ ಅಪಾರವಾದ ಅವಕಾಶ ದೊರಕಿದೆ. ಇಂತಹ ಅವಕಾಶವನ್ನು ತೆಗೆದುಕೊಂಡು ಕಳೆದ ಎರಡು ವರ್ಷಗಳಿಂದಲೂ ಹೆಚ್ಚಿನ ಮಟ್ಟದಲ್ಲಿ ಪ್ರಗತಿಯನ್ನು ಸಾಧಿಸಿದ್ದೇವೆಂದು ಹೆಮ್ಮೆಯಿಂದ ಹೇಳುತ್ತೇನೆ. ಈ ಸಂದರ್ಭದಲ್ಲಿ ಕೆಲವು ಅಂಕಿಅಂಶಗಳನ್ನು ಮಾನ್ಯ ಸಭೆಯ ಮುಂದೆ ಇಡಬೇಕೆಂದು ತಮ್ಮ ಅಪ್ಪಣೆಯನ್ನು ಬೇಡುತ್ತಿದ್ದೇನೆ. ಮೈಸೂರು ಸಂಸ್ಥಾನದಲ್ಲಿ ಇನ್‌ಲ್ಯಾಂಡ್ ಫಿಷರೀಸ್ ಇರತಕ್ಕ ಸುಮಾರು 30 ಸಾವಿರ ಸಣ್ಣ ಕೆರೆಗಳಿವೆ, 2,700 ದೊಡ್ಡ ಕೆರೆಗಳಿವೆ, 17 ಜಲಾಶಯಗಳಿವೆ, ಹಾಗೆಯೇ 3,800 ಮೈಲಿಗಳಷ್ಟು ಕಾಲುವೆಗಳಲ್ಲಿ ಮೀನು ಹಿಡಿಯುವ ಅವಕಾಶವಿದೆ. ಕಳೆದ ಮೂರು ವರ್ಷಗಳಲ್ಲಿ ನಾನ್‌ಪ್ಲಾನ್ ಮತ್ತು ಪ್ಲಾನ್‌ಗಳಲ್ಲಿ 1961-62ನೇ ಸಾಲಿನಲ್ಲಿ 36.7 ಲಕ್ಷ ರೂಪಾಯಿಗಳಷ್ಟೂ, 1962-63ನೇ ಸಾಲಿನಲ್ಲಿ 52.6 ಲಕ್ಷ ರೂಪಾಯಿಗಳನ್ನು ಮತ್ತು 1963-64ನೇ ಸಾಲಿನಲ್ಲಿ 53 ಲಕ್ಷ ರೂಪಾಯಿಗಳನ್ನು ಈ ಬಾಬಿಗೆ ಒದಗಿಸಿಕೊಂಡಿದ್ದೇವೆ. ಈ ವರ್ಷ 62.37 ಲಕ್ಷ ರೂಪಾಯಿಗಳನ್ನು ಈ ಬಾಬಿಗೆ ಒದಗಿಸಬೇಕೆಂದು ಈ ಮಾನ್ಯ ಸಭೆಯ ಅನುಮತಿಯನ್ನು ಕೇಳುತ್ತಿದ್ದೇನೆ. ಇದರಲ್ಲಿ ನಿಜವಾಗಿಯೂ ಕೂಡ ಮೀನಿನ ಉಪಯೋಗವನ್ನು ಮಾನ್ಯ ಶ್ರೀ ಕೇಶವ ಮೂರ್ತಿಗಳು ಸ್ವಲ್ಪ ಮಟ್ಟಿಗೆ ತಿಳಿದು

* ವಿಧಾನ ಸಭಾ ನಡವಳಿಕೆ ದಿನಾಂಕ 26ನೇ ಮಾರ್ಚ್, 1964 ಪುಟ 1867-1869.

ಅದರ ರುಚಿಯನ್ನು ನೋಡಿದ್ದ ಪಕ್ಷದಲ್ಲಿ ಅವರು ಬಹಳವಾಗಿ ಸಂತೋಷದಿಂದ ಒಪ್ಪಿಕೊಳ್ಳುತ್ತಿದ್ದರು. ಮಾನ್ಯ ಅಧ್ಯಕ್ಷರಿಗೆ ಮೀನಿನ ಇಲಾಖೆಯಲ್ಲಿ ನಡೆಯತಕ್ಕಂಥ ಕೆಲಸ ಕಾರ್ಯಗಳು ನೇರವಾಗಿ ಗೊತ್ತಿದೆ. ಅನೇಕ ಸಂದರ್ಭಗಳಲ್ಲಿ ಮಾನ್ಯ ಅಧ್ಯಕ್ಷರ ಸಹಾಯದಿಂದಲೇ ಈ ಇಲಾಖೆ ಪ್ರಗತಿಯನ್ನು ಸಾಧಿಸಿದೆ ಮತ್ತು ಹೆಚ್ಚಿನ ಅಭಿವೃದ್ಧಿಯನ್ನು ಹೊಂದಿದೆಯೆಂದು ಹೇಳಿದರೆ ಅದೇನೂ ತಪ್ಪಾಗಲಾರದು. ಇನ್ನು ಮೆರಿನ್‌ಫಿಷ್ ಪ್ರೋಸೆಸ್ ಸೆಂಟರುಗಳನ್ನು ಇಂಡಿಯಾ ದೇಶದಲ್ಲೆಲ್ಲಾ ತೆರೆಯಬೇಕೆಂದು ನಿರ್ಧಾರ ಮಾಡಿ ಈಗಾಗಲೇ ಪ್ರಥಮ ಬಾರಿಗೆ ಕೆಲವು ಕಡೆಗಳಲ್ಲಿ ಫಿಷ್ ಕ್ಯಾನಿಂಗ್ ಪ್ರೋಸೆಸ್ ಸೆಂಟರುಗಳನ್ನು ತೆರೆದಿದ್ದಾರೆ. ಆದರೆ ಅತ್ಯಂತ ಶೀಘ್ರವಾಗಿ ಇದಕ್ಕೆ ಸಹಾಯವಾಗಲಿಲ್ಲ 12 ಲಕ್ಷ ರೂಪಾಯಿಗಳಷ್ಟು ತಾಂತ್ರಿಕ ನೆರವು ಇದಕ್ಕೆ ಈಗ ಬಂದಿದೆ. 7 ಜನ ತಾಂತ್ರಿಕರನ್ನು ಈಗ ಇಲ್ಲಿಗೆ ಕಳುಹಿಸಿಕೊಟ್ಟಿದ್ದಾರೆ. ವರ್ಷಪೂರ್ತಿ 30 ಜನ ಬಡವಿದ್ಯಾರ್ಥಿಗಳನ್ನು ತರಬೇತಿ ಮಾಡುತ್ತಿದ್ದಾರೆ. ಅದರಲ್ಲಿ 15 ಜನರು ಹೊರಗಡೆಯ ಪ್ರಾಂತ್ಯಗಳಿಂದ ಬರತಕ್ಕವರು, ಇನ್ನು 15 ಜನರು ಮೈಸೂರು ಸಂಸ್ಥಾನದವರೇ ಆಗಿದ್ದಾರೆ. 1963ನೇ ಜುಲೈನಿಂದ ಮೊದಲನೆಯ ತಂಡದ ಕೆಲಸದ ಯೋಜನೆ ನಡೆಯುತ್ತಾ ಇದೆ.

ಅದೇ ರೀತಿ, ಮೂರು ವರ್ಷಗಳಿಗೂ ಕೂಡ ಹೆಚ್ಚಿಸಬೇಕೆಂದು ಕೇಂದ್ರ ಸರ್ಕಾರದವರಿಗೆ ನಾವು ಬರೆದಿದ್ದೇವೆ. ಬಹುಶಃ ಅವರು ನಮ್ಮ ಮನವಿಯನ್ನು ಅಂಗೀಕರಿಸುತ್ತಾರೆಂದು ಸರ್ಕಾರದವರಿಗೆ ನಂಬಿಕೆ ಇದೆ. ಇಂಡೋನಾರ್ವೇಜಿಯನ್ ಪ್ರಾಜೆಕ್ಟ್ ಮೇರೆಗೆ ನಾರ್ವೇಜಿಯನ್ ತಂಡದವರ ಸಹಾಯದಿಂದ ಮೀನಿನ ಉತ್ಪನ್ನವನ್ನು ಹೆಚ್ಚಿಸುವ ಕಾರ್ಯವು ಕಾರವಾರದಲ್ಲಿ ಪ್ರಗತಿಯಿಂದ ಸಾಗುತ್ತಿದೆ. ಮಂಗಳೂರು ಮತ್ತು ಕಾರವಾರದಲ್ಲಿ ಮೀನಿನ ಸಂಸ್ಕರಣ ತರಬೇತಿಯನ್ನು ಏನು ಕೊಡುತ್ತಿದ್ದೇವೆಯೋ ಅದನ್ನು ದ್ವಿಗುಣ ಗೊಳಿಸುತ್ತಿದ್ದೇವೆ. ಮಂಗಳೂರಿನಲ್ಲಿ 40 ಜನಗಳಿಗೆ ತರಬೇತಿಯನ್ನು ಕೊಡುತ್ತಿದ್ದುದನ್ನು 80 ಜನಗಳಿಗೆ ತರಬೇತಿಯನ್ನು ಕೊಡುವಂತೆ ಮಾಡಿದ್ದೇವೆ. ಕಾರವಾರದಲ್ಲಿ ಮೊದಲು 25 ದೋಣಿಗಳನ್ನು ಕಟ್ಟುವುದಕ್ಕೆ ಏರ್ಪಾಡು ಮಾಡಬೇಕೆಂಬ ಇಚ್ಛೆ ಇದ್ದರೂ ಕೂಡ ಈ ವರ್ಷ ಅಲ್ಲಿ 65 ದೋಣಿಗಳನ್ನು ಕಟ್ಟಬೇಕೆಂದು ಏರ್ಪಾಡು ಮಾಡಿದ್ದೇವೆ. ಮತ್ತು ಯಾಂತ್ರಿಕ ತರಬೇತಿಯನ್ನು ಪಡೆದಿರುವವರಿಗೆ ಸುಮಾರು 179 ದೋಣಿಗಳನ್ನು ಕೊಡಬೇಕೆಂದು ಮಾಡಿದ್ದೇವೆ. ಸಾಲದ ಸಬ್ಸಿಡಿ ರೂಪದಲ್ಲಿ ನಾಲ್ಕು ಜನ ಟ್ರೈನಿಸಿಗೆ ಒಂದು ದೋಣಿಯನ್ನು ಕೊಡುತ್ತೇವೆ. 7 ವರ್ಷದಲ್ಲಿ ಅವರು ಅದರ ಹಣವನ್ನು ವಾಪಸ್ಸು ಕೊಡಬೇಕೆಂದು ಮಾಡಿದ್ದೇವೆ. ಅದಕ್ಕೋಸ್ಕರ 25 ಅಡಿ ಉದ್ದದ ದೋಣಿಗಳಿಗೆ 16 1/2 ಸಾವಿರ ರೂಪಾಯಿಗಳಾಗುತ್ತದೆ. 30 ಅಡಿ ಉದ್ದದ ದೋಣಿಗಳಿಗೆ 30-32 ಸಾವಿರ ರೂಪಾಯಿಗಳಾಗುತ್ತವೆ. ಆ ಹಣವನ್ನು ಅವರು 7 ವರ್ಷದಲ್ಲಿ ವಾಪಸ್ಸು ಕೊಡಬೇಕೆಂದು ಮಾಡಿದ್ದೇವೆ. ಅಲ್ಲಿ ಯಾವ ಹಣವೂ ಪೋಲಾಗತಕ್ಕದ್ದು ಇಲ್ಲ. ಅದರಿಂದ ಹೆಚ್ಚಿನ ಲಾಭವನ್ನು ಪಡೆದಿದ್ದೇವೆ. ನಾನು ಅತ್ಯಂತ ಹೆಮ್ಮೆಯಿಂದ ಹೇಳುತ್ತೇನೆ. ಅಲ್ಲಿ ಸುಮಾರು ಮೀನುಗಾರರ 91 ಕೋ ಆಪರೇಟೀವ್ ಸೊಸೈಟಿಗಳು ಅತ್ಯುತ್ತಮವಾಗಿ ಕೆಲಸ ಮಾಡುತ್ತಿವೆ. ಅದಕ್ಕೋಸ್ಕರ ಯಂತ್ರಕ್ಕೆ ಸಹಕಾರ ಪದ್ಧತಿಯ ಮೇಲೆ ನಾವು ಹಣವನ್ನು ಕೊಟ್ಟಿದ್ದೇವೆ. ಅದನ್ನೂ ಕೂಡ ಬಡ್ಡಿಸಮೇತ

ನಿಯಮಿತ ಕಾಲಕ್ಕಿಂತ ಮುಂಚಿತವಾಗಿಯೇ ಕೊಡುವುದಕ್ಕೆ ಆ ಜನರು ಸಿದ್ಧರಾಗಿದ್ದಾರೆ. ಅವರು ಬಡವರು ಮತ್ತು ಹಿಂದುಳಿದವರಾಗಿದ್ದರೂ ಕೂಡ ಅವರು ಆ ಸಂಸ್ಥೆಗಳನ್ನು ಪ್ರಾಮಾಣಿಕತೆಯಿಂದ ನಡೆಸಿಕೊಂಡು ಹೋಗುತ್ತಿದ್ದಾರೆ. ಮುಂದೆಯೂ ಸಹ ಅದೇ ರೀತಿ ನಡೆಸಿಕೊಂಡು ಬರಬೇಕೆಂದು ಆಸೆ ಇದೆ. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಅದಕ್ಕೋಸ್ಕರ ಒಂದು ಕೋಟಿ 30 ಲಕ್ಷ ರೂಪಾಯಿಗಳನ್ನು ಒದಗಿಸಿದ್ದರು. ಈಗಾಗಲೇ ಇದಕ್ಕೆ 3 1/2 ಕೋಟಿ ರೂಪಾಯಿಗಳನ್ನು ನಾವು ಖರ್ಚು ಮಾಡಿದ್ದೇವೆ. ಇಷ್ಟಾದರೂ ಕೂಡ ಈ ಸಮಸ್ಯೆ ಬೃಹದಾಕಾರವಾಗಿದೆ. ಇದಕ್ಕೆ ಕೇಂದ್ರ ಸರ್ಕಾರದವರಿಂದ ಹೆಚ್ಚಿನ ಮಟ್ಟದಲ್ಲಿ ನೆರವನ್ನು ಪಡೆಯಬೇಕೆಂಬ ಪ್ರಯತ್ನವನ್ನು ನಾವು ಮಾಡಿದ್ದೇವೆ. ಈ ಇಲಾಖೆಯ ಮುಖಾಂತರ ಕೆಲಸ ಕಾರ್ಯಗಳನ್ನು ಮಾಡಬೇಕಾದರೆ ಹಣಕಾಸಿನ ತೊಂದರೆ ಇರುವುದರಿಂದ ಫೈನಾನ್ಸಿಯಲ್ ಕಾರ್ಪೋರೇಷನ್ ಮಾಡಬೇಕೆಂದು ತೀವ್ರವಾಗಿ ಯೋಚನೆ ಮಾಡುತ್ತಿದ್ದೇವೆ. ಆ ಕೆಲಸಗಳನ್ನು ಮಾಡಲು ಖಾಸಗೀಯವರೂ ಸಹ ನೆರವನ್ನು ಕೊಡುತ್ತಿದ್ದಾರೆ. ಸರ್ಕಾರದವರು ಆ ಕೆಲಸಕ್ಕೆ ಬೇಕಾದ್ದೆಲ್ಲಾ ನೆರವನ್ನೂ ಸಹ ಕೊಡುತ್ತಿದ್ದಾರೆ. ಸಹಕಾರ ಸಂಘಗಳಿಗೆ ಮತ್ತು ಸಂಸ್ಥೆಗಳಿಗೆ ನಾವು ನೆರವನ್ನು ಕೊಟ್ಟಿದ್ದೇವೆ.

ಇನ್ನು ಸೌತ್ ಕೆನರಾದಲ್ಲಿ ಒಂದು ಷಿಪಿಂಗ್ ಸೆಂಟರನ್ನು ಮಾಡುತ್ತೇವೆಂದು ಅಲ್ಲಿಯವರು ಮುಂದೆ ಬಂದಿದ್ದಾರೆ. ಅವರಿಗೆ ತಾಂತ್ರಿಕ ನೆರವು ಮತ್ತು ಹಣವನ್ನು ಒದಗಿಸಿ ಅದು ಹೆಚ್ಚಿನ ಮಟ್ಟದಲ್ಲಿ ಕೆಲಸ ಮಾಡುವಂತೆ ಏರ್ಪಾಡು ಮಾಡಬೇಕೆಂದು ನಾವು ನಿರ್ಧಾರ ಮಾಡಿದ್ದೇವೆ.

ಶ್ರೀ ಬಿ. ಭಾಸ್ಕರಶೆಟ್ಟಿ- ಇಂಜಿನ್ ವಿಷಯದಲ್ಲಿ ಏನು ಮಾಡಿದ್ದೀರಿ?

ಶ್ರೀ ಬಿ. ರಾಚಯ್ಯ- ಸುಮಾರು 93 ಇಂಜಿನ್‌ಗಳನ್ನು ಬೇರೆ ಕಡೆಯಿಂದ ತರಿಸಿದ್ದೇವೆ. ಮತ್ತು ನಮ್ಮಲ್ಲಿ 30 ಇಂಜಿನ್‌ಗಳನ್ನು ತಯಾರಿಸಿ ಅವುಗಳನ್ನು ಉಪಯೋಗಿಸಿದ್ದೇವೆ. ಕೆಲವು ಎನ್‌ಮಾಕ್ ಎಂಜಿನ್‌ಗಳನ್ನು ಬೇರೆ ಕಡೆಯಿಂದ ತರಿಸಿದ್ದೇವೆ.

ಶ್ರೀ ಬಿ. ಭಾಸ್ಕರಶೆಟ್ಟಿ- ಇಂಜಿನ್‌ಗಳಿಗೆ ಹೆಚ್ಚು ಹಣವನ್ನು ಒದಗಿಸಬೇಕು.

ಶ್ರೀ ಬಿ. ರಾಚಯ್ಯ- ನಾರ್ವೆ ಮತ್ತು ಜಪಾನಿನಿಂದ ಇಂಜಿನ್‌ಗಳನ್ನು ನಾವು ಇದುವರೆಗೂ ನಿರೀಕ್ಷಿಸುತ್ತಿದ್ದೆವು. ಈಗ ನಮ್ಮ ದೇಶದಲ್ಲಿಯೇ ಅವುಗಳನ್ನು ತಯಾರು ಮಾಡಿ ಅವುಗಳನ್ನು ಉಪಯೋಗಿಸುವುದರಿಂದ ಈ ಇಂಜಿನ್‌ಗಳನ್ನು ಒದಗಿಸುವುದರಲ್ಲಿ ಅಷ್ಟೇನೂ ತೊಂದರೆಯಾಗುವುದಿಲ್ಲ. ದೋಣಿಗಳನ್ನು ಕಟ್ಟಬೇಕಾದರೆ ಅದರಲ್ಲಿ ಹೆಚ್ಚಿನ ತರಬೇತಿಯನ್ನು ಪಡೆದಿರುವವರು ಬೇಕಾದಷ್ಟು ಜನ ಫಾರೆಸ್ಟ್ ಇಲಾಖೆಯಲ್ಲಿದ್ದಾರೆ. ಈಗಾಗಲೇ ದೋಣಿಯನ್ನು ಕಟ್ಟತಕ್ಕ ಒಂದು ಸಣ್ಣ ಕೇಂದ್ರವನ್ನು ಕಾರವಾರದಲ್ಲಿ ತೆರೆಯಬೇಕೆಂದು ಪ್ರಯತ್ನ ನಡೆಯುತ್ತಿದೆ.

ಇನ್ನು ಫಿಷಿಂಗ್ ಹಾರ್ಬರ್ ವಿಷಯದಲ್ಲಿ ಹೇಳುವುದಾದರೆ ಮಂಗಳೂರಿನಲ್ಲಿ ಇದ್ದಂತಹ ಷಿಪಿಂಗ್ ಹಾರ್ಬರಿನ ವುಡನ್ ಏನಿದೆ ಅದು ಕೆಟ್ಟು ಸ್ವಲ್ಪ ಮಟ್ಟಿಗೆ ಶಿಥಿಲವಾಗಿದೆ. ಮತ್ತೆ ಅದನ್ನು ಬಹಳ ಚೆನ್ನಾಗಿ ಕಟ್ಟಬೇಕೆಂದು ಅಂದಾಜುಗಳನ್ನು ತಯಾರು ಮಾಡುತ್ತಿದ್ದಾರೆ. ಆಮೇಲೆ ಹಾಗೆಯೇ ಮಲ್ಪೆಯಲ್ಲಿ ಒಂದು ಷಿಪಿಂಗ್ ಹಾರ್ಬರ್ ಕಟ್ಟಬೇಕೆಂದು 21.10 ಲಕ್ಷ ರೂಪಾಯಿಗಳು

ಮಂಜೂರಾಗಿದೆ. ಕುಂದಾಪುರದಲ್ಲಿ 4.67 ಲಕ್ಷ ರೂಪಾಯಿಗಳಲ್ಲಿ ಒಂದು ಫಿಶಿಂಗ್ ಹಾರ್ಬರ್ ಅನ್ನು ಕಟ್ಟಬೇಕೆಂದು ಮಾಡಿದ್ದೇವೆ. ಕಾರವಾರದಲ್ಲಿ 92.35ಲಕ್ಷ ರೂಪಾಯಿಗಳ ಖರ್ಚಿನಲ್ಲಿ ಒಂದು ಫಿಶಿಂಗ್ ಹಾರ್ಬರ್ ಅನ್ನು ಕಟ್ಟಬೇಕೆಂದು ಅದರ ಅಂದಾಜನ್ನು ಮಂಜೂರು ಮಾಡಿ ಅಲ್ಲಿ ಈಗಾಗಲೇ ಲೆವೆಲಿಂಗ್ ವರ್ಕ್ಸ್ ಪ್ರಾರಂಭವಾಗಿದೆ. ಭಟ್ಕಳಕ್ಕೆ 14 ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಲಾಗಿದೆ.

ಇನ್ನು ಈ ಮೀನುಗಾರಿಕೆಯ ಉದ್ಯಮದಲ್ಲಿ ನಿರತರಾಗಿರತಕ್ಕವರ ಮಕ್ಕಳಿಗೆ ವಿದ್ಯಾಸೌಕರ್ಯವನ್ನು ಒದಗಿಸುವುದಕ್ಕೋಸ್ಕರ ಅಲ್ಲಿ 10 ಹೈಸ್ಕೂಲುಗಳನ್ನೂ 29 ಪ್ರೈಮರಿ ಸ್ಕೂಲುಗಳನ್ನು ಈ ಇಲಾಖೆಯಿಂದ ನಡೆಸುತ್ತಿದ್ದೇವೆ. ಮತ್ತು ಅಲ್ಲಿನ ವಿದ್ಯಾರ್ಥಿಗಳಿಗೆ ತಾಂತ್ರಿಕ ಶಿಕ್ಷಣವನ್ನು ಕೊಡಬೇಕೆಂಬ ಉದ್ದೇಶದಿಂದ ಆ ಹೈಸ್ಕೂಲಿನಲ್ಲಿ ಮೀನುಗಾರಿಕೆಯನ್ನು ಐಚ್ಛಿಕ ವಿಷಯವಾಗಿ ಸೇರಿಸಬೇಕೆಂದು ಪ್ರಯತ್ನ ಮಾಡುತ್ತಿದ್ದೇವೆ. ಅವರ ಸಾಮಾಜಿಕ ಜೀವನ ಅತ್ಯಂತ ದುಸ್ಥಿತಿಯಲ್ಲಿ ನಡೆಯುತ್ತಿದೆ. ಅವರ ಜೀವನದಲ್ಲಿ ಸ್ವಲ್ಪ ಪ್ರಗತಿಯನ್ನು ಸಾಧನೆ ಮಾಡುವುದಕ್ಕೋಸ್ಕರ ಹೋರಾಟವನ್ನು ನಡೆಸಿ, ಅವರು ಜೀವನವನ್ನು ನಡೆಸಿಕೊಂಡು ಹೋಗಲು ಅನುಕೂಲವಾಗುವಂತೆ ಅವರ ವಸತಿ ಸೌಕರ್ಯಕ್ಕೋಸ್ಕರ ಕುಂದಾಪುರ ತಾಲ್ಲೂಕಿನಲ್ಲಿರತಕ್ಕ ಬಸರೂರ್ ಎಂಬ ಊರಿನಲ್ಲಿ ಮತ್ತು ಕಾರವಾರದಲ್ಲಿರುವ ಒಂದು ಊರಿನಲ್ಲಿ ಎರಡು ಕಾಲೋನಿಗಳನ್ನು ಮಾಡಿ ಸುಮಾರು 400 ಮನೆಗಳನ್ನು ಕಟ್ಟಿಸಬೇಕೆಂದು ಮಾಡಿದ್ದೇವೆ. ಅದರಿಂದ ಅವರಿಗೆ ಅನುಕೂಲವಾಗುತ್ತದೆ, ಮತ್ತು ಅವರು ಹೆಚ್ಚು, ಹೆಚ್ಚು ಸಂಪಾದನೆಯನ್ನು ಮಾಡುವುದಕ್ಕೆ ಮೀನುಗಾರಿಕೆಗೆ ಹೆಚ್ಚು ಸೌಲಭ್ಯವನ್ನು ಒದಗಿಸಿಕೊಟ್ಟಿದ್ದೇವೆ. ಅಲ್ಲಿ ಮೀನಿನ ವ್ಯಾಪಾರಕ್ಕೆ ಅನುಕೂಲವಾಗುವ ಮಾರ್ಕೆಟ್ ವ್ಯವಸ್ಥೆಯನ್ನು ಮಾಡಿದ್ದೇವೆ. ಮೀನುಗಳನ್ನು ಹೊರದೇಶಕ್ಕೆ ಎಕ್ಸ್‌ಪೋರ್ಟ್ ಮಾಡುವುದಕ್ಕೆ ಒಂದು ಫಿಷ್ ಕಾರ್ಪೊರೇಷನ್ ಮಾಡಬೇಕೆಂದು ಮಾಡಿದ್ದೇವೆ. ಈ ಒಂದು ಉದ್ಯಮವನ್ನು ಹೆಚ್ಚಿನ ರೀತಿಯಲ್ಲಿ ಉತ್ತಮ ಪಡಿಸಬೇಕೆಂದು ಪ್ರಾಮುಖ್ಯವಾಗಿ ಮಾಡಿರತಕ್ಕ ಕೆಲಸ ಎಂದರೆ ಒಟ್ಟು 13 ಸೆಂಟರುಗಳಲ್ಲಿ ಇನ್ ಲ್ಯಾಂಡ್ ಫಿಷರಿ ಡೆವಲಪ್ ಮೆಂಟುಗಳನ್ನು ಮಾಡಿದ್ದೇವೆ. ಈ ಪೈಕಿ ತುಂಗಭದ್ರಾದಲ್ಲಿ ಅತ್ಯಂತ ದೊಡ್ಡದಾದ ನರ್ಸರಿಯನ್ನು ಸ್ಥಾಪನೆ ಮಾಡಿದ್ದೇವೆ. ಅಲ್ಲಿ 14 ಕೋಟಿ ಸಂಖ್ಯೆಯ ಸಣ್ಣ ಮರಿಗಳ ಸಾಕಾಣಿಕೆ ನಡೆಯುತ್ತಿದೆ. ಅಲ್ಲಿ ಮೊದಲನೇ ಬಾರಿಗೆ 10 ಲಕ್ಷ ಮರಿಗಳನ್ನು ತಯಾರು ಮಾಡಿದ್ದಾರೆ. ನಮ್ಮ ದೇಶದಲ್ಲಿ ಹೆಚ್ಚು ಹೆಚ್ಚು ಮರಿಗಳನ್ನು ತಯಾರು ಮಾಡಿ ದೊಡ್ಡ, ದೊಡ್ಡ, ಜಲಾಶಯಗಳಲ್ಲಿ ಬಿಟ್ಟು ಹೆಚ್ಚು ಮೀನನ್ನು ಬೆಳೆಸಿದರೆ ಜನರಿಗೆ ಎಷ್ಟೋ ಆಹಾರದ ಕೊರತೆ ನೀಗುತ್ತದೆ. ಪ್ರಕೃತಿಯನ್ನೇ ನಾವು ಅವಲಂಬಿಸಿಕೊಂಡು ಬೆಳೆಯನ್ನು ಬೆಳೆಯುತ್ತೇವೆಂದರೆ ಅದು ಸಾಧ್ಯವಾಗುತ್ತಿಲ್ಲ. ಅಕ್ಕಿ, ಜೋಳ ಮುಂತಾದ ದವಸ ಧಾನ್ಯಗಳಿಂದಲೇ ಜನರ ಆಹಾರದ ಕೊರತೆಯನ್ನು ನೀಗಿಸುತ್ತೇವೆಂದರೆ ಅದು ಸ್ವಲ್ಪ ಕಷ್ಟವಾಗುತ್ತದೆ. ಹಣ್ಣುಗಳು, ತರಕಾರಿ, ಮೊಟ್ಟೆ, ಪಶುಪಾಲನೆ, ಮೀನು ಸಾಕಾಣಿಕೆ, ಇವುಗಳೆಲ್ಲದರಲ್ಲಿಯೂ ಕೂಡ ಹೆಚ್ಚು ಕೆಲಸಗಳನ್ನು ಸಾಧಿಸಬೇಕಾಗಿದೆ.

ಶ್ರೀ ಬಿ. ಭಾಸ್ಕರ ಶೆಟ್ಟಿ – ಉತ್ಪತ್ತಿಗಿಂತ ಹೆಚ್ಚು ಖರ್ಚು ಇನ್‌ಲ್ಯಾಂಡ್ ಫಿಷರೀಸನಿಂದ ಆಗುವುದರಿಂದ ಅದನ್ನು ತೆಗೆದುಹಾಕುವುದು ಒಳ್ಳೆಯದಲ್ಲವೇ

ಶ್ರೀ ಬಿ. ರಾಚಯ್ಯ – ಇವತ್ತಿನ ದಿವಸ ಸಣ್ಣ ಮೀನು ಮರಿಗಳನ್ನು ಸಾಕಲು ಖರ್ಚಾಗುತ್ತಿದೆ. ಅವು ದೊಡ್ಡದಾಗಿ ಬೆಳೆದ ಮೇಲೆ ಏನೂ ಖರ್ಚಾಗುವುದಿಲ್ಲ. ಅವು ದೊಡ್ಡದಾಗಿ ಬೆಳೆದ ಮೇಲೆ ಏನೂ ಖರ್ಚಾಗುವುದಿಲ್ಲ. ಅದರಿಂದ ಬಹಳ ಉತ್ಪತ್ತಿ ಬರುತ್ತದೆ. ಸುಮಾರು ಐದೂವರೆ ಕೋಟಿ ರೂಪಾಯಿ ವಿದೇಶಿ ವಿನಿಮಯವನ್ನು ಗಳಿಸಿದ್ದೇವೆ.

ಶ್ರೀ ಎಚ್.ಆರ್. ಕೇಶವಮೂರ್ತಿ – ಜಪಾನ್‌ನಲ್ಲಿ ಭತ್ತದ ಗದ್ದೆಯಲ್ಲಿ ಮೀನು ಸಾಕುತ್ತಾರೆ. ಭತ್ತದ ವ್ಯವಸಾಯವನ್ನೂ ಮಾಡುತ್ತಾರೆ. ಆ ರೀತಿ ಇಲ್ಲಿಯೂ ಮಾಡಬಹುದಲ್ಲವೇ.

ಶ್ರೀ ಬಿ. ರಾಚಯ್ಯ – ಅಲ್ಲಿ ಮಾಡುತ್ತಾರೆ. ಇಲ್ಲಿಯೂ ಆ ರೀತಿ ಮಾಡಲು ಪ್ರಚಾರ ಮಾಡುತ್ತಿದ್ದೇವೆ. ಒಂದು ಎಕರೆಯಲ್ಲಿ ಸುಮಾರು 500 ರೂಪಾಯಿ ಆಹಾರ ಧಾನ್ಯಗಳನ್ನು ಬೆಳೆದರೆ ಮೀನುಗಳನ್ನು ಅದೇ ಭೂಮಿಯಲ್ಲಿ ಉತ್ಪತ್ತಿ ಮಾಡಿದರೆ ಮೂರು ಸಾವಿರ ರೂಪಾಯಿ ಉತ್ಪತ್ತಿ ಬರುತ್ತದೆ ಎಂದು ಆಶ್ವಾಸನೆಯನ್ನು ಕೊಡಬಲ್ಲೆ.

ಸುಮಾರು 30 ಷಿಪ್ ಕ್ಯೂರಿಂಗ್ ಯಾರ್ಡ್‌ಗಳಿಗೆ ಉಪ್ಪಿಗಾಗಿ ಸಬ್ಸಿಡಿಯನ್ನು ಕೊಡುತ್ತಿದ್ದರು. ಕಳೆದ ಎರಡು ವರ್ಷಗಳಿಂದಲೂ ಕೇಂದ್ರ ಸರ್ಕಾರದವರ ನೆರವು ಇಲ್ಲದ್ದರಿಂದ ಇದನ್ನು ನಿಲ್ಲಿಸಿದ್ದಾರೆ. ಎಂದು ಮಾನ್ಯ ಸದಸ್ಯರು ಹೇಳಿದರು. ಈ ವಿಚಾರವನ್ನು ಸರ್ಕಾರ ಪುನರ್ ಪರಿಶೀಲನೆ ಮಾಡಿ ಯಾವ ರೀತಿ ಅವರಿಗೆ ಸಹಾಯ ಮಾಡಬಹುದು ಎನ್ನುವುದನ್ನು ಯೋಚನೆ ಮಾಡುತ್ತೇವೆಂದು ಮಾತ್ರ ತಿಳಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ರೇಷ್ಮೆ ಇಲಾಖೆ ಕುರಿತ ಚರ್ಚೆಗೆ ಉತ್ತರ *

ಶ್ರೀ ಬಿ. ರಾಚಯ್ಯ (ಅರಣ್ಯ ಮತ್ತು ಮೀನುಗಾರಿಕೆ ಶಾಖೆ ಮಂತ್ರಿಗಳು)- ಸ್ವಾಮಿ ರೇಷ್ಮೆ ಬೇಡಿಕೆಯ ಮೇಲೆ ಮಾತನಾಡಿರತಕ್ಕ ಮಾನ್ಯ ಸದಸ್ಯರುಗಳೆಲ್ಲಿ ಬಹಳ ಅಭಿಮಾನದಿಂದಲೂ ಮತ್ತು ಬಹಳ ಉತ್ತೇಜನಕಾರಿಯಾಗಿಯೂ ಮಾತನಾಡಿದ್ದಾರೆ. ಆದುದರಿಂದ ನಾನು ಅವರೆಲ್ಲರಿಗೂ ಪ್ರಥಮತಃ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ನಮ್ಮ ರಾಜ್ಯದಲ್ಲಿ ರೇಷ್ಮೆ ಕೈಗಾರಿಕೆಯು ಬಹಳ ಪುರಾತನವಾದದ್ದು ಮತ್ತು ಬಹಳ ಪ್ರಾಮುಖ್ಯವಾದದ್ದೂ ಆಗಿದೆ. ಈ ಕೈಗಾರಿಕೆಯನ್ನು ಕೇಂದ್ರ ಸರ್ಕಾರದವರು ಒಂದು ರಕ್ಷಣೆಯನ್ನು ಕೊಟ್ಟುಕೊಂಡು ನಮ್ಮ ರಾಜ್ಯದಲ್ಲಿಯೂ ಮತ್ತು ಕಾಶ್ಮೀರದಲ್ಲೂ ಹಾಗೂ ಪಶ್ಚಿಮ ಬಂಗಾಳದಲ್ಲೂ ಇದನ್ನು ಒಂದೇ ಸಮನಾಗಿ ಪೋಷಿಸಿಕೊಂಡು ಬರುತ್ತಿದ್ದಾರೆ. ನಮ್ಮ ರಾಜ್ಯದಲ್ಲೀಗ ಈ ರೇಷ್ಮೆ ವ್ಯವಸಾಯದ ಬಗ್ಗೆ ಅನೇಕ ಯೋಜನೆಗಳನ್ನು ತಯಾರುಮಾಡಿದ್ದೇವೆ. ಒಟ್ಟು ಇಂಡಿಯಾ ದೇಶದಲ್ಲಿ ಉತ್ಪತ್ತಿಯಾಗತಕ್ಕ ರೇಷ್ಮೆಯಲ್ಲಿ ಶೇಕಡ 70 ರಷ್ಟು ರೇಷ್ಮೆ ನಮ್ಮ ಮೈಸೂರು ಒಂದರಲ್ಲೇ ತಯಾರಾಗುತ್ತಿದೆ. ಇದನ್ನು ನಮ್ಮ ರಾಜ್ಯದ ಇತರ ಬಾಗಗಳಲ್ಲಿಯೂ ಹರಡಲು ಅನೇಕ ಪ್ರಯತ್ನಗಳನ್ನು ಮಾಡುತ್ತಿದ್ದೇವೆ. ಇದಕ್ಕೆ ನಾವು ಒಂದು ಹೆಚ್ಚಿನ ನಿಗಾವನ್ನೂ ಮತ್ತು ರಕ್ಷಣೆಯನ್ನೂ ಕೊಟ್ಟುಕೊಂಡು ಬರುತ್ತಿದ್ದೇವೆ. ಇದರ ರಕ್ಷಣೆಯ ಬಗ್ಗೆ ಕೇಂದ್ರ ಸರ್ಕಾರದವರ ಸಹಾಯ ಇನ್ನು ಮುಂದುವರೆಯಬೇಕಾದ್ದು ಅಗತ್ಯವಾಗಿರುತ್ತದೆಂದು ನಾವು ಅವರನ್ನು ಒತ್ತಾಯಮಾಡಿದ್ದರಿಂದ ಅವರೀಗ ನಮ್ಮ ಈ ಬೆಳೆಗೆ ಮತ್ತೆ ಮೂರು ವರ್ಷ ಸಹಾಯವನ್ನು ಒದಗಿಸುವುದಾಗಿ ಒಪ್ಪಿಕೊಂಡಿದ್ದಾರೆ. ಅಷ್ಟರೊಳಗೆ ನಾವು ಈ ವಿಚಾರದಲ್ಲಿ ಒಂದು ಹಂತವನ್ನು ಮುಟ್ಟಿ ಈ ಉದ್ಯಮ ತನ್ನ ಕಾಲಮೇಲೆ ತಾನು ನಿಲ್ಲುವಂತೆ ಮಾಡಬೇಕಾಗಿದೆ. ಈಗ ನಾವು ಇದರಲ್ಲಿ ಅನೇಕ ಪ್ರಗತಿ ಮಾರ್ಗಗಳನ್ನು ಕಂಡು ಹಿಡಿಯಲು ಪ್ರಯತ್ನ ಮಾಡಿದ್ದೇವೆ. ಆದರೆ ಈ ಯೋಜನೆಗೆ ಒದಗಿಸಿರತಕ್ಕ ಹಣವೇನೂ ಸಾಲದು. ಈ ವಿಚಾರವನ್ನು ಕೆಲವು ಮಾನ್ಯ ಸದಸ್ಯರೂ ಹೇಳಿದ್ದಾರೆ. ಅವರು ಹಾಗೆ ತಿಳಿಸಿರತಕ್ಕದ್ದು ಸರಿ. ನಮ್ಮ ದೇಶದ ರೈತರಿಗೆ ಇದು ಅತ್ಯಂತ ಉಪಯುಕ್ತವಾದ ಒಂದು ಉಪಕಸುಬಾಗಿದೆ. ಇದರಿಂದ ನಮ್ಮ ರಾಜ್ಯದಲ್ಲಿರತಕ್ಕ ಅನೇಕ ಭಾಗಗಳಲ್ಲಿ ತುಮಕೂರು, ಮೈಸೂರು, ಮಂಡ್ಯ, ಕೋಲಾರ, ಕೊಡಗು ಮತ್ತು ಬೆಳಗಾಂ ಇಲ್ಲೆಲ್ಲಾ ಅನೇಕರು ಈ ಉದ್ಯಮದಲ್ಲಿ ತೊಡಗಿದ್ದಾರೆ. ಈ ಒಂದು ಉದ್ಯಮದಿಂದ ಅನೇಕರ ಆರ್ಥಿಕ ಪರಿಸ್ಥಿತಿ ದೇಶದಲ್ಲಿ ಎಷ್ಟೋ ಉತ್ತಮಗೊಂಡಿದೆ. ಇದರಿಂದ ಹಳ್ಳಿಯಲ್ಲಿರತಕ್ಕ ಜನರಿಗೆ ಬಹಳ ಅನುಕೂಲವಾಗಿದೆ. ಆದರೆ ಹೆಚ್ಚಿಗೆ ಪಟ್ಟಣಗಳಲ್ಲಿ ಸ್ಥಾಪನೆ ಮಾಡುವಂಥ ಕೈಗಾರಿಕೆಯಲ್ಲಿ ಇದು. ಅನೇಕ ಸಂದರ್ಭಗಳಲ್ಲಿ ನಾವು ರೈತನನ್ನು ದೇಶದ ಬೆನ್ನು ಮೂಳೆ ಎಂದು ಮಾತನಾಡುತ್ತಿರುತ್ತೇವೆ. ಅದನ್ನು ನಾವು ಉಳಿಸಿಕೊಳ್ಳಬೇಕಾಗಿದ್ದರೆ ನಮ್ಮ ರೈತರಿಗೆ ಈ ವಿಚಾರದಲ್ಲಿ ಹೆಚ್ಚಿನ ಪ್ರೋತ್ಸಾಹವನ್ನು ನೀಡಬೇಕಾಗಿದೆ. ಕೆಲವು ವೇಳೆ ಈ ವ್ಯವಸಾಯದಲ್ಲೂ ನಷ್ಟ ಸಂಭವಿಸುವುದುಂಟು.

---

* ವಿಧಾನ ಸಭಾ ನಡವಳಿಕೆ ದಿನಾಂಕ 20ನೇ ಮಾರ್ಚ್, 1964 ಪುಟ 1502-1506.

ಇನ್ನು ಇದೇ ರೀತಿಯಲ್ಲಿ ನಮ್ಮ ಖಾದೀ ಉದ್ಯಮಕ್ಕೂ ಕೇಂದ್ರದವರು ಬಹಳ ಸಹಾಯವನ್ನು ನೀಡುತ್ತಿದ್ದಾರೆ. ಹೀಗೆ ನಮಗೆ ಕೇಂದ್ರದವರಿಂದ ಒಂದಲ್ಲಾ ಒಂದು ರೀತಿಯಲ್ಲಿ ಬಹಳ ಧನಸಹಾಯ ಒದಗುತ್ತಿದೆ. ಇದರಿಂದ ನಮಗೆ ಈ ಬಾಬುಗಳಲ್ಲಿ ಅಷ್ಟು ನಷ್ಟ ಸಂಭವಿಸುವುದಕ್ಕೆ ಅವಕಾಶವಿಲ್ಲ. ತತ್ರಾಪಿ ಈ ರೇಷ್ಮೆ ಕೈಗಾರಿಕೆಯಲ್ಲಿ ಮನೆ ಮಕ್ಕಳಿಗೆಲ್ಲಾ ಇದು ಉದ್ಯೋಗವನ್ನು ಒದಗಿಸುತ್ತದೆ. ಅಂಥ ಒಂದು ಕಸುಬಿದು. ಇನ್ನು ಹುಳುಗಳು ಮೇದು ಉಳಿಯತಕ್ಕ ಕಸವೇನಿದೆ ಅದು ದನಕರುಗಳಿಗೆ ಬಹಳ ಪುಷ್ಟಿಕರವಾದ ಮೇವು, ಹಾಗೂ ಉತ್ತಮ ಗೊಬ್ಬರವಾಗುತ್ತದೆ. ಹೆಚ್ಚು ಬೆಳೆಯಲು ಅನುಕೂಲವಾಗುತ್ತದೆ. ಇಷ್ಟೆಲ್ಲಾ ಅನುಕೂಲ ಗಳಿರುವುದರಿಂದ ಇದಕ್ಕೆ ನಾವು ಒಂದು ಹೆಚ್ಚಿನ ರಕ್ಷಣೆಯನ್ನು ಕೊಡುತ್ತಲೇ ಇದ್ದೇವೆ.

ಶ್ರೀ ಕೆ.ಪಿ. ರೇವಣಸಿದ್ದಪ್ಪ – ಆ ವಿಚಾರಗಳೆಲ್ಲಾ ನಮಗೂ ಗೊತ್ತಿದೆ. ನಾವು ಕೇಳಿರತಕ್ಕ ಪ್ರಶ್ನೆಗಳಿಗೆ ತಾವು ಉತ್ತರ ಕೊಟ್ಟರೆಸಾಕು.

ಶ್ರೀ ಬಿ. ರಾಚಯ್ಯ – ಈ ಒಂದು ಕೈಗಾರಿಕೆ ಐದು ಜಿಲ್ಲೆಗಳಲ್ಲಿ ಮಾತ್ರ ಇದೆ. ಮಿಕ್ಕ ಜಿಲ್ಲೆಗಳಿಂದ ಬರತಕ್ಕ ಮಾನ್ಯ ಸದಸ್ಯರು ವರ್ಷಪೂರ್ತಿ 18-20 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದರೂ ಈ ಫಿಲೇಚರ್‌ನೊಳಗೆ ನಷ್ಟವಾಗುತ್ತಾ ಇದೆಯೆಂದು ಹಿಂದೆ ಹೇಳಿದ್ದರು. ಅದಕ್ಕೋಸ್ಕರ ಇದಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟು ಈ ಕೈಗಾರಿಕೆಯನ್ನು ಮುಂದುವರಿಸಿಕೊಂಡು ಹೋಗಬೇಕಾಗಿದೆ. ಈ ಕೈಗಾರಿಕೆಯಿಂದ ನಷ್ಟವಾದರೂ ಚಿಂತೆಇಲ್ಲ. ಇದನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂಬ ದೃಷ್ಟಿಯಿಂದ ಈ ಮಾತನ್ನು ಹೇಳುತ್ತೇನೆ. ಇದನ್ನು ಕೇವಲ ಒಂದು ಆದಾಯ ನಷ್ಟದ ದೃಷ್ಟಿಯಿಂದ ನೋಡಬಾರದು ಎಂಬುದಾಗಿ ನಾನು ಮಾತನಾಡಿದೆ. ಫಿಲೇಚರುಗಳನ್ನು ನಿಲ್ಲಿಸಿದರೆ ಇವತ್ತೂ ಒಂದು ಕೆ.ಜಿ.ಗೆ 6 ರೂಪಾಯಿ 50 ಪೈಸೆ ಬರುವುದು ಹೋಗಿ ಅದು ಒಂದು ರೂಪಾಯಿ ಅಥವಾ ಒಂದು ರೂಪಾಯಿ ನಯಾ ಪೈಸೆಗಳು ಬರುತ್ತವೆ. ಪ್ರತಿ ವರ್ಷವೂ ನಮಗೆ ಮೂವತ್ತು ಲಕ್ಷ ಪೌಂಡುಗಳಷ್ಟು ರೇಷ್ಮೆ ಬೇಕಾಗುತ್ತದೆ. ಇಲ್ಲಿ ಕೇವಲ 20-22 ಲಕ್ಷ ಪೌಂಡುಗಳಷ್ಟು ರೇಷ್ಮೆಯನ್ನು ತಯಾರು ಮಾಡುತ್ತಾರೆ. ಇನ್ನು ಮಿಕ್ಕ ಸುಮಾರು ಹತ್ತು ಲಕ್ಷ ಪೌಂಡುಗಳಷ್ಟು ರೇಷ್ಮೆಯನ್ನು ಹೊರಗಡೆಯಿಂದ ತರಿಸುತ್ತೇವೆ. ನಮ್ಮ ದೇಶದಲ್ಲಿ ರೇಷ್ಮೆ ಉತ್ಪತ್ತಿಮಾಡುವ ಶಕ್ತಿಯನ್ನು ಪಡೆಯಬೇಕಾಗಿದ್ದರೆ ಮೊದಲು ಅದಕ್ಕೆ ರಕ್ಷಣೆ ಬೇಕು. ಮಾರುಕಟ್ಟೆಗಳಿಗೆ ಇದರಿಂದ ಸಹಾಯ ಒದಗಿಸಬೇಕೆನ್ನುವ ದೃಷ್ಟಿಯಿಂದ ಕೈಗಾರಿಕೆಗೆ ಹೆಚ್ಚು ಹೆಚ್ಚಿಗೆ ಸ್ವಲ್ಪ ಕಾಲವಾದರೂ ಕೊಡಬೇಕಾಗಿದೆ. ಒಂದು ವಿಷಯದಲ್ಲಿ ಮಾತ್ರ ಈ ಮೊದಲು ಮಾತನಾಡಿದಂಥ ಶ್ರೀಮಾನ್ ಬಸಪ್ಪನವರು ಕೆಲವು ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ನಾನೂ ಮತ್ತು ಅವರು ಅನೇಕ ಸಂದರ್ಭಗಳಲ್ಲಿ ಈ ವಿಷಯದಲ್ಲಿ ಚರ್ಚೆ ಮಾಡಿದ್ದೇವೆ. ಮೊದಲಿನಿಂದಲೂ ಈ ಕೈಗಾರಿಕೆಗೆ ಬೇಕಾದಂಥ ರೋಗರಹಿತವಾದಂಥ ಮೊಟ್ಟೆಗಳನ್ನು ತಯಾರುಮಾಡುವುದಕ್ಕಾಗಿ ಏನೇನು ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೋ ಅವನ್ನೆಲ್ಲಾ ತೆಗೆದುಕೊಂಡಿದ್ದೇವೆ. ಆ ವಿಷಯದಲ್ಲಿ ಶ್ರೀಮತಿ ನಾಗರತ್ನಮ್ಮನವರು ಬಹಳವಾಗಿ ಹೇಳಿದ್ದಾರೆ. ಸರ್ಕಾರ ಈ ಉದ್ಯಮವನ್ನು ರಾಷ್ಟ್ರೀಕರಣ ಮಾಡಿ ರೋಗರಹಿತವಾದ ಮೊಟ್ಟೆಗಳನ್ನು

ತಯಾರುಮಾಡಬೇಕು. ಈಗ ಕೊಡುವ ಮೊಟ್ಟೆಗಳು ಸರ್ಕಾರಿ ಗ್ರೇನೇಜಿನಲ್ಲಿ ತಯಾರಾದರೂ ಖಾಸಗಿಯವರು ಗ್ರೇನೇಜಿನಲ್ಲಿ ತಯಾರು ಮಾಡತಕ್ಕ ಮೊಟ್ಟೆಗಳಿಗಿಂತ ಉತ್ತಮವಾಗಿಲ್ಲ. ಆದ್ದರಿಂದ ಮಳೆಗಾಲದಲ್ಲಿ ಈ ಬೆಳೆ ಹಾಳಾಗುತ್ತದೆ. ಯಾವ ರೀತಿ ಇತರ ಸರ್ಕಾರಗಳವರು ಫಾರಿನ್ ರೇಸುಗಳನ್ನು ತಯಾರು ಮಾಡುತ್ತಿದ್ದಾರೋ ಅದೇ ರೀತಿ ಮೈಸೂರಿನಲ್ಲಿಯೂ ಮಾಡಬೇಕೆಂದು ಹೇಳಿದರು. ಮೈಸೂರಿನಲ್ಲಿ ಆ ರೀತಿ ತಯಾರು ಮಾಡಬೇಕಾದರೆ ಹಳದಿ ಬಣ್ಣದ ಗೂಡಿಗೋಸ್ಕರವಾಗಿ ಒಂದು ನಿಗಧಿಯಾದ ಪ್ರವೇಶಬೇಕು. ಅದನ್ನೂ ಕೂಡ ಅಲ್ಲಲ್ಲಾ ಆಯಾ ಸರ್ಕಾರದವರೇ ಮಾಡಿಕೊಂಡಿದ್ದಾರೆ. ಈಗಲೂ ಕೂಡ ಕುಣಿಗಲ್ ಮತ್ತು ರಾಮನಗರ ತಾಲ್ಲೂಕುಗಳಲ್ಲಿ ಕೆಲವು ಹಳ್ಳಿಗಳಲ್ಲಿ ಮೈಸೂರಿನ ಹಳದಿ ಬಣ್ಣದ ರೇಷ್ಮೆ ಗೂಡನ್ನು ಬೆಳೆಯುವುದನ್ನು ನಾವು ನೋಡಬಹುದು. ಬಿಳಿಗೂಡಿನ ರೇಷ್ಮೆಯನ್ನು ಬಿಳಿಗಿರಿ ರಂಗನ ಬೆಟ್ಟದಲ್ಲಿ, ಎರಡನೇ ಸ್ಟೇಜಿನಲ್ಲಿ ನಮ್ಮ ಫಾರಂಗಳಲ್ಲಿ ತಯಾರು ಮಾಡುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಆ ಪ್ರಯತ್ನದಿಂದ ಈ ವರ್ಷ ಸ್ವಲ್ಪ ಮಟ್ಟಿಗೆ ಹೆಚ್ಚಿನ ರೀತಿಯಲ್ಲಿ ರೋಗರಹಿತವಾದ ಮೊಟ್ಟೆಗಳನ್ನು ತಯಾರುಮಾಡಿದ್ದೇವೆ. ಇದನ್ನು ರಾಷ್ಟ್ರೀಕರಣ ಮಾಡದೆ ಹಾಗೆಯೇ ಸರ್ಕಾರದ ಗ್ರೇನೇಜುಗಳನ್ನು ಹೆಚ್ಚು, ಹೆಚ್ಚಾಗಿ ಮಾಡಿ ಒಳ್ಳೆಯ ರೋಗರಹಿತ ಮೊಟ್ಟೆಗಳನ್ನು ಒದಗಿಸಿದರೆ ರೈತರು ತಾವಾಗಿಯೇ ಬಂದು ಉಪಯೋಗಿಸುತ್ತಾರೆನ್ನುವ ಅನುಭವ ಈಗ ಬಂದಿರುತ್ತದೆ. ಆದ್ದರಿಂದ ಇದರ ರಾಷ್ಟ್ರೀಕರಣದ ಪ್ರಶ್ನೆ ಬರುವುದಿಲ್ಲ. ಅದಕ್ಕಾಗಿ ಯೂನಿವಾಲ್ಟಿನ್ ರೇಸ್ ಮತ್ತು ಮಲ್ಟಿ ವಾಲ್ಟಿನ್ ರೇಸ್ ಮೂಲಕ ಈ ಸರ್ಕಾರಕೆಲಸಗಳನ್ನು ಮಾಡುತ್ತಿದೆ. ಇನ್ನು ಎರಡನೆಯದಾಗಿ ರೋಗರಹಿತವಾದ ಮೊಟ್ಟೆಗಳನ್ನು ಜಪಾನಿನಿಂದ ತರಿಸಿದ್ದೆವು. ಸುಮಾರು 4 ಸಾವಿರ ಮೊಟ್ಟೆಗಳನ್ನು ತರಿಸಿದ್ದೆವು. ಅವನ್ನು ಉಪಯೋಗಿಸಿದುದರಿಂದ ನಮಗೆ ಬೆಳೆ ನಷ್ಟವಾಯಿತು. ಎರಡು ಮೂರು ಬಾರಿ ಅವುಗಳ ಪ್ರಯೋಗ ನಡೆಸಿದರೂ, ಬೆಳೆ ಬಹಳವಾಗಿ ಕೆಟ್ಟು ಹೋಗುತ್ತಿದೆ. ಯಾವ ದೇಶದಲ್ಲಿ ರೇಷ್ಮೆ ಉದ್ಯಮವನ್ನು ಮಾಡುತ್ತಾರೋ ಅಲ್ಲಿ ಮೂಲಭೂತವಾಗಿ ಬೇಕಾದಂಥ ಸೀಡುಗಳನ್ನು ಮಾತ್ರ ಕೊಡಬೇಕೆಂಬುದನ್ನು ನಾನು ಒಪ್ಪುವುದಿಲ್ಲ. ಅದಕ್ಕೋಸ್ಕರ ಅನೇಕರು ಕ್ರಾಸ್ ಬ್ರೀಡ್ಸ್‌ನ್ನು ತರಿಸಿ ಒಳ್ಳೆಯ ಜಾತಿಯ ಮೊಟ್ಟೆಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಇದರಿಂದ ಗೂಡುಗಳಲ್ಲಿ ಉತ್ಪಾದನೆ 350 ಗಜ ನೂಲು ಆಗುತ್ತದೆ. ಸಾವಿರ ಗಜ ನೂಲು ಉತ್ಪತ್ತಿ ಮಾಡಿದರೆ ಏನು ನಷ್ಟ ವಾಗುತ್ತದೋ ಅದು ಹೋಗುತ್ತದೆ. ಅಲ್ಲಿಯವರೆಗೂ ಇದರಲ್ಲಿ ಏನೂ ಹೋಗುವುದಿಲ್ಲವೆಂಬ ಒಂದು ಖಚಿತವಾದ ಅಭಿಪ್ರಾಯ ಈ ಸರ್ಕಾರಕ್ಕೆ ಬಂದಿದೆಯೆಂದು ನಾನು ತಿಳಿಸುತ್ತೇನೆ. ಮೊಟ್ಟೆಗಳನ್ನು ತರುವುದಕ್ಕೋಸ್ಕರ ಪರೀಕ್ಷೆಗಳನ್ನು ಸಹ ಮಾಡುತ್ತಿದ್ದೇವೆ. ರೇಷ್ಮೆ ಗೂಡನ್ನು ಚಾಕಿ ರೇರಿಂಗ್ ಸೆಂಟರ್ಸ್‌ನಲ್ಲಿ ಹೊಸಬರು ಯಾರಾದರೂ ಇದ್ದರೆ ಅವರೂ ಸಹ ಬಹಳ ಸುಲಭವಾಗಿ ಸಾಕಬಹುದು. ಬಹುಶಃ ಮಾನ್ಯ ಜನಗಳು ಕೆಲಸಬಿಟ್ಟು ಅದಕ್ಕಾಗಿ ನಿಲ್ಲಬೇಕಾಗಿ ಬರುತ್ತದೆ. ಅಲ್ಲಿ ಬಹಳ ಚೆನ್ನಾಗಿ ಕೆಲಸವಾಗುತ್ತಿರುವುದರಿಂದ ಅದರಲ್ಲಿ ಉಪಯುಕ್ತತೆ ಇದೆಯೆಂದು ರೈತರು ಇತ್ತೀಚೆಗೆ ಅದನ್ನು ಉಪಯೋಗಿಸುತ್ತಿದ್ದಾರೆ. ಈ ಸೆಂಟರುಗಳನ್ನು ಪ್ರತಿಯೊಂದು ಹಳ್ಳಿಗೂ ಒಂದೊಂದರಂತೆ ಸ್ಥಾಪನೆ ಮಾಡಬೇಕೆಂದು ಶ್ರೀಮಾನ್ ಬಸಪ್ಪನವರು

ತಿಳಿಸಿದರು. ನಮ್ಮ ಈಗಿನ ಹಣಕಾಸಿನ ಪರಿಸ್ಥಿತಿಯಲ್ಲಿ ಏನು ಮಾಡುವುದಕ್ಕೆ ಸಾಧ್ಯವಾಗುತ್ತದೆ? ಮುಂದಿನ ವರ್ಷ 108 ಅಂತಹ ಕೇಂದ್ರಗಳನ್ನು ತೆರೆಯಬೇಕೆಂದು ಪ್ರಯತ್ನಮಾಡಿದ್ದೇವೆ. ಇನ್ನೂ ಹೆಚ್ಚಿಗೆ ಮಾಡುತ್ತೇವೆ. ನಾಲ್ಕನೆಯ ಪಂಚವಾರ್ಷಿಕ ಯೋಜನೆ ಮಾಡುವ ಕಾಲದಲ್ಲಿ ಏನೇನು ಯೋಜನೆಗಳನ್ನು ಹಾಕಿಕೊಂಡಿದ್ದೇವೋ ಅದನ್ನು ಇನ್ನು ಹೆಚ್ಚಿನ ಮಟ್ಟದಲ್ಲಿ ಮಾಡುವುದಕ್ಕೆ ಪ್ರಯತ್ನ ಮಾಡಬೇಕೆಂಬ ಆಸೆಯನ್ನು ಇಟ್ಟುಕೊಂಡಿದ್ದೇವೆ.

ರೈತರು ಬೆಳೆದಂಥ ರೇಷ್ಮೆಗೂಡಿಗೆ ಸರಿಯಾದ ಮಾರ್ಕೆಟ್ ಇರಬೇಕು. ಸರಿಯಾದ ಬೆಲೆ ನಿಗದಿಯಾಗಿರಬೇಕು, ತೂಕದ ಬಗ್ಗೆಯೂ ನಿಗದಿಯಾದ ವ್ಯವಸ್ಥೆ ಇರಬೇಕು. ಇದಕ್ಕಾಗಿ ಹತ್ತಾರು ವರ್ಷಗಳಿಂದ ಪ್ರಯತ್ನಗಳು ನಡೆಯುತ್ತಿವೆ. ಕೆಲವು ಭಾಗಗಳಲ್ಲಿ ಇದು ಕಾರ್ಯಗತವಾಗಿದೆ. ಮಾರ್ಕೆಟ್ಟಿನಲ್ಲಿರತಕ್ಕ ಕಟ್ಟಡಗಳು ಸರಿಯಾದ ಸ್ಥಿತಿಯಲ್ಲಿಲ್ಲ. ರೈತರು ಬಂದು ತಮ್ಮ ಗೂಡುಗಳನ್ನು ಇಟ್ಟುಕೊಳ್ಳುವುದಕ್ಕೆ ಅದರಲ್ಲೂ ಅವರು ಆ ಗೂಡುಗಳನ್ನು ಕೊಂಡುಕೊಂಡ ಮೇಲೆ ಅವು ರಕ್ಷಣೆ ಪಡೆಯುವ ರೀತಿಯಲ್ಲಿಲ್ಲ ಎಂಬುದಾಗಿ ಕೆಲವರು ತಿಳಿಸಿದರು. ಅದು ಸರ್ಕಾರಕ್ಕೆ ಚೆನ್ನಾಗಿ ಗೊತ್ತಿದೆ. ಮುಂದಿನ ವರ್ಷದಲ್ಲಿ ಐದು ಕೇಂದ್ರಗಳಲ್ಲಿ ಎಲ್ಲಾ ತರಹದ ಅನುಕೂಲತೆಗಳು ಇರುವಂತೆ ಕಟ್ಟಡಗಳ ವ್ಯವಸ್ಥೆಮಾಡಬೇಕೆಂದು ಸರ್ಕಾರ ಉದ್ದೇಶ ಇಟ್ಟುಕೊಂಡಿದೆ. ಆ ಒಂದು ಧಾಟಿಯಲ್ಲಿ ನಾವು ಕೆಲಸ ಮಾಡಬೇಕು ಎಲ್ಲಾ ಮಾರ್ಕೆಟುಗಳಲ್ಲಿ ಈ ರೀತಿ ಮಾಡಬೇಕೆಂದಿದ್ದೇವೆ. ಯಾವ, ಯಾವ ಮಾರ್ಕೆಟುಗಳಲ್ಲಿ ಹೆಚ್ಚಿನ ರೀತಿಯಲ್ಲಿ ಈ ವ್ಯವಹಾರ ನಡೆಯುವುದಿಲ್ಲವೋ ಅಂತಹ ಕಡೆಗಳಲ್ಲಿ ಹೆಚ್ಚಿನಮಟ್ಟಿಗೆ ಪುನರಾಲೋಚನೆ ಮಾಡುವುದು ಅಗತ್ಯವಾಗಿದೆ. ಆ ವಿಚಾರವನ್ನು ಸರಕಾರದವರು ಗಮನದಲ್ಲಿಟ್ಟು ಕೊಳ್ಳುತ್ತಾರೆಂದು ಈ ಸಂದರ್ಭದಲ್ಲಿ ತಿಳಿಸುತ್ತೇನೆ. ಇನ್ನು ಮಾರ್ಕೆಟುಗಳಲ್ಲಿ ಇದಕ್ಕೆ ಶೇ. 2 ರಷ್ಟು ಮಾರ್ಕೆಟು ಫೀ ಇದೆಯೆಂದೂ ಅದನ್ನು ಕಡಿಮೆ ಮಾಡಬೇಕೆಂದು ಹೇಳಿದರು. ಅದನ್ನು ಈಗ ಶೇ. 11/2 ಕ್ಕೆ ಕಡಿಮೆ ಮಾಡಿದ್ದೇವೆ. ಈಗಾಗಲೇ ಆ ಒಂದು ಆಜ್ಞೆಯನ್ನು ಹೊರಡಿಸಿದ್ದೇವೆ. ಇನ್ನೂ ಕಡಿಮೆ ಮಾಡಬೇಕೆಂದು ಹೇಳುತ್ತಿದ್ದಾರೆ. ರೈತರಿಗೆ ಈ ಬಗ್ಗೆ ಮಾರ್ಕೆಟ್ ಫೀ ಹಾಕಿರುವುದನ್ನು ಇನ್ನೂ ಕಡಿಮೆ ಮಾಡುತ್ತಾರೋ ಇಲ್ಲವೋ ಎಂಬ ಶಂಕೆ ಇದೆ. ಆದ್ದರಿಂದ ಇನ್ನೂ ಅಗತ್ಯವಿದ್ದರೆ ಕಡಿಮೆ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆಂದು ನಾನು ತಿಳಿಸುತ್ತೇನೆ. ರೈತರು ಗೂಡನ್ನು ಕೊಂಡುಕೊಂಡ ಮೇಲೆ 'domestic basins' ಬಗ್ಗೆ ಏನೇನು ಸಹಾಯವನ್ನು ರೈತರಿಗೆ ಕೊಡಬೇಕೆಂಬ ನಿಲುವನ್ನು ಈ ಸರ್ಕಾರ ಇಟ್ಟುಕೊಂಡಿದೆ ಎಂಬುದಾಗಿ ಶ್ರೀಮತಿ ನಾಗರತ್ನಮ್ಮನವರು ಕೇಳಿದರು. ಆ ವಿಚಾರದಲ್ಲಿ ನಾನು ಹೆಚ್ಚಿನ ಭಾಷಣ ಮಾಡುವುದಕ್ಕಿಂತ ಅಂಕಿ ಅಂಶಗಳನ್ನು ತಿಳಿಸುವುದಕ್ಕೆ ಅಧ್ಯಕ್ಷರ ಅಪ್ಪಣೆ ಬೇಡುತ್ತೇನೆ. ಕಳೆದ ವರ್ಷ 80 ಸಾವಿರ ಸಂಸಾರಗಳು ಸುಮಾರು ಹತ್ತು ಸಾವಿರ ಎಕರೆಗಳಷ್ಟು ಹಿಪ್ಪನೇರಳೆಯನ್ನು ಬೆಳೆದರು. ಈ ವರ್ಷ ಐದು ಸಾವಿರ ಸಂಸಾರಗಳು ಹೆಚ್ಚಾಗಿವೆ. ಸುಮಾರು 85 ಸಾವಿರ ಸಂಸಾರಗಳವರು ನೇರವಾಗಿ ಈ ಬೆಳೆಗೆ ಅವಲಂಬಿಸಿ ಕೊಂಡಿದ್ದಾರೆ.

ಕಳೆದ ವರ್ಷ 21 ಲಕ್ಷ ಪೌಂಡ್ ರೇಷ್ಮೆ ಉತ್ಪತ್ತಿಯಾಗಿದೆ. 1963-64ರಲ್ಲಿ ಫಿಲೇಚರ್ ಪ್ರೊಡಕ್ಷನ್ 1.97 ಲಕ್ಷ ಪೌಂಡಿನಿಂದ 2.25 ಲಕ್ಷ ಪೌಂಡಿನವರೆಗೆ ಆಗಿದೆ. ಚರಕಾ ಸಿಲ್ಕ್ 12.18 ಲಕ್ಷ ಪೌಂಡ್ ಉತ್ಪತ್ತಿಯಾಗಿದೆ. ಇದರಲ್ಲಿ 10 ಲಕ್ಷ ಪೌಂಡ್ ಕಡಿಮೆಯಾಗಿದೆ. domestic basins 6,70,000 ರಿಂದ 9.95,000 ವರೆಗೆ ಆಗಿದೆ. ಗ್ರೇನೇಜ್ 43 ರಿಂದ 48 ಆಗಿದೆ. ಸೀಡ್ ಗ್ರೇನರ್ಸ್ 520 ರಿಂದ 535 ರವರೆಗೆ ಆಗಿದೆ. ಲೇಯಿಂಗ್ಸ್ 5 ಲಕ್ಷ ಇತ್ತು ಈಗ 6 ಲಕ್ಷ ಆಗಿದೆ. ಚಿಸೀಜ್ ಫ್ರೀ ಫಾರಿನ್ ರೇಸ್ 37 ರಿಂದ 4 ಲಕ್ಷ ಆಗಿದೆ. cross breed ಲೇಯಿಂಗ್ಸ್ 112 ರಿಂದ 150 ಲಕ್ಷದವರೆಗೆ ಆಗಿದೆ. Number of foreign seed reared 420 to 4250 . Mysore rate 8620 to 9000 filatures, Installed basin 550 to 1550. cocoons markets 43 to 64 ಫಿಲೇಚರ್ಸ್‌ನಲ್ಲಿ ಉತ್ಪತ್ತಿಯಾಗಿರತಕ್ಕದ್ದು 1961-62 ರಲ್ಲಿ 62485 ಕಿಲೋ ಗ್ರಾಮ್ಸ್. 1962-63ರಲ್ಲಿ 65,441 ಕಿಲೋ ಗ್ರಾಮ್ಸ್ 1963-64ರಲ್ಲಿ 9 ತಿಂಗಳ ಅವಧಿಯಲ್ಲಿ 69,250 ಕಿಲೋ ಗ್ರಾಮ್ಸ್ ಆಗಿದೆ. ಫಿಲೇಚರ್ಸ್‌ನಲ್ಲಿ ವರ್ಷ ಪ್ರತಿ ನಷ್ಟವಾಗುತ್ತಿತ್ತು. ಈಗ ಅದನ್ನು ಕಡಿಮೆ ಮಾಡುವುದಕ್ಕೆ ನಾವು ಪ್ರಯತ್ನ ಮಾಡಿದ್ದೇವೆ. ಈ ವಿಷಯದಲ್ಲಿ ನಾವು ಸಾಕಷ್ಟು ಪ್ರಯತ್ನವನ್ನು ಮಾಡಿದ್ದರೂ, ಕೂಡ ಸಂಪೂರ್ಣವಾಗಿ ಈ ಒಂದು ನಷ್ಟವನ್ನು ಸರಿದೂಗಿಸುವುದಕ್ಕೆ ಸಾಧ್ಯವಿಲ್ಲ. ಇವತ್ತು ನಮಗೆ ದೊರೆಯುವಂಥ ಗೂಡು ಏನಿದೆ ಅದರ ರೇಸ್ ಕೂಡ ಕಡಿಮೆಯಾಗಿದೆ. ಆ ರೇಸನ್ನು ನಾವು ಉತ್ತಮ ಪಡಿಸದಿದ್ದರೆ ಯಾವ ವಿಧದಲ್ಲಿಯೂ ಅದರಲ್ಲಿ ಆಗತಕ್ಕಂಥ ನಷ್ಟವನ್ನು ಕಡಿಮೆ ಮಾಡುವುದಕ್ಕೆ ಆಗುವುದಿಲ್ಲ. ಒಂದು ಕಿಲೋಗ್ರಾಮ್ ನೂಲನ್ನು ತೆಗೆಯಬೇಕಾಗಿದ್ದರೆ 102 ರೂಪಾಯಿಗಳ ಗೂಡನ್ನು ನಾವು ಕೊಂಡು ಕೊಳ್ಳಬೇಕಾಗಿದೆ. ಅದಕ್ಕೆ ಲೇಬರ್ ಚಾರ್ಜಸ್ 14 ರೂಪಾಯಿ 29 ನಯಾ ಪೈಸೆಯಾಗುತ್ತದೆ. ಡೆಪ್ರಿಸಿಯೇಷನ್ 14.43 ನಯಾ ಪೈಸೆಯಾಗುತ್ತದೆ. ಒಂದು ಕಿಲೋ ಗ್ರಾಮ್ ನೂಲು ತೆಗೆಯುವುದಕ್ಕೆ 120 ರೂಪಾಯಿ 69 ನಯಾ ಪೈಸೆ ಆಗುತ್ತದೆ. ಇದರಲ್ಲಿ ಆಗತಕ್ಕ ನಷ್ಟವನ್ನು ಕಡಿಮೆ ಮಾಡುವುದಕ್ಕೆ ಸಾಧ್ಯವಾಗಿಲ್ಲ. ಇದರಲ್ಲಿ ಒಂದು ಇಂಪ್ರೂವ್‌ಮೆಂಟ್ ಸಾಧ್ಯವಾಗಿದೆ. ಅದೇನೆಂದರೆ ಕಳೆದ ವರ್ಷ ಒಂದು ಪೌಂಡ್ ನೂಲನ್ನು ತೆಗೆಯಬೇಕಾಗಿದ್ದರೆ 24 ರೂಪಾಯಿ 58 ನಯಾ ಪೈಸೆ ನಷ್ಟವಾಗಿತ್ತು. ಅಂದರೆ ಹೋದ ವರ್ಷಕ್ಕಿಂತ ಈ ವರ್ಷ ಒಂದು ಪೌಂಡಿಗೆ 9 ರೂಪಾಯಿ ಖರ್ಚುಕಡಿಮೆಯಾಗಿದೆ. ಎಲ್ಲಾ ಫಿಲೇಚರ್‌ಗಳಲ್ಲಿಯೂ ಒಟ್ಟು 15,51,512 ರೂಪಾಯಿಗಳು ನಷ್ಟವಾಗಿದೆ. ಒಟ್ಟು ನಷ್ಟವನ್ನು ನೋಡಿದಾಗ ಮೊತ್ತ ಜಾಸ್ತಿ ಕಂಡರೂ ಕೂಡ ಈ ವರ್ಷ ನಾವು ಒಂದು ಪೌಂಡಿಗೆ 9 ರೂಪಾಯಿಗಳನ್ನು ಕಡಿಮೆ ಮಾಡಿದ್ದೇವೆ. ಈ ವರ್ಷ 9 ತಿಂಗಳಲ್ಲಿ 5, ಸಾವಿರ ರೂಪಾಯಿಗಳ ಉತ್ಪತ್ತಿ ಜಾಸ್ತಿಯಾಗಿದೆ. ಈ ಒಂದು ದೃಷ್ಟಿಯಿಂದ ಫಿಲೇಚರ್‌ನಲ್ಲಿ ನಷ್ಟವಾಗುತ್ತಿದೆ. ಆ ನಷ್ಟವನ್ನು ಕೂಡ ಆದಷ್ಟು ಮಟ್ಟಿಗೆ ಕಡಿಮೆಮಾಡಲು ನಾವು ಪ್ರಯತ್ನ ಮಾಡಿದ್ದೇವೆ. ಈ ಒಂದು ಉದ್ಯಮವನ್ನು ಅವಲಂಬಿಸಿರತಕ್ಕ ಜನಗಳೇನಿದ್ದಾರೆಯೋ ಅವರಿಗೆ ನಾವು ಸಹಾಯ ಮಾಡದೇ ಹೋದರೆ ಆಗುವುದಿಲ್ಲ. ಅವರ ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಪಡಿಸುವುದಕ್ಕೆ ನಷ್ಟವನ್ನು ಕಡಿಮೆ

ಮಾಡುವುದಕ್ಕೆ ಮತ್ತು ಸೂಪರ್‌ವೈಜರಿ ಚಾರ್ಜನ್ನು ಕಡಿಮೆಮಾಡುವ ಉದ್ದೇಶದಿಂದ ಈ ಇಲಾಖೆಯಲ್ಲಿ 25 ಹುದ್ದೆಗಳನ್ನು ಭರ್ತಿಮಾಡದೆ ಹಾಗೆಯೇ ಇಟ್ಟಿದ್ದೇವೆ. 5 ಕಣ್ಣುಗಳಿರತಕ್ಕ ಬೇಸಿನ್‌ಗಳನ್ನು 10 ಕಣ್ಣುಗಳ ಬೇಸಿನ್ನಾಗಿ ಪರಿವರ್ತನೆ ಮಾಡಿದ್ದೇವೆ. ಸೆಂಟ್ರಲ್ ಸಿಲ್ಕ್ ಬೋರ್ಡಿನವರು ನಮ್ಮ ದೇಶದಲ್ಲಿ ಉತ್ಪತ್ತಿಯಾಗತಕ್ಕಂಥ ರೇಷ್ಮೆಯನ್ನು ಮಾರಾಟ ಮಾಡುವಾಗ 5 ರೂಪಾಯಿ ಜಾಸ್ತಿ ಬೆಲೆಗೆ ಮಾರಾಟ ಮಾಡಿದರೆ ನಾವು ಒಂದು ಮಟ್ಟದಲ್ಲಿ ರೇಷ್ಮೆ ವ್ಯವಸಾಯವನ್ನು ನಡೆಸುವುದಕ್ಕೆ ಸಾಧ್ಯವಾಗುತ್ತದೆ, ಮತ್ತು ಲಾಭದಾಯಕವಾಗಿ ನಡೆಸಬಹುದು. ಈ ರೇಷ್ಮೆ ಕೈಗಾರಿಕೆಗಳಲ್ಲಿ ಕೆಲಸ ಮಾಡತಕ್ಕ ಲೇಬರುಗಳಿಗೆ ಪ್ರಾವಿಡೆಂಟ್ ಫಂಡ್, ಇನ್‌ಷ್ಯೂರೆನ್ಸ್, ಮೆಟರ್ನಿಟಿ ಬೆನಿಫಿಟ್ಸ್ ಇವುಗಳನ್ನೆಲ್ಲಾ ಅವರಿಗೆ ಲೇಬರ್ ಆಕ್ಟ್ ಪ್ರಕಾರ ಕೊಡುತ್ತಿದ್ದೇವೆ. ಇದರಿಂದ ಒಂದು ವರ್ಷಕ್ಕೆ 6 ಲಕ್ಷ ರೂಪಾಯಿಗಳು ಸಿಲ್ಕ್ ಫಿಲೇಚರ್‌ನಲ್ಲಿ ನಷ್ಟವಾಗುತ್ತಿದೆ. ಈ ಒಂದು ದೃಷ್ಟಿಯಿಂದ ಅನೇಕ ಜನ ಪ್ರೈವೇಟ್ ಸಿಲ್ಕ್ ಫಿಲೇಚರ್‌ನವರು ತಮ್ಮ ಫ್ಯಾಕ್ಟರಿಗಳನ್ನು ಕ್ಲೋಜ್ ಮಾಡಿದ್ದಾರೆ. ಆದರೆ ಸರ್ಕಾರದವರು ಈ ಉದ್ಯಮದಲ್ಲಿ ಆಗತಕ್ಕಂಥ ನಷ್ಟವನ್ನು ಕಡಿಮೆ ಮಾಡುತ್ತಾ ಅವುಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಈ ಒಂದು ಫಿಲೇಚರ್‌ನಲ್ಲಿ ನಷ್ಟವಾಗುತ್ತಿದೆ ಅದನ್ನು ನಿಲ್ಲಿಸಬೇಕೆಂದು ಯಾರಾದರೂ ಅಭಿಪ್ರಾಯ ಪಟ್ಟರೂ ಈ ಒಂದು ಉದ್ಯಮವನ್ನು ಅವಲಂಬಿಸಿರತಕ್ಕ ಜನಗಳ ಹಿತದೃಷ್ಟಿಯಿಂದ ಇದನ್ನು ನಿಲ್ಲಿಸುವುದಕ್ಕಾಗುವುದಿಲ್ಲ.

ಇನ್ನು ರೇಷ್ಮೆ ವೀವಿಂಗ್ ಫ್ಯಾಕ್ಟರಿಗಳು ಈಗಾಗಲೇ ಲಾಭ ಸಂಪಾದನೆಯನ್ನು ಮಾಡುತ್ತಿವೆ. 1962-63ನೇ ಸಾಲಿನಲ್ಲಿ ಈ ಫ್ಯಾಕ್ಟರಿಗಳಿಗೋಸ್ಕರ ಇನ್‌ವೆಸ್ಟ್ ಮಾಡಿರುವ ಹಣ 22,81,308 ರೂಪಾಯಿಗಳು. ಅದರಲ್ಲಿ ನಮಗೆ ಲಾಭ ಬಂದಿರುವುದು 1,19,370 ರೂಪಾಯಿಗಳು ಎಂದರೆ ನಮಗೆ ಅದರಲ್ಲಿ 5.5 ಪರ್ಸೆಂಟ್ ಲಾಭ ಬಂದಿದೆ. 1963-64 ನೇ ಸಾಲಿನಲ್ಲಿ 6.6 ಪರ್ಸೆಂಟ್ ಲಾಭ ಬಂದಿದೆ. ಆಮೇಲೆ ಚನ್ನಪಟ್ಟಣ ಸ್ಪನ್ ಸಿಲ್ಕ್ ಮಿಲ್ಲಿನಲ್ಲಿ 1.35 ಲಕ್ಷ ರೂಪಾಯಿಗಳನ್ನು ಲಾಭ ಬಂದಿದೆ. ಡಿಪ್ರಿಸಿಯೇಷನ್ ಕಳೆದು ಇಂಟರೆಸ್ಟ್ ಕಳೆದು ನಾವು ಏನು ಹಣವನ್ನು ಅದರ ಮೇಲೆ ಹಾಕಿದ್ದೇವೋ ಅದು ವಾಪಸ್ಸು ಬಂದಿದೆ. ಈ ವರ್ಷ ಕೂಡ ಲಾಭ ಬರುತ್ತದೆ ಎಂದು ಹೇಳಿದ್ದಾರೆ. ಶ್ರೀಮಾನ್ ಮಾದೇಗೌಡರು ಚನ್ನಪಟ್ಟಣ ಸ್ಪನ್ ಸಿಲ್ಕ್ ಕಾರ್ಖಾನೆಯಲ್ಲಿ ಇನ್ನೂ ಹೆಚ್ಚಿನ ಲಾಭವನ್ನು ಸಂಪಾದನೆ ಮಾಡುವುದಕ್ಕೆ ಅವಕಾಶವಿದೆ ಎಂದು ಹೇಳಿದ್ದಾರೆ ಮಿನಿಮಮ್ ಲೇಬರ್ಸ್ ಅನ್ನು ಇಟ್ಟುಕೊಂಡು ಈಗ ಹೊರದೇಶಕ್ಕೆ ಎಕ್ಸ್‌ಪೋರ್ಟ್ ಆಗತಕ್ಕ ಸಿಲ್ಕ್ ವೇಸ್ಟ್ ಏನಿದೆ ಅದನ್ನು ತೆಗೆದುಕೊಂಡು ಮಾಡಬೇಕಾಗಿದೆ. ಆದ್ದರಿಂದ ಸ್ವಲ್ಪಮಟ್ಟಿಗೆ ಲಾಭವನ್ನು ಪಡೆಯಬಹುದು. ಆದರೆ ನಾವು ಆ ಕೆಲಸವನ್ನು ಇನ್ನೂ ಮಾಡುವುದಕ್ಕೆ ಸಾಧ್ಯವಾಗಿಲ್ಲ. ಈ ನಮ್ಮ ಕಾರ್ಖಾನೆಗಳಲ್ಲಿ ತಯಾರಾಗತಕ್ಕ ಸ್ಪನ್‌ಸಿಲ್ಕ್ ರಾಯನ್ ಏನಿದೆ ಅದು ಡಿಫೆನ್ಸ್ ಆಫ್ ಇಂಡಿಯಾಕ್ಕೆ ಹೋಗುತ್ತಿದೆ. ಮತ್ತು ಇದು ಅಮೇರಿಕಾ ದೇಶದಲ್ಲಿ ಹೆಚ್ಚಿನ ರೀತಿಯಲ್ಲಿ ಮಾರಾಟವಾಗುತ್ತಿದೆ. ಇನ್ನು ಈ ಮಾನ್ಯ ಸಭೆಯ, ಮಾನ್ಯ ಸದಸ್ಯರುಗಳು ರೇಷ್ಮೆ ಇಲಾಖೆಗೆ ಸಂಬಂಧಪಟ್ಟಹಾಗೆ ಏನೇನು ಸಲಹೆಗಳನ್ನು ಕೊಟ್ಟಿದ್ದಾರೆಯೋ ಅವುಗಳೆಲ್ಲವನ್ನೂ ಬರೆದು

ಇಟ್ಟುಕೊಂಡಿದ್ದೇನೆ. ಅವುಗಳನ್ನೂ ಸಾಧ್ಯವಾದಮಟ್ಟಿಗೆ ಕಾರ್ಯಗತ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

ಇನ್ನು ಸಿರಸಿಯಲ್ಲಿ ರೇಷ್ಮೆ ಅಭಿವೃದ್ಧಿಗೆ ಸಂಬಂಧ ಪಟ್ಟಂತೆ ಐದು ಲಕ್ಷ ರೂಪಾಯಿಗಳ ಒಂದು ಯೋಜನೆಯನ್ನು ಹಾಕಿಕೊಂಡಿದ್ದೇವೆ. ಸಿರಸಿಯಲ್ಲಿ ಸುಮಾರು 10 ಲಕ್ಷ ಜನ ಈ ಒಂದು ರೇಷ್ಮೆ ಉದ್ಯಮದಿಂದ ಜೀವನ ನಡೆಸುತ್ತಿದ್ದಾರೆ. ಈ ಜನಗಳ ಜೀವನವನ್ನು ಉತ್ತಮ ಪಡಿಸಬೇಕಾದರೆ ಇನ್ನೂ ಹೆಚ್ಚಿನ ರೀತಿಯಲ್ಲಿ ಅದಕ್ಕೆ ಒದಗಿಸಬೇಕೆಂದು ನಾವು ಆಸೆಯನ್ನು ಇಟ್ಟುಕೊಂಡಿದ್ದೇವೆ.

## ಕಂದಾಯ ಮತ್ತು ಅರಣ್ಯ ಇಲಾಖೆಗಳ ಮೇಲಿನ ಚರ್ಚೆಗೆ ಸರ್ಕಾರದ ಉತ್ತರ*

ಶ್ರೀ ಬಿ. ರಾಚಯ್ಯ (ಅರಣ್ಯ ಮತ್ತು ಕಂದಾಯ ಶಾಖೆಗಳ ಮಂತ್ರಿಗಳು)- ಮಾನ್ಯ ಸಭಾಪತಿಗಳೇ, ರಾಜ್ಯಪಾಲರ ಭಾಷಣದ ಮೇಲೆ ಮಂಡಿಸಿದಂತಹ ವಂದನಾ ನಿರ್ಣಯದ ವಿಚಾರದಲ್ಲಿ ಮಾಡಿದಂತಹ ಭಾಷಣವನ್ನು ಕುತೂಹಲದಿಂದ ಕೇಳಿದ್ದೇನೆ. ಈ ಸಾರಿ ಅನೇಕ ಸದಸ್ಯರುಗಳು ಬಹಳ ವಿಚಾರ ಪೂರಿತವಾದಂತಹ ಬಾಷಣಗಳನ್ನು ಮಾಡಿದ್ದಾರೆ. ಹಾಗೆ ಮತ್ತೆ ಕೆಲವರು ಉಪಯೋಗಕರವಾದಂತಹ ಸಲಹೆಗಳನ್ನು ಮಾಡಿದ್ದಾರೆ. ಇನ್ನು ಕೆಲವರು ಚುನಾವಣೆಯ ಕಾವಿನ ಕೆಲವು ಉತ್ಪ್ರೇಕ್ಷೆಯ ಮಾತುಗಳನ್ನು ಆಡಿದ್ದಾರೆ. ಬಹುಶಃ ಈ ಚರ್ಚೆಯಲ್ಲಿ ಭಾಗವಹಿಸಿದಂತಹ ಮಾನ್ಯ ಸದಸ್ಯರುಗಳು ಕೂಡ ಬಹುಮಟ್ಟಿಗೆ ಸಭೆಯಲ್ಲಿ ಚರ್ಚೆಯನ್ನು ಉನ್ನತ ಮಟ್ಟದಲ್ಲಿ ನಡೆಸಿಕೊಂಡು ಹೋಗಿದ್ದಾರೆ ಎನ್ನುವಂತಹ ಮಾತನ್ನು ಹೇಳಬಯಸುತ್ತೇನೆ. ದೇಶದಲ್ಲಿ ಚುನಾವಣೆಗಳು ನಡೆಯುತ್ತವೆಯೋ ಇಲ್ಲವೋ ಎನ್ನುವಂತಹ ಶಂಕೆಯಲ್ಲಿರತಕ್ಕಂತಹ ಕಾಲದಲ್ಲಿ ಚುನಾವಣೆ ನಡೆಯಿತು. ದೇಶದಲ್ಲಿ ಪ್ರಜಾಪ್ರಭುತ್ವ ಯಶಸ್ವಿಯಾಗಿ ಬೆಳೆದು ಊರ್ಜಿತವಾಗಿದೆ ಎನ್ನತಕ್ಕದ್ದನ್ನು ಚುನಾವಣಾ ಫಲಿತಾಂಶಗಳು ಹೊರಗೆಡವಿದೆ. ಇದರಿಂದಾಗಿ ಬಹುಶಃ ಚುನಾವಣೆಗಳು ನ್ಯಾಯಬದ್ಧವಾಗಿ ಕಾನೂನು ರೀತಿಯಾಗಿ ನಡೆದಿರುವುದರಿಂದ ಈ ಮಾನ್ಯ ಸಭೆಯಲ್ಲಿ ಎರಡೂ ಪಕ್ಷಗಳು. ಅಂದರೆ ಆಳುವ ಪಕ್ಷ ಮತ್ತು ವಿರೋಧಪಕ್ಷಗಳು ಸಾಕಷ್ಟು ಸಂಖ್ಯೆಯಲ್ಲಿ ಗೆದ್ದು ಇಲ್ಲಿ ಬಂದಿದ್ದಾರೆ. ಚುನಾವಣೆಯಲ್ಲಿ ನಡೆದಿರಬಹುದಾಗಿರತಕ್ಕಂತಹ ಕೆಲವು ಕಾನೂನು ಬಾಹಿರವಾಗಿರತಕ್ಕಂತಹ ವಿಷಯಗಳು, ಚುನಾವಣೆಯ ತಕರಾರುಗಳು, ನ್ಯಾಯಾಲಯಗಳಲ್ಲಿ ವಿಚಾರಿಸಲ್ಪಡತಕ್ಕಂತೆ ಅವುಗಳಿಗೆ ವಿಧಾಯಕಗಳು ಇದ್ದೇ ಇವೆ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ, ಆ ರೀತಿ ಚುನಾವಣೆಗಳು ಕ್ರಮಬದ್ಧವಾಗಿ, ಮತ್ತು ಪಕ್ಷಾತೀತವಾಗಿ ನಡೆಯದಿದ್ದರೆ, ಇಷ್ಟು ಬಹುಸಂಖ್ಯೆಯಲ್ಲಿ ವಿರೋಧ ಪಕ್ಷದವರು ಗೆದ್ದು ಬರುತ್ತಾ ಇರಲಿಲ್ಲ ಎಂಬುದನ್ನು ನಾವು ಗಮನದಲ್ಲಿಡಬೇಕು. ಈ ಒಂದು ಸಂದರ್ಭದಲ್ಲಿ ನಮ್ಮ ಇಲಾಖೆಗೆ ಸಂಬಂಧಪಟ್ಟ ಹಾಗೆ ಕಂದಾಯ ಮತ್ತು ಅರಣ್ಯಗಳ ವಿಚಾರದಲ್ಲಿ ಕೆಲವೇ ಜನರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅಭಿಪ್ರಾಯಗಳನ್ನು ಎರಡು, ಮೂರು ಭಾಗಗಳಾಗಿ ವಿಂಗಡಿಸಬಹುದು.

ಮೊದಲನೆಯದಾಗಿ, ದೇಶದಲ್ಲಿ ಕಂದಾಯ ಪದ್ಧತಿಯು ಬಹಳ (ಅನೂಚಾನವಾಗಿ) ಪುರಾತನ ಕಾಲದಿಂದ ನಡೆದುಕೊಂಡು ಬಂದದ್ದು, ಅದರ ವರಮಾನ ಕೂಡ ಅಷ್ಟು ಗಣನೀಯವಾದುದಲ್ಲ. ಅದನ್ನು ಬದಲಾಯಿಸತಕ್ಕದ್ದೆಂದು. ಅನೇಕ ಮಾನ್ಯ ಸದಸ್ಯರುಗಳು ತಿಳಿಸಿದ್ದಾರೆ. ಈಗಾಗಲೇ ಇವರಿಗೆಲ್ಲಾ ಗೊತ್ತಿರುವ ರೀತಿಯಲ್ಲಿ ನಮ್ಮ ಮಂತ್ರಿ ಮಂಡಲವು ಒಂದು ಉಪಸಮಿತಿಯನ್ನು ನೇಮಕಮಾಡಿ, ಈಗ ಇರತಕ್ಕಂತಹ ಕಂದಾಯ ಪದ್ಧತಿಯನ್ನು ಯಾವ ರೀತಿ ಬದಲಾವಣೆ ಮಾಡಬೇಕೆಂದೂ ಸರ್ಕಾರಕ್ಕೆ ಅದರಿಂದ ಆಗತಕ್ಕ ನಷ್ಟವನ್ನು

* ವಿಧಾನ ಸಭಾ ನಡವಳಿಕೆ ದಿನಾಂಕ 23ನೇ ಮಾರ್ಚ್, 1967 ಪುಟ ೩೯53-358

ಯಾವ ರೀತಿ ಯಾವ ಸರಿದೂಗಿಸಬೇಕೆಂಬುದನ್ನೆಲ್ಲಾ ಪರಿಶೀಲಿಸಲು ಉಪಸಮಿತಿಗೆ ಒಪ್ಪಿಸಲಾಗಿದೆ. ಬಹುಶಃ ಕೆಲವೇ ದಿನಗಳಲ್ಲಿ ಆ ಉಪಸಮಿತಿಯು ತಮ್ಮ ವರದಿಯನ್ನು ಕಳಿಸಿ ಅದು ಮಂತ್ರಿಮಂಡಲದ ಮುಂದೆ ಬಂದು ಒಂದು ತೀರ್ಮಾನವನ್ನು ಕೈಗೊಳ್ಳಲಿದ್ದೇವೆ. ಈ ಒಂದು ಸಂದರ್ಭದಲ್ಲಿ ಈ ಮಾನ್ಯ ಸಭೆಗೆ ಅದರ ಮಟ್ಟಿಗೆ ಮತ್ತು ಏನೂ ತಿಳಿಸಬೇಕಾದುದು ಅಗತ್ಯವಿಲ್ಲವೆಂದು ನಾನು ತಿಳಿದುಕೊಂಡಿದ್ದೇನೆ.

ಇನ್ನು ಸ್ಥಳೀಯ ಸಂಸ್ಥೆಗಳಿಗೆ ಸುಮಾರು 100 ರಲ್ಲಿ 60 ಭಾಗದಷ್ಟು ಹಣವನ್ನು ಕೊಡುತ್ತಿದ್ದೇವೆ. ಮತ್ತು ಆ ಒಂದು ಸ್ಥಳೀಯ ಸಂಸ್ಥೆಗಳು ಇನ್ನೂ ಚೆನ್ನಾಗಿ ನಡೆದುಕೊಂಡು ಹೋಗಬೇಕಾದ ಪಕ್ಷದಲ್ಲಿ ಅದರ ಕಾರ್ಯಕಲಾಪಗಳು ಇನ್ನೂ ಹೆಚ್ಚಿನ ರೀತಿಯಲ್ಲಿ ವ್ಯಾಪಕವಾಗಿ ನಡೆಯಬೇಕಾದ ಪಕ್ಷದಲ್ಲಿ ಯಾವ ರೀತಿ ಹಣವನ್ನು ಒದಗಿಸಿಕೊಡಬೇಕು ಎನ್ನತಕ್ಕಂತಹ ವಿಷಯವನ್ನು ನಾವು ಯೋಚನೆ ಮಾಡಬೇಕಾಗಿದೆ. ಮತ್ತು ಈಗಿರತಕ್ಕ ಒಂದು ಕಂದಾಯದಲ್ಲಿ ನಾವು ವೆಚ್ಚಮಾಡಿದರೆ ಬಹುಶಃ ಈ ಖಾತೆ ಮತ್ತು ಅವರ ಹಕ್ಕು ಭಾದ್ಯತೆಗಳ ವಿಷಯಗಳನ್ನು ಯಾವ ರೀತಿ ಕಾಪಾಡಿಕೊಂಡು ಹೋಗಬೇಕಾಗಿದೆ ಎಂಬುದನ್ನೆಲ್ಲಾ ಕೂಡ ವಿಚಾರಿಸುವುದು ಈ ಮಂತ್ರಿ ಮಂಡಲದ ಉಪಸಮಿತಿಯ ಗಮನದಲ್ಲಿದೆ. ನಮ್ಮ ಮಾನ್ಯ ಮುಖ್ಯಮಂತ್ರಿಯವರೂ ಕೂಡ ಕಳೆದ ಒಂದು ವರ್ಷದಿಂದ ಕೂಡ ಹೆಚ್ಚಿನ ಒಂದು ಆಸಕ್ತಿಯಿಂದ ಒಂದು ಬದಲಾವಣೆ ಮಾಡಬೇಕೆಂದು ದೃಷ್ಟಿಯಿಂದ ಈ ಉಪಸಮಿತಿಯನ್ನು ನೇಮಿಸಿದ್ದಾರೆ. ಬಹುಶಃ ಅದರ ತೀರ್ಮಾನ ಬೇಗನೇ ಬರಬಹುದೆಂದು ನಾನು ತಿಳಿದುಕೊಂಡಿದ್ದೇನೆ. ಈ ಕಂದಾಯದ ಪ್ರಕಾರ ಸುಮಾರು ನಾಲ್ಕುಕೋಟಿ ಚಿಲ್ಲರೆಯಷ್ಟು ಮಾತ್ರ ವರಮಾನ ಬರುತ್ತಿತ್ತು. ಇದಲ್ಲದೆ ನೀರಿನ ಕಂದಾಯ ಬೇರೆ ವಸೂಲು ಮಾಡಬೇಕಾಗಿದೆ. ಈಗ ಕಳೆದ ವರ್ಷ ಮಳೆ ಬೆಳೆಗಳ ಉತ್ತಮವಾಗಿರಲಿ ಲ್ಲವಾದುದರಿಂದ ಕಂದಾಯ ವಸೂಲಿ ಮಾಡತಕ್ಕಂತಹದ್ದನ್ನು ಮಾರ್ಚಿ 31ನೇ ತಾರೀಖಿನ ಮೇರೆಗೆ ಮುಂದೂಡಬೇಕಾಯಿತು. ಅದರಿಂದ ಕಳೆದ ವರ್ಷದ ಬಾಕಿಯನ್ನು ವಸೂಲು ಮಾಡುವುದಕ್ಕೆ ಮಾರ್ಚಿ 31 ಆದ ಮೇಲೆ ಕಾರ್ಯಕ್ರಮ ತೆಗೆದುಕೊಳ್ಳಬೇಕಾಗಿದೆ.

ಶ್ರೀ ಬಿ. ಭಾಸ್ಕರಶೆಟ್ಟಿ (ಕಾಪು) ಚುನಾವಣೆಯವರೆಗೂ ಎಂದು ಮಾತ್ರವೇ

ಶ್ರೀ ಬಿ. ರಾಚಯ್ಯ- ಚುನಾವಣೆ ನಿಮಗೂ ಅನ್ವಯಿಸುತ್ತದೆ. ನಮಗೂ ಅನ್ವಯಿಸುತ್ತದೆ. ಮತ್ತು ಅದು ದೇಶದ ಗಮನವನ್ನೆಲ್ಲಾ ಸೆಳೆದಿದೆ. ಆದ್ದರಿಂದ ಯೋಜನೆಗಳಿಗೆ ಏನು ಹಣ ಬೇಕಾಗುತ್ತದೆ ಅದನ್ನು ಕಳೆದ ಸಾಲಿನಲ್ಲಿ ಸೇರಿಸಿಕೊಳ್ಳಬೇಕಾಗುತ್ತದೆ. ಹಣವನ್ನು ವಸೂಲಿ ಮಾಡತಕ್ಕಂತಹ ಸಂದರ್ಭದಲ್ಲಿ ನಮ್ಮ ಕೆಲಸ ಕಾರ್ಯಗಳಿಗೆ ತೊಂದರೆಯಾಗದಂತೆ ಮಾಡಬೇಕೆಂಬುದನ್ನು ಮಾನ್ಯ ಸದಸ್ಯರುಗಳು ಗಮನದಲ್ಲಿಡಬೇಕು. ಇನ್ನೊಂದು ವಿಷಯವನ್ನು ಮಾನ್ಯ ಸದಸ್ಯರುಗಳು ಪ್ರಸ್ತಾಪಮಾಡಿದ್ದಾರೆ. ಅದು ಕಳೆದ ಎರಡು ವರ್ಷಗಳಲ್ಲಿ ದೇಶದಲ್ಲಿ ಮಳೆಯ ಅಭಾವದಿಂದ ರೈತರಿಗೆ ತೊಂದರೆಯಾಗಿ ಸಾಕಷ್ಟು ಬೆಳೆ ಸಿಕ್ಕಲಿಲ್ಲ ಎಂದು ತಿಳಿಸಿದ್ದಾರೆ. ಅದರಲ್ಲೂ ಸುಮಾರು 1965ರಿಂದ ಇಲ್ಲಿಯವರೆಗೆ ಮಳೆ ಸಾಕಷ್ಟು ಸಕಾಲದಲ್ಲಿ ಆಗದೆ ನಮ್ಮ

ದೇಶದಲ್ಲಿರತಕ್ಕ 26 ಸಾವಿರ ಹಳ್ಳಿಗಳಲ್ಲಿ ಎರಡು ಸಾವಿರ ಹಳ್ಳಿಗಳಲ್ಲಿ ನಾಲ್ಕಾಣೆ ಬೆಳೆಕೂಡ ಎರಡು ವರ್ಷಗಳ ಪರ್ಯಂತ ಆಗಲಿಲ್ಲ. ಹತ್ತು ಸಾವಿರ ಹಳ್ಳಿಗಳಲ್ಲಿ ಸುಮಾರು ನಾಲ್ಕಾಣೆ ಬೆಳೆಯಾಗಿದೆ. ಹಿಂದಿನ ವರ್ಷಗಳಲ್ಲಿ ಬೆಳೆ ಚೆನ್ನಾಗಿತ್ತು. ಎಂದು ವರದಿ ಬಂದಿತ್ತು. ಇಂತಹ ಒಂದು ಪರಿಸ್ಥಿತಿಯಲ್ಲಿರತಕ್ಕಂತಹ ಕಾಲದಲ್ಲಿ ಕೇಂದ್ರ ಸರ್ಕಾರದವರು-----

ಶ್ರೀ ಎಸ್. ಶಿವಪ್ಪ- ನಾಲ್ಕಾಣೆ ಬೆಳೆಯಾಗಿದೆ ಎಂದು ಕಂದಾಯ ವಜಾ ಮಾಡುತ್ತೇವೆಂದು ಮತ್ತೇ ಮುಂದುವರೆಸುತ್ತೀರಾ?

ಶ್ರೀ ಬಿ. ರಾಚಯ್ಯ - ಸತತವಾಗಿ ಎರಡು ವರ್ಷ ನಾಲ್ಕಾಣೆ ಬೆಳೆಗಿಂತ ಕಡಿಮೆಯಾಗಿರತಕ್ಕ ಕಾಲದಲ್ಲಿ ಕಾನೂನು ಪ್ರಕಾರ ಕಂದಾಯವನ್ನು ವಜಾ ಮಾಡಬೇಕೆಂದು ಕಾನೂನಿನಲ್ಲಿ ವಿಧಾಯಕವಾಗಿದೆ. ಅದರ ಪ್ರಕಾರ ಅಧಿಕಾರಿಗಳು ವಜಾಮಾಡುತ್ತಾರೆಂದು ತಾವು ಬಾವಿಸಬಹುದು. ಹಾಗೆ, ಪರಿಹಾರಕಾರ್ಯಗಳಿಗೋಸ್ಕರ, ಮೈಸೂರು ಸರ್ಕಾರದವರು ಒಂದು ಮನವಿಯ ಮೇಲೆ ಕೇಂದ್ರ ಸರ್ಕಾರದವರು ಸುಮಾರು ನಾಲ್ಕು ಕೋಟಿ ರೂಪಾಯಿಗಳನ್ನು ನಮ್ಮ ಸರ್ಕಾರಕ್ಕೆ ಪರಿಹಾರಕಾರ್ಯಗಳಿಗೆ ಒದಗಿಸಿಕೊಟ್ಟಿದ್ದಾರೆ. ಅದರಲ್ಲಿ 75 ಲಕ್ಷ ರೂಪಾಯಿಗಳಷ್ಟು ಸಬ್ಸಿಡಿಯಾಗಿಯೂ ಇನ್ನು ಉಳಿದ ಹಣವನ್ನು ಸಾಲದ ರೂಪದಲ್ಲಿಯೂ ಕೊಟ್ಟಿದ್ದಾರೆ. ಈ ಹಣವನ್ನು ಸಣ್ಣ ನೀರಾವರಿಗೋಸ್ಕರ ಗೋವು ಕಟ್ಟೆಗಳಿಗೆ, ಬಾವಿಗಳನ್ನು ಆಳವಡಿಸುವುದಕ್ಕೆ ಹಾಗೂ ಇನ್ನಿತರ ಅಭಿವೃದ್ಧಿ ಕಾರ್ಯಗಳಿಗೋಸ್ಕರ ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕ್ ಮುಖಾಂತರ ನೀರಾವರಿ ಬಾವಿಗಳನ್ನು ತೋಡಿಸುವುದಕ್ಕೋಸ್ಕರ ಪ್ರತಿ ವಿಭಾಗಗಳಿಗೆ ಹಂಚಿಕೆ ಮಾಡಲಾಗಿದೆ. ಅದರಲ್ಲಿ ಬಹು ಭಾಗ ಹಣ ಈಗಾಗಲೇ ಖರ್ಚು ಆಗಿ ಕೆಲವು ಜಿಲ್ಲೆಗಳಲ್ಲಿ ಮಾತ್ರ ಇನ್ನು ಸ್ವಲ್ಪ ಮಟ್ಟಿಗೆ ಪರಿಹಾರ ಕಾರ್ಯಕ್ರಮಗಳು ನಡೆಯುತ್ತಿವೆ. ಅನೇಕ ಭಾಗಗಳಲ್ಲಿ ಮುಗಿದು ಹೋಗಿವೆ. ಇದೂ ಅಲ್ಲದೆ ವಯಸ್ಕರಾಗಿರುವಂಥವರಿಗೆ ಮತ್ತು ಬಡವರಾಗಿರುವವರಿಗೆ ತಿಂಗಳಿಗೆ ಕ್ರಮವಾಗಿ ಎಂಟು ಕೆ.ಜಿ. ಮತ್ತು ಹದಿನೈದು ಕೆ.ಜಿ. ಗೋಧಿಯನ್ನು ಕೊಡುವ ವ್ಯವಸ್ಥೆ ಮಾಡಿತ್ತು. ಅಲ್ಲಲ್ಲಿ ಕೇರ್ ಸಂಸ್ಥೆಯವರು ಮತ್ತು ಇತರ ಸಾರ್ವಜನಿಕ ಸಂಸ್ಥೆಯವರು ಕೊಟ್ಟಂಥ ಹಾಲಿನ ಪುಡಿಯನ್ನು ತೆಗೆದುಕೊಂಡು ಬಡವರಿಗೆ ಹಂಚಲಾಗಿದೆ. ಒಟ್ಟಿನಲ್ಲಿ ಪ್ರಕೃತಿ ಕೋಪಗೊಂಡಾಗ ಸರ್ಕಾರದವರು ಪರಿಹಾರ ಕಾರ್ಯಕ್ರಮಗಳನ್ನು ಕೈಗೊಂಡರು. ಸಮೃದ್ಧಿಯಾಗಿ, ಮಳೆಯಾಗಿ, ಬೆಳೆಯಾಗಿದ್ದರೆ ಜನರು ಎಷ್ಟು ಸಂತೋಷದಿಂದ ಇರುತ್ತಿದ್ದರೋ, ಅಷ್ಟೆ ಸಂತೋಷದಿಂದ ಜನರನ್ನು ನೋಡಿಕೊಳ್ಳುವುದಕ್ಕೆ ಸರ್ಕಾರಕ್ಕೆ ಸಾಧ್ಯವಾಗಲಿಲ್ಲ. ಆದರೆ ಕಷ್ಟ ಬಂದಾಗ ಜನರ ನೆರವಿಗೆ ಸರ್ಕಾರದವರು ಇದ್ದಾರೆ ಎಂದು ತಿಳಿದುಕೊಳ್ಳುವುದು ಒಳ್ಳೆಯದು. ಸರ್ಕಾರದವರು ತಮ್ಮ ಶಕ್ತಿ ಮೀರಿ ಸಹಾಯಮಾಡಿದ್ದಾರೆ. ಎಂದು ಈ ಸಭೆಯಲ್ಲಿ ನಿವೇದಿಸುತ್ತೇನೆ. ಮುಂದೆ ಇಂತಹ ಕ್ಷಾಮಗಳು ಬರಬಾರದು, ಮಳೆಯ ಅಭಾವ ಇರಬಾರದು ಎಂದು ದೇವರನ್ನು ಹಚ್ಚಿನ ರೀತಿಯಲ್ಲಿ ಪ್ರಾರ್ಥನೆ ಮಾಡುತ್ತೇನೆ. ನಾವು ಯಾವಾಗಲೂ ಒಳ್ಳೆಯದನ್ನು ಯೋಚನೆ ಮಾಡಿದರೆ ಮಳೆ ಬಂದೇ ಬರುತ್ತದೆ. ಕ್ಷಾಮ ಪರಿಹಾರದ ಕಾರ್ಯಕ್ರಮಗಳನ್ನು ಕಷ್ಟಕಾಲದಲ್ಲಿ ಮಾಡಿಸಿ ಜನರಿಗೆ ಹೆಚ್ಚಿನ

ನೆರವನ್ನು, ಸಹಾಯವನ್ನು ಒದಗಿಸಿಕೊಟ್ಟಿದ್ದೇವೆ. ಅನೇಕ ಕಡೆಗಳಲ್ಲಿ ಬಾವಿಗಳಿಗೋಸ್ಕರ ಲ್ಯಾಂಡ್ ಡೆವಲಪ್ ಮೆಂಟ್ ಬ್ಯಾಂಕ್ ಮೂಲಕ ಸಾಲವನ್ನು ಒದಗಿಸಿದ್ದೇವೆ. ಸುಮಾರು 10,400 ಬಾವಿಗಳಿಗೆ ಸಾಲವನ್ನು ಕೊಡಿಸಿದ್ದೇವೆ. ಹಳೆಯ ಬಾವಿಗಳನ್ನು ಆಳವಡಿಸಿ ಪೂರ್ತಿ ಮಾಡಿಸುವುದಕ್ಕೋಸ್ಕರ ರೆವಿನ್ಯೂ ಇಲಾಖೆಯವರು ಸುಮಾರು 12 ಸಾವಿರ ರೂಪಾಯಿಗಳನ್ನು ಒದಗಿಸಿದ್ದಾರೆ. ಮಾನ್ಯ ಸದಸ್ಯರುಗಳು ಎಷ್ಟು ಬಾವಿಗಳು ಉಪಯುಕ್ತವಾಗಿವೆ ಎಂದು ಕೇಳಿದ್ದಾರೆ. ಪ್ರತಿ ತಾಲ್ಲೂಕಿನಲ್ಲೂ ವಿದ್ಯುಚ್ಛಕ್ತಿಯನ್ನು ಉಪಯೋಗಿಸಿ ಬೆಳೆ ಬೆಳೆಯುವುದಕ್ಕೆ ಹಾತೊರೆಯುತ್ತಿದ್ದಾರೆ. ಎಂಬುದನ್ನು ನಾನು ನಿಮಗೆ ತಿಳಿಸಬೇಕಾಗಿಲ್ಲ. ಈ ಬಾವಿಗಳನ್ನು ಹೆಚ್ಚು ತೋಡುದುವುದರಿಂದ ಆ ನೀರಿನ ಮೂಲಕ ಹೆಚ್ಚು ಬೆಳೆಯನ್ನು ಬೆಳೆಯುವುದಕ್ಕೆ ಅನುಕೂಲವಾಗುತ್ತದೆ.

ಇನ್ನು ಮಂಗಳೂರಿನಿಂದ ಬಂದಿರುವ ಮಾನ್ಯ ಸದಸ್ಯರೊಬ್ಬರು ಪಣಂಬೂರಿನ ವಿಷಯವಾಗಿ ಪ್ರಸ್ತಾಪಮಾಡಿದ್ದಾರೆ. ಪಣಂಬೂರಿನಲ್ಲಿ ಬೃಹತ್ ಪ್ರಮಾಣದಲ್ಲಿ ಕಟ್ಟುವ ಬಂದರಿಗಾಗಿ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುತ್ತಿದ್ದೇವೆ. ಈ ಸಂಬಂಧದಲ್ಲಿ ಸರ್ಕಾರದವರು ಜನರನ್ನು ಮನೆಯಿಂದ ಓಡಿಸಿ ಕಠಿಣವಾದ ರೀತಿಯಲ್ಲಿ ವರ್ತಿಸಿದ್ದಾರೆಂದು ಮಾನ್ಯ ಸದಸ್ಯರು ಹೇಳಿದರು. ಅವರಿಗೆ ಪುನರ್ವಸತಿಗಳನ್ನು ಮಾಡಿಕೊಟ್ಟಿಲ್ಲವೆಂದು ಅವರು ಪ್ರಸ್ತಾಪಮಾಡಿದರು. ಮಾನ್ಯ ಭಾಸ್ಕರ ಶೆಟ್ಟರು ಆ ಜಾಗಕ್ಕೆ ಹೋಗಿ ನೋಡಿದರೆ ಗೊತ್ತಾಗುತ್ತದೆ. ಕೇಂದ್ರ ಸರ್ಕಾರದವರು ಪಣಂಬೂರಿನ ಬೃಹತ್ ಯೋಜನೆಯನ್ನು ಮಂಜೂರುಮಾಡಿದ್ದು ನಮಗೆ ಒಂದು ಹೆಮ್ಮೆಯ ವಿಷಯ. ನಮಗೆ ಇಂತಹ ಒಂದು ಬಂದರು ಬೇಕು ಎಂದು ಕೇಳುವ ಕಾಲವಿತ್ತು. ಅದರಂತೆ ನಮಗೆ ಬಂದರನ್ನು ಮಂಜೂರು ಮಾಡಿದ ಮೇಲೆ ಅದಕ್ಕೆ ಬೇಕಾಗುವ ಎಲ್ಲಾ ಅವಶ್ಯಕತೆಗಳನ್ನು ಪೂರೈಸಿಕೊಡುವುದು ಸರ್ಕಾರದ ಒಂದು ಕರ್ತವ್ಯ. ಈ ಒಂದು ದೃಷ್ಟಿಯಿಂದ ಹೇಳುವುದಾದರೆ, ಪಣಂಬೂರಿನ ಈ ಯೋಜನೆಗೆ ಬೇಕಾಗುವ 2,072 ಎಕರೆ ಭೂಮಿಯನ್ನು ಸ್ವಾಧೀನ ಮಾಡಿಕೊಳ್ಳಬೇಕಾಗಿ ಬಂತು. ಮೊದಲು, 1,060 ಎಕರೆ ಸಾಕು ಎಂದು ತೀರ್ಮಾನವಾಗಿತ್ತು. ಮುಂದೆ ಕಾರ್ಖಾನೆಗಳಿಗೆ ಜಾಗ ಬೇಕಾಗುತ್ತದೆಂದು ಯೋಚನೆ ಮಾಡಿ ಮತ್ತೆ 1,012 ಎಕರೆ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿ ಬಂತು. ಬೊಂಬಾಯಿ ಮತ್ತು ಕಲ್ಕತ್ತಾ ಬಂದರಿಗೆ ಇರುವಷ್ಟೆ ಭೂಮಿಯನ್ನು ನಾವು ಸ್ವಾಧೀನ ಪಡಿಸಿಕೊಂಡು, ಮುಂದೆ ತೊಂದರೆಯಾದಾಗ, ಇದೇ ಮಾನ್ಯ ಸದಸ್ಯರು ಟೀಕಿಸುತ್ತಾರೆಂದು ತಿಳಿದುಕೊಂಡಿದ್ದೇನೆ. ಮುಂದೆ ಅಲ್ಲಿ ಕೆಲವು ಕೈಗಾರಿಕೆಗಳು ಬರುತ್ತವೆ ಎಂಬ ದೃಷ್ಟಿಯಿಟ್ಟುಕೊಂಡು ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದೇವೆ. ಅದಕ್ಕಾಗಿ 166 ಲಕ್ಷ ರೂಪಾಯಿಗಳನ್ನು ಭೂಮಿ ಕಳೆದುಕೊಂಡವರಿಗೆ ಪರಿಹಾರಧನವಾಗಿ ಕೊಡಲು ಮಂಜೂರು ಮಾಡಿ ಈಗಾಗಲೆ 145 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದೇವೆ. ಆದಷ್ಟು ಜಾಗ್ರತೆಯಿಂದ ಉಳಿದಿರುವ 21 ಲಕ್ಷ ರೂಪಾಯಿಯನ್ನು ಕೊಡುವುದರಲ್ಲಿದ್ದೇವೆ. ಭೂಮಿಯನ್ನು ಕಳೆದು ಕೊಂಡವರಿಗೆ ಬೇರೆ ಭೂಮಿಯನ್ನು ಕೊಟ್ಟಿದ್ದು ಅಲ್ಲಿದೆ ಅವರಿಗೆ ಬೇರೆಕಡೆ ಮನೆಗಳನ್ನು ಕಟ್ಟಿಕೊಳ್ಳಲು ಬೇಕಾಗಿರುವಂಥ ಭೂಮಿಯನ್ನು ಕೊಟ್ಟಿದ್ದೇವೆ. ಆ ಜಾಗದಲ್ಲಿ ರಸ್ತೆಗಳನ್ನು,

ಪೂಜಾಮಂದಿರಗಳನ್ನು, ಆರೋಗ್ಯಕೇಂದ್ರಗಳನ್ನು ಮತ್ತು ಪಂಚಾಯ್ತಿ ಕಟ್ಟಡಗಳನ್ನು ಕಟ್ಟಿಸಿದೆ. ಅಲ್ಲದೆ ಸ್ಮಶಾನಕ್ಕೆ ಸಹ ಜಾಗವನ್ನು ಒದಗಿಸಿದೆ. ಕುಳ್ಳೆಯನ್ನು ಹೋಗಿನೋಡಿದರೆ, ಇಡೀ ಇಂಡಿಯಾ ದೇಶದಲ್ಲೇ ಒಂದು ಮಾದರಿಯಾಗಿರುವಂತೆ ವ್ಯವಸ್ಥೆಮಾಡಿದ್ದೇವೆ. ಎಲ್ಲಾ ಸೌಕರ್ಯಗಳ ಜೊತೆಗೆ ಅಲ್ಲಿಯ ಜನರು ಸುಖಸಂತೋಷದಿಂದ ಇದ್ದಾರೆ ಎಂದು ಈ ಸಂದರ್ಭದಲ್ಲಿ ತಿಳಿಸುತ್ತಿದ್ದೇನೆ.

ಶ್ರೀ ಬಿ. ಭಾಸ್ಕರ ಶೆಟ್ಟಿ – ಅವರನ್ನು ಸಂತೋಷದಿಂದ ಇರುವಂತೆ ಮಾಡದಿದ್ದರೆ ನಿಮಗೆ ಓಟು ಸಿಗುತ್ತಿರಲಿಲ್ಲ.

ಶ್ರೀ ಬಿ. ರಾಚಯ್ಯ – ಶ್ರೀಮಾನ್ ಭಾಸ್ಕರ ಶೆಟ್ಟಿಯವರು ಹೇಳಿದಂತೆ ಅಲ್ಲಿಯ ಜನರು ನಾವು ಮಾಡಿಕೊಟ್ಟಿರುವ ಸೌಕರ್ಯಕ್ಕಾಗಿಯೇ ಓಟುಕೊಟ್ಟಿಲ್ಲವೆಂದು ಹೇಳುತ್ತೇನೆ. ಜನರಿಗೆ ಪುನರ್ ವಸತಿಗಾಗಿ ಸರ್ಕಾರದವರು ಸಾಕಷ್ಟು ಗಮನವನ್ನು ಕೊಟ್ಟು ಕುಳ್ಳೆ ಮತ್ತು ಕೌಟಿಪಲ್ಲೆನಲ್ಲಿ ಸಾಕಷ್ಟು ಜಾಗವನ್ನು ಒದಗಿಸಿದ್ದಾರೆ. ಪರಿಹಾರ ಧನವನ್ನು ಒದಗಿಸಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ, ಒಂದು ಕೆರೆಕಟ್ಟಬೇಕಾದರೆ, ಒಂದು ಬಂದರನ್ನು ಕಟ್ಟಬೇಕಾದರೆ, ಮತ್ತು ಒಂದು ಊರನ್ನು ನಿರ್ಮಿಸಬೇಕಾದರೆ ಕೆಲವಾರು ಜನರಿಗೆ ತೊಂದರೆಯಾಗುವುದು ಸಹಜವಾಗಿದೆ. ಇಂತಹ ಒಳ್ಳೆಯ ಕೆಲಸಗಳು ಆಗಬೇಕಾದರೆ ಕೆಲವರು ಸ್ವಲ್ಪಮಟ್ಟಿಗೆ ತೊಂದರೆಯನ್ನು ಅನುಭವಿಸಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸರ್ಕಾರದವರು ಸಹ ಪರಿಹಾರ ಧನವನ್ನು ಕೊಡುತ್ತಾರೆ. ಅದೇ ಮಾನ್ಯ ಸದಸ್ಯರು ಮತ್ತೊಂದು ವಿಷಯವನ್ನು ಪ್ರಸ್ತಾಪಮಾಡಿದರು. ಒಂದು ಮನೆಯಲ್ಲಿ ವಾಸವಾಗಿದ್ದ ಹೆಂಗಸರೊಬ್ಬರನ್ನು ಒತ್ತಾಯಪೂರ್ವಕವಾಗಿ ಹೊರಕ್ಕೆ ದೂಡಿದರು. ಅವರು ಆಸ್ಪತ್ರೆಯಲ್ಲಿ ತೀರಿಹೋದರು ಎಂದು ಎರಡು ವರ್ಷಗಳ ಹಿಂದೆ ಈ ಭೂಮಿಯನ್ನು ಸ್ವಾಧೀನವಾಗಿದೆ. ಅವರು ಹೇಳಿದಂತಹ ಯಾವ ಪ್ರಕಾರೂ ಸರ್ಕಾರಕ್ಕೆ ಬಂದಿಲ್ಲ. ಅವರು ಮಾಡಿರುವ ಆಪಾದನೆ ನಿರಾದಾರವಾಗಿದೆಯೆಂದು ತಿಳಿದು ಬಂದಿದೆ. ಬಂದರ್ ಬಳಿ ಇರುವ ಐಸ್ ಕ್ರೀಮ್ ಕಾರ್ಖಾನೆಯ ಸ್ಥಳವನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿದೆ. ವಿರೋಧಪಕ್ಷದವರು ಅದನ್ನು ಸ್ವಾಧೀನಪಡಿಸಿಕೊಳ್ಳುವ ವಿಚಾರದಲ್ಲಿ ಆಪಾದನೆ ಮಾಡಿದ್ದಾರೆ. ತಮಗೆ ಬೇಕಾದ ವರಿಗೆ ಅನುಕೂಲವಾಗಲಿ ಎಂದು ಅವರು ಆ ರೀತಿ ಆಪಾದನೆ ಮಾಡಿರಬಹುದು. ಈಗಾಗಲೆ ಅಧನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕೆ ಪ್ರಕಟಣೆಗಳನ್ನು ಹೊರಡಿಸಿದ್ದೇವೆಂದು ಈ ಸಭೆಯಲ್ಲಿ ತಿಳಿಸಲು ಇಚ್ಛೆಪಡುತ್ತೇನೆ.

ಮತ್ತೊಂದು ವಿಷಯವನ್ನು ಉತ್ತರ ಕರ್ನಾಟಕದಿಂದ ಬಂದಿರುವ ಮಾನ್ಯ ಸದಸ್ಯರಾದ ಡಿ.ಎಸ್. ಗೌಡರು ಮತ್ತು ಕೆಲವರು ಅರಣ್ಯವನ್ನು ಬೆಳೆಸುವ ವಿಷಯದಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸಬೇಕೆಂದು ತಿಳಿಸಿದ್ದಾರೆ. ಈಗಾಗಲೇ ಕಳೆದ ಸಾಲಿನಲ್ಲಿ ನಾವು ಆ ವಿಚಾರದ ಬಗ್ಗೆ ಚರ್ಚೆ ಮಾಡಿ ರಾಜ್ಯದ ಅನೇಕ ಕಡೆಗಳಲ್ಲಿ ಅರಣ್ಯವನ್ನು ಹೆಚ್ಚು ಬೆಳೆಸಿದ್ದೇವೆ. ಎನ್ನುವುದನ್ನು ತಿಳಿಸುವುದಕ್ಕೆ ಅಪ್ಪಣೆ ಬೇಡುತ್ತೇನೆ. 1965-66ರವರೆಗೆ ಸಾಗುವಾನಿ ಗಿಡಗಳನ್ನು 1,71,012 ಎಕರೆಗಳಲ್ಲಿ

ನೆಟ್ಟಿದ್ದೇವೆ. ಮೃದುಮರಗಳನ್ನು 23,022 ಎಕರೆಗಳಲ್ಲಿಯೂ, ಗೋಡಂಬಿ ಗಿಡಗಳನ್ನು 27,557 ಎಕರೆಗಳಲ್ಲಿಯೂ ಸಾಡೆ ಮತ್ತು ಇತರೆ ಗಿಡಗಳನ್ನು 2,52,303 ಎಕರೆಗಳಲ್ಲಿಯೂ, ರಬ್ಬರ್ ಗಿಡಗಳನ್ನು ಸುಮಾರು 2,250 ಎಕರೆಗಳಲ್ಲಿಯೂ, ಲಿನೋಲಿಯಂ ಅನ್ನು 1,301 ಎಕರೆಗಳಲ್ಲಿಯೂ ಬೆಳೆಸಿದ್ದೇವೆ.

ನಾಲ್ಕನೆಯ ಯೋಜನೆಯಲ್ಲಿ ಏನೇನು ಯೋಜನೆಗಳನ್ನು ತೆಗೆದುಕೊಳ್ಳಬೇಕು ಎನ್ನುವುದನ್ನು ಮಾನ್ಯ ರಾಜ್ಯಪಾಲರ ಭಾಷಣದಲ್ಲಿ ತಿಳಿಸಿದ್ದಾರೆ. ಗಿಡಗಳನ್ನು ಬೆಳೆಸುವುದರಲ್ಲಿ ಸಾಕಷ್ಟು ಕಾರ್ಯಕ್ರಮಗಳನ್ನು ತೆಗೆದುಕೊಂಡಿದ್ದೇವೆ. ಆದರೆ ಉತ್ತರಕರ್ನಾಟಕದ ಜಿಲ್ಲೆಯಲ್ಲಿನ ಪರಿಸ್ಥಿತಿಯನ್ನು ನೋಡಿದರೆ ನೂರಕ್ಕೆ 80 ಭಾಗದಷ್ಟು ಅರಣ್ಯ ಸಂಪತ್ತಿದೆ. ಆದರೆ ಜನರಿಗೆ ಸಾಕಾದಷ್ಟು ಸಾಗುವಳಿ ಭೂಮಿ ಇಲ್ಲ. ಸರ್ಕಾರದ ಧೋರಣೆಯಿಂದ ರೈತರಿಗೆ ಆ ಭಾಗದಲ್ಲಿ ಬಹಳ ತೊಂದರೆಯಾಗಿದೆ, ಎಂದು ಅನೇಕ ವರ್ಷಗಳಿಂದ ಸರ್ಕಾರಕ್ಕೆ ಮನವಿ ಬಂದುದರಿಂದ ಕಳೆದ ಸಾಲಿನಲ್ಲಿ ಸರ್ಕಾರದವರು ಪ್ರತಿ ಜಿಲ್ಲೆಯಲ್ಲಿಯೂ, ಆ ಜಿಲ್ಲೆಯಲ್ಲಿರುವ ತಾಲ್ಲೂಕು ಬೋರ್ಡ್ ಅಧ್ಯಕ್ಷರು, ರೆವಿನ್ಯೂ ಇಲಾಖೆಯ ಅಧಿಕಾರಿಗಳು, ಅರಣ್ಯ ಇಲಾಖೆಯ ಅಧಿಕಾರಿಗಳು, ಪಶುಪಾಲನೆ ಇಲಾಖೆಯ ಅಧಿಕಾರಿಗಳು, ಮತ್ತು ಅಬ್ಕಾರಿ ಇಲಾಖೆಯ ಅಧಿಕಾರಿಗಳನ್ನೊಳಗೊಂಡಂತೆ ಒಂದು ಸಮಿತಿಯನ್ನು ನೇಮಕ ಮಾಡಿತು. ಅವರು ಸರ್ಕಾರಕ್ಕೆ ಇಂತಿಂಥ ಭೂಮಿಯನ್ನು ಅರಣ್ಯ ಇಲಾಖೆಗೆ ವರ್ಗಾಯಿಸತಕ್ಕದ್ದು, ಇಂತಿಂಥ ಭೂಮಿಯನ್ನು ಕಂದಾಯ ಇಲಾಖೆಗೆ ವರ್ಗಾಯಿಸತಕ್ಕದ್ದು ಆ ಮುಖಾಂತರ ಸಾಗುವಳಿಗೆ ಅನುಕೂಲ ಮಾಡಿಕೊಡಬಹುದು ಎಂದು ಮಾಡಿದ ಶಿಫಾರಸಿನ ಮೇಲೆ ಅರಣ್ಯ ಇಲಾಖೆಗೆ 5,64,126 ಎಕರೆಗಳನ್ನು ವರ್ಗಾಯಿಸಿಕೊಟ್ಟಿದ್ದೇವೆ. 1,07,000 ಎಕರೆಗಳನ್ನು ಕಂದಾಯ ಇಲಾಖೆಗೆ ಭೂಸಾಗುವಳಿ ಮಾಡುವುದಕ್ಕೆ ಒದಗಿಸಿಕೊಟ್ಟಿದ್ದೇವೆ. ಇದಕ್ಕೆ ಸಂಬಂಧಪಟ್ಟ ಹಾಗೆ ಸರ್ವೆ ಕೆಲಸ ನಡೆಯುತ್ತಿದೆ. ಸಾಗುವಳಿಗೆ ಕೊಟ್ಟಿರುವ ಜಮೀನಿನಲ್ಲಿ ಎಲ್ಲೆಲ್ಲಿ ಮರಗಳಿವೆಯೋ ಅವುಗಳನ್ನು ಕಡಿದು ಸಾಗಿಸತಕ್ಕ ಕಾರ್ಯವೂ ಕೂಡ ಬಹುಮಟ್ಟಿಗೆ ನಡೆಯುತ್ತಿದೆ. ಒಟ್ಟಿನಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಇದುವರೆಗೆ 1,04,000 ಎಕರೆಗಳನ್ನು ವಿವಿಧ ಉದ್ದೇಶಗಳಿಗೋಸ್ಕರ ಕಂದಾಯ ಇಲಾಖೆಗೆ ಭೂಮಿಯನ್ನು ಬಿಟ್ಟುಕೊಟ್ಟು 12,000 ಎಕರೆಗಳನ್ನು ಸಾಗುವಳಿಗೆ ಆ ಜಿಲ್ಲೆಯಲ್ಲಿ ಬಿಟ್ಟುಕೊಡಲಾಗಿದೆ. ಮಾನ್ಯ ಸದಸ್ಯರು ಕೇಳಿದ ಹಾಗೆ ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಕೂಡ ಒಂದು ಲಕ್ಷ ಎಕರೆಯಷ್ಟು ಅರಣ್ಯವನ್ನು ಕೊಡುತ್ತ, ಹೋದರೆ ನಮ್ಮಲ್ಲಿ ಅರಣ್ಯವೇ ಇಲ್ಲದಹಾಗೆ ಆಗುತ್ತದೆ. ಒಂದು ಜಿಲ್ಲೆಗೆ ಸುಮಾರು ಹತ್ತು ಲಕ್ಷದಷ್ಟು ಎಕರೆ ಭೂಮಿಯನ್ನು ಬಿಡಬೇಕಾದರೆ ನಮ್ಮಲ್ಲಿ ಎಷ್ಟು ಅರಣ್ಯ ಇವೆಯೋ ಅದನ್ನೆಲ್ಲ ಬಿಟ್ಟುಕೊಡಬೇಕಾಗುತ್ತದೆ. ಇರುವ ಅರಣ್ಯವನ್ನೆಲ್ಲ ವಿಸರ್ಜನೆ ಮಾಡುವುದಕ್ಕಾಗುವುದಿಲ್ಲ ಎಂದು ನಾನು ತಿಳಿಸಿದ್ದೇನೆ. ಜನರಿಗೆ ಏನು ತೊಂದರೆ ಇದೆ ಎನ್ನುವುದನ್ನು ಯೋಚನೆಮಾಡಿ ಎಷ್ಟು ಭೂಮಿಯನ್ನು ಬಿಟ್ಟುಕೊಡಬಹುದು ಎನ್ನುವುದನ್ನು ಸರ್ಕಾರದವರು ಗಮನದಲ್ಲಿಟ್ಟುಕೊಂಡು ಸಾಕಷ್ಟು ರೀತಿಯಲ್ಲಿ ಹೆಚ್ಚಿನ ಭೂಮಿಯನ್ನು ಬಿಟ್ಟುಕೊಡುತ್ತಿದ್ದಾರೆ. ಬಹುಶಃ ಕೆಲವಾರು ತಿಂಗಳಲ್ಲಿ ಬಿಟ್ಟಿರುವ ಭೂಮಿಯನ್ನು ಸಾಗುವಳಿಗೆ

ಕೊಟ್ಟು ಬೆಳೆ ಬೆಳೆಯುವುದಕ್ಕೆ ಅವಕಾಶ ಕಲ್ಪಿಸಿಕೊಡುತ್ತೇವೆಂದು ಮಾತ್ರ ಮಾನ್ಯ ಸದಸ್ಯರಿಗೆ ತಿಳಿಸುತ್ತಿದ್ದೇನೆ.

ಇಷ್ಟು ಹೇಳಿ ವಂದನಾ ನಿರ್ಣಯದ ಮೇಲೆ ಮಾಡಿದಂಥ ಟೀಕೆಗಳಿಗೆ ಸ್ವಲ್ಪಮಟ್ಟಿಗೆ ಉತ್ತರವನ್ನು ಕೊಟ್ಟಿದ್ದೇನೆ. ಸ್ವಾಮಿ, ಬಹುಶಃ ಆಯವ್ಯಯ ಪಟ್ಟಿಯ ಮೇಲೆ ಚರ್ಚೆ ನಡೆದಾಗ ಮಾನ್ಯ ಸದಸ್ಯರಿಂದ ಬರುವ ಟೀಕೆಗಳಿಗೆ ಸಾಕಷ್ಟು ಸಮಂಜಸವಾದ ಉತ್ತರವನ್ನು ಕೊಡಬಲ್ಲೆ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಭೂಸ್ವಾಧೀನ ಕಾನೂನು ತಿದ್ದುಪಡಿ ಮಸೂದೆಯ ಮೇಲಿನ ಚರ್ಚೆ*

ಶ್ರೀ ಬಿ. ರಾಚಯ್ಯ (ಕಂದಾಯ ಮಂತ್ರಿಗಳು) - ಸ್ವಾಮಿ, ಮಾನ್ಯ ಸಭೆಯಲ್ಲಿ ಭೂಸ್ವಾಧೀನ ಮಾಡಿಕೊಳ್ಳತಕ್ಕಂಥ ಈ ತಿದ್ದುಪಡಿ ಮಸೂದೆಯ ಮೇಲೆ ಚರ್ಚೆ ಮಾಡಿದಂಥ ಮಾನ್ಯ ಸದಸ್ಯರ ವಾದ ಸರಣಿಯನ್ನು ನಾನು ಬಹಳ ಕುತೂಹಲದಿಂದ ಕೇಳಿದೆ. ಉಪಯುಕ್ತವಾಗಿರುವ ಕೆಲವಾರು ಸಲಹೆಗಳನ್ನು ಕೊಟ್ಟಂಥವರಿಗೆ ನನ್ನ ಧನ್ಯವಾದಗಳು. ಈ ಮಸೂದೆಯ ಮೇಲೆ ಇಷ್ಟೊಂದು ದೀರ್ಘಕಾಲ ಚರ್ಚೆಯಾಗುತ್ತದೆಂದು ನಾನು ಭಾವಿಸಿರಲಿಲ್ಲ. ಏಕೆಂದರೆ ಇದು ಅತ್ಯಂತ ಸರಳವಾದಂಥ ಸುಲಭವಾದಂಥ ಎಲ್ಲರೂ ಒಪ್ಪಿಕೊಳ್ಳುವಂಥ ಸಣ್ಣ ಮಸೂದೆಯೆಂದು ನಾನು ಬಾವಿಸಿಕೊಂಡಿದ್ದೆ. ಆದರೂ ಕೂಡ ಈ ತಿದ್ದುಪಡಿ ಮಸೂದೆಯು ರಾಜ್ಯಾಂಗಕ್ಕೆ ವಿರುದ್ಧವಾಗಿದೆ. ಈ ಬಗ್ಗೆ ಕೇಂದ್ರ ಸರ್ಕಾರ ಒಂದು ತಿದ್ದುಪಡಿ ಮಾಡಿದ ಮೇಲೆ ಇಲ್ಲಿ ಪುನಃ ತಿದ್ದುಪಡಿ ಮಾಡುವುದಕ್ಕೆ ಬರುವುದಿಲ್ಲ ಅನ್ನತಕ್ಕಂಥ ಒಂದು ವಾದವನ್ನು ಮಾನ್ಯ ಸದಸ್ಯರುಗಳು ಇಟ್ಟಿದ್ದಾರೆ. ಎರಡನೆಯದಾಗಿ ಮೂರು ವರ್ಷಗಳು ಎಂದು ಏನು ಗೊತ್ತು ಮಾಡಿದ್ದೀರಿ ಅದು ಈಗಿರುವ ಕಾಲಕ್ಕಿಂತ ಹೆಚ್ಚಾಗಿದೆ ಎಂದು ಹೇಳಿದ್ದಾರೆ. ಮೂರನೆಯದಾಗಿ ಇದುವರೆಗೆ ಯಾವ, ಯಾವ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದೀರಿ. ಅದರಲ್ಲಿ ಏನಾದರೂ ತಪ್ಪಾಗಿದ್ದರೆ, ಆ ತಪ್ಪನ್ನು ಸರಿಪಡಿಸಿಕೊಳ್ಳುವುದಕ್ಕೆ ತಿರುಗು ಮುರುಗು ಮಾಡಿ ಈ ತಿದ್ದುಪಡಿಯನ್ನು ತಂದಿದ್ದೀರಿ ಎಂದು ಹೇಳಿದರು. ನಾಲ್ಕನೆಯದಾಗಿ ರೈತರಿಗೆ ಸರಿಯಾದಂಥ ಪರಿಹಾರ ಕೊಡಬೇಕೆಂದು ತಮಗೆ ಇಚ್ಛೆಯಿದ್ದರೆ ಈ ರೀತಿ ತಿದ್ದುಪಡಿ ತಂದು ರೈತರ ಹಕ್ಕು ಬಾಧ್ಯತೆಗಳನ್ನು ಮೊಟಕು ಮಾಡಿ ಅವರಿಗೆ ಸಾಕಷ್ಟು ಹೆಚ್ಚಿನ ಪರಿಹಾರ ದೊರಕದಂತೆ ಮಾಡುತ್ತಿರಲಿಲ್ಲವೆಂದು ಹೇಳಿದರು. ಮೊದಲನೆಯದಾಗಿ ಕೇಂದ್ರ ಸರ್ಕಾರದವರು ಭೂಸ್ವಾಧೀನ ಮಾಡಿಕೊಳ್ಳಲು ಒಂದು ಕಾನೂನನ್ನು ಮಾಡಿಕೊಂಡಿದ್ದಾರೆ. ಅದೇ ಕಾನೂನನ್ನು ನಮ್ಮ ಮೈಸೂರು ಸಂಸ್ಥಾನಕ್ಕೆ ಅಳವಡಿಸಿಕೊಂಡಿಲ್ಲ. ನಮ್ಮ ಸಂಸ್ಥಾನಕ್ಕೆ ಸಂಬಂಧಪಟ್ಟಂತೆ ಕೇಂದ್ರದ ಭೂಸ್ವಾಧೀನ ಕಾನೂನನ್ನು ತಿದ್ದುಪಡಿ ಮಾಡಿಕೊಂಡಿದ್ದೇವೆ. ಆ ತಿದ್ದುಪಡಿಯಲ್ಲಿ ಈಗ ತಂದಿರತಕ್ಕಂಥ ತಿದ್ದುಪಡಿ ಇರಲಿಲ್ಲ. ಅದಕ್ಕೋಸ್ಕರ ಈ ರೀತಿ ತಿದ್ದುಪಡಿಮಾಡಿಕೊಳ್ಳುವುದಕ್ಕೆ ರಾಜ್ಯಾಂಗದ 246(2)ನೇ ವಿಧಿಯ ಪ್ರಕಾರ ನಮಗೆ ಹಕ್ಕಿದೆ. ಮತ್ತೆ ಈಗಿರುವ ಕಾಯಿದೆಯನ್ನು ತಿದ್ದುಪಡಿ ಮಾಡಲು ಸೆಕ್ಷನ್ 251ರಲ್ಲಿ ರಾಷ್ಟ್ರಾಧ್ಯಕ್ಷರ ಒಂದು ಅನುಮತಿಯನ್ನು ಪಡೆಯುವುದಕ್ಕೆ ಅವಕಾಶವಿದೆ. ಆ ಒಂದು ದೃಷ್ಟಿಯಿಂದ ಮಾನ್ಯ ಸದಸ್ಯರುಗಳು ಮೊದಲನೆಯ ವಾದ ಏನು ಮಾಡಿದರು ಅದು ರಾಜ್ಯಾಂಗಕ್ಕೆ ವಿರುದ್ಧವಾಗಿಲ್ಲ. ಕೇಂದ್ರ ಸರ್ಕಾರದಲ್ಲಿ ಅಂದರೆ ಪಾರ್ಲಿಮೆಂಟಿನಲ್ಲಿ ಈ ಬಗ್ಗೆ ತಿದ್ದುಪಡಿ ತಂದ ಮೇಲೆ, ಅದೇ ತಿದ್ದುಪಡಿ ಇಲ್ಲಿಗೂ ಅನ್ವಯಿಸುತ್ತದೆಂದು ಮಾನ್ಯ ಸದಸ್ಯರುಗಳು ಏನು ಹೇಳಿದ್ದಾರೆ. ಅದರಲ್ಲಿ ಏನೂ ಹುರಳಿಲ್ಲ. ತಿದ್ದುಪಡಿಯನ್ನು ಈ ಮಸೂದೆಯ ಬಗ್ಗೆ ತರಲು ಶಾಸನ ಸಭೆಗೆ ಹಕ್ಕಿದೆ. ಈ ತಿದ್ದುಪಡಿ ಇರಲಿಲವಾದ್ದರಿಂದ ಹೊಸದಾಗಿ ಅಳವಡಿಸಬೇಕಾಗಿ ಬಂತು. ಈ ರೀತಿಯ ಒಂದು ತಿದ್ದುಪಡಿಯನ್ನು ತರಬೇಕೆಂದು ಕೇಂದ್ರ ಸರ್ಕಾರದವರಿಗೆ ಸುಪ್ರೀಂ

* ವಿಧಾನ ಸಭಾ ನಡವಳಿಕೆ ದಿನಾಂಕ 11ನೇ ಡಿಸೆಂಬರ್, 1967 ಪುಟ 315-319

ಕೋರ್ಟಿನವರು ತೀರ್ಮಾನ ಕೊಟ್ಟ ಮೇಲೆ ಮುಂದೆ ನಮ್ಮ ಸಂಸ್ಥಾನಕ್ಕೂ ಅದೇ ರೀತಿಯ ಪರಿಸ್ಥಿತಿಯು ಉದ್ಭವಿಸಬಹುದು ಎಂಬುದಾಗಿ ತಿಳಿದುಕೊಂಡು ಮುನ್ನೆಚ್ಚರಿಕೆಯಾಗಿ ಈ ತಿದ್ದುಪಡಿಯನ್ನು ಎರಡನೆಯ ಕ್ಲಾಸ್‌ನಲ್ಲಿ ಸೆಕ್ಷನ್ ಆರಕ್ಕೆ ತಂದಿದ್ದೇವೆ. ಬಹುಶಃ ಎಲ್ಲಿಯಾದರೂ ಭೂಮಿಯನ್ನು ಸ್ವಾಧೀನಪಡಿಸಿ ಕೊಳ್ಳಬೇಕಾಗಿದ್ದರೆ ಹತ್ತಾರು ಸರ್ವೆನಂಬರ್ ಗಳನ್ನು ಒಳಗೊಂಡು ಹೆಚ್ಚು ವಿಸ್ತಾರವಾದ ಪ್ರದೇಶಗಳನ್ನು ಸಾರ್ವಜನಿಕ ಉದ್ದೇಶಕ್ಕೋಸ್ಕರ ಬೇಕಾಗಿದೆ ಎಂದು ಗೆಜೆಟ್‌ನಲ್ಲಿ ಪ್ರಕಟಣೆ ಮಾಡುತ್ತೇವೆ. ಅದರ ಉದ್ದೇಶ ಇಷ್ಟೆ; ಆ ಪ್ರದೇಶವನ್ನು ಯಾವ ಭೂಮಾಲೀಕರು ಕೊಂಡುಕೊಳ್ಳಬಾರದು, ಕೊಂಡರ ಮುಂದೆ ಅವರಿಗೆ ಹೆಚ್ಚಿನ ಪರಿಹಾರ ದೊರಕುವುದಿಲ್ಲ ಎನ್ನುವ ದೃಷ್ಟಿಯಿಂದ ಆ ರೀತಿಯ ಪ್ರಕಟಣೆಯನ್ನು ಸೆಕ್ಷನ್ 4(1)ರ ಪ್ರಕಾರ ಮಾಡುತ್ತೇವೆ. ಈ ರೀತಿ ಪ್ರಕಟಣೆ ಮಾಡಿದ ಮೇಲೆ ಆ ಪ್ರದೇಶದ ಯಾವುದಾದರೂ ಒಂದು ಸರ್ವೆ ನಂಬರ್‌ನವರು ಅಂದರೆ ಆ ಪ್ರದೇಶದ ಭೂಮಾಲೀಕ ನ್ಯಾಯಾಲಯದಲ್ಲಿ ರಿಟ್‌ಹಾಕಿ ತಡೆಯಾಜ್ಞೆಯನ್ನು ತಂದರೆ, ಆ ಪ್ರಕಟಣೆಯಲ್ಲಿ ಒಳಗೊಂಡಿರತಕ್ಕ ಬೇರೆ ಸರ್ವೆ ನಂಬರ್‌ಗಳ ಜಮೀನಿನಲ್ಲಿ ಕೆಲಸವನ್ನು ನ್ಯಾಯಾಲಯದಲ್ಲಿ ತೀರ್ಮಾನವಾಗುವವರೆಗೂ ನಿಲ್ಲಿಸಬೇಕಾಗುತ್ತದೆ. ಮಾನ್ಯ ಸದಸ್ಯರುಗಳಿಗೆ ಗೊತ್ತಿದೆ. ಕೈಗಾರಿಕೆಗಳಿಗೋಸ್ಕರ ರಸ್ತೆಗಳನ್ನು, ರಸ್ತೆಗಳನ್ನು ಮಾಡಿಸುವುದಕ್ಕೋಸ್ಕರ, ನೀರಾವರಿ ಯೋಜನೆಗಳನ್ನು ಕೈಗೊಳ್ಳುವುದಕ್ಕೋಸ್ಕರ ಮತ್ತು ಇನ್ನಿತರ ಸಾರ್ವಜನಿಕರ ಉಪಯೋಗಕ್ಕಾಗಿ ಭೂಸ್ವಾಧೀನ ಮಾಡಿಕೊಳ್ಳಬೇಕಾಗಿ ಬರುತ್ತದೆ. ಭೂ ಸ್ವಾಧೀನ ಮಾಡಿಕೊಳ್ಳುವ ಸಮಯದಲ್ಲಿ ಸಂಬಂಧಪಟ್ಟ ಭೂಮಾಲೀಕರಿಗೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟು ಒಂದು ನಿಗಧಿಯಾದ ಪ್ರಮಾಣದಲ್ಲಿ ಪರಿಹಾರಧನವನ್ನು ಕೊಡಬೇಕೆಂಬುದೇ ರಾಜ್ಯಾಂಗದ ಮೂಲ ಉದ್ದೇಶವಾಗಿದೆ. 5ನೇ ಸೆಕ್ಷನ್ ಪ್ರಕಾರ ಭೂಸ್ವಾಧೀನ ಮಾಡಿಕೊಳ್ಳಬೇಕೆಂದು ಪ್ರಕಟಣೆ ಹೊರಡಿಸಿದಾಗ, ಸಂಬಂಧಪಟ್ಟ ಭೂಮಾಲೀಕರು ತಮ್ಮ ಹೇಳಿಕೆಯನ್ನು ಕೊಡಲು 45 ದಿವಸಗಳ ಕಾಲ ಸಮಯವಿದೆ. ಸೆಕ್ಷನ್ 6ರ ಪ್ರಕಾರ ಮತ್ತೆ 3 ತಿಂಗಳ ಅವಕಾಶವಿದೆ.

ಶ್ರೀ ಪಿ.ವಿ. ಐತಾಳ - ತಾವು ಎಲ್ಲಾ ಸೆಕ್ಷನ್‌ಗಳನ್ನೂ ಸಹ ಸರಿಯಾಗಿ ಓದಿನೋಡಿ?

ಶ್ರೀ ಬಿ. ರಾಚಯ್ಯ - ನಾನು ಎಲ್ಲಾ ಸೆಕ್ಷನ್‌ಗಳನ್ನೂ ಸಹ ಓದಿದ್ದೇನೆ. ಇಷ್ಟೆ ದಿನಗಳಲ್ಲಿ ಇಷ್ಟೇ ವಾರಗಳಲ್ಲಿ, ಇಷ್ಟೆ ತಿಂಗಳುಗಳಲ್ಲಿ ಹೇಳಿಕೆಯನ್ನು ಕೊಡಬೇಕೆಂದು ಹೇಳಿಲ್ಲ. ಈ ಸಭೆಯಲ್ಲಿ ಅನೇಕ ಜನ ವಕೀಲರಿದ್ದಾರೆ. ಅವರೆಲ್ಲಾ ಓದಿದ್ದಾರೆ.

ಶ್ರೀ ಪಿ.ವಿ. ಐತಾಳ - ಸೆಕ್ಷನ್ 6ನ್ನು ಓದಿನೋಡಿ.

ಶ್ರೀ ಬಿ. ರಾಚಯ್ಯ - ನಾನು ಓದಿದ್ದೇನೆ. ಅದು ಒಂದೂವರೆ ಪೇಜ್ ಇದೆ. ಈಗ ಸಮಯವಿಲ್ಲ. ಈಗಿರುವ ಹಳೆಯ ಕೇಸ್‌ಗಳ ಬಗ್ಗೆ ಪ್ರಕಟಣೆಯ ನಂತರ 3 ವರ್ಷದಲ್ಲಿ ಹೇಳಿಕೆ ಕೊಡಲು ಸಮಯವಿದೆ.

ಈಗ ಇರುವಂಥ ಪೆಂಡಿಂಗ್ ಕೇಸುಗಳು ಮೂರುವರ್ಷಗಳೊಳಗಾಗಿ ಮುಗಿಯಬೇಕು ಎಂದಿದೆ. ಭೂಸ್ವಾದೀನ ಕೇಸ್‌ಗಳ ಬಗ್ಗೆ ಮೂರು ವರ್ಷದೊಳಗಾಗಿ ಫೈನಲ್ ನೋಟಿಫಿಕೇಷನ್ ಮಾಡಬೇಕು ಎಂದು ಇದೆ. ಈ ಕಾನೂನು ಜಾರಿಗೆ ಬಂದ ಮೇಲೆ ಎರಡು ವರ್ಷದೊಳಗಾಗಿ ಫೈನಲ್ ನೋಟಿಫಿಕೇಷನ್ ಮಾಡಬೇಕು ಎಂದಿದೆ. ಒಂದು ವಿಷಯವನ್ನು ಶ್ರೀಮಾನ್ ಕೊಠಾವಳೆಯವರು ತಿಳಿಸಿದ್ದಾರೆ. ಪೆಂಡಿಂಗ್ ಕೇಸಸ್ ವಿಚಾರದಲ್ಲಿ 1960ನೇ ಇಸವಿಯಲ್ಲಿ 4(1) ಕಲಮು ಪ್ರಕಾರ ಪ್ರಕಟಣೆ ಹೊರಡಿಸದೇ ಇದ್ದ ಪಕ್ಷದಲ್ಲಿ ಫೈನಲ್ ನೋಟಿಫಿಕೇಷನ್ ಆಗದೇ ಇದ್ದರೆ ಇನ್ನು ಎರಡು ವರ್ಷಗಳಲ್ಲಿ , ಅಂದರೆ 1969ರ ಒಳಗಾಗಿ ಫೈನಲ್ ನೋಟಿಫಿಕೇಷನ್ ಸೆಕ್ಷನ್ 6ರ ಪ್ರಕಾರ ಪ್ರಕಟಣೆ ಮಾಡಬೇಕು ಎಂದು ಹೇಳಿದೆ. 1960 ರಿಂದ 1963ರವರೆಗೆ ಹಾಗೂ 1969ರ ಒಳಗಾಗಿ ಕ್ಯಾಂಪನ್‌ಸೇಷನ್ ಮೊತ್ತಕ್ಕೆ 6 ಪರ್ಸೆಂಟ್ ಬಡ್ಡಿ ಸೇರಿಸಿ ಕೊಡಬೇಕು ಎಂದು ಮಾಡಿದ್ದೇವೆ. ಭೂಮಾಲೀಕರಿಗೆ ಶೇಕಡ 6ರಷ್ಟು ಬಡ್ಡಿ ಕೊಡುವುದನ್ನು ಹೊಸದಾಗಿ ಸೇರಿಸಿದ್ದೇವೆ. ಭೂಮಿ ಕಳೆದು ಕೊಂಡವರಿಗೆ ಪರಿಹಾರ ದೊರೆಯುವುದು ನಿಧಾನವಾದರೂ ಕೂಡ ಬಡ್ಡಿ ತಲುಪಲಿ ಎಂದೂ ಕೊನೆಯ ಪಕ್ಷ ಮೂರು ವರ್ಷಗಳಲ್ಲಿ ಇದನ್ನು ಮುಗಿಸಬೇಕು ಎಂದು ಪರಮಾವಧಿ ಕಾಲವನ್ನು ಗೊತ್ತು ಮಾಡಿದ್ದೇವೆ. ಆರು ತಿಂಗಳು ಅಥವಾ 8 ತಿಂಗಳೊಳಗಾಗಿ ಇಲ್ಲವೇ ಒಂದು ವರ್ಷದೊಳಗಾಗಿ ಇದನ್ನು ಮುಗಿಸಬೇಕು ಎಂದು ಸರ್ಕಾರದ ಉದ್ದೇಶವಿದೆ.

ಶ್ರೀ ಎಚ್. ಸಿದ್ದವೀರಪ್ಪ - ಆರು ಪರ್ಸೆಂಟ್ ಬಡ್ಡಿ ನಿಮಗೆ ಸಿಕ್ಕುತ್ತದೇನು?

ಶ್ರೀ ಬಿ. ರಾಚಯ್ಯ - ಹಳೇ ಕಾಯಿದೆ ಪ್ರಕಾರ 4 ಪರ್ಸೆಂಟ್ ಇದ್ದುದನ್ನು ಈಗ 6 ಪರ್ಸೆಂಟ್ ಮಾಡಿದೆ. ಹಿಂದಿನ ಕಾಯಿದೆ ಗಿಂತ ಇದು ಉತ್ತಮವಾಗಿದೆ. ಇದಲ್ಲದೆ ಕಾಲಾವಧಿಯನ್ನು ಕೂಡ ಗೊತ್ತು ಮಾಡಿದೆ, ಮೂರು ವರ್ಷದೊಳಗೆ ಫೈನಲ್ ನೋಟಿಫಿಕೇಷನ್ ಮಾಡುವುದಕ್ಕೆ ಸಂದರ್ಭ ಬಂದರೆ ಅದನ್ನು ಕ್ಯಾನ್ಸಲ್ ಮಾಡಿ 4(1) ಪ್ರಕಾರ ಹೊಸ ಪ್ರಕಟಣೆ ಮಾಡಬೇಕೆಂದು ನಿಗಧಿಮಾಡಿದ್ದೇವೆ. ಕೋರ್ಟಿಗೆ ಹೋದಂಥ ಕಾಲವಿದ್ದರೆ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳಬಾರದು. ಕೋರ್ಟಿನ ಕಾಲಾವಧಿಗೆ ಬಡ್ಡಿ ಕೊಡಬಾರದು ಎಂದು ಇದರಲ್ಲಿ ಸೇರಿಸಿದ್ದೇವೆ. ಮೈಸೂರು ಸಂಸ್ಥಾನದಲ್ಲಿ ವಿವಿಧ ಕಾರ್ಯಗಳ ಬಗ್ಗೆ ಭೂಸ್ವಾಧೀನ ಮಾಡಿಕೊಳ್ಳಬೇಕಾಗಿದೆ. ಸಾರ್ವಜನಿಕ ಸಂಸ್ಥೆಗಳ ಹಿತಕ್ಕೋಸ್ಕರ ಸರಕಾರ ಈ ಕೆಲಸ ಮಾಡಬೇಕಾದ ಪರಿಸ್ಥಿತಿ ಬಂದಿದೆ. ಇಂಥ ಸಂದರ್ಭದಲ್ಲಿ ದೊಡ್ಡ ದೊಡ್ಡ ಭೂಮಾಲೀಕರು ಕೂಡ ಭೂಮಿ ಕಳೆದುಕೊಳ್ಳಲಿಕ್ಕೆ ತಯಾರು ಇರುವುದಿಲ್ಲ. ಏನಾದರೂ ತಕರಾರು ಹಾಕಿ ಭೂಮಿ ಉಳಿಸಿಕೊಳ್ಳುವುದಕ್ಕೆ ಕೋರ್ಟಿಗೆ ಹೋಗುತ್ತಾರೆ. ಕೆಲವು ಸಂದರ್ಭದಲ್ಲಿ ನಮ್ಮ ಯೋಜನೆಯ ಕೆಲಸ ನಿಲ್ಲಿಸಬೇಕಾಗಿದೆ. ಒಟ್ಟಿನಲ್ಲಿ ನಮ್ಮ ಯೋಜನೆಯ ಕೆಲಸ ಸಕಾಲದಲ್ಲಿ ಮಾಡಿ ಪ್ರಾರಂಭಿಸಲು ಒಂದು ಕಾಲ ಪರಿಮಿತಿಯ ಪರಮಾವಧಿ ಅವಕಾಶ ಇಲ್ಲದೆ ಇರುವುದರಿಂದ ಇದಕ್ಕೆ ಒಂದು ಪ್ರಾವಿಜನ್ ಮಾಡಬೇಕಾಗಿದೆ. ಆದುದರಿಂದ ಎರಡು ವರ್ಷ, ಮೂರು ವರ್ಷ ಎಂದು ಅವಧಿ ಗೊತ್ತು ಮಾಡಿದ್ದೇವೆ. ಇದಲ್ಲದೆ ಬಡ್ಡಿ ನಿಷ್ಕರ್ಷೆ ಸಹ ಮಾಡಿದ್ದೇವೆ. ಹಿಂದಿನ ಕಾಯಿದೆಗಿಂತಲೂ

ಈ ಹೊಸ ಕಾಯಿದೆಯಿಂದ ರೈತರಿಗೆ ಸ್ವಲ್ಪ ಮಟ್ಟಿಗೆ ಅನುಕೂಲವಾಗುತ್ತದೆ. ಸಾರ್ವಜನಿಕ ಕಾರ್ಯಗಳಿಗೆ ಬೇಕಾದಂಥ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲು ಸ್ವಲ್ಪ ಮಟ್ಟಿಗೆ ಇದರಿಂದ ಅವಕಾಶವಾಗುತ್ತದೆ. ಈಗ ಇರತಕ್ಕ ಭೂಸ್ವಾಧೀನ ಕಾನೂನಿನಲ್ಲಿ ಅನೇಕ ತೊಂದರೆಗಳಿವೆ. ತಮ್ಮ ಪಕ್ಷದ ಜನರಿಗೆ ಅನುಕೂಲ ಮಾಡಿಕೊಡುವ ದೃಷ್ಟಿಯಿಂದ ಮತ್ತು ತಮಗೆ ಬೇಡವಾದವರಿಗೆ ಕಿರುಕುಳ ಕೊಟ್ಟು ಅನಾನುಕೂಲ ಮಾಡುವ ಇಚ್ಛೆಯಿಂದ ಈ ರೀತಿ ಮಾಡಲಾಗಿದೆ ಎಂದು ನಮ್ಮ ಮೇಲೆ ಕೆಲವರು ಆರೋಪಮಾಡಿದರು. ಆದರೆ ನಮ್ಮ ಸಂಸ್ಥಾನದಲ್ಲಿ ಭೂಸ್ವಾಧೀನ ಮಾಡತಕ್ಕಂಥವರು ಬಹಳ ಜನ ಅಧಿಕಾರಿಗಳಿದ್ದಾರೆ. ಎಲ್ಲರೂ ಈ ರೀತಿ ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಳ್ಳುತ್ತಾರೆಂದು ನಾನು ಭಾವಿಸಿಕೊಂಡಿಲ್ಲ. ಈಗ ಈ ಕೆಲಸ ತೀವ್ರಗತಿಯಿಂದ ಆಗಬೇಕಾಗಿದೆ. ಕೆಲವು ಅನಿವಾರ್ಯ ತೊಂದರೆಗಳು ಬರುತ್ತವೆ. ಮಂಗಳೂರು ಬಂದರಿನ ವಿಷಯದಲ್ಲಿ ಭೂಸ್ವಾಧೀನ ಮಾಡಿಕೊಳ್ಳುವುದಕ್ಕೆ ಇರತಕ್ಕ ತೊಂದರೆಗಳನ್ನು ಕೆಲವು ಸದಸ್ಯರು ಈ ಸಭೆಯ ಮುಂದೆ ಇಟ್ಟಿದ್ದಾರೆ. ಇದರ ಬಗ್ಗೆ ಸೂಕ್ತ ಕ್ರಮ ತೆಗೆದುಕೊಂಡು ಕಾಗದ ಪತ್ರಗಳನ್ನು ಕಳಿಸಿಕೊಟ್ಟಿದ್ದೇವೆ. ಮೊದಲನೇ ಹಂತದಲ್ಲಿ 1,300 ಚಿಲ್ಲರೆ ಎಕರೆ ಆಕ್ವೈರ್ ಮಾಡಿ ಎರಡನೆಯ ಹಂತದಲ್ಲಿ 836 ಎಕರೆ ಭೂಮಿ ಬಂದರಿಗೋಸ್ಕರ ಭೂಸ್ವಾಧೀನ ಮಾಡಿಕೊಳ್ಳುವುದಕ್ಕೆ ಸೂಕ್ತ ಕ್ರಮ ತೆಗೆದುಕೊಳ್ಳುತ್ತಾ ಇದ್ದೇವೆ. ಇಷ್ಟು ವಿಸ್ತೀರ್ಣ ಜಮೀನನ್ನು ಸ್ವಾಧೀನಪಡಿಸಿಕೊಳ್ಳತಕ್ಕಂಥ ಕಾಲದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಭೂಮಾಲೀಕರಿಗೆ ಪರಿಹಾರ ಇನ್ನೂ ಕೊಟ್ಟಿಲ್ಲ ಎಂದು ನನಗೆ ಅನಿಸುತ್ತದೆ. ಆದರೆ ಸೂಕ್ತ ಪರಿಹಾರ ಕೊಡುವುದಕ್ಕೆ ವ್ಯವಸ್ಥೆ ಮಾಡಿದ್ದೇವೆ. ಒಂದು ಕಡೆಯಿಂದ ಇನ್ನೊಂದು ಕಡೆ ಹೋಗಿ ನೆಲೆಸಲು ಪುನರ್ ವಸತಿ ವ್ಯವಸ್ಥೆ ಮಾಡಲು ಎಲ್ಲ ಕ್ರಮ ತೆಗೆದುಕೊಳ್ಳಲಾಗಿದೆ. ಅವರ ಸಾಮಾನು ಸಾಗಾಣಿಕೆ ಕೂಡ ಲಾರಿ ಸೌಕರ್ಯ ಒದಗಿಸಿಕೊಟ್ಟಿದ್ದೇವೆ. ಪುನರ್ ವಸತಿಗೆ ನೆರವಾಗಿದ್ದೇವೆ. ಹೊಸ ಸ್ಥಳದಲ್ಲಿ ವ್ಯವಸ್ಥೆ ಮಾಡುವಾಗ ಶಾಲೆಕಟ್ಟಡ ಮುಂತಾದ ಅನೇಕ ರೀತಿಯ ಸೌಲಭ್ಯಗಳನ್ನು ಸಹ ಒದಗಿಸಿಕೊಟ್ಟಿದ್ದೇವೆ. ಮೈಸೂರು ಸಂಸ್ಥಾನಕ್ಕೆ ರಾಜ್ಯದ ಹಿತ ದೃಷ್ಟಿಯಿಂದ ಒಂದು ದೊಡ್ಡ ಬಂದರು ಬೇಕಾಗಿದೆ. ಆದುದರಿಂದ ಕೋಟ್ಯಾಂತರ ರೂಪಾಯಿ ಖರ್ಚುಮಾಡಿ ಮಂಗಳೂರನ್ನು ಬೃಹತ್ ಬಂದರನ್ನಾಗಿ ತಯಾರು ಮಾಡುವಂಥ ಕಾಲದಲ್ಲಿ ಭೂಸ್ವಾಧೀನ ಮಾಡುವ ಕೆಲಸ ಒಂದು ಹೆಚ್ಚಿನ ಕೆಲಸವಾಗಿದೆ. ಇದಕ್ಕಾಗಿ ಒಬ್ಬ ಸ್ಪೆಷಲ್ ಆಫೀಸರ್ ನೇಮಕ ಮಾಡಿದೆ. ಭೂಸ್ವಾಧೀನ ಮಾಡಿಕೊಂಡ ಬಗ್ಗೆ ಜನರಿಗೆ ಲಕ್ಷಾಂತರ ರೂಪಾಯಿ ಪರಿಹಾರ ಕೊಟ್ಟಿದ್ದೇವೆ. ಇಲ್ಲಿ ಕೆಲಸ ತೀವ್ರಗತಿಯಿಂದ ದಕ್ಷತೆ ಮಾಡಿದ್ದೇವೆಂದು ಮೆಚ್ಚಿಗೆಯನ್ನು ಈ ಸಭೆಯಲ್ಲಿ ಅನೇಕರು ವ್ಯಕ್ತಪಡಿಸಿದ್ದಾರೆ. ಈ ಮಸೂದೆಗೆ ಸಂಬಂಧಪಟ್ಟಹಾಗೆ ಮಾನ್ಯ ಸದಸ್ಯರು ಏನೇನು ವಿಷಯ ಪ್ರಸ್ತಾಪ ಮಾಡಿದ್ದರೋ ಅದಕ್ಕೆ ನಾನು ಉತ್ತರಕೊಟ್ಟಿದ್ದೇನೆ. ಬಹುಶಃ ಇನ್ನು ಮುಂದೆ ನಮಗೆ ಬರುವಂಥ ಅನುಭವದಿಂದ ಅನೇಕ ರೀತಿಯಿಂದ ಇದರಲ್ಲಿ ತಿದ್ದುಪಡಿ ಮಾಡಬೇಕಾಗಬಹುದು. ಇದಕ್ಕೆ ಅವಕಾಶ ಇದೆ. ಈ ಮಸೂದೆಯನ್ನು ಕೂಲಂಕುಷವಾಗಿ ಪರಿಶೀಲನೆ ಮಾಡುವುದಕ್ಕಾಗಿ ಒಂದು ಜಾಯಿಂಟ್ ಸೆಲೆಕ್ಟ್ ಕಮಿಟಿಗೆ ಕಳುಹಿಸಿಕೊಡಿ ಎಂದು ಮಾನ್ಯ ಸದಸ್ಯರಾದ ಸಿದ್ದವೀರಪ್ಪನವರು ಮತ್ತು ವಿರೋಧ ಪಕ್ಷದ

ನಾಯಕರು ತಿಳಿಸಿದರು. ಆದರೆ ಅವರಿಗೆ ನಾನು ನಮ್ರತೆಯಿಂದ ಒಂದು ಮಾತನ್ನು ಕೇಳಿ ಕೊಳ್ಳುತ್ತೇನೆ ಭೂ ಸ್ವಾಧೀನ ಪಡಿಸಿಕೊಳ್ಳಲು ಕ್ರಮ ತೆಗೆದುಕೊಳ್ಳಲು ಕಾನೂನಿನಲ್ಲಿ ಏನಾದರೂ ಲೋಪದೋಷಗಳಿದ್ದರೆ ಜನರು ನೇರವಾಗಿ ತಕರಾರು ಮಾಡಿ ನ್ಯಾಯಾಲಯಗಳಿಗೆ ಹೋಗುವುದರಿಂದ ಕೆಲಸ ನಿಂತು ಹೋಗುವುದಕ್ಕೆ ಅವಕಾಶವಾಗುತ್ತದೆ. ಆದುದರಿಂದ ನಮ್ಮ ಪ್ರಗತಿಯ ದೃಷ್ಟಿಯಿಂದ ತಾವು ಈ ತಿದ್ದುಪಡಿಗೆ ತಮ್ಮ ಒಪ್ಪಿಗೆಯನ್ನು ಕೊಡಬೇಕು. ಮತ್ತೆ ತೊಂದರೆಗಳೇನಾದರೂ ಇದ್ದ ಪಕ್ಷದಲ್ಲಿ ಮುಂದಿನ ಸಾರಿ ವಿಶದವಾಗಿ ತಾವು ಏನು ಹೇಳುತ್ತೀರಿ ಆ ರೀತಿ ಕೆಲವಾರು ತಿದ್ದುಪಡಿಗಳನ್ನು ಬೇರೆ ರೂಪದಲ್ಲಿ ತರುವುದಕ್ಕೆ ಪ್ರಯತ್ನ ಮಾಡುತ್ತೇನೆ.

ಇಷ್ಟು ಹೇಳಿ ತಾವು ಈ ಮಸೂದೆಗೆ ಒಪ್ಪಿಗೆಯನ್ನು ಸರ್ವಾನುಮತದಿಂದ ಕೊಡಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

# 1968-69ರ ಆಯವ್ಯಯ ಅಂದಾಜು ಅರಣ್ಯ ಮತ್ತು ಕಂದಾಯ ಇಲಾಖೆಗಳಿಗೆ ಸಂಬಂಧಪಟ್ಟ ಬೇಡಿಕೆಗೆ ಸರ್ಕಾರದ ಉತ್ತರ*

ಶ್ರೀ ಬಿ. ರಾಚಯ್ಯ (ಅರಣ್ಯ ಮತ್ತು ಕಂದಾಯ ಮಂತ್ರಿಗಳು) ಮಾನ್ಯ ಸಭಾಪತಿಯವರೇ, ಕಂದಾಯ ಮತ್ತು ಅರಣ್ಯ ಇಲಾಖೆಗಳಿಗೆ ಸಂಬಂಧಪಟ್ಟ ಹಾಗೆ ಮೂರು ದಿವಸಗಳಿಂದಲೂ ಆಗುತ್ತಿರುವ ಚರ್ಚೆಯನ್ನೂ ಹಾಗೂ ಮುಂಗಡ ಪತ್ರದ ಮೇಲೆ ಮಾನ್ಯ ಸದಸ್ಯರು ಭಾಷಣಗಳನ್ನು ಮಾಡಿರುವುದನ್ನೂ ನಾನು ಕೇಳಿದ್ದೇನೆ. ಆ ರೀತಿಯಾಗಿ ಭಾಷಣ ಮಾಡಿದಂಥ ಈ ಸಭಾ ಸದಸ್ಯರೆಲ್ಲರಿಗೂ ಕೂಡ ನಾನು ಮೊಟ್ಟ ಮೊದಲನೆಯದಾಗಿ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ. ಈ ಬೇಡಿಕೆಗಳ ಮೇಲೆ ಸುಮಾರು 151 ಖೋತಾ ಸೂಚನೆಗಳು ಬಂದಿವೆ. ಸುಮಾರು 28 ಜನ ಮಾನ್ಯ ಸದಸ್ಯರು ಈ ಇಲಾಖೆಗಳಲ್ಲಿ ಮಾಡಿರತಕ್ಕ ಕೆಲಸದ ಮೇಲೆ ಬೆಳಕನ್ನು ಚೆಲ್ಲಿದ್ದಾರೆ. ಈ ಖೋತಾ ಸೂಚನೆಗಳಲ್ಲಿ ಅಡಕವಾಗಿರತಕ್ಕ ಅಂಶಗಳು ಮತ್ತು ಈ ಮಾನ್ಯ ಸಭೆಯಲ್ಲಿ ಸದಸ್ಯರುಗಳು ಮಾಡಿದಂಥ ವಿಷಯಗಳು ಅವುಗಳ ಬಗ್ಗೆ ಪ್ರತಿಯೊಂದಕ್ಕೂ ಕೂಡ ಪ್ರತಿಯೊಬ್ಬರಿಗೂ ಉತ್ತರ ಕೊಡುವುದು ಸ್ವಲ್ಪಮಟ್ಟಿಗೆ ಕಷ್ಟವಾದರೂ ಕೂಡ ಅವುಗಳನ್ನು ಸ್ಥೂಲವಾಗಿ ವಿಂಗಡಣೆ ಮಾಡಿಕೊಂಡಿದ್ದೇನೆ. ಬಹುಮುಖ್ಯವಾಗಿ ಅಂದರೆ, ಮೊಟ್ಟ ಮೊದಲನೆಯದಾಗಿ ಈ ಖೋತಾ ಸೂಚನೆಗಳ ಸಂಬಂಧವಾಗಿ ಸುಮಾರು ಹತ್ತು ಜನ ಸದಸ್ಯರು ಕೇವಲ ಭೂಸುಧಾರಣೆ ಮೇಲೆ ಮಾತನಾಡಿದ್ದಾರೆ.

ಭೂಸುಧಾರಣೆಯನ್ನು ಜಾರಿಗೆ ತರತಕ್ಕದ್ದರಲ್ಲಿ ಸರ್ಕಾರ ವಿಳಂಬ ಮಾಡಿದೆ. ಸರ್ಕಾರಕ್ಕೆ ಆಸಕ್ತಿ ಇದೆಯೋ ಇಲ್ಲವೋ ಏನೋ ಎನ್ನುವ ರೀತಿಯಲ್ಲಿ ಮಾನ್ಯ ಸದಸ್ಯರು ಭಾಷಣ ಮಾಡಿದರು. ಶ್ರೀಮಾನ್ ಸಿದ್ದಯ್ಯನವರು, ಶ್ರೀ ಬೊಮ್ಮಾಯಿಯವರು, ಶ್ರೀ ವೆಂಕಟಗಿರಿಯಪ್ಪನವರು ಮತ್ತು ಇನ್ನೂ ಅನೇಕ ಸದಸ್ಯರು ಭೂಮಿಯ ಒಂದು ಪರಮಾವಧಿಯನ್ನು ಏನು ಗೊತ್ತು ಮಾಡಿದ್ದಾರೆ. ಆ ಪರಮಾವಧಿ ಪ್ರಕಾರ ಬಹುಶಃ ಈಗಿರುವಂತಹದನ್ನು ಒಪ್ಪಿಕೊಳ್ಳಬೇಕಾದರೆ ಹೆಚ್ಚು ಜನಗಳಿಗೆ ಅದಕ್ಕಿಂತ ಹೆಚ್ಚಿಗೆ ಭೂಮಿ ಸಿಕ್ಕಲಾರದು ಎಂದು ಹೇಳಿದರು. ಶ್ರೀಮಾನ್ ಶೆಟ್ಟರು ಕೂಡ ಹೀಗೆಯೇ ತಿಳಿಸಿದರು. ಬಹುಶಃ 20 ವರ್ಷಗಳಿಂದ ಉಳುವವರಿಗೆ ಭೂಮಿಯ ಒಡೆತನ ಕೊಡಬೇಕೆಂದು ಹೇಳಿ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದ ಮೇಲೆ ಅನೇಕ ಗೇಣಿಶಾಸನಗಳನ್ನು ಅನೇಕ ರಾಜ್ಯಗಳಲ್ಲಿ ಜಾರಿಗೆ ತಂದರು. ಮೈಸೂರಿನ ಐದು ಭಾಗಗಳಲ್ಲಿ ಅನೇಕ ಗೇಣಿ ಶಾಸನಗಳು ಇದ್ದು ಅವುಗಳನ್ನು ಒಟ್ಟುಗೂಡಿಸಿ ಒಂದು ಸಮನ್ವಯ ಕಾಯಿದೆ ಮಾಡಬೇಕು ಎಂದು ಜತ್ತಿಯವರ ಸಮಿತಿಯನ್ನು ನೇಮಕಮಾಡಿ ಅವರು ಶಿಫಾರಸ್ಸು ಮಾಡಿದರು. 1961ನೇ ಇಸವಿಯಲ್ಲಿ ಒಂದು ಕಾಯಿದೆ ಆಯಿತು. ಆ ಕಾಯಿದೆಯಲ್ಲಿ ಕೆಲವು ತಿದ್ದುಪಡಿಗಳನ್ನು 12-10-1965ರಲ್ಲಿ ಮಾಡಿದರು. ಅವು ಜಾರಿಯಲ್ಲಿವೆ. 66-67ರಲ್ಲಿ ಈ ಕಾಯಿದೆಯಲ್ಲಿರುವಂಥ 14ನೇ ಸೆಕ್ಷನ್ ಪ್ರಕಾರ ಭೂಮಾಲೀಕರು ಸ್ವಂತ ಸಾಗುವಳಿಗೆ ಭೂಮಿಯನ್ನು ವಾಪಸು ತೆಗೆದುಕೊಳ್ಳಬೇಕಾದರೆ ಕಾಲವನ್ನು

---

* ವಿಧಾನ ಸಭೆ ನಡವಳಿಕೆ ದಿನಾಂಕ 14ನೇ ಮಾರ್ಚ್, 1968 ಪುಟ 706-725

ವಿಸ್ತರಿಸಬೇಕು. ಅದೇ ರೀತಿ ಗೇಣಿದಾರರಿಗೂ ಅವರ ಹಕ್ಕನ್ನು ಕಾಪಾಡಿಕೊಳ್ಳುವುದಕ್ಕೆ ಇವತ್ತಿನ ದಿವಸ ಅವಕಾಶ ಮಾಡಿ ಕೊಡಬೇಕೆಂದು ಒಂದು ತಿದ್ದುಪಡಿಯನ್ನು ತಂದಿದ್ದೆವು. ಈ ಕಾಯಿದೆಯನ್ನು ಜಾರಿಗೆ ತರುವಂಥ ಕಾಲದಲ್ಲಿ ನಮಗೆ ಅನೇಕ ತೊಂದರೆಗಳು ಕಾಣುತ್ತಿವೆ. ಬಹು ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಕೊಡಗು, ಕೊಳ್ಳೇಗಾಲ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ರೆಕಾರ್ಡ್ಸ್ ಆಫ್ ರೈಟ್ಸ್ ಇರಲಿಲ್ಲ. ಅವುಗಳನ್ನು ಬಹು ಮಟ್ಟಿಗೆ ಅಪ್ ಟುಡೇಟ್ ಮಾಡಬೇಕಾಗಿದ್ದರೆ ಕಷ್ಟವಾಗಿತ್ತು. ಎಲ್ಲಾ ರೆಕಾಡ್‌ರ್ಡ್ಸ್ ಆಫ್ ರೈಟ್ಸ್‌ಗಳನ್ನು ಇಂಟ್ರಡ್ಯೂಸ್ ಮಾಡಿ ಅವರವರ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಬಾರದ ರೀತಿಯಲ್ಲಿ ನೋಡಿಕೊಳ್ಳಬೇಕು ಎಂದು ಈ ವಿಷಯ ತೀವ್ರ ಗಮನ ಕೊಟ್ಟು ಸಂಬಂಧಪಟ್ಟ ಸಿಬ್ಬಂದಿಯನ್ನು ನೇಮಕಮಾಡಿ ಆ ಕೆಲಸ ತೀವ್ರತೆಯಿಂದ ನಡೆಯುತ್ತಿದೆ.

ಇನ್ನು ಭೂಸುಧಾರಣಾ ಕಾನೂನಿಗೆ ಸಂಬಂಧಪಟ್ಟ ಹಾಗೆ ಜಮೀನಿನ ಮಾಲಿಕತ್ವಕ್ಕೆ ಸಂಬಂಧಿಸಿದ ತಕರಾರುಗಳನ್ನು ಪರಿಶೀಲಿಸಲು ಈಗಿರುವಂಥ 21 ಲ್ಯಾಂಡ್ ಟ್ರಿಬ್ಯೂನಲ್‌ಗಳ ಜೊತೆಗೆ ಮತ್ತೆ 24 ಲ್ಯಾಂಡ್ ಟ್ರಿಬ್ಯೂನಲ್‌ಗಳನ್ನು ನೇಮಿಸಿದ್ದೇವೆ. ಒಟ್ಟು 45 ಲ್ಯಾಂಡ್ ಟ್ರಿಬ್ಯುನಲ್‌ಗಳನ್ನು ಮಾಡಿ ಅವು 2-11-1967ಕ್ಕೆ ಅಸ್ತಿತ್ವಕ್ಕೆ ಬಂದಿದೆ. ಇದರಲ್ಲಿ ಕೆಲಸಗಳನ್ನು ಹಂಚಿಕೆ ಮಾಡುವಂತಹ ಕಾಲದಲ್ಲಿ ಕೆಲವು ಭಾಗಗಳಲ್ಲಿ ಜನಗಳು ಬಹಳ ದೂರ ಹೋಗಬೇಕಾಗಿದೆ ಎಂದು ಹೇಳುತ್ತಿದ್ದಾರೆ. ಆದ್ದರಿಂದ ಎಲ್ಲೆಲ್ಲಿ ತೊಂದರೆಯಾಗಿದೆಯೋ ಅದನ್ನು ಆಯಾ ಮುನ್ಸೀಫ್ ಮ್ಯಾಜಿಸ್ಟ್ರೇಟರುಗಳಿಗೆ ಈ ಕೆಲಸಗಳನ್ನು ಹಂಚುವುದರಿಂದ ಕೆಲಸ ತೀವ್ರವಾಗಿ ಆಗುತ್ತದೆ ಎಂದು ನಾವು ಆ ಕೆಲಸದಲ್ಲಿ ಉದ್ಯುಕ್ತರಾಗಿದ್ದೇವೆ. ಈ ನ್ಯಾಯಾಲಯಗಳಲ್ಲಿ ಟ್ರಿಬ್ಯುನಲ್‌ಗಳಲ್ಲಿ 77 ಸಾವಿರಕ್ಕೂ ಹೆಚ್ಚು ಅರ್ಜಿಗಳು ಬಂದಿದೆ ಎಂದು ತಿಳಿಸಿದ್ದಾರೆ. ಬಹುಶಃ ಅತ್ಯಂತ ತ್ವರಿತವಾಗಿ ಇದರ ಕೆಲಸವನ್ನು ಮ್ಯಾಜಿಸ್ಟ್ರೇಟರಿಗೆ ಹಂಚಿಕೆ ಮಾಡಬೇಕೆಂದು ಹೈಕೋರ್ಟಿನವರಿಂದ ಕೆಲವು ವಿವರಗಳನ್ನು ಕೇಳುತ್ತಿದ್ದೇವೆ. ಅವು ಬಂದ ನಂತರ ಈ ಕೆಲಸಗಳನ್ನು ಅವರಿಗೆ ವಹಿಸುತ್ತೇವೆ. ಒಟ್ಟಾರೆ ಈ ಭೂಸುದಾರಣಾ ಕಾನೂನಿನ ಮೂಲ ಉದ್ದೇಶವೇನೆಂದರೆ, ಯಾರೇ ಆಗಲಿ ಇನ್ನೊಬ್ಬರು ಬೆವರು ಸುರಿಸಿ ಮಾಡಿದ ಸಂಪಾದನೆಯಿಂದ ಕುಳಿತುಕೊಂಡು ಜೀವನ ಸಾಗಿಸಬಾರದು.ಇನ್ನು ಮುಂದೆ ದುಡಿಮೆಗೆ ತಕ್ಕ ಪ್ರತಿಫಲಸಿಗಬೇಕು ಪ್ರತಿಯೊಬ್ಬರೂ ಒಂದಲ್ಲ ಒಂದು ಉದ್ಯೋಗದಲ್ಲಿರಬೇಕು ಎಂಬುದು. ಹೀಗೆ ಗೇಣಿದಾರರಿಗೆ ಹಿತರಕ್ಷಣೆ ಕೊಡುವುದಕ್ಕಾಗಿ ಗೇಣಿಶಾಸನವನ್ನು ಸಮನ್ವಯಗೊಳಿಸಲಾಗಿದೆ.

ಇನ್ನು ಮೂರನೆಯದಾಗಿ ಟ್ರಿಬ್ಯುನಲ್‌ಗಳು ತೀರ್ಮಾನ ಮಾಡಿದ ಮೇಲೆ, ಪ್ರತಿಯೊಂದು ಲ್ಯಾಂಡ್ ಟ್ರಿಬ್ಯುನಲ್‌ಗಳು ಏನು ಸರ್‌ಪ್ಲಸ್ ಲ್ಯಾಂಡನ್ನು ಗೊತ್ತು ಮಾಡುತ್ತಾರೆಯೋ ಅದನ್ನು ಆಯಾ ಭಾಗಗಳಿಗೆ ಹಂಚುವ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ. ಭೂಮಾಲೀಕರಿಗೆ ಏನು ಒಂದು ಪರಿಹಾರಧನವನ್ನು ಕೊಡಬೇಕಾಗಿದೆ. ಅದಕ್ಕೆ ಕೂಡ ವ್ಯವಸ್ಥೆ ಮಾಡಬೇಕಾಗಿದೆ. ಈ ಒಂದು ದೃಷ್ಟಿಯಿಂದ ಏಕಕಾಲದಲ್ಲಿ ಒಂದೆರಡು ವರ್ಷಗಳಲ್ಲಿ ಇಂಥ ಮಹತ್ವ ಪೂರ್ಣವಾದ ಒಂದು ಸಮಸ್ಯೆಯನ್ನು ಬಗೆಹರಿಸುವುದು ಕಷ್ಟವಾಗುತ್ತದೆ. ನಮ್ಮ ಹಣಕಾಸಿನ ಪರಿಸ್ಥಿತಿಯನ್ನು

ನೋಡಿಕೊಂಡು ಈ ಕೆಲಸವನ್ನು ಮಾಡಬೇಕಾಗಿರುವುದರಿಂದ, ನಾನು ಈ ಒಂದು ಜವಾಬ್ದಾರಿಯನ್ನು ತೆಗೆದುಕೊಂಡ ಮೇಲೆ ಇದರಲ್ಲಿ ಕಾಯಿದೆಯಲ್ಲಿ ನ್ಯೂನತೆಗಳು ಏನೇನು ಇವೆ ಅವುಗಳಿಗೆ ಯಾವ ರೀತಿ ಪರಿಹಾರವನ್ನು ಒದಗಿಸಬೇಕೋ ಆ ರೀತಿ ಒದಗಿಸಲು ತ್ವರಿತವಾಗಿ ಕೆಲಸವನ್ನು ಮಾಡುವಂಥ ಪ್ರಯತ್ನ ಮಾಡಿದ್ದೇವೆ. ಇದರ ಜೊತೆಗೆ ನಾವು ಕೇಂದ್ರ ಸರ್ಕಾರವನ್ನು ಹಣಕಾಸಿನ ಸಹಾಯ ನೀಡುವಂತೆ ಕೇಳಿದ್ದೇವೆ. ಭೂಸುಧಾರಣಾ ಕಾನೂನನ್ನು ಸಂಪೂರ್ಣವಾಗಿ ಜಾರಿಗೆ ಕೊಡಲು 35 ಕೋಟಿ ರೂಪಾಯಿಗಳು ಆಗಬಹುದೆಂದು ನಾವು ಅಂದಾಜು ಮಾಡಿದ್ದೇವೆ. ಈ ವರ್ಷ ಇದರಲ್ಲಿ ಕನಿಷ್ಟ ಪಕ್ಷ 10 ಕೋಟಿ ರೂಪಾಯಿಗಳನ್ನಾದರೂ ಒದಗಿಸಬೇಕೆಂದು ನಾವು ಕೇಂದ್ರ ಸರ್ಕಾರವನ್ನು ಒತ್ತಾಯ ಮಾಡಿದ್ದೇವೆ. ಈ ಹಂತದಲ್ಲಿ ಭೂಸುಧಾರಣೆ ಇದೆ. ಒಟ್ಟಿನಲ್ಲಿ ಹೇಳುವುದಾದರೆ ಈ ಒಂದು ಮಾನ್ಯ ಸಭೆಯಲ್ಲಿ ಮಾತನಾಡಿದ ಎಲ್ಲಾ ಸದಸ್ಯರು ಕೂಡ ಭೂ ಸುಧಾರಣೆ ಅತ್ಯಂತ ತ್ವರಿತವಾಗಿ ಆಗಬೇಕು ಅದು ಆಗುವುದು ವಿಳಂಬವಾಗಿದೆ ಎಂದು ಸೂಚನೆಕೊಟ್ಟು ಸರ್ಕಾರದ ಮೇಲೆ ಹೆಚ್ಚು ಒತ್ತಾಯವನ್ನು ತಂದಿದ್ದಾರೆ. ಅದಕ್ಕಾಗಿ ನಾನು ಆ ಮಾನ್ಯ ಸದಸ್ಯರೆಲ್ಲರಿಗೂ ಋಣಿಯಾಗಿದ್ದೇನೆ.

ಇನ್ನು ನಾಲ್ಕನೆಯದಾಗಿ ಭೂಕಂದಾಯ ಏನಿದೆ ಈ ಭೂಕಂದಾಯದ ವಿಚಾರದಲ್ಲಿ ಚುನಾವಣೆಗೆ ಹಿಂದೆ ಮತ್ತು ಚುನಾವಣೆಯ ನಂತರ ಹಣಕಾಸಿನ ಸಚಿವರು ಈಗಿರುವಂಥ ಕಂದಾಯ ಪದ್ಧತಿಯನ್ನು ರದ್ದುಮಾಡಿ ಇದರಲ್ಲಿ ಇದರಿಂದ ನಷ್ಟವಾಗುತ್ತಿರುವ ಹಣವನ್ನು ಬೇರೊಂದು ರೀತಿಯಲ್ಲಿ ಕೂಡಿಸಿಕೊಳ್ಳಲು ಒಂದು ಮಾರ್ಗವನ್ನು ಕಂಡುಹಿಡಿಯಬೇಕಾಗಿದೆ. ಎಂದು ಮಾನ್ಯ ಹಣಕಾಸಿನ ಸಚಿವರು ತಿಳಿಸಿದ್ದರು. ಅದರ ಪ್ರಕಾರ ಒಂದು ವರದಿಯನ್ನು ಕೊಟ್ಟಿದ್ದಾರೆ. ಈ ಸಭೆಯಲ್ಲಿ ಕಳೆದ ಅಧಿವೇಶದಲ್ಲಿ ಆ ವರದಿಯು ನನ್ನ ಮುಂದೆ ಇದೆ, ಅದನ್ನು ಮಂತ್ರಿಮಂಡಲದ ಮುಂದೆ ಇಡುವುದಕ್ಕೆ ಸ್ವಲ್ಪಕಾಲವನ್ನು ತೆಗೆದುಕೊಂಡಿದ್ದೇನೆ, ಎಂದು ನಾನು ಹೇಳಿದ್ದೇನೆ. ಭೂಕಂದಾಯವನ್ನು ರದ್ದುಮಾಡುವ ವಿಚಾರದಲ್ಲಿ ಮಂತ್ರಿಮಂಡಲದ ಉಪಸಮಿತಿಯವರು ಪರಿಶೀಲನೆ ಮಾಡಿ ಭೂಮಿಯ ಮೇಲೆ ವ್ಯವಸಾಯೋತ್ಪನ್ನಗಳ ಆಧಾರದ ಮೇಲೆ ಒಂದು ತೆರಿಗೆಯನ್ನು ಹಾಕುವಂತಹದು ಸೂಕ್ತವೆಂದು ಅಭಿಪ್ರಾಯ ಪಟ್ಟು ರೈತರಿಗೆ ಜಮೀನಿನ ರೆಕಾರ್ಡ್ಸ್ ಆಫ್ ರೈಟ್ಸ್‌ನ್ನು ಹೇಗೆ ಕಾಪಾಡುವುದು ಎಂಬ ಅಂಶವನ್ನು ಸೂಚಿಸಿದ್ದರು. ಈ ದೃಷ್ಟಿಯಲ್ಲಿ ವ್ಯವಸಾಯ ತೆರಿಗೆಯನ್ನು ಹಾಕಿದರೆ ಅದರಿಂದ ರೈತರಿಗೆ ಹೆಚ್ಚಿನ ತೊಂದರೆಯಾಗುತ್ತದೆ. ಲೆಕ್ಕಪತ್ರಗಳನ್ನು ಇಡಲು ಬಾರದ ರೈತರಿಗೆ ಹೆಚ್ಚಿನ ರೀತಿಯಲ್ಲಿ ಕಿರುಕುಳಗಳಾಗುತ್ತವೆ. ಲಂಚಕ್ಕೆ ಎಡೆಕೊಟ್ಟ ಹಾಗೆ ಆಗುತ್ತದೆ ಎಂದು ಅನೇಕ ಮಂದಿ ಶಾಸನ ಸಭಾಸದಸ್ಯರು ಮತ್ತು ಅನೇಕ ಮಂದಿ ರೈತರು ಹೇಳಿದರು. ಒಟ್ಟಿನಲ್ಲಿ ಕಾಂಗ್ರೆಸ್ ಶಾಸನಸಭೆ ಪಕ್ಷದಲ್ಲಿ ಇದಕ್ಕೆ ಹೆಚ್ಚು ಬೆಂಬಲ ಇಲ್ಲದೆ ಇರುವುದರಿಂದ ಈ ಒಂದು ವ್ಯವಸಾಯದ ಉತ್ಪನ್ನದ ಮೇಲೆ ತೆರಿಗೆ ಹಾಕತಕ್ಕದ್ದನ್ನು ಸದ್ಯಕ್ಕೆ ನಿಲ್ಲಿಸಬೇಕಾಗಿ ಬಂತು. ಈ ಭೂಕಂದಾಯದಲ್ಲಿ ಶೇ 65.70 ರಷ್ಟು ಬಾಗ ಹಣವನ್ನು ಸ್ಥಳೀಯ ಸಂಸ್ಥೆಗಳಿಗೆ ಕೊಡಬೇಕೆಂದು ಒಪಿಕೊಂಡಿರುವುದರಿಂದ ಈ ಕಂದಾಯವನ್ನು ಸಂಪೂರ್ಣವಾಗಿ ವಜಾ ಮಾಡುವುದರಿಂದ ಸ್ಥಳೀಯ ಸಂಸ್ಥೆಗಳಿಗೆ ಕೊಡತಕ್ಕ

ಹಣವನ್ನು ಕೊಡಬೇಕಾದರೆ ಸುಮಾರು 8 ಕೋಟಿ ರೂಪಾಯಿಗಳನ್ನು ಬೇರೆ ರೀತಿಯಲ್ಲಿ ಒದಗಿಸಿಕೊಡಬೇಕಾಗುತ್ತದೆ. ಕಂದಾಯದಿಂದ ಸ್ಥಳೀಯ ಸಂಸ್ಥೆಗಳಿಗೆ ಇಷ್ಟು ಹಣವನ್ನು ಕೊಡಬೇಕೆಂದು ಗೊತ್ತು ಮಾಡುವುದರಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಅಭಿವೃದ್ಧಿಕಾರ್ಯಗಳು ನಡೆಯುವುದಕ್ಕೆ ಅವಕಾಶವಾಗಿದೆ. ಈ ಒಂದು ದೃಷ್ಟಿಯಿಂದ ಎಂಟು ಕೋಟಿ ರೂಪಾಯಿಗಳ ಉತ್ಪತ್ತಿ ಬರುವುದಕ್ಕಿಂತ ಮುಂಚೆ ಈ ಭೂಕಂದಾಯವನ್ನು ರದ್ದು ಮಾಡುವಂಥ ವಿಷಯದಲ್ಲಿ ಆತುರವಾಗಿ ನಿರ್ಧಾರವನ್ನು ತೆಗೆದುಕೊಂಡರೆ ಸ್ಥಳೀಯ ಸಂಸ್ಥೆಗಳ ಕೆಲಸ ಕಾರ್ಯಗಳು ಸರಿಯಾಗಿ ನಡೆಯುವುದಿಲ್ಲ. ಮತ್ತೆ ಹೊಸ ತೆರಿಗೆಯನ್ನು ಹಾಕಿ ಅದು ಕಾರ್ಯರೂಪಕ್ಕೆ ಬರುವವರೆಗೆ ಬಹಳ ಕಷ್ಟವಾಗುತ್ತದೆಂದು ತೀರ್ಮಾನಕ್ಕೆ ಬಂದಿದ್ದೇವೆ. ಆದ್ದರಿಂದ ಹಳೆಯ ಭೂಕಂದಾಯ ಪದ್ಧತಿ ಏನಿದೆ ಅದನ್ನೇ ಸದ್ಯಕ್ಕೆ ಮುಂದುವರೆಸಿಕೊಂಡು ಬರಬೇಕೆಂಬ ತೀರ್ಮಾನ ಕೈಗೊಂಡಿದ್ದೇವೆ.

ಒಟ್ಟಿನಲ್ಲಿ ಹೇಳುವುದಾದರೆ ಯಾವತ್ತಾದರೂ ಒಂದು ದಿನ ಬೆಳೆಯ ಉತ್ಪತ್ತಿಯ ಮೇಲೆ ತೆರಿಗೆಯನ್ನು ಹಾಕಲೇ ಬೇಕಾಗುತ್ತದೆ. ಅಂತಹ ದಿನಗಳು ಬರುವವರೆಗೆ ಈಗಿನ ಪದ್ಧತಿಯನ್ನೇ ಮುಂದುವರಿಸಬೇಕಾಗುತ್ತದೆಂದು ಈ ಮಾನ್ಯ ಸಭೆಗೆ ತಿಳಿಸುತ್ತೇನೆ. ಹೀಗೆ ಕಂದಾಯದ ಹೊರೆ ಹೆಚ್ಚಾಗುತ್ತಿರುವುದಕ್ಕೆ ಕಾರಣವೆಂದರೆ, ಸ್ವಲ್ಪ ಮಟ್ಟಿಗೆ 30 ವರ್ಷಗಳ ಹಿಂದೆ ರೀಕ್ಲಾರಿ ಫಿಕೇಷನ್ ಆಗಿತ್ತು. ಇನ್ನು ಕೆಲವು ಕಡೆ 30 ವರ್ಷಗಳಿಗೆ ಇನ್ನು ಹಿಂದೆಯೇ ಆಗಿತ್ತು. 30 ವರ್ಷಕ್ಕೆ ಒಂದು ಸಾರಿ ಏಕ ಕಾಲದಲ್ಲಿ ರೀಕ್ಲಾಸಿಫಿಕೇಷನ್ ಆಗಿದ್ದ ಪಕ್ಷದಲ್ಲಿ ಒಂದಕ್ಕೆ ಎರಡರಷ್ಟು ಕಂದಾಯ ಹಾಕುವುದಕ್ಕೆ ಸಾಧ್ಯವಾಗುತ್ತಿತ್ತು. ಆದರೆ ಈಗ ಬೇರೆ, ಬೇರೆ ವರ್ಷಗಳಲ್ಲಿ ಬೇರೆ, ಬೇರೆ, ರೀತಿಯಲ್ಲಿ, ಅಂದರೆ 1/16 ಭಾಗದಷ್ಟು ಕಂದಾಯವನ್ನು ವಿಧಿಸುತ್ತಿರುವುದರಿಂದ ಕಾನೂನು ಬದ್ಧವಾಗಿ ಎಲ್ಲಾ ಕಡೆಯಲ್ಲೂ ಒಂದೇ ರೀತಿಯ ಕಂದಾಯವನ್ನು ವಸೂಲಿ ಮಾಡುವುದಕ್ಕೆ ಸಾಧ್ಯವಾಗಿಲ್ಲ. ಆದ್ದರಿಂದ ಎಲ್ಲೆಲ್ಲಿ ರೀಕ್ಲಾಸಿಫಿಕೇಷನ್‌ನಲ್ಲಿ ತಪ್ಪುಗಳಿವೆಯೋ ಅದನ್ನು ಕಂಡು ಹಿಡಿದು ತಿದ್ದುವುದಕ್ಕೆ ಈಗಿನ ಕಾಯಿದೆ ಪ್ರಕಾರ ಅವಕಾಶವಾಗಿಲ್ಲ. ಆದ್ದರಿಂದ ಈಗ ಇರುವಂಥ ತಪ್ಪುಗಳನ್ನು ತಿದ್ದಿ ರೈತರಿಗೆ ಅನುಕೂಲವಾಗುವಂತೆ ಕೆಲವು ನಿಯಮಗಳ ಬಗ್ಗೆ ತಿದ್ದುಪಡಿಯನ್ನು ಈ ಸಭೆಯ ಮುಂದೆ ತರುವುದರಲ್ಲಿದ್ದೇವೆ. ಅಂತಹ ಸಂದರ್ಭ ಬಂದಾಗ ಮಾನ್ಯ ಸದಸ್ಯರುಗಳು ಸಹಾನುಭೂತಿಯಿಂದ ನೆರವಾಗಬೇಕೆಂದು ಕೇಳಿಕೊಳ್ಳುತ್ತೇನೆ.

ಈಗ ರೈತರು ಪ್ರತಿವರ್ಷ ಕಂದಾಯವನ್ನು ಕೊಡುವುದರಲ್ಲಿ ತಕರಾರು ಮಾಡುತ್ತಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಬಹುಶಃ ಅನೇಕ ವರ್ಷಗಳಿಂದ ಅನೂಚಾನವಾಗಿ ಬಂದಿರುವ ಈ ಭೂಕಂದಾಯ ಪದ್ಧತಿಯನ್ನು ರದ್ದುಮಾಡಬೇಕೆಂದು, ಬೇರೆ ಪ್ರಾಂತ್ಯಗಳಲ್ಲಿ ರದ್ದು ಮಾಡಿರುವ ಬಗ್ಗೆ ಇರುವ ನಿಯಮಗಳನ್ನು ತರಿಸಿಕೊಂಡು ನೋಡಿದ್ದಾಯಿತು. ಅದರಂತೆ ಮದ್ರಾಸ್‌ನಲ್ಲಿ ಈಗ 10 ಎಕರೆ ಖುಷ್ಕಿ ಜಮೀನು ಇರುವವರಿಗೆ ಕಂದಾಯದ ವಿನಾಯಿತಿಯನ್ನು ತೋರಿಸಿದ್ದಾರೆ. ಇದರಿಂದ 62 ಲಕ್ಷ ರೂಪಾಯಿಗಳು ಮಾತ್ರ ಆ ಸರ್ಕಾರಕ್ಕೆ ನಷ್ಟವಾಗುತ್ತದೆ. ಮದ್ರಾಸ್ ಪ್ರಾಂತ್ಯದಲ್ಲಿ 47 ಪರ್ಸೆಂಟ್ ತರಿ ಜಮೀನು ಇರುವುದರಿಂದ ಖುಷ್ಕಿ ಜಮೀನಿನ ಕೆಲವು

ಭಾಗಗಳಿಗೆ ಕಂದಾಯ ರಿಯಾಯಿತಿ ತೋರಿಸಿದ್ದಾರೆ. ಈ ರೀತಿ ರಿಯಾಯಿತಿ ಕೊಡುವ ಕಾಲಕ್ಕೆ ನಾಲ್ಕೂವರೆ ಕೋಟಿ ರೂಪಾಯಿಗಳಷ್ಟು ಹೆಚ್ಚು ವರಮಾನ ಸರ್ಕಾರಕ್ಕೆ ಬರುವಂತೆ ಸೇಲ್ಸ್ ಟ್ಯಾಕ್ಸನ್ನು ಒಂದಕ್ಕೆ ಎರಡರಷ್ಟನ್ನು ಮಾಡಿಕೊಂಡು ಶಾಸನಸಭೆಯ ಒಪ್ಪಿಗೆ ತೆಗೆದುಕೊಂಡಿದ್ದಾರೆ. ಒಟ್ಟಿನಲ್ಲಿ 62 ಲಕ್ಷ ರೂಪಾಯಿಗಳನ್ನು ರಿಯಾಯಿತಿ ಕೊಟ್ಟು ನಾಲ್ಕೂವರೆ ಕೋಟಿ ರೂಪಾಯಿಗಳಷ್ಟು ಹೆಚ್ಚು ವರಮಾನ ಬರುವಂತೆ ಮಾಡಿಕೊಂಡಿದ್ದಾರೆ. ಇನ್ನು ಆಂಧ್ರ ಪ್ರದೇಶದಲ್ಲಿ ಖುಷ್ಕಿ ಖುಷ್ಕಿ ಕಂದಾಯವನ್ನು ಕೆಲವು ಭಾಗಗಳಲ್ಲಿ ಶೇ 25 ರಂತೆ, ಮತ್ತೆ ಕೆಲವು ಭಾಗಗಳಲ್ಲಿ ಶೇ 35ರಂತೆ ಹಾಕುತ್ತಿದ್ದು, ಈಗ ಈ ತಾರತಮ್ಯವನ್ನು ತೆಗೆದುಹಾಕಿ, ರೈತರಿಗೆ ಪರಿಹಾರ ಒದಗಿಸಿಕೊಡಬೇಕೆಂಬ ದೃಷ್ಟಿಯಿಂದ ಐದು ಎಕರೆ ಖುಷ್ಕಿ ಜಮೀನು ಇರುವವರಿಗೆ ಕಂದಾಯದ ರಿಯಾಯಿತಿಯನ್ನು ತೋರಿಸಿದ್ದಾರೆ. ಪಂಜಾಬ್ ಮತ್ತು ಹರಿಯಾಣ ರಾಜ್ಯಗಳಲ್ಲೂ ಸಹ ಖುಷ್ಕಿ ಜಮೀನು ಬಹಳ ಕಡಿಮೆ ಇರುವುದರಿಂದ ಅಲ್ಲಿ ಕಂದಾಯದ ವಿನಾಯಿತಿ ತೋರಿಸಿದ್ದಾರೆ. ------ ಒಟ್ಟಿನಲ್ಲಿ ಮಾನ್ಯ ಸದಸ್ಯರುಗಳಾದಂಥ ಬಸವರಾಜು ವೆಂಕಟಗಿರಿಯಪ್ಪ ಇನ್ನೂ ಮೊದಲಾದವರು ಐದು ಎಕರೆಗಿಂತ ಕಡಿಮೆ ಇರುವವರಿಗೆ ಕಂದಾಯದ ವಿನಾಯಿತಿ ಕೊಡಬೇಕೆಂದು ಸೂಚನೆ ಮಾಡಿದರು. ಆ ರೀತಿ ಕೊಡುವುದಕ್ಕೆ ಏನಾದರೂ ಸಾಧ್ಯತೆ ಇದೆಯೇ ಎಂಬುದರ ಬಗ್ಗೆ ಲೆಕ್ಕಾಚಾರ ಹಾಕಿಸಿ ತರಿಸಿದ್ದೇನೆ. ಈ ಲೆಕ್ಕದ ಪ್ರಕಾರ ನಮ್ಮ ರಾಜ್ಯದಲ್ಲಿ ಐದು ಎಕರೆಗಳಿಗಿಂತ ಕಡಿಮೆ ಜಮೀನು ಇರುವವರು 41.45% ಇದ್ದಾರೆ. ಇವರುಗಳಿಗೆ ಕಂದಾಯದ ವಿನಾಯಿತಿ ತೋರಿಸಿದರೆ ಒಂದು ಕೋಟಿ ಎರಡು ಸಾವಿರದ ತೊಂಭತ್ತೊಂಭತ್ತು ರೂಪಾಯಿಗಳು ಸರ್ಕಾರಕ್ಕೆ ಬರುವ ಆದಾಯದಲ್ಲಿ ಕಡಿಮೆಯಾಗುತ್ತದೆ. ಹತ್ತು ಎಕರೆಗಳಿಗಿಂತ ಕಡಿಮೆಯಿರುವವರಿಗೆ ಕಂದಾಯದ ವಿನಾಯಿತಿ ತೋರಿಸಿದರೆ ಸರ್ಕಾರಕ್ಕೆ ಬರುವ ವರಮಾನದಲ್ಲಿ 1,14,96,583 ರೂಪಾಯಿ 61 ಪೈಸೆ ಕಡಿಮೆಯಾಗುತ್ತದೆ. ಇದರಿಂದ 38% ಜನರಿಗೆ ಅನುಕೂಲವಾಗುತ್ತದೆ. ಅದೇ ರೀತಿ 15 ಎಕರೆಗಿಂತ ಕಡಿಮೆ 10 ಎಕರೆಗಿಂತ ಜಾಸ್ತಿ ಇರುವವರಿಗೆ ಕಂದಾಯದ ವಿನಾಯಿತಿಯನ್ನು ತೋರಿಸಿದರೆ ಸರ್ಕಾರಕ್ಕೆ ಬರುವ ವರಮಾನದಲ್ಲಿ 1,42,18,383 ರೂಪಾಯಿಗಳು ಕಡಿಮೆಯಾಗುತ್ತದೆ. ಹತ್ತು ಎಕರೆಗಳಿಗಿಂತ ಕಡಿಮೆ ಇರುವ ರೈತರಿಗೆ ರಿಯಾಯಿತಿ ಕೊಡುವುದಾದರೆ ಪ್ರತಿಭಾಗಗಳು ಮತ್ತು ವಿಭಾಗಗಳಾಗಿ ಕನ್‌ಸಾಲಿಡೇಷನ್ ಅಂಡ್ ಪ್ರಿವೆನ್‌ಷನ್ ಆಫ್ ಫ್ರಾಗ್‌ಮೆಂಟೇಷನ್‌ಗೆ ಸಹಾಯ ಮಾಡಿದ ಹಾಗೆ ಆಗುವುದಿಲ್ಲ. ಕಂದಾಯ ಕೂಡ ಉತ್ಪತ್ತಿಯ ಮೇಲೆ ಹಾಕುತ್ತಿರುವುದರಿಂದ ಈಗಿರುವ ಪದ್ಧತಿಯನ್ನು ರದ್ದು ಮಾಡಿದರೆ ಕಷ್ಟವಾಗುತ್ತದೆಂದು ತಿಳಿದು ಈ ಬಗ್ಗೆ ಸದ್ಯಕ್ಕೆ ಯಾವ ಕ್ರಮವನ್ನೂ ತೆಗೆದುಕೊಳ್ಳುವುದಕ್ಕಾಗುವುದಿಲ್ಲ. ಒಟ್ಟಿನಲ್ಲಿ ಮಳೆ ಬೆಳೆಯಿಲ್ಲದೆ ಅಭಾವ ಉಂಟಾಗಿರುವ ಪ್ರದೇಶಗಳಲ್ಲಿ ಕಳೆದ ಮೂರು ವರ್ಷಗಳಿಂದ ಅಲ್ಲಿಯ ಜನರು ಕಂದಾಯ ಕೊಡುವುದು ಕಷ್ಟವಾಗಿದೆ. ಅಲ್ಲದೆ ಈ ವರ್ಷ ಪುನರ್ ವಿಮರ್ಶೆಯಾಗಿರುವ ಕಂದಾಯದ ಹೆಚ್ಚಳ, ಸರ್‌ಚಾರ್ಜು ಎಲ್ಲವನ್ನೂ ಒಟ್ಟಿಗೆ ಕೇಳುವುದರಿಂದ ರೈತರಿಗೆ ಭಾರವಾಗುತ್ತದೆಂದು ತಿಳಿದು ಎಲ್ಲಿ ಮಳೆ ಬೆಳೆಯಾಗಿಲ್ಲವೋ ಅಂತಹ ಭಾಗಗಳಲ್ಲಿ ಫಸಲಿನ ಪಹಣಿಯಿಲ್ಲದಿದ್ದರೂ, ಕಂದಾಯದ ರಿಯಾಯಿತಿ ಕೊಡಬೇಕೆಂಬುದು

ಮಾನ್ಯ ಸದಸ್ಯರ ಅಭಿಪ್ರಾಯವಾಗಿತ್ತು. ರಿಮಿಷನ್ ಅಂಡ್ ಸಸ್‌ಪೆನ್‌ಷನ್ ರೂಲ್ಸನ್ನು ಏನು ಮಾಡಿದ್ದೇವೆ ಅದು ಬೇರೆ, ಬೇರೆ ಭಾಗದಲ್ಲಿ ಬೇರೆ, ಬೇರೆ ನಿಯಮಾವಳಿಗಳು ಇರುವುದರಿಂದ, ಮೂರು ವರ್ಷದ ಬಾಕಿಯನ್ನು ವಸೂಲಿ ಮಾಡುವುದಕ್ಕೆ ಬದಲಾಗಿ, ಮೊದಲನೆಯ ವರ್ಷ ಎಲ್ಲಿ 25% ಗಿಂತ ಕಡಿಮೆ ಬೆಳೆಯಾಗಿದೆಯೋ ಅಂತಹ ಪ್ರದೇಶಗಳಲ್ಲಿ ಪೂರ್ಣವಾಗಿ ಕಂದಾಯವನ್ನು ವಜಾ ಮಾಡಬೇಕೆಂದು, 25 ರಿಂದ 37% ವರೆಗೆ ಎಲ್ಲಿ ಬೆಳೆಯಾಗಿದೆಯೋ ಆ ಭಾಗದ ಕಂದಾಯವನ್ನು ಪೂರ್ಣವಾಗಿ ಮುಂದೂಡಬೇಕೆಂದು, ಎಲ್ಲಿ 37 ರಿಂದ 50% ವರೆಗೆ ಬೆಳೆಯಾಗಿದೆಯೋ ಆ ಭಾಗಗಳಲ್ಲಿ ಅರ್ಧ ಕಂದಾಯವನ್ನು ವಸೂಲಿ ಮಾಡಬೇಕೆಂದು ಒಂದು ನಿಯಮ ಮಾಡಿ ಈ ಬಗ್ಗೆ ಮೊನ್ನೆ ತೀರ್ಮಾನ ತೆಗೆದುಕೊಂಡಿದ್ದೇವೆ. ಈ ರೀತಿಯ ಒಂದು ಪರಿಹಾರವನ್ನು ಕೊಡುವುದರಿಂದ ಬಹುಮಟ್ಟಿಗೆ ಎಲ್ಲೆಲ್ಲಿ ಆಗಿಂದಾಗ್ಗೆ ಅಭಾವ ಪರಿಸ್ಥಿತಿ ಉಂಟಾಗುತ್ತದೋ, ಆ ಪ್ರದೇಶದ ಜನರಿಗೆ ಸ್ವಲ್ಪ ಮಟ್ಟಿಗೆ ಪರಿಹಾರ ಕೊಟ್ಟ ಹಾಗೆ ಆಗುತ್ತದೆಂದು ಭಾವಿಸಿಕೊಂಡಿದ್ದೇನೆ. ಈ ಒಂದು ದೃಷ್ಟಿಯಿಂದ ಕೆಲವು ಭಾಗಗಳಲ್ಲಿ 1965-66, 1966-67 ನೇ ಸಾಲಿನಿಂದ ಕಂದಾಯದ ರಿಯಾಯಿತಿ ಕೊಡಬೇಕಾಯಿತು.

ಮೇಲೆ ಹೇಳಿದ ರಿಯಾಯಿತಿಗಳನ್ನು 1964ನೇ ಸಾಲಿನಿಂದ ಜಾರಿಗೆ ತರಬೇಕೆಂದು ಒಂದು ನಿಯಮಾವಳಿ ಮಾಡಿದ್ದೇವೆ. ಪರಿಹಾರವನ್ನು ಕೈಗೊಳ್ಳುವ ಕಾಲಕ್ಕೆ ಆಗಾಗ್ಗೆ ಅಭಾವ ಉಂಟಾಗತಕ್ಕಂಥ ಪ್ರದೇಶಗಳಲ್ಲಿ ಶಾಶ್ವತವಾಗಿರುವ ಖಾಯಂ ಪರಿಹಾರಗಳನ್ನು ಮಾಡಿಸಬೇಕೆಂದು ಮಾನ್ಯ ಸದಸ್ಯರುಗಳು ಸೂಚನೆ ಮಾಡಿದ್ದಾರೆ. ಬಹುಶಃ ಒಂದಲ್ಲ ಒಂದು ಬಾಗದಲ್ಲಿ ಇಡೀ ಮೈಸೂರು ಸಂಸ್ಥಾನದಲ್ಲೇ ಅಲ್ಲ, ಇಡೀ ಇಂಡಿಯಾ ದೇಶದಲ್ಲಿ ಪ್ರವಾಹದಿಂದ, ಮಳೆಯ ಅಭಾವದಿಂದ ಮತ್ತು ಪ್ರಕೃತಿಯ ವಿಕೋಪದಿಂದ ಕಷ್ಟಗಳು ಉಂಟಾಗುತ್ತಿವೆ. ಈ ಒಂದು ದೃಷ್ಟಿಯಿಂದ ನಮ್ಮ ಮೈಸೂರು ಸಂಸ್ಥಾನದಲ್ಲಿ ಯಾವ, ಯಾವ ಭಾಗಗಳಲ್ಲಿ ಮಳೆಯ ಅಭಾವದಿಂದ ಬೆಳೆ ಹಾಳಾಗುತ್ತಿದೆಯೋ ಅಂತಹ ಪ್ರದೇಶಗಳಿಗೆ ರಾಮಮೂರ್ತಿ ಕಮಿಟಿಯವರು ಹೋಗಿ ನೋಡಿಕೊಂಡು ಬಂದು ಒಂದು ರಿಪೋರ್ಟ್ ಕೊಟ್ಟಿದ್ದಾರೆ. ಅದರಂತೆ ಒಬ್ಬ ಐ.ಎ.ಎಸ್. ಆಫೀಸರನ್ನು ಅಭಾವ ಪೀಡಿತ ಪ್ರದೇಶಗಳಿಗೆ ಕಳಿಸಿ ಅವರಿಂದ ಸಹ ಒಂದು ರಿಪೋರ್ಟ್ ತರಿಸಿಕೊಂಡಿದ್ದೇವೆ. ಆಗಾಗ್ಗೆ ಎಲ್ಲೆಲ್ಲಿ ಮಳೆಯ ಅಭಾವದಿಂದ ಬೆಳೆಗಳು ಹಾಳಾಗುತ್ತವೋ, ಅಂತಹ ಪ್ರದೇಶಗಳಲ್ಲಿ ಕೈಗೊಳ್ಳಲು 40 ಕೋಟಿ ರೂಪಾಯಿಗಳ ಕೆಲವಾರು ಯೋಜನೆಗಳನ್ನು ತಯಾರು ಮಾಡಿದ್ದೇವೆ. ಇದೂ ಸಾಲುವುದಿಲ್ಲವೆಂದು ತಿಳಿದುಕೊಂಡು, ನಮ್ಮ ರಾಜ್ಯದ 19 ಜಿಲ್ಲೆಗಳ ಪೈಕಿ 13 ಜಿಲ್ಲೆಗಳಲ್ಲಿ ಆಗಿಂದಾಗ್ಗೆ ಮಳೆಯ ಅಭಾವ ಉಂಟಾಗುತ್ತದೆಂದು ತಿಳಿದುಕೊಂಡು, ಈ ಜಿಲ್ಲೆಗಳಲ್ಲಿ ದೊಡ್ಡ ದೊಡ್ಡ ನೀರಾವರಿ ಯೋಜನೆಗಳನ್ನು, ಸಣ್ಣ ಸಣ್ಣ ನೀರಾವರಿ ಯೋಜನೆಗಳನ್ನು ಕೈಗೊಳ್ಳಲು, ಬಾವಿಗಳನ್ನು ತೋಡಿಸಲು ಮತ್ತು ಸಾಯಿಲ್ ಕನ್ಸರ್‌ವೇಷನ್ ಮಾಡಿಸುವುದು, ಈ ರೀತಿಯಾದಂಥ ಕೆಲಸಗಳನ್ನೂ ಮಾಡಿಸಲು 280 ಕೋಟಿ ರೂಪಾಯಿಗಳ ಅಂದಾಜಿನಲ್ಲಿ ಒಂದು ಯೋಜನೆಯನ್ನು ತಯಾರು ಮಾಡಿದ್ದೇವೆ. ಆದರೆ ಕೇಂದ್ರ ಸರ್ಕಾರದವರು ಈ ಎಲ್ಲಾ ಕೆಲಸಗಳನ್ನೂ ಏಕ

ಕಾಲದಲ್ಲಿ ಕೈಗೊಳ್ಳುವುದು ಕಷ್ಟವಾಗುತ್ತದೆ. ಅದಕ್ಕೋಸ್ಕರ ಈ ಎಲಾ ಯೋಜನೆಗಳನ್ನೂ ಒಳಗೊಂಡಂಥ ಒಂದು ಯೋಜನೆಯನ್ನು ಬಿಜಾಪುರ ಜಿಲ್ಲೆಯ ನಾಲ್ಕು ತಾಲ್ಲೂಕುಗಳಲ್ಲಿ, ಚಿತ್ರದುರ್ಗ ಜಿಲ್ಲೆಯ ಮೂರು ತಾಲ್ಲೂಕುಗಳಲ್ಲಿ ಪ್ರಯೋಗ ಮಾಡೋಣ, ಅನಂತರದಲ್ಲಿ ಬೇರೆ, ಬೇರೆ ಕಡೆಗಳಲ್ಲಿ ನಡೆಸೋಣವೆಂದು ಹೇಳಿದ್ದಾರೆ. ನಮ್ಮ ಸರ್ಕಾರದವರು ಇನ್ನೂ ಹೆಚ್ಚು ಕಡೆಗಳಲ್ಲಿ ತೆಗೆದುಕೊಳ್ಳಬೇಕೆಂದು ಮತ್ತೆ ಕೇಂದ್ರ ಸರ್ಕಾರಕ್ಕೆ ಬರೆದಿದ್ದಾರೆ. ಆದರೆ ನಮ್ಮ ಸಂಸ್ಥಾನದಲ್ಲಿ ನಾವು ತೆಗೆದುಕೊಂಡಿರುವಂತಹ ಕಾರ್ಯಗಳು ಏನಿವೆ ಅವುಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಬಹುಶಃ ಮೈನರ್ ಇರಿಗೇಶನ್ನಿನಲ್ಲಿ ಹೆಚ್ಚಿನ ರೀತಿಯಲ್ಲಿ ನಾವು ಕಾರ್ಯ ಸಾಧನೆಮಾಡಿದ್ದೇವೆ. ಆದರಲ್ಲೂ ಬಾವಿಗಳನ್ನು ತೋಡಿಸುವುದಕ್ಕೋಸ್ಕರ ರೈತರಿಗೆ ಹೆಚ್ಚಿನ ರೀತಿಯಲ್ಲಿ ಧನ ಸಹಾಯವನ್ನು ಒದಗಿಸಲಾಗಿದೆ. ಇವತ್ತಿನವರೆಗೆ 2 ಲಕ್ಷ ಮೂವತ್ತು ಸಾವಿರ ಬಾವಿಗಳು ಮಂಜೂರಾಗಿ, ಆದರಲ್ಲಿ 15 ಸಾವಿರ ಬಾವಿಗಳು ಮಾತ್ರ ಅಪೂರ್ಣವಾಗಿ ನಿಂತಿವೆ. ಒಟ್ಟು 20 ಸಾವಿರ ಬಾವಿಗಳನ್ನು ತೆಗೆಯಲು ಲ್ಯಾಂಡ್ ಡೆವಲಪ್ ಮೆಂಟ್ ಬ್ಯಾಂಕುಗಳ ಮೂಲಕ ಹಣಕೊಡುವ ಏರ್ಪಾಡನ್ನು ಮಾಡಿಕೊಂಡಿದ್ದೇವೆ. ---- ಎಲ್ಲೆಲ್ಲಿ ಕುಡಿಯುವ ನೀರಿನ ಅಭಾವ ಇದೆ ಅಲ್ಲಿ ಕುಡಿಯುವ ನೀರಿನ ಬಾವಿಗಳನ್ನು ಅಳವಡಿಸುವುದಕ್ಕೋಸ್ಕರ ಆರು ಲಕ್ಷ ರೂಪಾಯಿಗಳನ್ನು ಹೆಚ್ಚಿನ ರೀತಿಯಲ್ಲಿ ಕೊಟ್ಟಿದ್ದೇವೆ. ಹೀಗೆ ಅಭಾವಕ್ಕೆ ತುತ್ತಾದ ಪ್ರದೇಶಗಳಲ್ಲಿನ ಮುದುಕರಿಗೆ, ಗರ್ಭಿಣಿ ಸ್ತ್ರೀಯರಿಗೆ ಎಲ್ಲಾ ರೀತಿಯ ಪರಿಹಾರವನ್ನು ಕೊಡುವುದಕ್ಕಾಗಿ 5 ಲಕ್ಷ ರೂಪಾಯಿಗಳ ಹೆಚ್ಚುವರಿ ಹಣವನ್ನು ಕೊಟ್ಟಿದ್ದೇವೆ.-----

ಮಾನ್ಯ ಸದಸ್ಯರನೇಕರು, ಕಂದಾಯ ವಸೂಲು ಮಾಡುವ ಕಾಲದಲ್ಲಿ ಅಧಿಕಾರಿಗಳಿಂದ ಅನೇಕ ಕಿರುಕುಳ ಇವೆ ಎಂದು ಹೇಳಿದರು. ಹೊರಗೆ ನೋಡುವುದಕ್ಕೆ ಬೆದರಿಸಿದರೂ, ಒಳಗಡೆ ಸಾಕಷ್ಟು ಕೆಲಸವಾಗಿಲ್ಲ. ಮಾನ್ಯ ದೊಡ್ಡನಗೌಡರು ಹೇಳಿದಂತೆ, ಒಬ್ಬ ಟ್ರಾಕ್ಟರ್ ತೆಗೆದುಕೊಂಡಿರತಕ್ಕವರು, ಹೆಚ್ಚು ಕಂದಾಯ ಕೊಡತಕ್ಕವರು, ಬಾಕಿಯನ್ನು ಕೇಳಿದಾಗ, ಸ್ವಲ್ಪಮಟ್ಟಿಗೆ ಮಾತಾಗಿ ಅವರ ಕಾರನ್ನು ಇಮ್ಮೂವಬಲ್ ಪ್ರಾಪರ್ಟಿಯಾಗಿ ತಿಳಿದುಕೊಂಡು ವಶಕ್ಕೆ ತೆಗೆದುಕೊಂಡು, ನಿಮ್ಮ ಕಂದಾಯಕೊಟ್ಟು ಬಿಡಿಸಿಕೊಂಡು ಹೋಗಬಹುದು ಎಂದು ಹೇಳಿದ್ದಾರೆ. ಆದ್ದರಿಂದ ಇಬ್ಬರಿಗೂ ಸ್ವಲ್ಪಮಟ್ಟಿನ ಘರ್ಷಣೆಯಾಗಿದೆ. ನಾನು ಇಧನ್ನು ವಿಚಾರಣೆಮಾಡಿದೆ. ಆದರೂ ಕೂಡ ತಹಶೀಲ್ದಾರರು ಸ್ವಲ್ಪಮಟ್ಟಿಗೆ ಅಷ್ಟು ದೂರ ಹೋಗಬಾರದಿತ್ತು. ಇದನ್ನು ನಾನು ಅವರಿಗೆ ತಿಳಿಸಿದ್ದೇನೆ. ಆದರೂ ದೊಡ್ಡ, ದೊಡ್ಡ ರೈತರೂ ಕೂಡ, ಮಳೆಯಾಗಿಲ್ಲ ಮತ್ತು ಬೆಳೆಯಾಗಿಲ್ಲ ಎಂದು ಹೇಳಿ ಸರ್ಕಾರದಿಂದ ತೆಗೆದುಕೊಂಡಿರುವ ಸಾಲವನ್ನು ಕೊಡದಿದ್ದರೆ ಅದು ಬಹಳ ಕಷ್ಟ. ಆದ್ದರಿಂದ ತೆಗೆದುಕೊಂಡಿರುವ ಸಾಲವನ್ನು ಕೊಡುವುದಕ್ಕೆ ಮನಸ್ಸುಮಾಡಬೇಕು. ಸಹಕಾರ ಸಂಘಗಳ ಮುಖಾಂತರ ತೆಗೆದುಕೊಂಡಿರುವ ಅಲ್ಪಾವಧಿಯ ಸಾಲವನ್ನು ಮಧ್ಯಮಾವಧಿಯ ಹಾಗೆ ಪರಿವರ್ತನೆ ಮಾಡಿದರೆ ಅಭಾವ ಪೀಡಿತ ಪ್ರದೇಶಗಳಲ್ಲಿ ಅನುಕೂಲವಾಗುತ್ತದೆಂದು ಹೇಳಿದ್ದೇವೆ. ಕೆಲವು ಸಾಯಿಲ್ ಕನ್ ಸರ್ವೆಶನ್ ಮೇಜರ್ಸ್ ತೆಗೆದುಕೊಳ್ಳುವುದಕ್ಕೆ ಏರ್ಪಾಡು ಮಾಡಿದ್ದೇವೆ. ಬೆಂಕಿ, ಪ್ರವಾಹ ಇಂಥ ಅನಾಹುತಗಳಿಗೆ

ಈಡಾಗುವ ಜನರಿಗೆ ಪರಿಹಾರವನ್ನು ಕೊಡುವ ವಿಚಾರದಲ್ಲಿ ಕೆಲವು ಕಾಯಿದೆಗಳನ್ನು ಇಟ್ಟುಕೊಂಡಿದ್ದೇವೆ. ಅದನ್ನು ತಿದ್ದುಪಡಿ ಮಾಡುವುದಕ್ಕಾಗುವುದಿಲ್ಲವೇ ಎಂದು ಮಾನ್ಯ ಮುನಿಯಪ್ಪನವರು ಮತ್ತು ಇತರರು ಸೂಚನೆ ಮಾಡಿದರು. ಬಹುಶಃ ಅವರಿಗೆ ಈಗಾಗಲೇ ತಿಳಿದಿರಬಹುದು. ಬೆಂಕಿ ಬಿದ್ದ ಕಾಲದಲ್ಲಿ ತಹಶೀಲ್ದಾರವರಿಗೆ 25 ರೂಪಾಯಿ ಕೊಡತಕ್ಕದ್ದನ್ನು 50 ರೂಪಾಯಿಗೆ ಹೆಚ್ಚು ಮಾಡಿದ್ದೇವೆ. ಅಸಿಸ್ಟೆಂಟ್ ಕಮೀಷನರ್ 100 ರೂಪಾಯಿ, ಡೆಪ್ಯೂಟಿಕಮಿಷನರ್ 250 ರೂಪಾಯಿ, ಡಿವಿಜನಲ್ ಕಮೀಷನರು 500 ರೂಪಾಯಿ ಕ್ಯಾಷ್ ಮೆಟೀರಿಯಲ್ಸ್ ಬಿಟ್ಟು ಕೊಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದೇವೆ. ಆದ್ದರಿಂದ ಈ ಪರಿಹಾರ ಸುಮಾರು ಎರಡು ಲಕ್ಷ 25 ಸಾವಿರದ 864 ರೂಪಾಯಿ. ----- ಒಟ್ಟಿನಲ್ಲಿ ಆಗಿರುವಂತಹ ನಷ್ಟವನ್ನು ಕೊಡಿಸಿಕೊಡುವ ಉದ್ದೇಶವಲ್ಲ. ಆದರೆ ಕಷ್ಟಕಾಲದಲ್ಲಿ ಸ್ವಲ್ಪಮಟ್ಟಿನ ಸಹಾಯವನ್ನು ಪರಿಹಾರ ರೂಪವಾಗಿ ಕೊಡಬೇಕೆನ್ನುವ ಉದ್ದೇಶದಿಂದ ಕೊಡುತ್ತಿದ್ದೇವೆ. ----- ಆ ದೃಷ್ಟಿಯಿಂದ ಅಧಿಕಾರಿಗಳು ನಿರ್ಲಕ್ಷ ಮಾಡದೆ ಈ ಕೆಲಸಗಳನ್ನು ಮಾಡುತ್ತಿದ್ದಾರೆ. ಈ ಒಂದು ದೃಷ್ಟಿಯಿಂದ ಅನೇಕ ಸಂದರ್ಭಗಳಲ್ಲಿ ಇಂತಹ ಕಷ್ಟಕ್ಕೆ ಈಡಾಗಿರುವ ಜನಕ್ಕೆ ಆದಷ್ಟು ಬೇಗ ಪರಿಹಾರ ಕೊಡಬೇಕು ಎಂದು ಸೂಚನೆಗಳನ್ನು ಈಗಾಗಲೇ ಅಧಿಕಾರಿಗಳಿಗೆ ಕೊಟ್ಟಿದ್ದೇವೆ.

ಶ್ರೀ ಎಚ್.ಬಿ. ಜ್ವಾಲನಯ್ಯ (ಹಾಸನ) ಚಿಕ್ಕಮಗಳೂರು ಜಿಲ್ಲೆಗೆ ಪರಿಹಾರ ಕಾರ್ಯಗಳಿಗಾಗಿ ಸುಮಾರು ಒಂದೂವರೆ ಲಕ್ಷದಷ್ಟು ಹಣವನ್ನು ಸರಕಾರ ಕೊಟ್ಟಿದ್ದರೂ, ಅದರಲ್ಲಿ ಹದಿನೈದು ಸಾವಿರದಷ್ಟನ್ನು ಅಲ್ಲಿನ ಅಧಿಕಾರಿಗಳು ಖರ್ಚು ಮಾಡಿಲ್ಲ. ಆಕೆ ಮಾಡಲಿಲ್ಲ ಎಂದರೆ, ಸರ್ಕಾರದ ವಿವರಣೆಗಾಗಿ ಕಾಯುತ್ತಿದ್ದೇವೆ ಎಂದು ಹೇಳುತ್ತಾರೆ.

ಶ್ರೀ ಬಿ. ರಾಚಯ್ಯ – ಚಿಕ್ಕಮಗಳೂರು ಜಿಲ್ಲೆಗಾಗಿ ಒಂದು ಲಕ್ಷದ ಅರವತ್ತು ಸಾವಿರದಷ್ಟು ರೂಪಾಯಿಗಳನ್ನು ಬಡ್ಡಿ ಇಲ್ಲದ ಸಾಲವಾಗಿ ಮತ್ತು ಐವತ್ತು ಸಾವಿರದಷ್ಟು ಕ್ರೆಡಿಟ್ ರಿಲೀಫ್ ಆಗಿ ಕೊಡಲಾಗಿದೆ. ಮತ್ತು ಬೆಳಗಾಂ ಜಿಲ್ಲೆಯಲ್ಲಿ ಎಂಟು ಹತ್ತು ಸಾವಿರದಷ್ಟು ಹಣ ಕೊಡಬೇಕೆಂದರೂ ಸೂಚನೆ ಕೊಡಲಾಗಿದೆ. ಆದರೆ ಇಲ್ಲಿ ಏನಾಗಿದೆ ಎಂದರೆ, ಕೆಲವು ಅಧಿಕಾರಿಗಳು ಕಷ್ಟದಲ್ಲಿರುವವರಿಗೆ ಹಂಚುವ ವಿಚಾರದಲ್ಲಿ ರಿಲೀಫ್ ರೂಲ್ಸ್ ಏನಿದೆ, ಅದರಂತೆಯೇ ಅನುಸರಿಸಿಕೊಡಬಹುದು. ಇದಕ್ಕಾಗಿ ಸರ್ಕಾರದವರ ಸೂಚನೆಗಳನ್ನೇನೂ ಕಾಯುವ ಅವಶ್ಯಕತೆ ಇಲ್ಲ. ಆದರೆ ಕೆಲವು ಕಡೆಗಳಲ್ಲಿ ಅಧಿಕಾರಿಗಳು ಮಾನವೀಯತೆಯ ದೃಷ್ಟಿ ಕೆಲಸ ಮಾಡುತ್ತಿಲ್ಲ ಎಂದು ನನಗೆ ತಿಳಿದು ಬಂದಿದೆ. ಅಂತಹವರ ಮೇಲೆ ಉಗ್ರವಾದ ಕ್ರಮಗಳನ್ನು ತೆಗೆದುಕೊಳ್ಳುತ್ತಿದ್ದೇವೆ. ನನ್ನ ಗಮನಕ್ಕೆ ಇಂತಹ ವಿಚಾರಗಳು ಬಂದಾಗ ಅಧಿಕಾರಿಗಳಿಗೂ ಸೂಕ್ತವಾದ ನಿರ್ದೇಶನಗಳನ್ನೂ ಕೊಡುತ್ತಿದ್ದೇವೆ.

ಇನ್ನು ಭೂಮಿಯನ್ನು ಸ್ವಾಧೀನ ಮಾಡುವಂತಹದು ಬಹಳ ನಿಧಾನವಾಗುತ್ತಿದೆ. ಇಲ್ಲಿಗೆ ಹೋಗುವಂಥ ಅಧಿಕಾರಿಗಳು ಕುಂಟರೂ ಆಗಿಲ್ಲ, ಮೋಟರೂ ಆಗಿಲ್ಲ, ಹೆಳವರೂ ಆಗಿಲ್ಲ, ಎಂದು ಶ್ರೀಮತಿ ನಾಗರತ್ನಮ್ಮನವರು ನಂಜನಗೂಡಿನ ಒಂದು ಉದಾಹರಣೆಯನ್ನು

ತೆಗೆದುಕೊಂಡು ಹೇಳಿದರು ಎಂದು ನನಗೆ ಕಾಣುತ್ತದೆ. ಈ ದಿವಸ ಮೈಸೂರು ಸಂಸ್ಥಾನದಲ್ಲಿ ಪಟ್ಟಣಗಳನ್ನು ವಿಸ್ತರಣೆ ಮಾಡುವಾಗ ಆಗಲೀ, ರಸ್ತೆಗಳನ್ನು ನಿರ್ಮಾಣ ಮಾಡುವಾಗ ಆಗಲಿ, ಬಂದರುಗಳನ್ನು ಕಟ್ಟುವಾಗ ಆಗಲಿ, ಅಥವಾ ರೈಲ್ವೆ ಲೈನುಗಳನ್ನು ಹಾಕುವಾಗ ಆಗಲಿ ಭೂಮಿಯನ್ನು ಅಲ್ಲಲ್ಲಿ ಅಕ್ವೈರು ಮಾಡಿಕೊಳ್ಳಬೇಕಾಗಿ ಬರುತ್ತದೆ. ಮಂಗಳೂರು ಹಾರ್ಬರ್ ಮಾಡುವಾಗ ಸುಮಾರು ಐದು ಸಾವಿರ ಎಕರೆಗಳಷ್ಟು ಭೂಮಿಯನ್ನು ಇಲ್ಲಿ ಸ್ವಾಧೀನ ಪಡಿಸಿಕೊಳ್ಳಬೇಕಾಗಿ ಬಂದಿದೆ. ಆದರೆ ಇಂದಿನ ರೈತ ತನ್ನ ಭೂಮಿಯನ್ನು ಬಹಳ ಪವಿತ್ರವಾದುದೆಂದು ಹೇಳಿ ಅದನ್ನು ಬಿಡುವುದಕ್ಕೆ ಅವನು ಇಷ್ಟಪಡುವುದಿಲ್ಲ. ಇದರಿಂದ ಕೆಲವು ಕಡೆಗಳಲ್ಲಿ ಭೂಮಿಯನ್ನು ಸ್ವಾಧೀನ ಮಾಡಿಕೊಳ್ಳುವುದು ತಡವಾಗುತ್ತಿದೆ. ಇಂತಹ ಕಡೆಗಳಲ್ಲಿ ಸೂಕ್ತವಾದ ಕಾರ್ಯಕ್ರಮ ತೆಗೆದುಕೊಳ್ಳಬೇಕಾದರೆ ನಾನಾಗಲೇ ಹೇಳಿದ ಹಾಗೆ ಅಧಿಕಾರಿಗಳು ಕೆಲಸ ಮಾಡುವುದು ನಿಧಾನವಾಗುತ್ತಿದೆ. ಇದರ ಜೊತೆಗೆ ಹಳ್ಳಿಗಳಲ್ಲಿ ಭೂಮಿಗಳನ್ನು ಬಿಡಬೇಕು ಎಂದು ಹೇಳಿದರೆ ಅವರೂ ಬೇಗನೆ ಬಿಡುವುದಿಲ್ಲ. ಇದೂ ಅಲ್ಲದೆ ಕೆಲವು ಕಡೆಗಳಲ್ಲಿ ಪಂಚಾಯಿತಿಗಳ ಗುಂಪುಗಳೂ ಇರುತ್ತವೆ. ಅವರು ಇಲ್ಲದ ತಕರಾರುಗಳನ್ನು ಹೂಡುತ್ತಾರೆ. ಇದರಿಂದ ಕೆಲಸ ನಿಧಾನವಾಗುತ್ತದೆ. ಕಾಂಪನ್‌ಸೇಷನ್ ಕೊಡುವಾಗ ಹಣ ಸಾಕಷ್ಟು ಕೊಟ್ಟಿಲ್ಲ ಎಂದು ಕೆಲವರು ಕೋರ್ಟುಗಳಿಗೆ ಹೋಗುತ್ತಾರೆ. ಇದರಿಂದಲೂ ನಿಧಾನವಾಗುತ್ತದೆ. ಇದಕ್ಕಾಗಿ ಕೆಲವು ಕಡೆ ನಮ್ಮ ದೇಶದಲ್ಲಿ ದೊಡ್ಡ, ದೊಡ್ಡ ಪ್ರಾಜೆಕ್ಟ್‌ಗಳು ಎಂದು ಎಲ್ಲಿ ಮಾಡುತ್ತಿದ್ದಾರೆ ಅಲ್ಲಿ ಭೂಮಿಯನ್ನು ಸ್ವಾಧೀನ ಮಾಡುವುದಕ್ಕಾಗಿ ಒಬ್ಬರು ಸ್ಪೆಷಲ್ ಆಫೀಸರ್ ಎನ್ನುವ ಅಧಿಕಾರಿಗಳನ್ನು ನೇಮಕ ಮಾಡಿದ್ದೇವೆ. ಆದರೆ ಸಬ್ ಡಿವಿಜನ್ನುಗಳಲ್ಲಿರುವ ಅದಿಕಾರಿಗಳು ವಹಿಸುವಷ್ಟು ಉತ್ಸಾಹ ಹಾಗೂ ಆಸಕ್ತಿಗಳನ್ನು ಇಲ್ಲಿರುವ ಸ್ಪೆಷಲ್ ಆಫೀಸರ್ಸ್‌ಗಳು ವಹಿಸುತ್ತಿಲ್ಲ. ಇಂತಹ ಸ್ಪೆಷಲ್ ಆಫೀಸರ್‌ಗಳನ್ನು ಹೇಮಾವತಿ, ಘಟಪ್ರಭಾ ಹಾಗೂ ಮಲಪ್ರಭಾ ಇಂತಹ ಯೋಜನೆಗಳನ್ನು ಮಾಡುವ ಭಾಗಗಳಲ್ಲಿ ಒಬ್ಬೊಬ್ಬರು ಸ್ಪೆಷಲ್ ಅಧಿಕಾರಿಗಳನ್ನು ಚೆನ್ನಾಗಿ ಕೆಲಸ ಮಾಡುತ್ತಾರೆಂದು ವರ್ಗ ಮಾಡಿದರೆ ಅಂತಹ ಅಧಿಕಾರಿಗಳು ಅಲ್ಲಿಗೆ ಹೋಗಲು ಇಷ್ಟಪಡುತ್ತಿಲ್ಲ. ಹೇಮಾವತಿ ಯೋಜನೆಗಾಗಿ ಒಬ್ಬರು ಅದಿಕಾರಿಗಳನ್ನು ಅಲ್ಲಿಗೆ ವರ್ಗಮಾಡಿದರೂ ಅವರು ಹೋಗಲಿಲ್ಲ. ಆದರೆ ಒಬ್ಬರಿಗೆ ಮಾತ್ರ, ನೀವು ಹೋಗದೆ ಇದ್ದರೆ ಸಸ್‌ಪೆಂಡ್ ಮಾಡುತ್ತೇವೆಂದು ಎಚ್ಚರಿಕೆ ನೋಟಿಸನ್ನು ಕಳುಹಿಸಿದ್ದೇನೆ. ಹೀಗೆ ಅಧಿಕಾರಿಗಳು ನಿರುತ್ಸಾಹದಿಂದ ಕೆಲಸ ಮಾಡುವುದರಿಂದ ಕೆಲಸಗಳು ನಿಧಾನವಾಗುತ್ತವೆ. ಕೆಲವು ಅಧಿಕಾರಿಗಳು ಚೆನ್ನಾಗಿ ಕೆಲಸ ಮಾಡುವವರನ್ನು ವರ್ಗ ಮಾಡುವುದಕ್ಕೆ ಹೋದರೆ ಅವರು ನಾನು ಚೆನ್ನಾಗಿ ಕೆಲಸ ಮಾಡುತ್ತಿದ್ದೇನೆ ಎಂದು ನನಗೆ ಪನಿಷ್‌ಮೆಂಟ್ ಕೊಡುವುದಕ್ಕಾಗಿ ಇಂತಹ ನೇಮಕ ಮಾಡುತ್ತೀರಾ ಎಂದು ಕೇಳುತ್ತಾರೆ. ಉತ್ಸಾಹ ಇರುವಂತಹ ಅದಿಕಾರಿಗಳು ಹೋಗಿ ಕೆಲಸ ಮಾಡಿದರೆ ಭೂಮಿಯನ್ನು ಸ್ವಾಧೀನ ಮಾಡಿಕೊಳ್ಳುವಾಗ ಅದರ ಕೆಲಸಗಳು ನಿಧಾನವಾಗುತ್ತವೆ. ಅಲ್ಲದೆ ಕೆಲವು ಅಧಿಕಾರಿಗಳನ್ನು ಕಡ್ಡಾಯವಾಗಿ ಹೋಗಲೇಬೇಕು ಎಂದು ಒತ್ತಾಯ ಮಾಡಿದರೆ ಅದಕ್ಕೆ ಅನೇಕ ರೀತಿಯ ಆಪಾದನೆಗಳು ನನ್ನಲ್ಲಿಗೆ ಬರುತ್ತವೆ. ಹಾಗೂ ನಿಮಗೂ ತಿಳಿದಿರುವ ಹಾಗೆ ಇದರಲ್ಲಿ ಜಾತೀಯತೆಯಿಂದ ಹೀಗೆ ವರ್ಗಮಾಡುತ್ತಿದ್ದಾರೆ.

ಅವರು ಪಕ್ಷದವರಿಗೆ ಸೇರಿದವರೆಂದೂ ವರ್ಗ ಮಾಡುತ್ತಿದ್ದಾರೆ, ಇತ್ಯಾದಿ ಕಾರಣಗಳಿಂದ ಇಲ್ಲಿಗೆ ಅಧಿಕಾರಿಗಳು ಹೋಗುವುದು ತಡವಾಗುತ್ತಿದೆ. ಇದಕ್ಕಾಗಿ ನಾನು ಒಂದು ವಿಚಾರ ಹೇಳಬೇಕಾಗಿದೆ. ಪಿ.ಡಬ್ಲ್ಯುಡಿ ಇಲಾಖೆಯಲ್ಲಿ ಯಾರಾದರೂ ಅದಿಕಾರಿಗಳು ಹೊಸ ಪ್ರಾಜೆಕ್ಟ್ ಕೆಲಸಗಳಿಗೆ ಹೋಗುವಾಗ ಅಂತಹ ಅಧಿಕಾರಿಗಳಿಗೆ ಸ್ಪೆಷಲ್ ಪ್ರಾಜೆಕ್ಟ್ ಅಲೋಯನ್ಸ್ ಎಂದು ಕೊಡುತ್ತಾರೆ. ಅದರಂತೆ ನಮ್ಮ ರೆವಿನ್ಯೂ ಇಲಾಖೆಯಲ್ಲೂ ಕೂಡ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವಾಗ ಸ್ಪೆಷಲ್ ಆಫೀಸರ್ ಎಂದು ನೇಮಕ ಆಗುವವರಿಗೆ ಒಂದು ರೀತಿಯಾದ ಇನ್‌ಸೆಂಟೀವ್ ಇರುವಂತೆ ಆಸಕ್ತಿವಹಿಸಿ ಕೆಲಸ ಮಾಡುವ ಅಧಿಕಾರಿಗಳಿಗೆ ಇಂತಹ ಸ್ಪೆಷಲ್ ಅಲೋಯನ್ಸ್ ಕೊಡಬೇಕು ಎಂದು ನಾನು ಕಮಿಷನ್ನಿನವರಿಗೂ ಬರೆದಿದ್ದೇನೆ. ಆದ್ದರಿಂದ ನಾನು ಶ್ರೀಮತಿ ನಾಗರತ್ನಮ್ಮ ನವರಿಗೆ ಹೇಳುವುದು ಸ್ವಲ್ಪಮಟ್ಟಿಗೆ ಅಧಿಕಾರಿಗಳಿಂದ ಕೆಲಸ ನಿಧಾನವಾಗುತ್ತಿದೆ.

ಮಾನ್ಯ ಸದಸ್ಯರಾದ ಶ್ರೀಮಾನ್ ದೇವೇಗೌಡರು ಇಲ್ಲಿ ಸಲಹೆಯನ್ನು ಕೊಟ್ಟರು. ಅಕ್ವಿಸಿಷನ್ ಕೆಲಸದಲ್ಲೇ ಆಗಲಿ ಅಥವಾ ಬೇರೆ ಯಾವ ಕೆಲಸದಲ್ಲೇ ಆಗಲಿ ಸರಕಾರ ಅಧಿಕಾರಿಗಳನ್ನು ನೇಮಕ ಮಾಡಿದ ಮೇಲೆ ಅಂತಹ ಅಧಿಕಾರಿಗಳ ಮೇಲೆ ಎಲ್ಲಿ ಜವಾಬ್ದಾರಿಗಳನ್ನು ಹಾಕಬೇಕು ಮತ್ತು ಆ ಅಧಿಕಾರಿಗಳು ಸರಿಯಾಗಿ ಕೆಲಸ ಮಾಡದೇ ಇದ್ದ ಪಕ್ಷದಲ್ಲಿ ಅದರಿಂದಾಗುವ ನಷ್ಟಗಳಿಗೆ ಆ ಅಧಿಕಾರಿಗಳೇ ಜವಾಬ್ದಾರರು ಎನ್ನುವ ಒಂದು ಸೂಚನೆ ಕೊಟ್ಟಿದ್ದಾರೆ. ಇದೊಂದು ಒಳ್ಳೆಯ ಸಲಹೆ. ಅದೇ ರೀತಿ ಸರ್ಕಾರದಿಂದ ಅವರಿಗೆ ಎಚ್ಚರಿಕೆ ಕೊಟ್ಟಿದ್ದೇವೆ. ಅಕ್ವಿಸಿಷನ್ ಕೆಲಸ ಮಾಡುವ ಅಧಿಕಾರಿಗಳು ಹುರುಪು ಉಮ್ಮಸ್ಸಿನಿಂದ ಇರಬೇಕು ಎಂದು ಶ್ರೀಮತಿ ನಾಗರತ್ನಮ್ಮನವರು ಹೇಳಿದ್ದಾರೆ. ಅದರಂತೆ ಪ್ರಯತ್ನ ಮಾಡುತ್ತಿದ್ದೇವೆ.

ಇನ್ನು ಭೂಮಿ ಹಂಚಿಕೆ ವಿಚಾರದಲ್ಲಿ ಆಗತಕ್ಕ ನಿಧಾನ ಹಾಗೂ ಇದರಲ್ಲಿರುವ ಲಂಚಗುಳಿತನ ಬಗ್ಗೆ ಅನೇಕರು ಹೇಳಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಈಗಿರತಕ್ಕ ಅಂಕಿ ಅಂಶಗಳ ಪ್ರಕಾರ 6 ಲಕ್ಷ ಚಿಲ್ಲರೆ ಎಕರೆಗಳಷ್ಟು ಇದೆ. ಇದರಲ್ಲಿ ಅನೇಕ ಕಡೆಗಳಲ್ಲಿ ಅಕ್ರಮಗಳಾಗುತ್ತಿರುವುದು ನಿಜ. ಸುಮಾರು ಒಂದು ಲಕ್ಷದ ಇಪ್ಪತ್ತೇಳು ಸಾವಿರ ಎಕರೆಯಷ್ಟು ಭೂಮಿಯನ್ನು ಕೆಲವರು ದುರುಪಯೋಗ ಮಾಡಿಕೊಂಡು ಒತ್ತುವರಿ ಅಕ್ರಮ ಪ್ರವೇಶ ಮಾಡಿದ್ದಾರೆ. ಎಂದೂ ತಿಳಿದು ಬರುತ್ತದೆ. ಸುಮಾರು ಆರು ಲಕ್ಷ ಚಿಲ್ಲರೆಯಷ್ಟು ಸಾಗುವಳಿಗೆ ಇರುವ ಭೂಮಿಯಲ್ಲಿ ಇಷ್ಟು ಭೂಮಿಯನ್ನು ಯಾರಿಗೂ ಕೊಡಿಸಲಿಲ್ಲ. ಇದುವರೆಗೆ ಏನು ಕ್ರಮ ತೆಗೆದುಕೊಂಡಿದ್ದೀರಿ ಎಂದು ಕೇಳಿದರು. ನಮಗೆ ಐದು ಭಾಗಗಳು ಇರುವುದರಿಂದ ಐದು ವಿಧವಾದ ದರಖಾಸ್ತು ನಿಯಮಗಳಿದ್ದವು. ಈಗ ಇವುಗಳನ್ನೆಲ್ಲಾ ಏಕ ರೂಪವಾಗಿ ಮಾಡಿ ಈಗ ಪ್ರಕಟಮಾಡಿದ್ದೇವೆ. ಇದರಂತೆ ಎಲ್ಲೆಲ್ಲಿ ಜಮೀನುಗಳಿವೆಯೋ ಅಲ್ಲೆಲ್ಲಾ ಅಳತೆ ಮಾಡಿಸಿ ಅದರಲ್ಲಿದ್ದ ಮಾಲ್ಕಿ ಮರಗಳನ್ನು ಕಡಿಸಿ ಸಾಗುವಳಿ ಮಾಡಲು ಎಷ್ಟು ಭೂಮಿ ಸಿಗುತ್ತದೆ ಅದರ ಹದ್ದುಬಸ್ತುಗಳನ್ನು ಮಾಡಲು ಆಯಾ ಊರುಗಳಲ್ಲಿರುವ ತಾಲ್ಲೂಕುಗಳಲ್ಲಿ ಪ್ರಕಟ ಮಾಡಲಾಗಿದೆ. ಈಗ ಏಕ ರೂಪದ ನಿಯಮಗಳನ್ನು ಮಾಡಿರುವುದರಿದ ಅಧಿಕಾರಿಗಳು ಅದರಂತೆ ತಕ್ಕ ಕಾರ್ಯಕ್ರಮ

ರೂಪಿಸಲು ಒಂದು ಸೆಲ್ಲನ್ನು ತೆರೆಯಲಾಗಿದೆ. ----- ಈ ದೃಷ್ಟಿಯಿಂದ ಭೂಮಿಯ ಹಂಚಿಕೆ ಬೇಗ ಮಾಡಲು ಸಹಾಯವಾಗುತ್ತದೆ ಎಂದು ಮಾಡುತ್ತಿದ್ದೇವೆ. ಇನ್ನು ಮುಂದೆ ತ್ವರಿತವಾಗಿ ಹಂಚುವಿಕೆ ಕೆಲಸಗಳನ್ನು ನಡೆಸುವ ವ್ಯವಸ್ಥೆ ಮಾಡುತ್ತೇವೆ. ಹೀಗಾಗಲೇ ಅರಣ್ಯ ಪ್ರದೇಶದಲ್ಲಿದ್ದ ಸುಮಾರು 83 ಸಾವಿರ ಎಕರೆಗಳಷ್ಟು ಭೂಮಿಯನ್ನು ಕಂದಾಯ ಇಲಾಖೆಗೆ ವರ್ಗಾಯಿಸಿ ಅವುಗಳನ್ನು ಸರ್ವೆ ಮಾಡಿ ಅಲ್ಲಿರುವ ಮರಗಳನ್ನು ಕತ್ತರಿಸುವ ಕೆಲಸವನ್ನು ಮಾಡುತ್ತಿದ್ದೇವೆ. ------

ಉತ್ತರ ಕನ್ನಡ ಜಿಲ್ಲೆಯಲ್ಲಿ ಶೇ 60 ರಷ್ಟು, ಪ್ರದೇಶ ಅರಣ್ಯವಾಗಿದೆ, ಆದುದರಿಂದ ಅರಣ್ಯ ಪ್ರದೇಶವನ್ನು ಸಾಗವಳಿ ಮಾಡುವುದಕ್ಕೆ ಕೊಡಬೇಕು ಎಂದು ಉತ್ತರ ಕನ್ನಡ ಜಿಲ್ಲೆಯಿಂದ ಬಂದಿರುವಂಥ ಮಾನ್ಯ ಸದಸ್ಯರಾದ ಶ್ರೀಮಾನ್ ಜಾಲಿಸಟ್ಟಗಿಯವರು ಹೇಳಿದರು. ಒಂದು ಲಕ್ಷ ಎಕರೆ ಭೂಮಿ ಉತ್ತರಕನ್ನಡ ಜಿಲ್ಲೆಯಲ್ಲಿ ಸಾಗುವಳಿಗೆ ಯೋಗ್ಯವಾಗಿದೆ. ಎರಡು, ಮೂರು ಎಕರೆಯನ್ನು ಒಬ್ಬರಿಗೆ ಕೊಡುವುದರ ಬದಲು ಗುಂಪು, ಗುಂಪಾಗಿ 200,300 ಎಕರೆ ಭೂಮಿಯನ್ನು ಒಟ್ಟಿಗೆ ಕೊಡುತ್ತೇವೆ. ಈ ಕೆಲಸಕ್ಕಾಗಿ ಹೀಗಾಗಲೆ ಸಿಬ್ಬಂದಿ ನೇಮಿಸಿದ್ದೇವೆ. ಇದರಲ್ಲಿ ಕಾಫಿ ತೋಟಮಾಡುವುದಕ್ಕೆ ಮತ್ತು ಕರಾವಳಿ ಪ್ರದೇಶದಲ್ಲಿ ಗೋಡಂಬಿ ಬೆಳೆಯುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದೇವೆ. -------- ಕೆಲವು ಕಡೆ ಅತಿಕ್ರಮ ಪ್ರವೇಶ ಮಾಡಿ ಭೂಮಿ ಸಾಗುವಳಿ ಮಾಡಿದ್ದಾರೆ. ಯಾರು ಸಾಗುವಳಿ ಮಾಡುತ್ತಾರೆ ಅಂಥವರಿಗೆ ಭೂಮಿ ಖಾಯಂ ಮಾಡುವ ವಿಚಾರದಲ್ಲಿ ಶ್ರೀಮಾನ್ ವಿ.ಎನ್. ಪಾಟೀಲ್‌ರವರು ಸಲಹೆ ಮಾಡಿದ್ದಾರೆ. ಇದರ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲಾಗಿದೆ.

ಇನಾಮ್ ಅಬಾಲಿಷನ್ ಮಾಡುವ ಕಾಲದಲ್ಲಿ ಇನಾಮ್‌ದಾರರಿಗೆ ಸಹಾಯವಾಗುವ ರೀತಿಯಲ್ಲಿ ಭೂಮಿ ಕೊಡಲಾಗಿದೆ. ಹಾಗೂ ಹೆಚ್ಚು ಪರಿಹಾರ ಧನ ಇನಾಮ್‌ದಾರರಿಗೆ ಕೊಟ್ಟಿದೆ ಎಂದು ಶ್ರೀಮಾನ್ ವೆಂಕಟಗಿರಿಯಪ್ಪನವರು ಪ್ರಸ್ತಾಪ ಮಾಡಿದರು. ಇನಾಮ್ ಅಬಾಲಿಷನ್ ಕಾನೂನು ಐದು ಭಾಗಗಳಲ್ಲಿ ಐದು ತರಹ ಇದೆ. ಹೀಗಾಗಲೆ 4200 ಚಿಲ್ಲರೆ ಹಳ್ಳಿಗಳಲ್ಲಿ ಸರ್ವೆ ಕೆಲಸ ನಡೆದಿದೆ, 4 ಲಕ್ಷ ಎಕರೆ ಭೂಮಿಯನ್ನು ಗೇಣಿದಾರರಿಗೆ ಹಂಚಿದೆ. ------ ಇನಾಮ್ ರದ್ದತಿ ಮಾಡುವ ವಿಷಯದಲ್ಲಿ ಸರ್ಕಾರದವರು ಅತ್ಯಂತ ಆಸಕ್ತಿಯಿಂದ ತೀವ್ರ ರೀತಿಯಲ್ಲಿ ಕೆಲಸ ಮಾಡಿದ್ದಾರೆ.

ಇನ್ನು ಇನಾಮ್‌ದಾರರು ಗೇಣಿದಾರನ ಭೂಮಿಯನ್ನು ಅಕ್ರಮವಾಗಿ ಅಕ್ರಮಿಸಿ ಕೊಂಡಿದ್ದಾರೆ ಎಂದು ನನಗೆ ಯಾರು ತಿಳಿಸಿಲ್ಲ. ಒಂದು ವೇಳೆ ಅದನ್ನು ತಿಳಿಸಿದ ಪಕ್ಷದಲ್ಲಿ ಗೇಣಿದಾರರಿಗೆ ರಕ್ಷಣೆ ಕೊಡಲು ನಾನು ಪ್ರಯತ್ನ ಮಾಡುತ್ತೇನೆ. ಕಾಯಿದೆಯಿಂದ ಗೇಣಿದಾರನಿಗೆ ತೊಂದರೆಯಾದರೆ ಹಾಗೂ ಭೂಮಾಲೀಕರು ಕೋರ್ಟಿಗೆ ಹೋದರೆ ಪ್ರತಿಯೊಬ್ಬ ಗೇಣಿದಾರನಿಗೆ ಬೇಕಾಗಿರುವಂಥ ಲಾಯರನ್ನು ಸರ್ಕಾರ ಒದಗಿಸಿ ಕೊಡಬೇಕು ಎಂದು ಒಂದು ತಿದ್ದುಪಡಿ ಮಾಡಿದ್ದೇವೆ. ಇದರಿಂದ ಗೇಣಿದಾರನ ಹಿತರಕ್ಷಣೆಯಾಗಿದೆ. ಇದರಿಂದ ಅನೇಕ ಲಾಯರು

ದುಡ್ಡು ತೆಗೆದುಕೊಳ್ಳದೆ ಗೇಣಿದಾರನ ಸಲುವಾಗಿ ಕೆಲಸ ಮಾಡಬೇಕು. ಈ ರೀತಿ ಹೆಚ್ಚಿಗೆ ಕೆಲಸ ಮಾಡಿದರೆ ನಮ್ಮ ದೇಶದಲ್ಲಿ ವರ್ಗ ರಹಿತ ಸಮಾಜ ಬೇಗ ಬರುತ್ತದೆ. ಈ ರೀತಿಯಾಗಿ ಗೇಣಿದಾರನಿಗೆ ರಕ್ಷಣೆಕೊಡುವುದಕ್ಕಾಗಿ ಪ್ರಯತ್ನಮಾಡಿದ್ದೇವೆ. ------ ಭೂಮಿಯನ್ನು ವಾಪಸ್ಸು ಕೊಡುವಂಥ ಕಾಲದಲ್ಲಿ ತೋಟಿತಳವಾರರುಗಳಿಂದ ಹೀಗಾಗಲೇ ಭೂಮಿಯುನ್ನು ಬರೆಸಿಕೊಳ್ಳುತ್ತಿದ್ದಾರೆ. ಅವರು ಮಾರಾಟಮಾಡಲು ಅಡ್ಡಿ ಮಾಡಬೇಕು ಎಂದು ಮಾನ್ಯ ಸದಸ್ಯರಾದ ಶ್ರೀಮಾನ್ ಮುನಿಯಪ್ಪನವರು ತಿಳಿಸಿದ್ದಾರೆ. ಹದಿನೈದು ವರ್ಷ ಈ ಭೂಮಿಯನ್ನು ಪರಭಾರೆ ಮಾಡಕೂಡದು ಎಂದು ತಿಳಿಸಿದ್ದೇವೆ. ಈ ಅವಧಿಯಲ್ಲಿ ಭೂಮಿ ಕೊಂಡುಕೊಂಡರೆ ಸರ್ಕಾರ ವಾಪಸ್ಸು ತೆಗೆದುಕೊಳ್ಳಬೇಕು ಎಂದು ಈ ಮಾನ್ಯ ಸಭೆಯಲ್ಲಿ ಕಳಿಸಿರುವ ಒಂದು ಖೋತಾ ನಿರ್ಣಯದಲ್ಲಿ ಸೂಚಿಸಿದೆ. -------- ತೋಟಿ ತಳವಾರ ಇನಾಮ್ ಜಮೀನುಗಳ ವಿಚಾರದಲ್ಲಿ ಕಾಯಿದೆ ಉಲ್ಲಂಘನೆ ಮಾಡಿ ಪರಭಾರೆ ಮಾಡಿದರು ಎಂದು ಕಂಡು ಬಂದರೆ ಅದನ್ನು ಸರ್ಕಾರದ ಗಮನಕ್ಕೆ ತಂದರೆ ಕಾಯಿದೆ ಪ್ರಕಾರ ಅದನ್ನು ವಾಪಸ್ಸು ತೆಗೆದುಕೊಂಡು ಬೇರೆಯವರಿಗೆ ಹಂಚುವುದಕ್ಕೆ ವ್ಯವಸ್ಥೆ ಮಾಡುತ್ತೇವೆ, ಎಂದು ಈ ಸಂದರ್ಭದಲ್ಲಿ ಅತಿವಿನಯದಿಂದ ತಿಳಿಸಲು ಇಷ್ಟಪಡುತ್ತೇನೆ.

ಇನ್ನು ಸ್ಟಾಂಪ್ಸ್ ವಿಚಾರ. ಇದನ್ನು ಅನೇಕರು ಪ್ರಸ್ತಾಪ ಮಾಡಿದ್ದಾರೆ. ಇದು ರಿಜಿಸ್ಟ್ರೇಷನ್ ಇಲಾಖೆಗೆ ಸಂಬಂಧಪಟ್ಟದ್ದು. ಈಗ ಇರುವ ರೀತಿಯಲ್ಲಿ ಸ್ಟಾಂಪ್ಸ್ ಸಾಕಷ್ಟು ಸಿಗುತ್ತಿಲ್ಲ. ಸ್ಟಾಂಪ್ಸ್ ವಿಚಾರದಲ್ಲಿ ಅಲ್ಲಲ್ಲಿ ಕಳ್ಳ ವ್ಯಾಪಾರ ನಡೆಯುತ್ತಿದೆ. ಅದನ್ನು ಸರಿಯಾಗಿ ವ್ಯವಸ್ಥೆ ಮಾಡಬೇಕು ಎಂದು ಪ್ರಸ್ತಾಪ ಮಾಡಿದರು. ಈ ವರ್ಷ ಇಂಡೆಂಟ್ ಮಾಡಿದ ಅಂಕಿ ಅಂಶಗಳನ್ನು ಕೊಟ್ಟರೆ ಸರ್ಕಾರ ಏನು ಪ್ರಯತ್ನ ಮಾಡಿದೆ ಎನ್ನುವುದು ತಾವು ತಿಳಿದುಕೊಳ್ಳಬಹುದು. ಕಳೆದ ವರ್ಷಕ್ಕಿಂತ ಸುಮಾರು ಎರಡರಷ್ಟು ಜಾಸ್ತಿಯಾಗಿದೆ. ನಾಸಿಕದಲ್ಲಿರುವ ಕಂಟ್ರೋಲರ್ ಆಫ್ ಸ್ಟಾಂಪ್ಸ್ ಅವರು ನಮಗೆ ಸಾಕಷ್ಟು ಸ್ಟಾಂಪ್ಸ್‌ಗಳನ್ನು ಒದಗಿಸಿಕೊಟ್ಟಿದ್ದಾರೆ. ನಮ್ಮ ಇಲಾಖೆಯ ಒಬ್ಬ ಅಧಿಕಾರಿಯನ್ನು ನಾಸಿಕಕ್ಕೆ ಕಳುಹಿಸಿಕೊಟ್ಟ ಮೇಲೆ ಸ್ಟಾಂಪುಗಳ ಸಪ್ಲೈ ಹೆಚ್ಚಾಗಿ ಆಗಿದೆ. ಹಾಗಾಗಿ ಕಳೆದ ವರ್ಷ ನಾಲ್ಕು ಕೋಟಿ ರೂಪಾಯಿಗಳ ಬೆಲೆಬಾಳುವ ಸ್ಟಾಂಪುಗಳು ಬಂದಿದೆ. ------ ಕಾಗದದ ಅಭಾವವಿರುವ ಈ ಕಾಲದಲ್ಲಿ ಪರದೇಶಗಳಿಂದ ಕಾಗದವನ್ನು ತರಿಸಬೇಕು. ಅಲ್ಲಿಂದ ಬರುವ ಸರಬರಾಜು ಕಡಿಮೆ ಇರುವುದರಿಂದ ಅದನ್ನು ಹೇಗೆ ಪರಿಹಾರ ಮಾಡಬೇಕು ಎಂದು ಯೋಚನೆ ಮಾಡಿ ಈ ತರಹ ಮಾಡುವುದನ್ನು ಜಾರಿಗೆ ತಂದಿದ್ದೆವು. ಆದರಿಂದ ಸ್ವಲ್ಪ ಪರಿಹಾರ ದೊರಕಿತು ಎಂದು ನಾನು ತಿಳಿದುಕೊಂಡಿದ್ದೇನೆ. ಇದಲ್ಲದೆ ಪರದೇಶಗಳಿಂದ ಕಾಗದ ಬರುವುದನ್ನೇ ಇನ್ನು ಮುಂದೆ ಕಾಯಬೇಕಾಗಿಲ್ಲ. ಸ್ಥಳೀಯವಾಗಿ ಅಂತಹ ಕಾಗದದ ತಯಾರಿಕೆ ಪ್ರಯತ್ನ ಮಾಡಿರುವುದರಿಂದ ಮುಂದಿನ ದಿನಗಳಲ್ಲಿ ತೊಂದರೆ ಯಾಗಲಾರದು. ಎಂದು ಹೇಳಿದ್ದಾರೆ. ಇದರಿಂದ ಬಹುಮಟ್ಟಿಗೆ ಛಾಪಾಕಾಗದಗಳ ಅಭಾವ ಬೇಗ ಪರಿಹಾರವಾಗಬಹುದೆಂದು ನಾನು ತಿಳಿದುಕೊಂಡಿದ್ದೇನೆ.-----

ಗ್ರಾಮಾಧಿಕಾರಿಗಳ ಅನುವಂಶಿಯ ಹಕ್ಕು ಹೋದರೂ ಕೂಡ ಅವರಿಗೆ ಪೋಟಿಗೆಯನ್ನು ಕೊಡುವ ಪದ್ಧತಿಯನ್ನು ಇನ್ನೂ ಇಟ್ಟುಕೊಂಡಿದ್ದೀರಿ. ಹಕ್ಕುಹೋದರೂ ಅವರನ್ನು ಮುಂದುವರೆಸಿಕೊಂಡು ಹೋಗುವುದು ಯಾವ ನ್ಯಾಯ ಎಂದು ಮಾನ್ಯ ಸದಸ್ಯರಾದ ಶೆಟ್ಟರ್ ಅವರು ಕೇಳಿದರು. ಬೊಂಬಾಯಿ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕದಲ್ಲಿ ಈಗಾಗಲೇ 'paid servents' ನೇಮಕ ಮಾಡಿದ್ದೇವೆ. ಅದೇ ರೀತಿಯಲ್ಲಿ ಬೆಂಗಳೂರು ಮತ್ತು ಮೈಸೂರು ಡಿವಿಜನ್‌ಗಳಲ್ಲಿ ಸರ್ಕಲ್‌ಗಳನ್ನು ಮಾಡಬೇಕಾಗಿತ್ತು. ಆದರೆ ಅದರಲ್ಲಿ ಕೆಲವು ತಪ್ಪುಗಳು ಕಂಡು ಬಂದುದರಿಂದ ಹಿಂದಕ್ಕೆ ಕಳುಹಿಸಿದ್ದೇನೆ. ಅದು ಬಂದ ಮೇಲೆ ಇಲ್ಲಿಯೂ ಕೂಡ ಅದೇ ವ್ಯವಸ್ಥೆಯನ್ನು ಮಾಡಬೇಕು ಎಂದು ಇದ್ದೇವೆ.

ಅನುವಂಶಿಯ ಹಕ್ಕನ್ನು ಕಳೆದುಕೊಂಡ ಹಳೆಯ ಶ್ಯಾನುಭೋಗರನ್ನು ವಿಲೇಜ್ ಪಂಚಾಯ್ತಿ ಸೆಕ್ರೆಟರಿ ಮತ್ತು ವಿಲೇಜ್ ಅಕೌಂಟೆಂಟ್ ಆಗಿ ನೇಮಕ ಮಾಡಿಕೊಂಡಿದ್ದರು. ಅವರಿಗೆ ಸಂಬಳ ಕೊಡುವುದಕ್ಕೆ ಹಣವನ್ನು ಇಲ್ಲಿ ಒದಗಿಸಿಕೊಂಡಿದ್ದೇವೆ. ಇನ್ನು ಮುಂದೆ ಗ್ರೂಫ್ ಆಫ್ ವಿಲೇಜಸ್ ಎಂದು ಏನು ಮಾಡುತ್ತೇವೆ. ಅದಕ್ಕೆ ಸರ್ಕಲ್‌ಗಳೆಂದು ಕರೆದು ಅಲ್ಲಿ ಸರ್ಕಾರ ಬಾಕಿಯನ್ನು ಪಂಚಾಯ್ತಿ ಬಾಕಿಯನ್ನು ಮತ್ತು ಇತರ ಬಾಕಿಗಳನ್ನು ವಸೂಲಿಮಾಡುವುದಕ್ಕೆ ಒಬ್ಬರೇ ಅಧಿಕಾರಿಯನ್ನು ನೇಮಿಸಬೇಕು ಎನ್ನುವ ಅಭಿಪ್ರಾಯವಿದೆ. ------ ರಿಲಿಜಿಯಸ್ ಅಂಡ್ ಛಾರಿಟೆಬಲ್ ಇನ್‌ಸ್ಟಿಟ್ಯೂಷನ್ಸ್‌ಗೆ ಸಂಬಂಧಪಟ್ಟ ಹಾಗೆ ಜಗಳೂರಿನ ಸದಸ್ಯರು ಮತ್ತು ಶ್ರೀಮತಿ ನಾಗರತ್ನಮ್ಮನವರು ಪ್ರಸ್ತಾಪ ಮಾಡಿದ್ದಾರೆ. ಸಂಸ್ಥಾನದಲ್ಲಿ 35 ಸಾವಿರ ದೇವಸ್ಥಾನಗಳಿವೆ, ಅವುಗಳಿಂದ 2 ಲಕ್ಷ 90 ಸಾವಿರ ರೂಪಾಯಿಗಳ ಉತ್ಪತ್ತಿ ಬರುತ್ತದೆ. ಯೂನಿಫಾರಂ ಬಿಲ್ ಅಂದರೆ ಎಂಟೂಕಾಲು ಕೋಟಿ ರೂಪಾಯಿ ಬರಬಹುದು. ಇದಕ್ಕೆ ಸಂಬಂಧಪಟ್ಟಂತೆ 1,14,07 ಎಕರೆ ಭೂಮಿಯಿಂದ ಉತ್ಪತ್ತಿ ಬರುತ್ತಿದೆ. ಆ ಭೂಮಿ ಗೇಣಿದಾರರ ವಶದಲ್ಲಿದೆ; ದೇವಸ್ಥಾನದ ಕೆಲಸ ನೋಡಿಕೊಳ್ಳುವವರಿಗೆ ಇದನ್ನು ಕೊಡಲಾಗಿದೆ. ------ ಈ ಅಧಿವೇಶನದಲ್ಲಿ ತ್ವರಿತವಾಗಿ ಯೂನಿಫಾರಂ ಬಿಲ್ಲನ್ನು ತರಬೇಕೆಂದಿದ್ದೇವೆ. ಅದು ಬಂದರೆ ಬಹುಶಃ ದೇವರಿಗೆ ಸಂಬಂಧಪಟ್ಟ ಆಸ್ತಿಪಾಸ್ತಿ ಇರುವುದನ್ನು ದುರ್ವ್ಯಯ ವಾಗದಂತೆಯೂ ಕೆಲಸಕಾರ್ಯಗಳೆಲ್ಲ ಸಾರೋದ್ಧಾರವಾಗಿ ನಡೆಯುವಂತೆಯೂ ವ್ಯವಸ್ಥೆ ಮಾಡಬಹುದು. 9 ದೊಡ್ಡ, ದೊಡ್ಡ ದೇವಸ್ಥಾನಗಳಲ್ಲಿ ಕೆಲಸ ಮಾಡಿರುವುದನ್ನು ಮುಂದುವರಿಸುವುದೂ ಅಲ್ಲದೆ ಶ್ರೀಶೈಲದ ವಿಷಯದಲ್ಲಿ ಹೇಳಿರುವಂತೆ; ತಿರುಪತಿಯಲ್ಲಿಯೂ ವ್ಯವಸ್ಥೆಮಾಡಬೇಕೆಂದು ಬಂಗಾರು ತಿಳಿಸಿದ್ದಾರೆ. ಇದಕ್ಕಾಗಿ ಹೀಗಾಗಲೇ 200 ಅಡಿ, 300 ಅಡಿ ಸೈಟನ್ನು ಕೊಟ್ಟಿದ್ದಾರೆ. 4.1 ಲಕ್ಷದ ಅಂದಾಜು ಅದಕ್ಕಾಗಿದೆ. ಇದನ್ನು ಬೇಗ ಮಂಜೂರು ಮಾಡಿ ದೇವಸ್ಥಾನಕ್ಕೆ ಬೇಕಾದ ಸೌಲಭ್ಯ ಕಲ್ಪಿಸಲು ಪ್ರಯತ್ನ ಮಾಡುತ್ತೇವೆ. ಈ ವರ್ಷ ಚುಂಚನಕಟ್ಟೆಯಲ್ಲಿ 1 ಲಕ್ಷ 40 ಸಾವಿರ ರೂಪಾಯಿ ಅಂದಾಜನ್ನು ಮಂಜೂರು ಮಾಡಿ ಛತ್ರದ ಕೆಲಸ ಪ್ರಾರಂಭಿಸಲಾಗಿದೆ. ಅದೇ ರೀತಿ ಮಹದೇಶ್ವರ ಬೆಟ್ಟಕ್ಕೆ ಸಂಬಂಧಪಟ್ಟಂತೆ ಒಂದು ಬೃಹತ್ ಯೋಜನೆ ಮಾಡಬೇಕೆಂದು ಹೇಳಿದ್ದಾರೆ. -------- ಒಟ್ಟಿನಲ್ಲಿ ದೇವಸ್ಥಾನಗಳಿರುವ ಸ್ಥಾನದಲ್ಲಿ ಒಳ್ಳೆಯ ರೀತಿಯಿಂದ ಪ್ರಯಾಣೀಕರಿಗೆ ಬಸ್ ಸೌಕರ್ಯ,

ನೀರು, ವಸತಿ ಸೌಕರ್ಯ ಮುಂತಾದವುಗಳಿಗೆ ಸಂಬಂಧಪಟ್ಟ ಕೆಲಸಕಾರ್ಯಗಳು ಹಿಂದಿನಿಂದಲೂ ಈ ಇಲಾಖೆಯಿಂದ ನಡೆಯುತ್ತಾ ಬಂದಿದೆ. ------ ಇದೇ ರೀತಿ ಎಡಿಯೂರು ಸಿದ್ಧಲಿಂಗೇಶ್ವರ ಸ್ವಾಮಿ ದೇವಸ್ಥಾನ, ಎಲ್ಲಮ್ಮ ದೇವರ ದೇವಸ್ಥಾನ, ಬಿಳಿಗಿರಿ ರಂಗನ ದೇವಸ್ಥಾನ ಮುಂತಾದವುಗಳು ಇರುವ ಕಡೆ ಜಾತ್ರೆಗಳಿಗೆ ಬಂದು ಹೋಗುವ ಜನರ ಮೂಲಭೂತ ಸೌಕರ್ಯ ಕಲ್ಪಿಸಲು ಪ್ರಯತ್ನ ಮಾಡಲಾಗಿದೆ. ಅನೇಕ ಭಕ್ತಾದಿಗಳು ಮುಂದೆ ಬರುತ್ತಾ ಇದ್ದಾರೆ, ಹೆಚ್ಚು ಹಣವನ್ನು ಕೂಡ ಒದಗಿಸಿಕೊಡುತ್ತಾ ಇದ್ದಾರೆ. ಈ ದೇವಸ್ಥಾನದ ಕೆಲಸಕಾರ್ಯಗಳು ಎಷ್ಟು ಶ್ರದ್ಧೆಯಿಂದ ನಡೆಯಬೇಕಾಗಿದೆಯೋ ಅದು ಇನ್ನೂ ಹೆಚ್ಚಿನ ರೀತಿಯಲ್ಲಿ ನಡೆಯುತ್ತದೆ. ಬಹುಶಃ ಆಹಾರದ ವಿಚಾರದಲ್ಲಿ ಮುಂದಿನ ವರ್ಷ ಅಭಾವ ಬರಲಾರದು ಎಂದು ನಂಬಿಕೊಂಡಿದ್ದೇನೆ.

- ಚಾರಿಟಬಲ್ ಇನ್‌ಸ್ಟಿಟ್ಯೂಷನ್ ಅಂತ ಬೇರೆ ಕೆಲವು ಇವೆ. ಬೆಂಗಳೂರಿನಲ್ಲಿ ಎಸ್.ಎಲ್.ಎನ್ ಚಾರಿಟೀಸ್ ಇದೆ, ಬಂಡಿ ಶೇಷಮ್ಮ ಚಾರಿಟೀಸ್ ಇದೆ. ದೇವಸ್ಥಾನಕ್ಕೆ ಸಂಬಂಧಪಟ್ಟ ಆಸ್ತಿ 5-6 ಕೋಟಿ ರೂಪಾಯಿ ಎಲ್ಲೆಲ್ಲೋ ಇದ್ದದ್ದನ್ನು ಈ ವರ್ಷ ಬೆಂಗಳೂರು ಸಿಟಿಯಲ್ಲಿ ಸರ್ವೆ ಮಾಡಿಸಿ ಅದರಿಂದ ಬಂದಂತಹ ದುಡ್ಡನ್ನು ದೇವಸ್ಥಾನದ ಹೆಸರಿನಲ್ಲಿ ಇಟ್ಟು ನಡೆಯಬೇಕಾದ ಕೆಲಸಕಾರ್ಯಗಳು ಸಾರೋದ್ಧಾರವಾಗಿ ನಡೆಯಲಿ ಎಂಬ ತೀರ್ಮಾನಕ್ಕೆ ಬಂದು ಕೆಲಸ ಮಾಡುತ್ತಿದ್ದೇವೆ. ನಂಜನ ಗೂಡಿನಲ್ಲಿ ಕೂಡ ಜಮೀನು ದೇವಸ್ಥಾನದ ಹೆಸರಿನಲ್ಲಿ ಇದೆ. ಅದರಿಂದ ಬರುವ ಉತ್ಪನ್ನ ಆ ದೇವಸ್ಥಾನದ ವಿನಿಯೋಗವಾಗಬೇಕು. ಈಗ ಈ ದೇವಸ್ಥಾನಗಳ ಆಸ್ತಿಯಿಂದ ಬರುತ್ತಿದ್ದ ಉತ್ಪನ್ನಗಳನ್ನು ಎಲ್ಲೆಲ್ಲೋ ಯಾರೂ, ಯಾರೋ ತೆಗೆದುಕೊಳ್ಳುತ್ತಾ ಇದ್ದರು.---------

ಇನ್ನು ಅರಣ್ಯ ಇಲಾಖೆಗೆ ಸಂಬಂಧಪಟ್ಟ ಹಾಗೆ ಮೈಸೂರು ಸಂಸ್ಥಾನದಲ್ಲಿ ಅಫಾರೆಸ್ಟೇಷನ್ ಕೆಲಸ ಬಹಳ ಚೆನ್ನಾಗಿ ನಡೆಯುತ್ತಿದೆ ಎಂಬುದು ಮಾನ್ಯ ಹಣಕಾಸಿನ ಸಚಿವರು ಕೊಟ್ಟಿರುವ ಪಟ್ಟಿಯಲ್ಲಿದೆ. ಅದನ್ನು ಪುನಃ ನಾನು ಹೇಳುವುದಿಲ್ಲ. ಅರಣ್ಯವನ್ನು ಕಾಪಾಡಿಕೊಳ್ಳುವುದು ಮತ್ತು ಅರಣ್ಯವನ್ನು ಎಲ್ಲ ಕಡೆ ಬೆಳೆಸುವುದಕ್ಕೆ ಹೆಚ್ಚು ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂಬುದಾಗಿ ಸೂಚನೆ ಕೊಟ್ಟಿದ್ದಾರೆ. ಅದಕ್ಕೋಸ್ಕರವೇ 17 ಸ್ಕ್ವಾಡುಗಳನ್ನು ಹಾಕಿದ್ದೇವೆ. ಆದರೆ ಅವರ ಕೆಲಸ ಕಾರ್ಯಗಳನ್ನು ಅಳತೆ ಮಾಡಬಾರದು. ಒಂದು ಲಕ್ಷ ಚಿಲ್ಲರೆ ರೂಪಾಯಿಗಳಷ್ಟು ಬೆಲೆ ಬಾಳುವ ಮರ ಮುಟ್ಟುಗಳನ್ನು ಅವರು ಹಿಡಿದಿದ್ದಾರೆ. ಕಳ್ಳ ಸಾಗಾಣಿಕೆ ಜಾಸ್ತಿಯಾಗುತ್ತಿದ್ದುದನ್ನು ತಪ್ಪಿಸಿದ್ದಾರೆ. ಕಳ್ಳಸಾಗಾಣಿಕೆಯಿಂದ ಅನೇಕ ದವಸಧಾನ್ಯಗಳು ಹೋಗುತ್ತಿವೆ. ಅದನ್ನೂ ಕೂಡ ಹಿಡಿಯುತ್ತಿದ್ದಾರೆ. ಅರಣ್ಯದಲ್ಲಿ ಇಷ್ಟೊಂದು ಬೆಲೆ ಬಾಳುವ ಮರಗಳು ಇರುವಾಗ ಅಗರಬತ್ತಿ ತಯಾರು ಮಾಡುವ ಗುಡಿಗಾರರು ಇಲ್ಲಿ ಸಿಟ್ ಡಿಸ್ಟಿಲರಿ ಇಟ್ಟು ಕೊಂಡಿರುವವರು ಮದ್ರಾಸಿನಲ್ಲಿ ಹೆಚ್ಚು ಮಾಡಿದ್ದರಲ್ಲಿ ಸ್ವಲ್ಪ ಇಟ್ಟುಕೊಂಡು ನಮ್ಮ ಕಡೆ ಸಾಗಿಸುತ್ತಿದ್ದಾರೆ. ಅರಣ್ಯದ ಕಡೆಯಿಂದ ಉತ್ಪತ್ತಿಯಾಗುವ ಗಂಧದ ಮರಗಳನ್ನು ನಮ್ಮ ಸ್ಯಾಂಡಲ್ ಆಯಿಲ್ ಫ್ಯಾಕ್ಟರಿಗೆ ಕೊಡುತ್ತಿರುವುದರಿಂದ ಅಲ್ಲಿ ಕಳ್ಳ ಸಾಗಾಣಿಕೆ ಕಡಿಮೆಯಾಗುತ್ತಿದೆ. ಇದರಿಂದ ಇಲಿ ಸಿಟ್ ಡಿಸ್ಟಿಲರ್ಸ್ ಅವರ ಕಾರ್ಯಾಚರಣೆ ಸಹ ಕಡಿಮೆಯಾಗುತ್ತಿದೆ. ನಮ್ಮ ಕಾರ್ಖಾನೆಗೆ ಕೊಟ್ಟ

ಮೇಲೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಎಣ್ಣೆ ಕಡಿಮೆ ಬೆಲೆಗೆ ಹೋಗುತ್ತದೆ. ಆದರಿಂದಾಗಿ ಅವರಿಗೆ ಕಡಿಮೆ ಉತ್ಪತ್ತಿ ಬಂದು ಅಗರ ಬತ್ತಿಯವರಿಗೆ ಕೆಲವು ರಿಯಾಯಿತಿಗಳನ್ನು ಕೊಟ್ಟಿದ್ದಾರೆ. ಸಾಫ್ಟ್‌ವುಡ್ ಮತ್ತು ಅನೇಕ ಪ್ಲೈವುಡ್ ಇಂಡಸ್ಟ್ರೀಸ್, ಮ್ಯಾಚ್ ಇಂಡಸ್ಟ್ರೀಸ್ ಮತ್ತು ಅದರ ಪ್ಯಾಕಿಂಗ್ ಕೇಸುಗಳನ್ನು ಮಾಡುವುದು-ಇವೆಲ್ಲವನ್ನು ಕಡಿಮೆ ದರದಲ್ಲಿ ಕೊಟ್ಟಿದ್ದಾರೆಂಬುದಾಗಿ ತಿಳಿಸಿ ಮಾನ್ಯ ಶ್ರೀ ಶಾಸ್ತ್ರಿಗಳವರು ಒಂದು ಖೋತಾ ನಿರ್ಣಯವನ್ನು ಕಳುಹಿಸಿದ್ದಾರೆ. ಎಲ್ಲಾ ಪ್ರಾಂತ್ಯಗಳಲ್ಲಿಯೂ ಏನೇನು ಸಾಫ್ಟ್ ವುಡ್ ಕೊಟ್ಟಿದ್ದಾರೋ ಅದಕ್ಕಿಂತಲೂ ದರ ಇಲ್ಲಿ ಹೆಚ್ಚಾಗಿದೆ. ನನ್ನಲ್ಲಿ ಒಂದು ಕಂಪಾರೆಟಿವ್ ಸ್ಟೇಟ್‌ಮೆಂಟ್ ಇದೆ. ಎಲ್ಲಾ ಫ್ಯಾಕ್ಟರಿಗಳಿಗೂ ಕೂಡ ಹೋದ ವರ್ಷ ದರ ಏನಿತ್ತು ಅದಕ್ಕಿಂತ ಅರ್ಧದಷ್ಟು ಈಗ ತೆಗೆದುಕೊಂಡಿದ್ದಾರೆ. ನಮ್ಮ ರಾ-ಮೆಟೀರಿಯಲ್ಸ್ ಬೆಲೆ ಜಾಸ್ತಿ ಆದ್ದರಿಂದ ಅವರು ಉತ್ಪನ್ನ ಮಾಡತಕ್ಕ ದಾಸ್ತಾನು ಸಾಕಷ್ಟು ರೀತಿಯಲ್ಲಿ ಮಾರಾಟ ಮಾಡದೆ ಇರುವುದರಿಂದ ದರಗಳು ಕಡಿಮೆಯಾಗಿದೆ ಎಂದು ಊಹಿಸಬಹುದು. ಮತ್ತೆ ಸ್ಯಾಂಡಲ್‌ವುಡ್ ಆಯಿಲ್ ಫ್ಯಾಕ್ಟರಿಯಿಂದ ಪ್ರತಿವರ್ಷವೂ ಅವನ್ನು ಕೊಡುತ್ತಿದ್ದೇವೆ. ಅಲ್ಲಿ ಒಣಗಿ ಹೋಗಿರುವ ಗಂಧದ ಮರಗಳನ್ನು ಹಾಗೂ ಅದರ ಮುದ್ರೆಯಾಗಿರತಕ್ಕ ಗಂಧದ ಮರಗಳನ್ನು ತೆಗೆಯಬೇಕೆಂದು ಹೇಳಿದೆ. ಅಲ್ಲದೆ ಕದ್ದುಕೊಂಡು ಹೋಗುವ ಅದರಲ್ಲಿಯೂ ಬಾರ್ಡರ್‌ನಲ್ಲಿರುವ ಎಲ್ಲಾ ಗಂಧದ ಮರಗಳನ್ನು ಸರ್ವೆ ಮಾಡಿಸಿ ಅವುಗಳನ್ನು ಇವತ್ತು ತೆಗೆಸುತ್ತಿದ್ದೇವೆ. ಅದರ ಜೊತೆಗೆ ಮೈಸೂರು ಸಂಸ್ಥಾನದಲ್ಲಿ ಗಂಧದ ಮರಗಳನ್ನು ಬೆಳೆಸುವಂಥ ರೈತರಿಗೆ ಸುಮಾರು ಶೇ 60 ರಷ್ಟು ರಾಯಲ್ಟಿ ಕೊಡಬೇಕೆಂದು ರೂಲ್ಸ್‌ನಲ್ಲಿ ಅಳವಡಿಸಿದ್ದೇವೆ. ಅವರು ತಮ್ಮ ಗಂಧದ ಮರಗಳನ್ನು ಬೆಳೆಸಿ ಪೋಷಿಸಿಕೊಂಡು ಅವುಗಳ ರಕ್ಷಣೆ ಬಗ್ಗೆ ಹೆಚ್ಚು, ಆಸಕ್ತಿ ವಹಿಸಬೇಕು. ಇದರಿಂದ ಗಂಧದ ಮರಗಳ ಕಳ್ಳಸಾಗಾಣಿಕೆಯೂ ಕಡಿಮೆ ಯಾಗುತ್ತದೆಂದು ನಾನು ಭಾವಿಸಿದ್ದೇನೆ.

-------- ಒಟ್ಟಿನಲ್ಲಿ ಅರಣ್ಯ ಸಂಪತ್ತು ಹೆಚ್ಚು ಹಾಳಾಗದೇ ಇರುವ ರೀತಿಯಲ್ಲಿ ಹಾಗೂ ದುರ್ವಿನಿಯೋಗವಾಗದೇ ಇರುವ ರೀತಿಯಲ್ಲಿ ಏನೇನು ಕ್ರಮಗಳನ್ನು ತೆಗೆದುಕೊಳ್ಳಬೇಕೋ ಅವನ್ನು ಮಾಡುತ್ತಿದ್ದೇವೆ. -------- ದಟ್ಟವಾದ ಕಾಡುಗಳಲ್ಲಿ ಯೂಕಲಿಪ್ಟಸ್ ಪ್ಲಾಂಟೇಷನ್ ಮತ್ತು ಇತರ ಗಿಡಗಳೂ ಸಹ ಬೆಳೆಯುವ ರೀತಿಯಲ್ಲಿ ವ್ಯವಸ್ಥೆ ಮಾಡಲಾಗಿದೆ. ಯೂಕಲಿಪ್ಟಸ್ ಪ್ಲಾಂಟೇಷನ್‌ಗಳನ್ನು ಪ್ರತಿ ವರ್ಷವೂ ಗ್ರೀನ್ ಏರಿಯಾಗಳಲ್ಲಿ ಬೆಳೆಸಿರಿ ಎಂಬುದಾಗಿ ಮಾನ್ಯ ಶ್ರೀ ಜಾಲಿಶೆಟ್ಟಿಯವರು ಮತ್ತು ಶ್ರೀ ಬದರಿ ನಾರಾಯಣ್ ಅವರು ತಿಳಿಸಿದ್ದಾರೆ. ಮಲೆನಾಡಿನ ದಟ್ಟವಾದ ಕಾಡುಗಳಲ್ಲಿ ಈಗಿನ ವರ್ಕಿಂಗ್ ಪ್ಲಾನ್ ಪ್ರಕಾರ ಏನೇನು ಅಭಿವೃದ್ಧಿ ಮಾಡಬೇಕೋ ಅಷ್ಟನ್ನು ಮಾಡುತ್ತೇವೆ. ಆದರೆ ಕೆಲವು ಪ್ರದೇಶಗಳನ್ನು ಮಾತ್ರ ಬಿಟ್ಟು ಇನ್ನುಳಿದ ಮೈದಾನ ಭಾಗಗಳಲ್ಲಿ ಒಳ್ಳೆಯ ಪ್ಲಾಂಟೇಷನ್‌ಗಳನ್ನು ಬೆಳೆಸುವುದಕ್ಕೆ ಈ ವರ್ಷದಿಂದಲೇ ಪ್ರಯತ್ನ ಮಾಡುತ್ತಿದ್ದೇವೆ. ------ ಇಡೀ ದೇಶದಲ್ಲಿ ಶೇ 33 ರಷ್ಟು ಅರಣ್ಯ ಇದ್ದರೆ, ನಮ್ಮ ಸಂಸ್ಥಾನದಲ್ಲಿ ಅರಣ್ಯ ಪ್ರದೇಶ ಸುಮಾರು ಶೇ 27 ರಷ್ಟಿದೆ. ಇದನ್ನು ಇನ್ನೂ ಹೆಚ್ಚಿಸಬೇಕೆಂದು ಪ್ರಯತ್ನಮಾಡಿ ಸುಮಾರು 5 ಲಕ್ಷ ಎಕರೆಗಳಷ್ಟು ಅರಣ್ಯವನ್ನು ರೆವಿನ್ಯೂ ಇಲಾಖೆಯಿಂದ ಸೇರಿಸಿಕೊಂಡರೆ

ಕೇವಲ ಶೇ 2 ರಷ್ಟು ಜಾಸ್ತಿಯಾಗುತ್ತದೆಯೇ ವಿನಹ; ದಟ್ಟವಾದ ಕಾಡುಗಳನ್ನು ಸಾಗುವಳಿಗೆ ಕೊಡುವುದರಿಂದ ಮಳೆಯ ಅಭಾವ ಉಂಟಾಗುತ್ತದೆ. ಕರೆಕಟ್ಟೆಗಳಲ್ಲಿ ಹೂಳು ತುಂಬುತ್ತದೆ. ಕೇವಲ ಶೇ 80 ರಷ್ಟು ಹೆಚ್ಚಿಗೆ ಇರುವ ಉತ್ತರ ಕನ್ನಡ ಜಿಲ್ಲೆ ಬಿಟ್ಟು ಅರಣ್ಯ ಭೂಮಿಯನ್ನು ಧಾರಾಳವಾಗಿ ಸಾಗುವಳಿಗೆ ಕೊಡುವುದು ಅಷ್ಟೊಂದು ಸೂಕ್ತವಲ್ಲವೆಂದು ನನ್ನ ಭಾವನೆ.

ಈ ದೃಷ್ಟಿಯಿಂದ ಮಾನ್ಯ ಸದಸ್ಯರು ಏನು ಸಲಹೆಗಳನ್ನು ಕೊಟ್ಟಿದ್ದಾರೆಯೋ ಅವುಗಳನ್ನು ಗಮನದಲ್ಲಿಟ್ಟುಕೊಂಡಿದ್ದೇನೆ. ಹೆಚ್ಚು ಅರಣ್ಯವನ್ನು ಬೆಳಸಬೇಕು ಇರುವಂಥ ಅರಣ್ಯವನ್ನು ರಕ್ಷಿಸಬೇಕು ಎನ್ನುವ ವಿಚಾರ ಏನಿದೆ ಇದರಲ್ಲಿ ನಾವು ಸಾಕಷ್ಟು ಹೆಚ್ಚಿನ ಪ್ರಯತ್ನ ಮಾಡುತ್ತಿದ್ದೇವೆ. ಧಾರವಾಡ ಜಿಲ್ಲೆಯಲ್ಲಿ ಸುಮಾರು 50 ಲಕ್ಷ ರೂಪಾಯಿಗಳು ಬೆಲೆ ಬಾಳುವ ಮರಮುಟ್ಟುಗಳನ್ನು ಬಹಿರಂಗವಾಗಿ ಕೊಂಡುಕೊಳ್ಳುತ್ತಿದ್ದಾರೆ ಎಂದು ಶ್ರೀ ಬೊಮ್ಮಾಯಿ ಅವರು ಹೇಳಿದರು. ಇದುವರೆಗೆ ಬೆಳಗಾಮ್, ಬಿಜಾಪುರ, ಸೌತ್ ಕೆನರಾ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಸುಮಾರು 76 ಸಾವಿರ ರೂಪಾಯಿಗಳ ಬೆಲೆಬಾಳುವ ಮರಮುಟ್ಟುಗಳನ್ನು ಜನಗಳಿಗೆ ಹಂಚಿದ್ದೇವೆ. ಇಡೀ ಮೈಸೂರು ಸಂಸ್ಥಾನಕ್ಕೆ ಸಂಬಂಧಪಟ್ಟಹಾಗೆ ಒಂಬತ್ತು ಲಕ್ಷ ರೂಪಾಯಿಗಳ ಬೆಲೆ ಬಾಳುವ ಮರಮುಟ್ಟುಗಳನ್ನು ತಾವು ಹಂಚಿರುವುದರಿಂದ ತಾವುಗಳೇ ಊಹೆ ಮಾಡಬಹುದು. 50 ಲಕ್ಷ ರೂಪಾಯಿಗಳ ಬೆಲೆ ಬಾಳುವ ಮರಮುಟ್ಟುಗಳನ್ನು ಕೊಟ್ಟಿಲ್ಲ ಎಂಬುದು ದಲಿತರಿಗೆ ಬೇರೆ, ಬೇರೆ ಭಾಗಗಳಲ್ಲಿ ಮಾಫಿ ಲೈಸೆನ್ಸ್ ಕೊಟ್ಟು ಮರಗಳನ್ನು ತೆಗೆದುಕೊಂಡು ಹೋಗುವುದಕ್ಕೆ ಅವಕಾಶವಿತ್ತು. ಈಗ ಅದನ್ನು ತೆಗೆದುಹಾಕಿ ದಲಿತರು ಮನೆಕಟ್ಟಿಕೊಳ್ಳುವುದಕ್ಕೆ ಮರಮುಟ್ಟುಗಳನ್ನು ಕೊಡುವ ಸಂಬಂಧದಲ್ಲಿ ಒಂದು ಕಾಯಿದೆಯನ್ನು ಮಾಡಿದ್ದೇವೆ. ಈಗ ದಲಿತರು ಮನೆಕಟ್ಟಿಕೊಳ್ಳತಕ್ಕವರು ಪಂಚಾಯಿತಿ ಅಧ್ಯಕ್ಷರು ಮತ್ತು ಆಯಾ ತಾಲ್ಲೂಕಿನ ಬಿ.ಡಿ.ಓ ಅವರಿಂದ ಒಂದು ಸರ್ಟಿಫಿಕೇಟ್ ಮಾಡಿಸಿದರೆ, ಆ ಸೈಟಿನಲ್ಲಿ ಮನೆಕಟ್ಟುವುದಕ್ಕೆ ಲೈಸನ್ಸ್ ಕೊಟ್ಟಿದ್ದಾರೆ ಅಂಥವರಿಗೆ ಮರಗಳನ್ನು ಕೊಡಬಹುದೆಂದು ಡಿ.ಎಫ್.ಓ. ಅವರಿಗೆ ಅಧಿಕಾರವನ್ನು ಕೊಡಲಾಗಿದೆ. ------ ಇನ್ನು ನನಗೆ ಸಂಬಂಧಪಟ್ಟ ಎರಡು ಇಲಾಖೆಗಳ ವಿಷಯದಲ್ಲೂ ಮಾನ್ಯ ಸದಸ್ಯರನೇಕರು ಕೆಲವಾರು ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಎಲ್ಲವನ್ನೂ ಕೂಡ ಗಮನವಿಟ್ಟು ಕೇಳಿ ಬರೆದುಕೊಂಡು ನೋಟ್ಸ್ ಇಟ್ಟುಕೊಂಡಿದ್ದೇನೆ. ಮಾನ್ಯ ಸದಸ್ಯರು ಹೇಳಿರುವಂಥ ಎಲ್ಲಾ ವಿಚಾರಗಳಿಗೂ ನಾನು ಉತ್ತರವನ್ನು ಕೊಡುವುದಕ್ಕೆ ಸಾಧ್ಯವಾಗಲಿಲ್ಲ. ಮಾನ್ಯ ಸದಸ್ಯರು ಕೊಟ್ಟಿರುವಂಥ ಉಪಯುಕ್ತವಾದ ಸಲಹೆಗಳಲ್ಲಿ ಯಾವು ಯಾವುದನ್ನು ಕಾರ್ಯಗತ ಮಾಡುವುದಕ್ಕೆ ಸಾಧ್ಯವಿದೆ ಅವುಗಳನ್ನು ಮಾಡುವುದಕ್ಕೆ ನಾನು ಸರ್ವ ಪ್ರಯತ್ನ ಮಾಡುತ್ತೇನೆ ನನ್ನ ಎರಡು ಬೇಡಿಕೆಗಳ ವಿಷಯದಲ್ಲಿ ಸಮಜಾಯಿಷಿ ಕೊಡುವುದಕ್ಕೆ ತಾವುಗಳೆಲ್ಲರೂ ಶಾಂತತೆಯಿಂದ ಕೇಳಿದ್ದೀರಿ. ಅದಕ್ಕಾಗಿ ತಮಗೆಲ್ಲರಿಗೂ ನನ್ನ ವಂದನೆಗಳನ್ನೂ ಅರ್ಪಿಸಿ ನಾನು ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಕೃಷಿ ಮತ್ತು ತೋಟಗಾರಿಕೆ ಇಲಾಖೆಗಳ ಬೇಡಿಕೆಗಳ ಮೇಲಿನ ಚರ್ಚೆಗೆ ಉತ್ತರ *

ಶ್ರೀ ಬಿ. ರಾಚಯ್ಯ (ವ್ಯವಸಾಯ ಇಲಾಖೆಯ ಮಂತ್ರಿಗಳು) ಸನ್ಮಾನ್ಯ ಅಧ್ಯಕ್ಷರೇ, ಕಳೆದೆರಡು ದಿನಗಳಿಂದ ಕೃಷಿ ಮತ್ತು ತೋಟಗಾರಿಕೆ ಇಲಾಖೆಗಳ ಬೇಡಿಕೆ ಮೇಲೆ ಭಾಷಣಗಳನ್ನು ಅತ್ಯಂತ ಆಸಕ್ತಿಯಿಂದ ಕೇಳಿದ್ದೇನೆ. ಬಹುಶಃ ಮಾತನಾಡಿದಂಥ ಮಾನ್ಯ ಸದಸ್ಯರೆಲ್ಲರೂ ಕೂಡ ಬಹುಮಟ್ಟಿಗೆ ರಚನಾತ್ಮಕವಾಗಿರುವಂಥ ಸಲಹೆಗಳನ್ನು ಕೊಟ್ಟಿದ್ದಾರೆ.------

- ಈ ಕೃಷಿ ಬೇಡಿಕೆಗಳ ಮೇಲೆ ಮಾತನಾಡಿದಂಥ ಬಹುಮಂದಿ ಸದಸ್ಯರು ಇದುವರೆಗೆ ಏನು ಕಾರ್ಯಕ್ರಮಗಳನ್ನು ತೆಗೆದುಕೊಂಡಿದ್ದೇವೆ. ಅವು ರೈತರಿಗೆ ಹೆಚ್ಚಿನ ಸ್ಫೂರ್ತಿಯನ್ನೂ ಉತ್ಸಾಹವನ್ನು ತುಂಬುವಂಥದ್ದಾಗಿಲ್ಲ ಮತ್ತೆ ಒಂದು ಹಳೆಯ ಪದ್ಧತಿಯ ಪ್ರಕಾರ ಒಂದು ಕೃಷಿ ಪಾಲಿಸಿ ನಡೆದುಕೊಂಡು ಬಂದಿದೆ ಅಂತಲೂ, ಈಗ ಏನೇನು ಹೊಸ ಯೋಜನೆಗಳನ್ನು ಹಾಕಿಕೊಂಡಿದ್ದೇವೆಯೋ ಆ ಯೋಜನೆಗಳು ಹೆಚ್ಚಿಗೆ ಎಲ್ಲ ನೀರಾವರಿ ಪ್ರದೇಶಗಳಲ್ಲಿವೆ. ಆ ಪ್ರದೇಶಕ್ಕೆ ಅನುಕೂಲವಾಗಿದ್ದು ಅದರಲ್ಲಿಯೂ ಕೂಡ ದೊಡ್ಡ ರೈತರಿಗೆ ಹೆಚ್ಚು ಉಪಯೋಗವಾಗಿದೆ, ಸಣ್ಣ ಹಿಡುಮಳಿದಾರರಿಗೆ ಬಹಳ ಉಪಯೋಗವಾಗಿಲ್ಲ ಎಂತಲೂ ಮತ್ತು ಮಳೆ ಆಶ್ರಯವನ್ನು ನಂಬಿಕೊಂಡು ಬೇಸಾಯ ಮಾಡುವಂಥ 100ಕ್ಕೆ 90 ಭಾಗದಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಕೃಷಿ ಬದಲಾವಣೆಯಲ್ಲಿ ರೈತನಿಗೆ ಬೇಕಾಗಿರುವ ಸಾಧನ ಸವಲತ್ತುಗಳು ಸಕಾಲದಲ್ಲಿ ಸರಿಯಾದ ಬೆಲೆಗೆ ದೊರೆಯುತ್ತಾ ಇಲ್ಲ, ಅವನಿಗೆ ಬೇಕಾಗಿರುವಂಥ ಹಣವಾಗಲಿ, ಉಪಕರಣವಾಗಲಿ, ಬೀಜಗಳಾಗಲಿ, ಗೊಬ್ಬರವಾಗಲಿ, ಕ್ರಿಮಿನಾಶಕ ವಸ್ತು ಅವುಗಳ ಬೆಲೆ ಹೆಚ್ಚು ಆಗದೆ ಅವುಗಳನ್ನು ಕಡಿಮೆ ಬೆಲೆಗೆ ಕೊಡುವ ವ್ಯವಸ್ಥೆ ಆಗಬೇಕು ಮತ್ತು ಬೆಳೆದಂಥ ಪದಾರ್ಥಕ್ಕೆ ಸಾಕಷ್ಟು ಪ್ರಮಾಣದಲ್ಲಿ ಅವರಿಗೆ ಒಂದು ಸ್ಫೂರ್ತಿ ಬರುವ ಬೆಲೆಯನ್ನು ಕೊಡಿಸುವುದರಲ್ಲಿ ಸರಕಾರ ವಿಫಲವಾಗಿದೆ ಎಂತಲೂ ಹೇಳಿದ್ದಾರೆ. ಹೀಗೆ ನಾಲ್ಕಾರು ಭಾಗಗಳಾಗಿ ಈ ಟೀಕೆಗಳನ್ನು ನಾನು ವಿಂಗಡಿಸಿಕೊಂಡು ಮತ್ತೆ ಮಾನ್ಯ ಸದಸ್ಯರು ಕಳುಹಿಸಿರುವ ಖೋತಾ ನಿರ್ಣಯಗಳನ್ನು ಗಮನಕ್ಕೆ ತೆಗೆದುಕೊಂಡು ನನ್ನ ಕೈಲಾದ ಮಟ್ಟಿಗೆ ಉತ್ತರಕೊಡುವುದಕ್ಕೆ ಪ್ರಯತ್ನಮಾಡುತ್ತೇನೆ. ನಾನು ಕಳೆದ ಎರಡು ದಿವಸಗಳಿಂದ ಬಹಳ ಶಾಂತಿಯಿಂದ ಕುಳಿತು ಎಲ್ಲರೂ ಹೇಳಿದ್ದನ್ನು ಕೇಳಿದೆ. ಅಷ್ಟೇ ಉದಾರತೆಯಿಂದ ಮಾನ್ಯ ವಿರೋಧ ಪಕ್ಷದ ಸದಸ್ಯರು ಸರ್ಕಾರದ ಉತ್ತರವನ್ನು ಕೇಳಿದ್ದರೆ ಚೆನ್ನಾಗಿತ್ತು ಎಂದು ನಾನಾದರೂ ಆಸೆಪಡುತ್ತೇನೆ.

ಒಟ್ಟಿನಲ್ಲಿ ಈ ಕೃಷಿ ಬಹಳ ಕಾಲದಿಂದಲೂ ಕೂಡ ಅಅವಿದ್ಯಾವಂತರ ಕೈಯಲ್ಲಿ ಇದ್ದು ಅವರಲ್ಲಿ ಯಾವ ಒಂದು ಪ್ರಗತಿಯನ್ನು ಕೂಡ ಸಾಧಿಸುವುದಕ್ಕೆ ಆಗಿರಲಿಲ್ಲ. ಸರ್ಕಾರದ ಮಟ್ಟದಲ್ಲಿ ಕೃಷಿಗೆ ಹೆಚ್ಚಿನ ಪ್ರಮಾಣದಲ್ಲಿ ಪ್ರೋತ್ಸಾಹ ಸಿಕ್ಕಿಲ್ಲ. ಆದ್ದರಿಂದ ಇದರಲ್ಲಿ ಹೆಚ್ಚಿನ ರೀತಿಯಲ್ಲಿ ನಾವು ಪ್ರಗತಿಯನ್ನು ಮಾಡಬೇಕು ಎಂದು ಹೇಳಿ ಬಹಳಮಟ್ಟಿಗೆ ಒತ್ತಾಯ ಮಾಡಿದ್ದಾರೆ.

---

*ವಿಧಾನ ಸಭಾ ನಡವಳಿಕೆ ದಿನಾಂಕ 10ನೇ ಮಾರ್ಚ್, 1970 ಪುಟ 158-167.

ನಾನಾದರೂ ಕೂಡ ಈ ಸಂಸ್ಥಾನದಲ್ಲಿ ಈ ಭೂಮಿಯನ್ನು ಸಮಪಾತಾಳ ಮಾಡುವುದರಲ್ಲಿ ಅಥವಾ ಭೂ ಸಂರಕ್ಷಣೆ ಮಾಡುವುದರಲ್ಲಾಗಲಿ ಕಳೆದ ವರ್ಷಕ್ಕಿಂತ ಇಂದಿನ ವರ್ಷದಲ್ಲಿ ಹೆಚ್ಚಿನ ಕಾರ್ಯವನ್ನು ಸಾಧಿಸಿದ್ದೇವೆಂದು ಹೇಳುವುದಕ್ಕೆ ಹೆಮ್ಮೆಪಡುತ್ತೇನೆ. ಎರಡು ಲಕ್ಷ ಹತ್ತು ಸಾವಿರ ಎಕರೆಗಳಲ್ಲಿ ಈ ಭೂ ಸುಧಾರಣೆ ಕಾರ್ಯ ಮಾಡಬೇಕಾಗಿ ಇದ್ದರೂ 'ಇವೊತ್ತು 2 ಲಕ್ಷ 35 ಸಾವಿರ ಎಕರೆಗಳಲ್ಲಿ ಈ ಒಂದು ಭೂ ಸಂರಕ್ಷಣೆ ಕಾರ್ಯವನ್ನು ಮಾಡಲಾಗಿದೆ. ಇನ್ನೂ ಒಂದು ಕೋಟಿ 20 ಲಕ್ಷ ಎಕರೆಗಳಲ್ಲಿ ಭೂ ಸಂರಕ್ಷಣೆ ಕಾರ್ಯಗಳು ನಡೆಯಬೇಕಾಗಿದೆ. ಕಳೆದ ವರ್ಷ 60 ಲಕ್ಷ ರೂಪಾಯಿ ಹಣ ಕೊಟ್ಟಿದ್ದೆವು. ಕ್ಷಾಮ ಪರಿಹಾರದ ನಿಧಿಯಿಂದ ಕೂಡ ಹಣವನ್ನು ಉಪಯೋಗಿಸಿಕೊಂಡು ಹೆಚ್ಚು ಸಾಧನೆಯನ್ನು ಮಾಡುವುದಕ್ಕೆ ಸಾಧ್ಯವಾಯಿತು. ಈ ವರ್ಷ ಕೃಷಿ ಇಲಾಖೆ ಮುಖಾಂತರ ಒಂದು ಕೋಟಿ 25 ಲಕ್ಷ ರೂಪಾಯಿಗಳಷ್ಟು ಹಣವನ್ನು ಇದಕ್ಕೆ ಒದಗಿಸಿಕೊಟ್ಟಿದ್ದೇವೆ. ಇದು ಬಹುಶಃ ಎರಡು ಲಕ್ಷ ಹತ್ತು ಸಾವಿರ ಎಕರೆಗಳಿಗೆ ಸಾಕಾಗಬಹುದು. ಅದು ಏನೇನು ಸಾಲುವುದಿಲ್ಲ ಎನ್ನುವುದನ್ನು ನಾನು ಒಪ್ಪುತ್ತೇನೆ. ಅನೇಕ ಸದಸ್ಯರು ಮಾತನಾಡುವಾಗ ಈ ಕೃಷಿ ಇಲಾಖೆಗೆ ಕಳೆದ ವರ್ಷ ಏನು ಹಣವನ್ನು ಒದಗಿಸಿಕೊಟ್ಟಿದ್ದರೋ ಅದಕ್ಕಿಂತ ಒಂದು ಕೋಟಿ ರೂಪಾಯಿ ಹಣ ಕಡಿಮೆ ಆಗಿದೆ. ಕೃಷಿಗೆ ಪ್ರಾಧಾನ್ಯತೆ ಕೊಡುತ್ತೇವೆ. ಕೃಷಿ ಅಭಿವೃದ್ಧಿ ಹೆಚ್ಚು ಆಗಬೇಕು. ಕೃಷಿಕರ ಅಭಿವೃದ್ಧಿ ಆಗದ ಹೊರತು ದೇಶದ ಸಂಪತ್ತನ್ನು ಹೆಚ್ಚಿಸುವುದಕ್ಕಾಗುವುದಿಲ್ಲ ಎಂದು ನಾನು ಹಿಂದೆಯೂ ಹೇಳಿದ್ದೇನೆ. ಆ ಮಾತನ್ನು ನಾನು ಈಗಲೂ ಒಪ್ಪುತ್ತೇನೆ. ಆದರೆ ನಮ್ಮ ರಾಜ್ಯದಲ್ಲಿ ನೀರಾವರಿ ಸೌಕರ್ಯಗಳನ್ನು ಹೆಚ್ಚಿಸುವುದಕ್ಕೋಸ್ಕರ ಈ ಉಭಯ ಸಭೆಗಳ ರಿಸೋರ್ಸ್ ಕಮಿಟಿ ಎಂದು ಏನು ಮಾಡಿದ್ದಾರೆ ಅವರು ಈ ಯೋಜನೆಗಳನ್ನು ಕಡಿಮೆ ಮಾಡಿ ನೀರಾವರಿಗೆ ಹೆಚ್ಚಿಗೆ ಹಣ ಕೊಡಬೇಕೆಂಬ ಉದ್ದೇಶದಿಂದ ಒಂದು ಕೋಟಿ ರೂಪಾಯಿಗಳವರೆಗೆ ಈ ಇಲಾಖೆಯಲ್ಲಿ ಬಡ್ಜೆಟ್ ಹಣದಲ್ಲಿ ಕಡಿಮೆ ಆಯಿತು. ಆದರೆ ಇದು ಕಡಿಮ ಆಗಬಾರದಿತ್ತು. ಎಂದು ಅನೇಕರ ಅಭಿಪ್ರಾಯವಾಗಿದೆ. ಒಟ್ಟಿನಲ್ಲಿ ಮಳೆ ಆಶ್ರಯವನ್ನು ಅವಲಂಬಿಸಿರುವ ಈ ಪ್ರಾಂತ್ಯದಲ್ಲಿ ಹೆಚ್ಚಿಗೆ ನೀರಾವರಿಯನ್ನು ಉತ್ತಮಪಡಿಸಿಕೊಳ್ಳದಿದ್ದರೆ ಇನ್ನು ಹಲವಾರು ಕಾರ್ಯಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಈ ಕಾರಣದಿಂದ ಇಂದು ದೊಡ್ಡ ನೀರಾವರಿ, ಸಣ್ಣ ನೀರಾವರಿಯಲ್ಲಿ ಬಾವಿಗಳನ್ನು ತೋಡಿಸುವುದು ಮತ್ತು ಸಣ್ಣ, ಸಣ್ಣ ಕೆರೆಗಳನ್ನು ಕಟ್ಟಿಸುವ ವಿಷಯದಲ್ಲಿಯೂ ಸಣ್ಣ ಮಟ್ಟಿಗೆ ನಾವು ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕ್ ಮುಖಾಂತರ ಷೆಡ್ಯೂಲ್ ಬ್ಯಾಂಕ್‌ಗಳ ಮುಖಾಂತರ ಸಹಾಯ ಪಡೆದು ನಮ್ಮ ಡಿಪಾರ್ಟ್‌ಮೆಂಟ್‌ನಿಂದ ಬೋರವೆಲ್ ಮಿಷನ್ ಕೊಟ್ಟು ಅವುಗಳಿಂದ ಬಾವಿ ತೋಡಿಸುವ ನೀರನ್ನು ಒದಗಿಸಿ ಹೆಚ್ಚು ಬೆಳೆ ಬೆಳೆಯುವುದಕ್ಕೆ ಅವಕಾಶ ಮಾಡಿದ್ದೇವೆ. ಆದರೆ ನಿರೀಕ್ಷಿಸಿದ ಮಟ್ಟದಲ್ಲಿ ಏನು ಅಭಿವೃದ್ಧಿಯಾಗಬೇಕಿತ್ತೋ, ಏನು ಕೆಲಸ ಕಾರ್ಯಗಳು ನಡೆಯಬೇಕಾಗಿತ್ತೋ ಅದು ನಡೆಯಲಿಲ್ಲ. ಕಾರಣ ಅನೇಕ ಸೊಸೈಟಿಗಳಲ್ಲಿ ಏನು ಹಳೆಯ ಬಾಕಿ ವಸೂಲಿ ಮಾಡಿ ರೈತರಿಗೆ ಸಕಾಲದಲ್ಲಿ ಸಾಲ ಕೊಡಬೇಕಾಗಿತ್ತೋ ಆ ಕೆಲಸಗಳು ನಡೆಯದೆ ಇದ್ದುದರಿಂದ ಈ ಭಾಗದಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧನೆ ಮಾಡುವುದಕ್ಕೆ ಆಗಲಿಲ್ಲ.

ಶ್ರೀಮಾನ್ ಚನ್ನಬಸಪ್ಪನವರು ಮಾತನಾಡುವಾಗ ಬಾವಿ ತೋಡಿಸುವುದು ಒಂದು ಇಲಾಖೆ, ಹಣಕೊಡುವುದು ಮತ್ತೊಂದು ಇಲಾಖೆ, ಹೀಗೆ ಬೇರೆ, ಬೇರೆ ಕಾರ್ಯಕ್ರಮ ಹಾಕಿಕೊಳ್ಳುವುದಕ್ಕೆ ಬದಲಾಗಿ ಸರ್ಕಾರದವರೇ ಈ ಕೆಲಸವನ್ನು ಏಕೆ ಮಾಡಬಾರದು ಎಂದು ಅಗ್ರಹ ಪೂರ್ವಕವಾಗಿ ಒತ್ತಾಯಪಡಿಸಿದರು. ಒಂದು ವ್ಯವಸ್ಥಿತವಾದ ರೀತಿಯಲ್ಲಿ ಹಣವನ್ನು ಒದಗಿಸಿಕೊಡುವುದು ಮತ್ತು ಕೆಲಸ ಮಾಡುವುದು ಎರಡೂ ಒಂದೇ ಇಲಾಖೆಯ ಮುಖಾಂತರ ಆಗಿದ್ದರೆ ಚೆನ್ನಾಗಿತ್ತು. ಆದರೂ ಕೂಡ ಈಗ ಇರುವ ಇಲಾಖೆಗಳು ಏನಿವೆ ಅವುಗಳ ಸಹಕಾರವನ್ನು ಪಡೆದು ಈ ಕೆಲಸವನ್ನು ಮಾಡಬೇಕಾಗಿದೆ. ಕ್ಯಾಬಿನೆಟ್ ಮಟ್ಟದಲ್ಲಿ ಇದಕ್ಕೆ ಒಂದು ಕ್ಯಾಬಿನೆಟ್ ಸಬ್ ಕಮಿಟಿ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಇರುವುದರಿಂದ ಈ ವಿಷಯಗಳನ್ನು ಸಂಬಂಧಪಟ್ಟ ಮಂತ್ರಿಗಳು ಮತ್ತು ಅಧಿಕಾರಿಗಳು ಚರ್ಚೆಮಾಡಿ ಕೆಲಸ ಕಾರ್ಯಗಳನ್ನು ಮಾಡಿಸುವುದಕ್ಕೆ ಪ್ರಯತ್ನ ಮಾಡುತ್ತಾ ಇದ್ದೇವೆ. ಈ ದೃಷ್ಟಿಯಿಂದ ಈ ಬಾವಿ ತೋಡಿಸುವ ವಿಷಯದಲ್ಲಿ ಬಹುಶಃ ಅನೇಕರಿಗೆ ನಾವು ಏನು ಸಹಾಯವನ್ನು ಮಾಡಬೇಕಾಗಿತ್ತೋ ಅದನ್ನು ಮಾಡಿದ್ದೇವೆ. ಹಣ ಸಹಾಯ ಮಾಡಿದರೂ ಕೂಡ ಕೆಲವು ಸಂದರ್ಭಗಳಲ್ಲಿ ಬಂಡೆಗಳು ಸಿಕ್ಕುತ್ತವೆ. ಅದನ್ನು ಅಳವಡಿಸುವುದಕ್ಕೆ ಆಗುವುದಿಲ್ಲ. ಮತ್ತೆ ಕೆಲವು ಸಂದರ್ಭಗಳಲ್ಲಿ ಯಾವ ಕೆಲಸಕ್ಕೆ ಸಾಲ ಪಡೆದಿರುತ್ತಾರೆ ಬಹುಶಃ ಆ ಕೆಲಸಕ್ಕೆ ನೇರವಾಗಿ ಉಪಯೋಗಿಸಿರುವುದಿಲ್ಲ. ಆದ್ದರಿಂದ ಇಲಾಖೆ ಮುಖಾಂತರ ಅವರಿಗೆ ಸೌಲಭ್ಯವನ್ನು ಒದಗಿಸುವುದಕ್ಕೆ ಸಾಧ್ಯವೇ ಅಂತ ಅನ್ನುವುದನ್ನು ತಿಳಿದುಕೊಂಡು, ಕಲ್ಲು ಬಂಡೆ ಸಿಕ್ಕಿದರೆ ಬ್ಲಾಸ್ಟಿಂಗ್ ಯುನಿಟ್ಟು ಒದಗಿಸುವುದಕ್ಕೂ ಬೋರಿಂಗ್ ಮಷಿನ್ ಗಳನ್ನು ತರಿಸಿಕೊಡುವುದಕ್ಕೂ ಮತ್ತು ಭೂಮಿಯನ್ನು ಸಮಪಾತಾಳವಾಗಿ ಮಾಡುವುದಕ್ಕೆ, ಮಟ್ಟ ಮಾಡುವುದಕ್ಕೆ ಬುಲ್‌ಡೋಜರ್ ಮತ್ತು ಟ್ರ್ಯಾಕ್ಟರುಗಳ ವ್ಯವಸ್ಥೆಯನ್ನು ಮಾಡುವುದಕ್ಕೆ ಒಂದು ಯೋಜನೆಯನ್ನು ಕಳೆದ ವರ್ಷ ನಾನು ಪರಿಶೀಲನೆ ಮಾಡುತ್ತೇನೆ ಎಂದು ಈ ಮಾನ್ಯ ಸಭೆಯಲ್ಲಿ ಹೇಳಿದ್ದೆ. ಆ ಬಗ್ಗೆ ಮತ್ತೆ ನಾನು ಉದ್ದವಾದ ಭಾಷಣ ಮಾಡುವುದಕ್ಕೆ ಇಚ್ಛೆ ಪಡುವುದಿಲ್ಲ. ಏಕೆಂದರೆ ಸರ್ಕಾರದವರು ಏನೋ ಹೇಳುತ್ತಾರೆ ಯಾವುದನ್ನು ಮಾಡುವುದಕ್ಕೂ ಅವರಿಗೆ ಮನಸ್ಸಿಲ್ಲ ಎಂದು ಶ್ರೀಮಾನ್ ಚೆನ್ನಬಸಪ್ಪನವರು ಬಹಳವಾಗಿ ಹೇಳಿದರು. ಆದ್ದರಿಂದ ಕಳೆದ ಸಾಲಿನಲ್ಲಿ ಈ ಸಭೆಯಲ್ಲಿ ಏನು ಟೀಕೆ ಬಂತು ಮತ್ತು ಏನು ರಚನಾತ್ಮಕವಾದ ಸಲಹೆಗಳು ಬಂದವು ಅವುಗಳ ವಿಷಯದಲ್ಲಿ ಏನು ಕಾರ್ಯಕ್ರಮ ತೆಗೆದುಕೊಳ್ಳುತ್ತೇನೆ ಎಂದು ಹೇಳಿದ್ದೇ ಅವುಗಳ ಬಗ್ಗೆ ಹೆಚ್ಚು ವಿವರವಾಗಿ ಹೇಳುವುದಕ್ಕೆ ನನಗಿಷ್ಟವಿಲ್ಲದೆ ಇರುವುದರಿಂದ ಇಷ್ಟು ಮಾತ್ರ ಹೇಳಬಲ್ಲೆ. ಕಳೆದ ವರ್ಷ ಈ ಮಾನ್ಯ ಸಭೆಗೆ ಏನು ಆಶ್ವಾಸನೆ ಕೊಟ್ಟಿದ್ದೆ ಅದರ ಪ್ರಕಾರ ಈ ವರ್ಷ ಎಂದರೆ 69-70ನೇ ಸಾಲಿನಲ್ಲಿ ಮಣ್ಣನ್ನು ಪರೀಕ್ಷೆ ಮಾಡುವುದಕ್ಕೆ ಸಂಶೋಧನಾ ಕೇಂದ್ರಗಳನ್ನು ತೆರೆಯಬೇಕೆಂದು ಹೇಳಿ ಪ್ರತಿ ಜಿಲ್ಲೆಗೆ ಒಂದಾದರೂ ಮಣ್ಣಿನ ಪರೀಕ್ಷಾ ಕೇಂದ್ರ ಇರಬೇಕೆಂದು ಹೇಳಿದೆ. ಅದರ ಪ್ರಕಾರ ಈ ವರ್ಷ ಎರಡು ಸಂಶೋಧನಾ ಕೇಂದ್ರಗಳನ್ನು ಒಂದು ಶಿವಮೊಗ್ಗದಲ್ಲಿ ಮತ್ತೊಂದು ಗುಲ್ಬರ್ಗಾದಲ್ಲಿ ಸರ್ಕಾರ ಮಂಜೂರು ಮಾಡಿದೆ. ಅಗ್ರಿಕಲ್ಚರಲ್ ಕಾಲೇಜುಗಳನ್ನು ಹೆಚ್ಚಿಸಬೇಕು. ಫಾರ್ಮರ್ಸ್ ಟ್ರೈನಿಂಗ್ ಸೆಂಟರ್ಸ್‌ನ್ನು ಹೆಚ್ಚು

ಮಾಡಬೇಕೆಂದು ಕೇಳಿದ್ದರು. ಗುಲ್ಬರ್ಗಾಕ್ಕೆ ಈ ವರ್ಷ ಒಂದು ಅಗ್ರಿಕಲ್ಚರಲ್ ಸ್ಕೂಲನ್ನು ಮಂಜೂರು ಮಾಡಿದ್ದೇವೆ. ಕೂಡ್ಲಗಿ, ಅರಭಾವಿ, ಹಳ್ಳಿಕೇರಿ ಈ ಮೂರು ಕಡೆ, ಮೂರು ಫಾರ್ಮರ್ಸ್ ಟ್ರೈನಿಂಗ್ ಸೆಂಟರ್ಸ್‌ನ್ನು ಮಂಜೂರು ಮಾಡಿದ್ದೇವೆ. ಕೃಷಿ ವಿಶ್ವವಿದ್ಯಾನಿಲಯದಲ್ಲಿ 200 ವಿದ್ಯಾರ್ಥಿಗಳಿಗೆ ಅವಕಾಶ ಇದ್ದದನ್ನು 348 ರವರೆಗೂ ಹೆಚ್ಚು ಮಾಡಲು ಅವಕಾಶ ಮಾಡಿಕೊಟ್ಟಿದ್ದೇವೆ. ಮಣ್ಣು ಸಂರಕ್ಷಣಾ ಕಾರ್ಯಕ್ರಮ ಹೆಚ್ಚು ವಿತರಣೆಯಿಂದ ಆಗಬೇಕೆಂಬ ಉದ್ದೇಶದಿಂದ ಇನ್ನೂ ಹೆಚ್ಚು ಸಬ್-ಡಿವಿಜನ್‌ಗಳು ಡಿವಿಜನ್‌ಗಳು ಆಗಬೇಕೆಂದು ಕೇಳಿದರು. ಅದನ್ನು ಈ ವರ್ಷ ಪರಿಶೀಲಿಸುತ್ತೇನೆ ಎಂದು ಹೇಳಿದ್ದೆ. ಇದರ ಪ್ರಕಾರ ಈ ವರ್ಷ ಎರಡು ಸಾಯಲ್ ಕನ್‌ಸರ್ವೇಷನ್ ಡಿವಿಜನ್‌ಗಳನ್ನು ಶಿವಮೊಗ್ಗ ಮತ್ತು ಬಳ್ಳಾರಿಯಲ್ಲಿ ಸರ್ಕಾರ ಪ್ರಾರಂಭಮಾಡುವುದಕ್ಕೆ ಮಂಜೂರು ಮಾಡಿದೆ.

ಬುಲ್‌ಡೋಜರ್, ಟ್ರ್ಯಾಕ್ಟರ್, ಪವರ್ ಟಿಲ್ಲರ್ಸ್‌ಗಳು ಕೆಟ್ಟು ಹೋದರೆ ಅದನ್ನು ರಿಪೇರಿ ಮಾಡುವುದಕ್ಕೆ ಸಾಕಾದಷ್ಟು ಪ್ರಮಾಣದಲ್ಲಿ ವರ್ಕ್‌ಷಾಪ್ ಇಲ್ಲ, ಅವನ್ನು ತೆರೆಯಬೇಕೆಂದು ಕಳೆದ ವರ್ಷ ಕೇಳಿದ್ದರು. ಅದಕ್ಕನುಗುಣವಾಗಿ ರಾಯಚೂರು, ಕೋಲಾರ, ಶಿವಮೊಗ್ಗ ಮತ್ತು ಧಾರವಾಡ ಈ 4 ಪ್ರದೇಶಗಳಲ್ಲಿ ವರ್ಕ್ಸ್‌ಷಾಪುಗಳನ್ನು 29 ಲಕ್ಷ ರೂಪಾಯಿಗಳ ಅಂದಾಜಿನಲ್ಲಿ ತೆರೆದು ಪ್ರಾರಂಭ ಮಾಡಿದ್ದೇವೆ. ಸಾಯಲ್ ಸರ್ವೆ ಅಪ್ಪರ್ ಕೃಷ್ಣಾ ಪ್ರಾಜೆಕ್ಟ್‌ನಲ್ಲಿ ಮಾಡಬೇಕಾಗಿದೆ. ಮತ್ತು ಲ್ಯಾಂಡ್ ರೆಕ್ಲಮೇಷನ್ ಮಾಡಬೇಕಾಗಿದೆ. ಕ್ರಾಪ್ ಪ್ಯಾಟ್ರನ್ ಮಾಡಬೇಕಾಗಿದೆ ಇದಕ್ಕೂ ಕೂಡ ಮುಂಜಾಗರೂಕತೆಯಿಂದ ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಕಳೆದ ವರ್ಷ ಹೇಳಿದ್ದೆ. ಈ ವರ್ಷ ಮಂಜೂರು ಮಾಡಿದ್ದೇವೆ. ಇಂಟೆನ್‌ಸ್ಸೀವ್ ಅಗ್ರಿಕಲ್ಚರಲ್ ಪ್ರೋಗ್ರಾಂನಲ್ಲಿ ಹತ್ತು ಜಿಲ್ಲೆಗಳಿಗೆ ಮಂಜೂರಾತಿ ಕೊಟ್ಟು, ಈ ವರ್ಷ ಹೊಸದಾಗಿ ಬೆಂಗಳೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಿಗೆ ಐ.ಎ.ಪಿ. ಪ್ರೊಗ್ರಾಮನ್ನು ಮಂಜೂರು ಮಾಡಿದ್ದೇವೆ. ಅಗ್ರಿಕಲ್ಚರಲ್ ಇನ್‌ಫರ್ಮೇಷನ್ ಸೆಂಟರ್ ಅಂತ ಹೇಳಿ ರೈತರಿಗೆ ಬೇಕಾಗಿರುವ ತಿಳಿವಳಿಕೆಯನ್ನು ಕೊಡುವುದಕ್ಕೆ; ಯಾವ ಕಾಲಕ್ಕೆ ಯಾವ ಬೆಳೆಯನ್ನು ಬೆಳೆಯಬೇಕು, ಯಾವ ಕಾಲದಲ್ಲಿ ಗೊಬ್ಬರ ಹಾಕಬೇಕು, ಯಾವ ಬೀಜಹಾಕಬೇಕು, ಕ್ರಿಮಿನಾಶಕಗಳನ್ನು ಯಾವ ರೀತಿ ಬಳಸಬೇಕು, ಯಾವ ರೀತಿ ಮುಂಜಾಗರೂಕತೆಯ ಕ್ರಮ ತೆಗೆದುಕೊಳ್ಳಬೇಕು ಎಂಬುದನ್ನೆಲ್ಲ ತಿಳಿಸುವುದಕ್ಕೆ ಇನ್‌ಫರ್ಮೇಷನ್ ಸೆಂಟರ್‌ಗಳನ್ನು ಮಂಜೂರು ಮಾಡಿದ್ದೇವೆ. ಅದರ ಜೊತೆಗೆ ಐ.ಎ.ಡಿ.ಪಿ. ಪ್ರೋಗ್ರಾಮನ್ನು ರಾಯಚೂರಿನಲ್ಲೂ ಕೂಡ ಮಂಜೂರು ಮಾಡಿದ್ದೇವೆ. ಎ.ಐ.ಆರ್. ನಲ್ಲಿ ರೈತರ ತಿಳಿವಳಿಕೆಗಾಗಿ ಅನೌನ್ಸ್‌ಮೆಂಟ್‌ಗಳನ್ನು ಮಾಡುತ್ತಾ ಇದ್ದೇವೆ. ನಮ್ಮ ಕೇಂದ್ರದಲ್ಲಿದ್ದ ಫಾರ್ಮರ್ಸ್ ಪೋರಮ್‌ಗೆ ಇಬ್ಬರು ಅಧಿಕಾರಿಗಳನ್ನು ಕಳುಹಿಸಿ ಕೊಟ್ಟು ರೈತರಿಗೆ ಬೇಕಾಗಿರತಕ್ಕ, ತಿಳಿವಳಿಕೆ ಮತ್ತು ತಾಂತ್ರಿಕ ಜ್ಞಾನವನ್ನು ಕೊಡಬಹುದೋ ಅದನ್ನು ಕೊಡುವುದಕ್ಕೆ ಸೂಕ್ತವಾದ ಏರ್ಪಾಡನ್ನು ಮಾಡಿದ್ದೇವೆ. ಮೂರು ಅಡೀಷನಲ್ ಯೂನಿಟ್ಸ್‌ನ್ನು ಸೀ ಐಲೆಂಡ್ ಕಾಟನ್ ಬೆಳೆಯುವುದಕ್ಕೆ ಉತ್ತಮ ಪಡಿಸುವುದಕ್ಕೆ ಹೊಸದಾಗಿ ಮಂಜೂರು ಮಾಡಿದ್ದೇವೆ. ಒಂದು ಜಿಲ್ಲೆಯಿಂದ ಮತ್ತೊಂದು ಜಿಲ್ಲೆಗೆ ಹೋಗಿ ರೈತರು ಬೆಳೆದದ್ದನ್ನು ನೋಡಿ ಅನುಭವ ಪಡೆಯುವುದಕ್ಕೆ ಫಾರ್ಮರ್ಸ್ ಎಕ್ಸ್‌ಚೇಂಜ್

ಪ್ರೊಗ್ರಾಮ್ ಅಂತ ಒಂದು ಯೋಜನೆಯನ್ನು ಈ ವರ್ಷ ಮಂಜೂರು ಮಾಡಿದ್ದೇವೆ. ಗಂಗಾವತಿಯಲ್ಲಿ ಇನ್ನೊಂದು ವರ್ಕ್‌ಷಾಪನ್ನು ಗ್ರಾಮಸೇವಕ್ ಟ್ರೇನಿಂಗ್ ಸೆಂಟರಿಗೆ ಅಟ್ಯಾಚ್ ಮಾಡಿಸಿಕೊಂಡಿದ್ದೇವೆ. ಬಾಗಲಕೋಟೆಯಲ್ಲಿರುವ ಒಂದು ಟ್ರೈನಿಂಗ್ ಸೆಂಟರನ್ನು ಅಪ್ ಗ್ರೇಡ್ ಮಾಡಿ ಈ ವರ್ಷ ಅದಕ್ಕೆ ಮಂಜೂರಾತಿ ಕೊಟ್ಟಿದ್ದೇವೆ.

ಸೆಲಿನಿಟಿ ಹೆಚ್ಚಾಗುತ್ತಾ ಇದೆ ಅದನ್ನು ಹೋಗಲಾಡಿಸುವುದಕ್ಕೆ ಏನೂ ಕ್ರಮ ತೆಗೆದುಕೊಂಡಿಲ್ಲ ಎಂದು ಮಾನ್ಯ ಸದಸ್ಯರು ಹೇಳಿದರು. ಸಾಯಲ್ ಕನ್‌ಸರ್ವೇಷನ್ ಮೆಸರ್ಸ್ ಅನ್ನು ತುಂಗಭದ್ರಾ ಏರಿಯಾದಲ್ಲಿ ಮಂಜೂರು ಮಾಡಿದ್ದೇವೆ. ಹೊಸದಾಗಿ ಈ ವರ್ಷ ಹರಳು ಬೆಳೆಸುವ ಒಂದು ಯೋಜನೆಯನ್ನು ಮಂಜೂರು ಮಾಡಿದ್ದೇವೆ. ಇನ್ನು ಮುಂದಿನ ವರ್ಷದಲ್ಲಿ ನಮ್ಮ ಪ್ರೊಗ್ರಾಮ್ ಏನಿದೆ ಎಂಬುದನ್ನು ಹೇಳಬೇಕೆಂದು ಇದ್ದೇನೆ.

ಮುಂದಿನ ವರ್ಷ 79 ಸಾವಿರ ಎಕರೆಗಳಲ್ಲಿ ಹೆಚ್ಚು ನೀರಾವರಿ ಮೂಲಕ ಬೆಳೆ ಬೆಳೆಸುವ ಕಾರ್ಯಕ್ರಮವಿದೆ. ಅದರಲ್ಲಿ ಬಹುಶಃ 20 ಸಾವಿರ ಬಾವಿ ತೋಡಿ, 400 ಬೋರ್‌ವೆಲ್ ತೆಗೆದು, 10 ಸಾವಿರ ಎಲೆಕ್ಟ್ರಿಕ್ ಪಂಪುಸೆಟ್ಟುಗಳನ್ನು ಒದಗಿಸಿ, 1500 ಡೀಸಲ್ ಪಂಪುಗಳನ್ನು ಕೊಟ್ಟು ಈ ಕಾರ್ಯ ಮಾಡಬೇಕೆಂಬ ಗುರಿಯಿದೆ. 25 ಸಾವಿರ ಎಕರೆ ವೇಸ್ಟ್‌ಲ್ಯಾಂಡನ್ನು ಬುಲ್‌ಡೋಜರುಗಳು ಮತ್ತು ಟ್ರಾಕ್ಟರುಗಳ ಮೂಲಕ ಸಮ ಮಾಡಲು ಪ್ರಯತ್ನ ಮಾಡಬೇಕೆಂದಿದೆ. 2 ಲಕ್ಷ 10 ಸಾವಿರ ಎಕರೆ ಭೂ ಸಂರಕ್ಷಣೆ ಕಾರ್ಯ ಮಾಡಬೇಕೆಂಬ ಉದ್ದೇಶವಿದೆ. ಇದಕ್ಕೆ ಮುಂದಿನ ವರ್ಷ ಬೇಕಾದ 3 ಲಕ್ಷ ರಾಸಾಯನಿಕ ಗೊಬ್ಬರ ಕೊಟ್ಟು ಹೆಚ್ಚು ಬೆಳೆಯುವುದಕ್ಕೆ ಪ್ರಯತ್ನ ಮಾಡಬೇಕೆಂಬ ಯೋಜನೆ ಇದೆ. ಕ್ರಿಮಿನಾಶಕ ಔಷಧಿ ಉಪಯೋಗ ಮಾಡಿ ಬೆಳೆ ಸಂರಕ್ಷಣೆ ಮಾಡಲು ಮುಂದಿನ ವರ್ಷ 50 ಲಕ್ಷ ಎಕರೆಗಳಿಗೆ ಸಂಬಂಧಪಟ್ಟ ಕಾರ್ಯಕ್ರಮವಿದೆ. 1971 ನೆಯ ಸಾಲಿನಲ್ಲಿ ಎರಡು ಜಿಲ್ಲೆಗಳಲ್ಲಿ ಐ.ಎ.ಪಿ. ಪ್ರೋಗ್ರಾಮ್ ಜಾರಿಗೆ ತರಬೇಕೆಂಬ ಯೋಜನೆ ಇದೆ. ಸುಮಾರು 14 ಲಕ್ಷ ಎಕರೆಯಲ್ಲಿ ಹೆಚ್ಚು ಇಳುವರಿ ಕೊಡುವ ಬೆಳೆ ಬೆಳೆಯಬೇಕೆಂಬ ಗುರಿ ಇದೆ. ಕಮರ್ಷಿಯಲ್ ಕ್ರಾಪ್ಸ್ ಎಂದರೆ ಹತ್ತಿ, ಎಣ್ಣೆ ಕಾಳು, ಶೇಂಗ, ಹೊಗೆಸೊಪ್ಪು ಇವುಗಳನ್ನು 7 ಲಕ್ಷ ಎಕರೆಗಳಲ್ಲಿ ಉತ್ಪತ್ತಿ ಮಾಡಬೇಕೆಂಬ ಗುರಿ ಇದೆ. ಇದಕ್ಕೆ ಹಿಂದಿನಿಂದ ನಾವೇನು ಉತ್ಪತ್ತಿ ಮಾಡಿದ್ದೇವೆ ಅದನ್ನು ಮುಂದುವರೆಸುವುದಕ್ಕೆ ಹೊಸದಾಗಿ ಕೆಲವು ಯೋಜನೆಗಳನ್ನು ಅಳವಡಿಸುವುದು ಇದೆ. ಹೊಸದಾಗಿ ಅಳವಡಿಸಿರುವ ಯೋಜನೆಯಲ್ಲಿ ಸಣ್ಣ ಹಿಡುವಳಿಯವರಿಗೆ ಇದುವರೆಗೆ ಹಾಕಿರುವ ಯೋಜನೆ ಪ್ರಕಾರ ಅವರಿಗೆ ಸಕಾಲದಲ್ಲಿ ಸಾಲ ಸಿಕ್ಕುವುದಿಲ್ಲ, ಬ್ಯಾಂಕುಗಳು ಅಥವಾ ಸಹಕಾರ ಸಂಘಗಳು ಮುಂದೆ ಬಂದು ಕೊಡುವುದಿಲ್ಲ ಎಂದು ಕೇಂದ್ರ ಸರಕಾರ ಸಣ್ಣ ಹಿಡುವಳಿದಾರರಿಗೆ ಅನುಕೂಲ ಮಾಡಲು ಒಂದು ಯೋಜನೆಗೆ ಒಪ್ಪಿದೆ. ಮೈಸೂರು ಜಿಲ್ಲೆ ಒಂದು ಮಾತ್ರ ಅದಕ್ಕೆ ಗೊತ್ತುಮಾಡಿತ್ತು. ನಾವು ಎರಡು ಜಿಲ್ಲೆ ಗೊತ್ತು ಮಾಡಿದ್ದವು. ಬೀದರ್ ಮತ್ತು ಮೈಸೂರು ಜಿಲ್ಲೆಗಳಲ್ಲಿ ಸಣ್ಣ ಹಿಡುವಳಿದಾರರಿಗೆ 3 ಕೋಟಿಗಿಂತ ಹೆಚ್ಚು ಸಾಲಕೊಡಲು ಒಪ್ಪಿಗೆ ಪಡೆಯಲಾಗಿದೆ. ಇನ್ನೂ ಎರಡು ಜಿಲ್ಲೆಯಲ್ಲಿ ಮಾಡುತ್ತೇವೆ ಸಹಕಾರ ಕೊಡಿ ಎಂದು ಕೇಂದ್ರ

ಸರಕಾರವನ್ನು ಕೇಳಿದ್ದೇವೆ. ಹೆಚ್ಚು ಇಳುವರಿ ಕೊಡುವ ಬೀಜ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ ಔಷಧಿ ಕೆಲವು ಭಾಗದವರಿಗೆ ದೊರಕಿಲ್ಲವೆಂಬುದು ನಿರ್ವಿವಾದವಾದ ವಿಚಾರವಾಗಿದೆ. ಈ ಕಾರಣದಿಂದ ಇನ್ನು ಮೇಲೆ ಬ್ಯಾಂಕುಗಳ ರಾಷ್ಟ್ರೀಕರಣವಾದ ಮೇಲೆ ಕೆಲವು ಕಡೆ ಹಣ ಸಲೀಸಾಗಿ ಸಿಕ್ಕುತ್ತಿದೆ. ಆದರೆ ಚನ್ನಬಸಪ್ಪನವರು ಹೇಳಿದಂತೆ ವೇರ್ ಹೌಸ್ ಕಾರ್ಪೊರೇಷನ್ನಿನಲ್ಲಿ ಬೆಳೆದವರು ತಮ್ಮ ಧಾನ್ಯ ಇಟ್ಟರೆ ಸಾಲ ಪಡೆಯಲು ನಿರ್ಬಂಧ ಸ್ವಲ್ಪವಿದೆ. ಅದನ್ನು ತೆಗೆಯುವವರೆಗೆ ಅನುಕೂಲವಿಲ್ಲ. ಆ ವಿಚಾರದಲ್ಲಿ ಕೇಂದ್ರ ಸರ್ಕಾರದೊಡನೆ ವ್ಯವಹರಿಸಿ ಸಾಧ್ಯವಾದ ಮಟ್ಟಿಗೆ ಸೌಲಭ್ಯ ದೊರಕಿಸಲು ಪ್ರಯತ್ನ ಮಾಡುತ್ತೇವೆ. ಇದುವರೆಗೆ ಕೇಂದ್ರ ಸರ್ಕಾರದವರು ಔಷಧಿಗಳಿಗಾಗಿ 25% ಸಬ್ಸಿಡಿ ಕೊಡುತ್ತಿದ್ದುದನ್ನು ನಿಲ್ಲಿಸಿದ್ದಾರೆ. ಕಾರಣ ಚನ್ನಬಸಪ್ಪನವರು ಹೇಳಿದರು. ಅದನ್ನು ರಾಜ್ಯ ಸರ್ಕಾರ ಸ್ವಂತ ಖರ್ಚಿನಿಂದ ಮುಂದುವರಿಸುವುದು. They have made Inroads into the powers of the state Government with regard to the policies and programmes of Agricultural production.

ರಾಜ್ಯಾಂಗದ ಕನ್ಕರೆಂಟ್ ಲಿಸ್ಟಿನಲ್ಲಿ ಬೆಲೆ ನಿಯಂತ್ರಣ ವಿಚಾರ ಇದೆ. ಆದುದರಿಂದ ಕೇಂದ್ರ ಸರ್ಕಾರಕ್ಕೆ ಹಕ್ಕಿದೆ, ಆದರೆ ನಮ್ಮ ಸಲಹೆ ಪ್ರಕಾರ ಕೇಂದ್ರ ಸರ್ಕಾರದವರು ಮಾಡಬೇಕೆ ಹೊರತು ಹಾಗೆ ಮುಂದುವರೆಯುವಂತಿಲ್ಲ, ನಮ್ಮ ಹಕ್ಕಿನ ಮೇಲೆ ಅವರು ಪ್ರವೇಶ ಮಾಡುತ್ತಿದ್ದಾರೆಂಬ ಭಾವನೆಯಿಲ್ಲಿಲ್ಲ. ಮುಖ್ಯಮಂತ್ರಿಗಳು ಮತ್ತು ಆರ್ಥಿಕ ಮಂತ್ರಿಗಳು ನ್ಯಾಷನಲ್ ಡೆವಲಪ್‌ಮೆಂಟ್ ಕೌನ್ಸಿಲಿನಲ್ಲಿ ಕೇಂದ್ರದ ಸಹಾಯವೇನಿದೆ ಅದನ್ನು ಒಟ್ಟಾಗಿ ಕೊಡಬೇಕು, ಯಾವ ಇಲಾಖೆಗೆ ಹಂಚಬೇಕೋ ಅದನ್ನು ನಾವೇ ಹಂಚುತ್ತೇವೆ ಎಂದು ತಿಳಿಸಿದ್ದಾರೆ. ಈಗ ಕೇಂದ್ರ ಸಹಾಯ ಬಹಳ ಮಟ್ಟಿಗೆ ಕಡಿಮೆಯಾಗಿ ಕೆಲವು ಬಾಬುಗಳಿಗೆ ಮಾತ್ರ ಸಹಾಯ ದೊರೆಯುತ್ತಿದೆ. ಕ್ರಿಮಿನಾಶಕಗಳಿಗೆ ಸಬ್ಸಿಡಿ ಕೊಡುವುದು ಅಥವಾ ಇತರ ಸಂದರ್ಭಗಳಲ್ಲಿ ಕೊಡುವುದನ್ನು ಕಡಿಮೆ ಮಾಡಿದ್ದಾರೆ. ಅದನ್ನು ನಿಲ್ಲಿಸಬಾರದು, ಶೇಕಡ 25 ರಷ್ಟಾದರೂ ಕೊಡಬೇಕು. ಅದಕ್ಕಿಂತ ಕಡಿಮೆ ಮಾಡಬಾರದು ಎಂದು ಮನವಿಮಾಡಲಾಗಿದೆ. ಕೆಲವು ಸಂದರ್ಭಗಳಲ್ಲಿ ಶೇ 50 ಭಾಗ ಕೊಟ್ಟು ಮಂಡ್ಯ, ಧಾರವಾಡ ಮುಂತಾದ ಕಡೆಗಳಲ್ಲಿ ವಿಮಾನದಿಂದ ಕ್ರಿಮಿನಾಶಕಗಳನ್ನು ಸಿಂಪಡಿಸಿದ್ದೇವೆ. ಇದಕ್ಕೆ ತಾಲ್ಲೂಕು ಬೋರ್ಡಿನವರು ಕಾಂಟ್ರಿಬ್ಯೂಷನ್ ಕೊಡಬೇಕು ಮಂಡ್ಯ ಮತ್ತು ಪಾಂಡವಪುರದವರು ಕೊಡಲು ಮುಂದೆ ಬಂದರು. ನಂಜನಗೂಡಿನವರು ಮುಂದೆ ಬರಲಿಲ್ಲ ದಾರವಾಡ ತಾಲ್ಲೂಕಿನಲ್ಲಿ 60 ಸಾವಿರ ಎಕರೆಯಲ್ಲಿದ್ದ ಹೈಬ್ರಿಡ್ ಜೋಳದ ಫಸಲಿಗೆ ಔಷಧಿ ಸಿಂಪಡಿಸಲಾಗಿದೆ. ಆದ್ದರಿಂದ ಅವರು ಹೆಚ್ಚು ಬೆಳೆಯಲು ಸಾಧ್ಯವಾಗಿದೆ, ಕೆಲವು ಕಡೆ ಜೂನ್ ತಿಂಗಳಲ್ಲಿ ಮಳೆ ಬಾರದೆ ಅಕ್ಟೋಬರಿನಲ್ಲಿ ಹೊಡೆ ಬಂದು ಕಾಳು ಬರಲಿಲ್ಲ. ಹುಳ ಬಿದ್ದಕಡೆ ಔಷಧಿ ಹಾಕಲು ಜನರು ಒಪ್ಪದೆ ಹೋದುದರಿಂದ ಔಷಧಿ ಹಾಕಲು ಸಾಧ್ಯವಾಗಲಿಲ್ಲ. ನಾವು ರೈತರಿಗೆ ಸಹಾಯ ಮಾಡಬೇಕೆಂದು ಪ್ರಯತ್ನ ಮಾಡಿರುವ ಕಡೆ ರಾಜಕೀಯವೇನೂ ಇಲ್ಲ ಮತ್ತು ಯಾವ ತಾರತಮ್ಯವನ್ನೂ ಮಾಡಿಲ್ಲ ಎಂದು ವಿನಯ ಪೂರ್ವಕವಾಗಿ ಹೇಳುತ್ತೇನೆ.

ಈ ದಿನ ಬಹುಶಃ ಡಿಮ್ಯಾಂಡಿನ ಮೇಲೆ ಮಾನ್ಯ ಸಭೆ ನಿರೀಕ್ಷೆ ಮಾಡಿದ ಪ್ರಮಾಣದಲ್ಲಿ ಉತ್ತರ ಕೊಡುವುದಕ್ಕೆ ಉತ್ಸಾಹವಿಲ್ಲ ಕಾರಣ, ಏನು ನಿಷ್ಠೆಯಿಂದ ಕೃಷಿ ಕ್ಷೇತ್ರದಲ್ಲಿ ಕೆಲಸ ಮಾಡಬೇಕೆಂದು ಪ್ರಯತ್ನ ಮಾಡಲಾಗಿತ್ತೋ ಆ ಕೆಲಸ ನಾವು ಮಾಡುವುದಕ್ಕೆ ಸಾಧ್ಯವಿದೆ ಎಂದು ಬಹಳ ಧೈರ್ಯದಿಂದ ಹೇಳುವ ಹಾಗಿಲ್ಲ. ಕಾರಣ ಇಷ್ಟೆ ಯೋಜನೆ ಮಾಡಲು, ಅದರಂತೆ ಕೆಲಸ ಮಾಡಲು ಇಂದು ಕೇಂದ್ರ ಸರ್ಕಾರದಲ್ಲಾಗಲೀ, ರಾಜ್ಯಸರ್ಕಾರದಲ್ಲಾಗಲೀ, ಅವಕಾಶವಿಲ್ಲ ಬಹುಶಃ ರೈಲ್ವೆ ಮಂತ್ರಿಗಳು ಅವರಿಗೆ ಬೇಕಾದ ಹಣಕಾಸಿಗೆ ಒಪ್ಪಿಗೆ ಪಡೆಯುವ ಹಾಗೆ ಕೃಷಿ ಸಚಿವರೂ ತಮ್ಮ ಹಣಕಾಸಿನ ಒಪ್ಪಿಗೆ ಪಡೆಯಲು ಅವಕಾಶ ಸಿಕ್ಕಿದಾಗ ಕೃಷಿಗಿರುವ ಅಡಚಣೆ ದೂರಮಾಡಿ ಆದಷ್ಟು ಶೀಘ್ರವಾಗಿ ಕೆಲಸ ಕಾರ್ಯ ಮಾಡುವುದಕ್ಕೆ ಅವಕಾಶವಾಗುತ್ತದೆ, ಪ್ರಜಾಪ್ರಭುತ್ವದ ಒಂದು ನೆರಳಲ್ಲಿ ಕೆಲಸ ಮಾಡುವಾಗ ಸದಸ್ಯರು ಅನುಮತಿ ಕೊಡುವ 11 ಕೋಟಿ ಚಿಲ್ಲರೆ ಹಣವನ್ನು ಒಂದನೆಯ ತಾರೀಖಿನಿಂದಲೇ ಅಧಿಕಾರಿಗಳಿಗೆ ಬೇಗನೆ ಕೊಟ್ಟು ಅವರಿಗೆ ಸಂಪೂರ್ಣ ಅಧಿಕಾರ ಕೊಟ್ಟು ಗೊಬ್ಬರ, ಬೀಜ ಮುಂತಾದುವನ್ನು ಸಕಾಲದಲ್ಲಿ ಒದಗಿಸಲು ಅವಕಾಶವಾಗಬಹುದು. ಈಗಿನ ಪರಿಸ್ಥಿತಿಯಲ್ಲಿ ಮೊನ್ನೆ ಮೊನ್ನೆಯವರೆಗೂ, ಕೂಡ ಕೆಲವು ಯೋಜನೆಗಳನ್ನು ಮಂಜೂರು ಮಾಡಬೇಕಾಗಿದ್ದಾಗ ಅನೇಕ ಅಡ್ಮಿನಿಸ್ಟ್ರೇಟಿವ್ ತೊಂದರೆಗಳು ಬಂದುದರಿಂದ ಎಷ್ಟರ ಮಟ್ಟಿಗೆ ಪ್ರಗತಿಯನ್ನು ಸಾಧನೆ ಮಾಡಬಹುದೋ ಅಷ್ಟನ್ನು ಸಾಧನೆ ಮಾಡುವುದಕ್ಕೆ ಆಗಿಲ್ಲ, ಮಾನ್ಯ ಪ್ರಧಾನ ಮಂತ್ರಿಗಳು ಹಿಂದೆ ವ್ಯವಸಾಯ ಖಾತೆಯನ್ನು ರಾಜ್ಯಗಳಲ್ಲಿ ಮುಖ್ಯಮಂತ್ರಿಗಳೇ ವಹಿಸಿಕೊಳ್ಳಬೇಕು ಎಂದು ಹೇಳಿದರು. ಇದಕ್ಕೆ ಕಾರಣ ಹಣಕಾಸಿನ ಸಚಿವರು ಮತ್ತು ಇತರ ಸಚಿವರು ಬೇಗ, ಬೇಗ ಕೆಲಸಮಾಡುತ್ತಾರೆ ಎನ್ನುವುದೇ ಆಗಿದೆ. ನೂರಕ್ಕೆ 80 ಜನ ಇರುವ ರೈತರನ್ನು ಉದ್ಧಾರ ಮಾಡಬೇಕೆಂದು ಎಲ್ಲರೂ ಹೇಳುತ್ತಿದ್ದರೂ ಕೂಡ ಅದಕ್ಕೆ ಬಡ್ಜೆಟ್ಟಿನಲ್ಲಿ ಕೊಟ್ಟಿರುವ ಹಣವನ್ನು ನೋಡಿದಾಗ ಎಷ್ಟು ಕೆಲಸವನ್ನು ಮಾಡಬೇಕೋ ಅಷ್ಟನ್ನು ಮಾಡಲು ಸಾಧ್ಯವಾಗದೇ ಹೋಗಬಹುದು ನಗರಗಳಲ್ಲಿರುವ ಆಸ್ತಿಯ ಮೇಲೆ ತೆರಿಗೆಯನ್ನು ಹಾಕಬೇಕಾದರೆ ಎಷ್ಟು ಜನ ಸಂಘಟಿತರಾಗಿ ವಿರೋಧ ಮಾಡುತ್ತಾರೆಯೋ, ಅದೇ ರೀತಿ ಅಗ್ರಿಕಲ್ಚರಲ್ ಇನ್‌ಕಮ್ ಟ್ಯಾಕ್ಸ್ ಹಾಕಬೇಕೆಂದು ಹೊರಟಾಗ ವಿರೋಧ ಬರುವುದಿಲ್ಲ. ಅವರಲ್ಲಿ ಅಷ್ಟು ಸಂಘಟನೆ ಇರುವುದಿಲ್ಲ. ಅಗ್ರಿಕಲ್ಚರಲ್ ಡಿಮ್ಯಾಂಡ್ ಬಗ್ಗೆ ಯಾರಿಗೂ ಅಷ್ಟು ಆಸಕ್ತಿ ಇಲ್ಲ. ರೈತರ ಪರವಾಗಿ ಯಾರೂ ಇಲ್ಲ ಎಂದು ನಿನ್ನೆ ಪತ್ರಿಕೆಯನ್ನು ನೋಡಿದಾಗ ನನಗೆ ಅನ್ನಿಸಿತು. ಈ ಡಿಮ್ಯಾಂಡ್ ಬಗ್ಗೆ ಚರ್ಚೆ ನಡೆಯುತ್ತಿದ್ದಾಗ ಈ ಸಭೆಯಲ್ಲಿ 30 ಕ್ಕಿಂತ ಹೆಚ್ಚು ಸದಸ್ಯರು ಕೂಡ ಇರಲಿಲ್ಲ. ವ್ಯವಸಾಯದ ವಿಷಯದಲ್ಲಿ ನಾವು ಮಾಡಬೇಕಾದಂಥ ಕೆಲಸವನ್ನು ಮಾಡಬೇಕಾಗಿದ್ದರೆ ಅದಕ್ಕೆ ಏನೇನೋ ಅಡಚಣೆಗಳು ಬರುತ್ತವೆ, ಅವುಗಳನ್ನು ತೊಡೆದುಹಾಕುವುದಕ್ಕೆ ಪ್ರಯತ್ನ ಮಾಡಬೇಕು.

ಕೃಷಿಗೋಸ್ಕರ ಬುಲ್‌ಡೋಜರುಗಳನ್ನು ಕೊಡುವುದರಲ್ಲಿ ಅಗ್ರಿಕಲ್ಚರಲ್ ಇಂಜಿನಿಯರಿಂಗ್ ಸೆಕ್ಷನ್‌ನಲ್ಲಿ ಕೆಲಸ ಕಾರ್ಯಗಳು ಸರಿಯಾಗಿ ಪಡೆಯುವುದಕ್ಕೆ ಅವಕಾಶವಿಲ್ಲ ಎಂದು ಪಬ್ಲಿಕ್ ಅಕೌಂಟ್ಸ್ ಕಮಿಟಿ ಹೇಳಿರುವುದಲ್ಲದೆ ಅದರಲ್ಲಿ ನಷ್ಟವಾಗುತ್ತಿದೆ ಎಂದೂ ಹೇಳಿದೆ. ಪ್ರತಿಸಾರಿಯೂ

ನಷ್ಟವಾಗುತ್ತದೆ. ನೋಲಾಸ್ ನೋಪ್ರಾಫಿಟ್ ಬೇಸಿಸ್ ಮೇಲೆ ನಡೆಸಬೇಕೆಂದು ಹೊರಟಾಗ ರೈತರಿಗೆ ಬುಲ್‌ಡೋಜರ್, ಟ್ರಾಕ್ಟರ್, ಬೋರ್‌ವೆಲ್ ಯಂತ್ರಗಳನ್ನು ಯಾವ ದರದಲ್ಲಿ ಕೊಡುತ್ತಿದ್ದೇವೆ ಅದನ್ನು ಹೆಚ್ಚಿಸಬೇಕಾಗುತ್ತದೆ. ದರವನ್ನು ಹೆಚ್ಚಿಸಿದಾಗ ಲಾಭ ಮಾಡುವುದಕ್ಕೆ ಸಾಧ್ಯವಾಗದೆ ಇದ್ದರೂ ನಷ್ಟವನ್ನು ಕಡಿಮೆ ಮಾಡುವುದಕ್ಕೆ ಸಾಧ್ಯವಾಗುತ್ತದೆ. ಸರ್ಕಾರಕ್ಕೆ ಎಷ್ಟು ಖರ್ಚಾಗುತ್ತದೆ. ಎಷ್ಟರ ಮಟ್ಟಿಗೆ, ಸಬ್ಸಿಡಿ ಕೊಡಬಹುದು ಎಂದು ಲೆಕ್ಕಹಾಕಿ ಕನಿಷ್ಟ ಪಕ್ಷ 20% ಆದರೂ ಸಬ್ಸಿಡಿ ಕೊಡಬೇಕೆಂದು ನಿರ್ಧಾರಮಾಡಿ ರೇಟನ್ನು ಕಡಿಮೆ ಮಾಡಿದ್ದೇವೆ. ಬುಲ್‌ಡೋಜರ್ ಆರ್ಗನೈಜೇಷನ್‌ನಲ್ಲಿ ಒಂದು ವರ್ಷಕ್ಕೆ ನಾಲ್ಕು ಲಕ್ಷರೂಪಾಯಿ ನಷ್ಟವಾಗುತ್ತಿದೆ. ಈಗ ಏನು ಇಂಪ್ರೂವ್ ಮೆಂಟ್ ಮಾಡಿಸಿದ್ದೀರಿ ಎಂದು ಅನೇಕ ಸದಸ್ಯರು ಕೇಳುತ್ತಾರೆ. ಕಳೆದ ವರ್ಷ ನಾನು ಒಂದು ವರ್ಷ ಅವಕಾಶ ಕೊಡಿ, ಈ ಇಲಾಖೆಯಲ್ಲಿ ತ್ವರಿತವಾಗಿ ಕೆಲಸಮಾಡುವುದಕ್ಕೆ ಪ್ರಯತ್ನಮಾಡಿ ತಾವು ಏನು ನಿರೀಕ್ಷೆ ಮಾಡುತ್ತೀರಿ ಅದನ್ನು ಮಾಡುತ್ತೇನೆ ಎಂದು, 88 ಬುಲ್ ಡೋಜರುಗಳು ವಿವಿಧ ಜಿಲ್ಲೆಗಳಲ್ಲಿ 56.210 ಗಂಟೆಗಳ ಕಾಲ ಜನವರಿ ತಿಂಗಳವರೆಗೂ ಕೆಲಸ ಮಾಡಿದೆ. 1956 ರಿಂದ 1961ರ ವರೆಗೆ 2,16,607 ಗಂಟೆಗಳ ಕಾಲ ಕೆಲಸ ಮಾಡಿ 63,176 ಎಕರೆಗಳನ್ನು ಸಮಪಾತಳಿ ಮಾಡಿದೆ. 1961 ರಿಂದ 1966 ರವರೆಗೆ 42,15,365 ಗಂಟೆಗಳು ಕೆಲಸ ಮಾಡಿ 53, 861 ಎಕರೆ ಭೂಮಿಯನ್ನು ಸಮಪಾತಳಿ ಮಾಡಿದೆ. 1966 ರಿಂದ ಜನವರಿ 1970 ರವರೆಗೆ 1,79,100 ಗಂಟೆಗಳ ಕಾಲ ಕೆಲಸಮಾಡಿ 47.774 ಎಕರೆ ಭೂಮಿಯನ್ನು ಸಮಪಾತಳಿ ಮಾಡಿದೆ. ಕಳೆದ ಎರಡು ತಿಂಗಳಲ್ಲಿ ನಡೆದಿರುವ ಕೆಲಸದ ಲೆಕ್ಕಬಂದಿಲ್ಲ ಒಟ್ಟಿನಲ್ಲಿ ಇದುವರೆಗೆ 1,64,187 ಎಕರೆ ಭೂಮಿಗೆ ಬುಲ್ ಡೋಜರುಗಳಿಂದ ಸಹಾಯವಾಗಿದೆ. ಬುಲ್ ಡೋಜರುಗಳಿಗೆ ಹಿಂದಿನಿಂದಲೂ ಹಾಕುತ್ತಿದ್ದ ದರವನ್ನು ಕೆಲವು ಮಾನ್ಯ ಸದಸ್ಯರು ಕೇಳಿದರು. ಅದು ಈ ರೀತಿ ಇದೆ. 40 ರಿಂದ 50 ಅಶ್ವಶಕ್ತಿಯವರೆಗೆ 26 ರೂಪಾಯಿ, 50 ರಿಂದ 60 ಅಶ್ವಶಕ್ತಿಯವರೆಗೆ 45 ರೂಪಾಯಿ ಹಾಕಿದ್ದೇವೆ. ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್‌ನಲ್ಲಿ ಅದಕ್ಕೆ 66 ರೂಪಾಯಿಗಳನ್ನು ವಿಧಿಸುತ್ತಿದ್ದಾರೆ. ಒಂದು ದಿವಸ ಕೆಲಸ ಮಾಡಿಸದೆ ಇಟ್ಟುಕೊಂಡಿದ್ದರೆ 50 ರೂಪಾಯಿ ಪೆನಾಲ್ಟಿ ಎಂದು ಗೊತ್ತು ಮಾಡಿದ್ದೇವೆ. ಬುಲ್ ಡೋಜರನ್ನು ತೆಗೆದುಕೊಂಡು ಹೋಗುವಾಗ ಒಂದು ಮೈಲಿಗೆ ನೂರು ರೂಪಾಯಿ ಮೈಲೇಜ್ ಆಗುತ್ತದೆ.

45 ಟ್ರಾಕ್ಟರುಗಳು ಬಿಜಾಪುರ ಮತ್ತು ರಾಯಚೂರು ಜಿಲ್ಲೆಯಲ್ಲಿ ಕೆಲಸಮಾಡುತ್ತಿವೆ. ವೆಲ್ ಬೋರಿಂಗ್ ಯೂನಿಟ್ಸ್ 52 ಇದ್ದವು. ಹೊಸದಾಗಿ 13 ಯೂನಿಟ್ಸ್ ತೆಗೆದುಕೊಳ್ಳಲಾಗಿದೆ. ಒಟ್ಟು 69 ಯೂನಿಟ್ಸ್ ಈ ವರ್ಷ ಕೆಲಸ ಮಾಡುತ್ತಿದೆ. ಹೊಸದಾಗಿ 44 ಯೂನಿಟ್ಸ್ ಕೊಂಡುಕೊಳ್ಳುತ್ತೇವೆಂದು ಹೇಳಿದ್ದೆ ಕೆಲವಾರು ಆಡಳಿತದ ಅಡಚಣೆಗಳಿಂದ ಫೆಬ್ರವರಿ ತಿಂಗಳಿನಲ್ಲಿ 25 ಯೂನಿಟ್ಸ್ ಬಂದಿದೆ, ಉಳಿದದ್ದು ಬರಬೇಕಾಗಿದೆ. ಈ ಕಾರಣದಿಂದ ಎಷ್ಟು ತ್ವರಿತವಾಗಿ ತರಿಸಿ ರೈತರಿಗೆ ಇವುಗಳ ಸಹಾಯವನ್ನು ಕೊಡಬೇಕು ಎಂದು ಹೇಳಲಾಗಿತ್ತೋ ಅಷ್ಟು ತ್ವರಿತವಾಗಿ ತರಿಸುವುದಕ್ಕಾಗುವುದಿಲ್ಲ, ಸ್ಟೋರ್ಸ್ ಪರ್ಚೆಸ್ ಕಮಿಟಿ, ಹಣಕಾಸು ಇಲಾಖೆ ಇವೆಲ್ಲದರ

ಮೂಲಕ ಹೋಗಬೇಕಾಗಿರುವುದರಿಂದ ಬಹಳ ತಡವಾಗುತ್ತದೆ, 44 ಯಂತ್ರಗಳನ್ನು ಕೊಂಡುಕೊಳ್ಳಬೇಕಾದರೆ ಒಂದು ವರ್ಷ ಸದಸ್ಯರ ಗಮನಕ್ಕೆ ತರುತ್ತೇನೆ, 1967 1968ರಲ್ಲಿ 93 ಬಾವಿಗಳನ್ನು ತೆಗೆದಿದ್ದು 86 ಬಾವಿಗಳಲ್ಲಿ ನೀರು ಬಿದ್ದಿದೆ. 1968-1969ರಲ್ಲಿ 156 ಬಾವಿಗಳನ್ನು ತೆಗೆಯಲಾಯಿತು. ಈ ವರ್ಷ 52 ಯಂತ್ರಗಳು ಕೆಲಸ ಮಾಡುತ್ತಿದ್ದು 213 ಬಾವಿಗಳು ಜನವರಿ ತಿಂಗಳವರೆಗೆ ಆಗಿವೆ. ಇದರಿಂದ ಸ್ವಲ್ಪ ಮಟ್ಟಿಗೆ ಕೆಲಸ ಚುರುಕಾಗಿ ನಡೆದಿದೆ ಎಂದು ಮಾನ್ಯ ಸದಸ್ಯರು ಗಮನಿಸಬಹುದು.

ಈ ವರ್ಷ ಪೊಲೀಷ್ ರಿಗ್ಸ್, ಎರಡು ದಿವಸಕ್ಕೆ ಒಂದು ಬಾವಿಯನ್ನು ತೋಡುವಂಥ ಮೂರು ಯಂತ್ರಗಳು ಬಂದಿವೆ. ಅವುಗಳನ್ನು ಬೆಂಗಳೂರು, ಬೆಳಗಾಂ ಮತ್ತು ಗುಲ್ಬರ್ಗಾ ಡಿವಿಜನ್ನುಗಳಿಗೆ ಒಂದೊಂದನ್ನು ಕೊಟ್ಟಿದೆ. ಬಾವಿ ತೋಡುವ ಯಂತ್ರಗಳೇನಿವೆ ಅವುಗಳನ್ನು ಯಾವ ಪ್ರಮಾಣದಲ್ಲಿ ಮತ್ತು ಯಾವ ವೇಗದಲ್ಲಿ ನಮ್ಮವರು ಉಪಯೋಗ ಮಾಡುತ್ತಿದ್ದಾರೆ ಎನ್ನುವುದನ್ನು ನೋಡಿದರೆ ಸೌತ್ ಇಂಡಿಯಾ ಚರ್ಚಿನವರ ಕೆಲಸ ಮಾಡುವ ವೇಗದಲ್ಲಿ ನಮ್ಮವರು ಕೆಲಸ ಮಾಡುವುದಿಲ್ಲ. ಅವರು ಹಗಲೂ ರಾತ್ರಿ ದುಡ್ಡು ಬರುತ್ತದೆ ಎನ್ನುವ ನೆಪದಿಂದ ಕೆಲಸ ಮಾಡುತ್ತಾರೆ, ಪ್ರೈವೇಟ್ ಸಕ್ಟಾರ್ ಮತ್ತು ಪಬ್ಲಿಕ್ ಸೆಕ್ಟಾರಿಗೆ ಇರುವ ವ್ಯತ್ಯಾಸ ಇದು, ಬುಲ್ ಡೋಜರಿನಲ್ಲಿ ಕೆಲಸ ಮಾಡುವ ಜನ ಒಂದು ವರ್ಷದಲ್ಲಿ ಸುಮಾರು ಒಂದು ಸಾವಿರ ಗಂಟೆ ಕೆಲಸ ಮಾಡುತ್ತಿದ್ದರು, ಡ್ರೈವರುಗಳಿಗೆ ಮತ್ತು ಇತರರಿಗೆ ಸ್ವಲ್ಪ ಇನ್‌ಸೆಂಟಿವ್ ಕೊಟ್ಟ ಮೇಲೆ ಹೆಚ್ಚು ಚುರುಕಾಗಿ ಕೆಲಸಮಾಡಿ ಎರಡು ಸಾವಿರ ಚಿಲ್ಲರೆ ಗಂಟೆಗಳಿಗಿಂತ ಹೆಚ್ಚು ಕೆಲಸ ಮಾಡುವುದಕ್ಕೆ ಪ್ರಯತ್ನ ಮಾಡಿದ್ದಾರೆ. ಭಾರವಾದ ಯಂತ್ರಗಳನ್ನು ನಡೆಸುವ ಜನರ ಕಷ್ಟವೇನೆಂದರೆ ಒಂದಲ್ಲ ಒಂದು ರೀತಿಯಲ್ಲಿ ಅವರಿಗೆ ಇನ್‌ಸೆಂಟಿವ್ ಕೊಡದೆ ಹೋದರೆ ಚುರುಕಾಗಿ ಕೆಲಸ ನಡೆಯುವುದಿಲ್ಲ. ಈ ದೃಷ್ಟಿಯಿಂದ ವೆಲ್ ಬೋರಿಂಗ್ ಯೂನಿಟ್ಸ್‌ನಲ್ಲಿ ಕೆಲಸ ಮಾಡುವ ಅಪರೇಟರ್ಸ್ ಮತ್ತು ಇಂಜಿನಿಯರ್ಸ್ ಮತ್ತು ಇವರು ಕೈಕೆಳಗೆ ಕೆಲಸ ಮಾಡುವ ಜನ ಯಾರು, ಯಾರು ಇದ್ದಾರೆ ಇವರಲ್ಲಿ ಕೆಲವರು ಕೈಕಾಲು ಕಳೆದುಕೊಂಡಿದ್ದಾರೆ. ಕೆಲವರು ಬೆರಳು ಕಳೆದುಕೊಂಡಿದ್ದಾರೆ ಭೂಮಿ ಒಳಗೆ ಹೋಗಿ ಯಂತ್ರ ಕೆಲಸ ಮಾಡುವಂಥ ಕಾಲದಲ್ಲಿ ಕೆಲವಾರು ಯಂತ್ರಗಳ ತೊಂದರೆಯಿಂದ ನಾವು ನಿರೀಕ್ಷೆ ಮಾಡಿದ ಪ್ರಮಾಣದಲ್ಲಿ ಕೆಲಸ ನಡೆಯುವುದಿಲ್ಲ ಅವರಿಗೆಲ್ಲ ಹ್ಯುಮ್ಯಾನಿಟೇರಿಯನ್ ಕನ್ಸಿಡರೇಷನ್ ಮೇಲೆ ನೋಡಿದಾಗ ಒಂದು ರೀತಿಯ ಇನ್‌ಸೆಂಟಿವ್ ಕೊಡುವಂಥದು ಎನ್ನುವುದನ್ನು ಸರ್ಕಾರ ಗಮನದಲ್ಲಿಟ್ಟು ಕೊಂಡು ಆ ರೀತಿಯಲ್ಲಿ ಇನ್‌ಸೆಂಟೀವ್ ಕೊಟ್ಟ ಮೇಲೆ ಕೆಲಸ ಚುರುಕಾಗಿ ನಡೆಯುತ್ತಿದೆ ಎಂದು ನಾನು ಭಾವಿಸುತ್ತೇನೆ.

ಇನ್ನು 4 ಇಂಚು ಡೈ ಮೀಟರಿಗೆ ರೇಟ್ ರೂ. 5

6 ಇಂಚು ಡೈ ಮೀಟರಿಗೆ ರೇಟು ರೂ. 7

8 ಇಂಚು ಡೈ ಮೀಟರಿಗೆ ರೇಟು ರೂ. 12 ಎಂದು

ಗೊತ್ತು ಮಾಡಿದ್ದೇವೆ. 300 ಅಡಿಗೆ 50 ರೂಪಾಯಿ ರೇಟು ಇದೆ. ಈ ರೇಟಿನಲ್ಲಿ ಕೆಲಸ ಮಾಡಲು ಆಗುವುದಿಲ್ಲ. ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್ ದರ ಹೆಚ್ಚಾಗಿದೆ. ಒಂದು ಅಡಿಗೆ 7 ರೂ ಮತ್ತು ಪೈಪಿಗೆ 28 ರೂ. ಹೀಗೆ ಎರಡೂ ಸೇರಿ 35 ರೂಪಾಯಿ ಹಾಕುತ್ತಾರೆ. ಹೊಸ ಮೆಷಿನ್ನಿಗೆ 17 ರೂಪಾಯಿ ಒಂದು ಅಡಿಗೆ ಇದೆ. 135 ಅಡಿ ಕೆಲಸ ಎರಡು ದಿವಸಗಳಲ್ಲಿ ಆಗುತ್ತದೆ. ಒಂದು ಅಡಿಗೆ 17 ರೂ. 50 ಪೈಸೆ ರೇಟು ಹಾಕಿದೆ. ಇದರಲ್ಲಿ ಪೈಪು ಸೇರುವುದಿಲ್ಲ 23 ರಿಂಗ್ ಪ್ಲಾಸ್ಟರ್ ಯೂನಿಟ್ಸ್ ತೆಗೆದುಕೊಂಡಿದ್ದೇವೆ. ಈಗಾಗಲೇ 1820 ಬಾವಿಗಳನ್ನು ಆಳವಾಗಿ ಮಾಡಿದೆ. ಅಂದರೆ ಒಟ್ಟು 2,93,727 ಅಡಿಗಳನ್ನು ಆಳವಡಿಸಿದ್ದೇವೆ, ವ್ಯವಸಾಯಕ್ಕಾಗಿ 34 ರೂ ರೇಟು ಗೊತ್ತು ಮಾಡಿದ್ದೇವೆ. ಆದರೆ ಬೇರೆ ಇಂಡಸ್ಟ್ರೀ ಜಾಗಕ್ಕಾಗಿ 68 ರೂಪಾಯಿ ಒಂದು ಗಂಟೆಗೆ ಗೊತ್ತು ಮಾಡಿದ್ದೇವೆ. -----

ಇನ್ನೂ ಗೊಬ್ಬರದ ವಿಚಾರದಲ್ಲಿ ಹೇಳುವುದಾದರೆ ರಾಸಾಯನಿಕ ಗೊಬ್ಬರದ ಬೆಲೆ ಇಳಿಸಬೇಕು ಎಂದು ಅನೇಕ ಮಾನ್ಯ ಸದಸ್ಯರು ಸೂಚಿಸಿದ್ದಾರೆ. 3 ಟೈರ್ ಏಜೆನ್ಸಿ ಇದ್ದುದನ್ನು 2 ಟೈರ್ ಏಜನ್ಸಿ ಮಾಡಿದ್ದೇವೆ. ಒಂದು ಮೆಟ್ರಿಕ್ ಟನ್‌ಗೆ 12 ರೂಪಾಯಿ ಕಡಿಮೆ ಮಾಡಲು ಏರ್ಪಾಡು ಮಾಡಿದ್ದೇವೆ. ಕೇಂದ್ರ ಸರ್ಕಾರ ಅಮೋನಿಯಂ ಸಲ್ಫೇಟ್ ಬೆಲೆ 90 ರೂಪಾಯಿ ಕಡಿಮೆ ಮಾಡಿದ್ದಾರೆ. ಇನ್ನೂ ಬೆಲೆ ಕಡಿಮೆ ಮಾಡಲು ಸಾಧ್ಯವಿದೆ. ಇದಕ್ಕಾಗಿ ಕೇಂದ್ರಸರ್ಕಾರಕ್ಕೆ ಒತ್ತಾಯ ಮಾಡಿದ್ದೇವೆ. ನಮ್ಮಲ್ಲಿ ಗೊಬ್ಬರ ತಯಾರಾಗುತ್ತಿರುವುದು ಕಡಿಮೆ ಪ್ರಮಾಣದಲ್ಲಿ ಇದೆ. ಹೊರಗಡೆಯಿಂದ ತರಿಸಿಕೊಂಡು ಒದಗಿಸಬೇಕಾಗುತ್ತದೆ. ಇದರ ಬೆಲೆ ಕೇಂದ್ರ ಸರ್ಕಾರ ಗೊತ್ತು ಮಾಡುತ್ತದೆ. ಮಾಡುವುದರಲ್ಲಿ 80 ರೂಪಾಯಿ ಮಾರ್ಜಿನ್ ಇದೆ. ಇದನ್ನು ಸಹ ಕಡಿಮೆ ಮಾಡಲು ಸಾಧ್ಯವಿದೆ. ಇದರಲ್ಲಿ ಮಾರ್ಕೆಟಿಂಗ್ ಸೊಸೈಟಿಗೆ ಅವಕಾಶ ಇದೆ. ಪ್ರೈವೇಟ್ ಕಂಪನಿಯಾದಲ್ಲಿ ಕಾಂಪಿಟೇಟಿವ್ ರೇಟ್ಸ್ ಇರುತ್ತದೆ. ಇದರಲ್ಲಿ ಒಂದು ಕೋಟಿ ರೂಪಾಯಿ ನಷ್ಟವಾಗುತ್ತದೆ ಆದರೂ ಕೂಡ ಇದು ಅನಿವಾರ್ಯವಾಗಿದೆ. ಗೊಬ್ಬರ ತರಿಸಲು ಬಹಳ ಕಷ್ಟವಾಗುತ್ತದೆ ಮೊದಲು ಬ್ಲಾಕ್ ಮಾರ್ಕೆಟ್ಟಿನಲ್ಲಿ ಹೆಚ್ಚು ಬೆಲೆಗೆ ಮಾರಾಟವಾಗುತ್ತಿದ್ದರಿಂದ ಗೊಬ್ಬರ ಸಿಕ್ಕುತ್ತಾ ಇರಲಿಲ್ಲ. ಈಗ ನಮ್ಮಲ್ಲಿ ಸಾಕಷ್ಟು ಸ್ಟಾಕ್ ಇರುವುದರಿಂದ ಕಳ್ಳ ಸಂತೆಗೆ ಅವಕಾಶವಿಲ್ಲ. ನಮ್ಮಲ್ಲಿ 18 ಕೋಟಿ ರೂಪಾಯಿ ಬೆಲೆಯ ಗೊಬ್ಬರ ಉಳಿದಿದೆ. ಇದು ಮುಂದಿನ ವರ್ಷಕ್ಕೆ ಆಗುತ್ತದೆಂದು ಮಾನ್ಯ ಸದಸ್ಯರಿಗೆ ತಿಳಿಸುತ್ತೇನೆ.

ಈ ನನ್ನ ಡಿಮ್ಯಾಂಡ್ ಮೇಲೆ ಅನೇಕ ಸದಸ್ಯರು ಮಾತನಾಡಿ ಉಪಯುಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಕಟ್ ಮೋಷನ್ ಸಹ ಕಳಿಸಿದ್ದಾರೆ. ಡ್ರೈಫಾರ್ಮಿಂಗಿಗೆ ಹೆಚ್ಚು ಗಮನ ಕೊಟ್ಟಿಲ್ಲ. ರಿಸರ್ಚ್ ಕೆಲಸ ಮಾಡಿಲ್ಲ ಎಂದು ಹೇಳಿದ್ದಾರೆ. ಅದನ್ನು ನಾನು ಒಪ್ಪುತ್ತೇನೆ. ಇದರ ಬಗ್ಗೆ ಕೇಂದ್ರ ಸರ್ಕಾರ ಗಮನಹರಿಸುತ್ತಿದೆ. ಸಂಶೋಧನೆ ನಡೆಸುವುದು ಕೇಂದ್ರ ಸರ್ಕಾರದ ಜವಾಬ್ದಾರಿಯಾಗಿದೆ. ಡ್ರೈ ಫಾರ್ಮಿಂಗ್ ಅಂದರೆ ಬರೀ ಸಾಯಿಲ್ ಕನ್ಸರ್‌ವೇಷನ್ ಅಲ್ಲ. ವ್ಯವಸಾಯ ಉಪಕರಣ ಒದಗಿಸಲು ವ್ಯವಸಾಯ ವಿಶ್ವವಿದ್ಯಾನಿಲಯದವರು ಯೋಜನೆ

ಮಾಡಿದ್ದಾರೆ. ಇದಕ್ಕೆ ಕೇಂದ್ರ ಸರ್ಕಾರದ ನೆರವನ್ನು ಪಡೆಯುವುದಕ್ಕೆ ಕ್ರಮ ತೆಗೆದುಕೊಳ್ಳಲು ಪ್ರಯತ್ನ ಮಾಡುತ್ತೇವೆ. ಎಂದು ಈ ಸಂದರ್ಭದಲ್ಲಿ ತಿಳಿಸುತ್ತೇನೆ. ಕಳೆದ ವರ್ಷ ವ್ಯವಸಾಯ ವಿಶ್ವವಿದ್ಯಾನಿಲಯಕ್ಕೆ 60 ಲಕ್ಷ ರೂಪಾಯಿ ಕೊಟ್ಟಿದ್ದೇವೆ. ಈ ವರ್ಷ ಅದನ್ನು 90 ಲಕ್ಷ ರೂಪಾಯಿಗೆ ಹೆಚ್ಚಿಸಿದ್ದೇವೆ. ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಿಗೆ ಹೋದ ವರ್ಷದಷ್ಟೇ ಇಟ್ಟಿದ್ದಾರೆ. ಎಂದು ಕೆಲವು ಮಾನ್ಯ ಸದಸ್ಯರು ಹೇಳಿದರು. ಇಷ್ಟು ಹಣ ಒದಗಿಸಿದ್ದು ಅದೇನೂ ಕಾಯಂ ಅಲ್ಲ. ಅವಶ್ಯಕತೆಗೆ ಅನುಗುಣವಾಗಿ ಹಣ ಒದಗಿಸಲು ಪ್ರಯತ್ನ ಮಾಡುತ್ತೇವೆ. ಡ್ರೈ ಫಾರ್ಮಿಂಗ್ ಸಂಶೋಧನೆ ನಡೆಸಬೇಕು ಎಂದು ಹೇಳಿರುವುದಕ್ಕೆ ಕಾರ್ಯಕ್ರಮ ಹಾಕಿಕೊಳ್ಳಲು ಪ್ರಯತ್ನ ಮಾಡುತ್ತೇನೆ. ನನ್ನ ಇಲಾಖೆಗೆ ಸಂಬಂಧ ಪಡದೇ ಇದ್ದ ಕೆಲವು ವಿಚಾರಗಳನ್ನು ಮಾನ್ಯ ಸದಸ್ಯರೊಬ್ಬರು ಹೇಳಿದ್ದಾರೆ. ವಿದ್ಯುತ್‌ಚ್ಛಕ್ತಿ ಒದಗಿಸಿ ನೀರು ಉಪಯೋಗಿಸುವ ಯೋಜನೆ ಮಾಡಬೇಕು ಎಂದು ಹೇಳಿದ್ದಾರೆ. ಅದು ಗಮನಿಸಬೇಕಾದ ವಿಚಾರವಾಗಿದೆ.----

ಕೃಷಿ ಇಲಾಖೆಯಲ್ಲಿ ಸ್ವಲ್ಪ ಅತೃಪ್ತಿ ಇದೆ. ಐದು ಕಡೆಯ ಜನರು ಒಂದು ಕಡೆ ಸೇರಿ ಕೆಲಸ ಮಾಡತಕ್ಕ ಇಂಥ ಒಂದು ವಿಶೇಷ ಸಂದರ್ಭದಲ್ಲಿ ಎಲ್ಲರಿಗೂ ಸಮಾಧಾನಕರವಾದ ರೀತಿಯಲ್ಲಿ ಎಲ್ಲರನ್ನೂ ತೃಪ್ತಿಪಡಿಸುವ ರೀತಿಯಲ್ಲಿ ಕಾನೂನು ಮಾಡಬೇಕೆಂದರೆ ಅದು ಸಾಧ್ಯವಿಲ್ಲ. ಆದರೆ ನಾವು ಯಾರಿಗೂ ನ್ಯಾಯವನ್ನು ಮಾಡುವ ಕಡೆ ಅಡ್ಡಿಯನ್ನು ಮಾಡಿಲ್ಲ. ಆದರೆ ನಮ್ಮಲ್ಲಿರುವ ಈ ಇಲಾಖೆಯ 14 ಕೇಡರುಗಳಲ್ಲಿ 13 ಕೇಡರುಗಳ ಸೀನಿಯಾರಿಟಿ ಪಟ್ಟಿಯನ್ನು ಈಗಾಗಲೇ ತೀರ್ಮಾನ ಮಾಡಿದ್ದೇವೆ. ಆದರೆ ಇನ್ನೊಂದು ಕೇಡರಿನ ವಿಷಯ ಅಂದರೆ ನಮ್ಮ ಡೆಮಾಸ್ಟ್ರೇಟರುಗಳ ಸೀನಿಯಾರಿಟಿ ವಿಚಾರದಲ್ಲಿ ಹೈಕೋರ್ಟಿನಿಂದ ಒಂದು ತಡೆಯಾಜ್ಞೆ ಬಂದಿರುವುದರಿಂದ ಅದರ ಬಗ್ಗೆ ಸ್ವಲ್ಪ ನಿಧಾನವಾಗಿದೆ. ಅದು ಬಿಡುಗಡೆಯಾದ ಕೂಡಲೆ ಅದನ್ನು ನಿರ್ಧರಿಸಲಾಗುತ್ತದೆ.

ಇನ್ನು ತೋಟಗಾರಿಕೆ ಇಲಾಖೆಯ ಬಗ್ಗೆ ಶ್ರೀಮಾನ್ ಎಂ. ನಾಗಪ್ಪನವರು ಕೆಲವು ಖೋತಾ ಸೂಚನೆಗಳನ್ನು ಕಳುಹಿಸಿದ್ದಾರೆ. ಅವುಗಳಲ್ಲಿ ನರಡಗಡ್ಡ ತಾಲ್ಲೂಕಿನ ಮಲಿಯಾಬಾದ್ ಹಿಲ್ ಸ್ಟೇಷನನ್ನು ಅಭಿವೃದ್ಧಿಪಡಿಸಲು ಅಲ್ಲಿ ಬೋಟಾನಿಕಲ್ ತೋಟಗಳನ್ನು ಏರ್ಪಡಿಸಬೇಕೆಂದು ಕೇಳಿದ್ದಾರೆ. ನಾನು ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ಇಲಾಖೆಯ ಅಧಿಕಾರಿಗಳು ರಾಜ್ಯದ ಯಾವ, ಯಾವ ಭಾಗದಲ್ಲಿ ಏನೇನು ಮಾಡಬೇಕೆಂಬುದನ್ನು ನೋಡಿಕೊಂಡು ಬಂದಿದ್ದಾರೆ. ಅದರ ಪ್ರಕಾರ ರಾಯಚೂರು, ಗಂಗಾವತಿ ತಾಲ್ಲೂಕುಗಳಲ್ಲಿ ಮತ್ತು ಇತರೇ ಭಾಗಗಳಲ್ಲಿ ಏನೇನು ಹಣ್ಣಿನ ಗಿಡಗಳನ್ನು ಬೆಳೆಸಬೇಕು ಎಲ್ಲೆಲ್ಲಿ ಯಾವ ಉದ್ಯಾನವನಗಳನ್ನು ಬೆಳೆಸಬೇಕು, ಎಲ್ಲಿ ಒಳ್ಳೆಯ ಉತ್ತಮ ತರಕಾರಿ ಬೆಳೆಯನ್ನು ಬೆಳೆಸಬಹುದು ಎಂಬುದನ್ನೆಲ್ಲಾ ನೋಡಿ ಅಲ್ಲಿ ಕೆಲಸ ಪ್ರಾರಂಭಿಸುವುದಕ್ಕೆ ಪ್ರಯತ್ನಗಳನ್ನು ಮಾಡುವುದರಲ್ಲಿದ್ದಾರೆ. ಕಳೆದ ಸಾಲಿನಲ್ಲಿ ಬೆಂಗಳೂರು ನಗರದಲ್ಲಿರುವಂಥ ಲಾಲ್‌ಬಾಗ್ ಮತ್ತು ಕಬ್ಬನ್ ಪಾರ್ಕ್‌ಗಳ ಅಭಿವೃದ್ಧಿಗಾಗಿ 11 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿತ್ತು. ಹಾಗೆ ಇಲ್ಲಿ ಒಂದು ಜೂಗಾರ್ಡನ್ ಅಭಿವೃದ್ಧಿ ಮಾಡಲು ಎರಡೂವರೆ ಲಕ್ಷ ರೂಪಾಯಿಗಳನ್ನು ಒದಗಿಸಲಾಗಿತ್ತು. ಅದೇ ರೀತಿ ನಮ್ಮ ರಾಜ್ಯದಲ್ಲಿರುವ

174 ತಾಲ್ಲೂಕುಗಳಲ್ಲಿ 74 ತಾಲ್ಲೂಕುಗಳನ್ನು ಬಿಟ್ಟು ಉಳಿದ 100 ತಾಲ್ಲೋಕುಗಳಲ್ಲಿ ಫಾರಂಗಳಿವೆ. ಇನ್ನು ಬೇರೆ 40 ತಾಲ್ಲೂಕುಗಳಲ್ಲಿ ಉತ್ತಮ ಜಾತಿಯ ಹಣ್ಣು ಹಂಪಲುಗಳನ್ನೂ ಹೂವಿನ ಗಿಡಗಳನ್ನೂ ಬೆಳೆಸುವುದಕ್ಕೆ ಪ್ರಯತ್ನಗಳು ನಡೆದಿವೆ.

ರಾಜ್ಯದಲ್ಲಿ ಟೂರಿಸ್ಟ್‌ಗಳ ಅನುಕೂಲತೆಗಾಗಿ ಅಲ್ಲಲ್ಲೆ ಈಜುವ ಕೊಳ ಒಳ್ಳೆಯ ಹೋಟಲುಗಳ ಅನುಕೂಲ ಮತ್ತು ವಸತಿ ಸೌಕರ್ಯಗಳನ್ನು ಕಲ್ಪಿಸಲು ವ್ಯವಸ್ಥೆಗಳನ್ನು ಮಾಡಲಾಗುತ್ತಿದೆ. ಅಷ್ಟೇ ಅಲ್ಲ ನಮ್ಮ ತೋಟಗಾರಿಕೆಯ ಇಲಾಖೆಯವರು ರಾಜ್ಯದಲ್ಲಿ ಮೂರುಕಡೆಗಳಲ್ಲಿ ಅಂದರೆ ಚಿಕ್ಕ ಬಳ್ಳಾಪುರ, ಹಾಸನ ಮತ್ತು ಬಿಳಿಗಿರಿ ರಂಗನ ಬೆಟ್ಟ ಈ ಕಡೆಗಳಲ್ಲಿ ರೋಗರಹಿತ ಉತ್ತಮಜಾತಿಯ ಆಲೂಗಡ್ಡೆಯನ್ನು ಬೆಳೆಸುವುದಕ್ಕೆ ಪ್ರಯತ್ನಗಳನ್ನು ಮಾಡಲು ರಿಸರ್ಚ್ ಸ್ಟೇಷನ್‌ಗಳನ್ನು ಮಾಡಿದ್ದೇವೆ. ಹಾಗೆ ಉತ್ತಮ ತಳಿಯ ತೆಂಗಿನ ಸಸಿಗಳನ್ನು ಬೆಳೆಸಲಾಗುತ್ತಿದೆ. ಇನ್ನು ನಮ್ಮ ರಾಜ್ಯದಲ್ಲಿ ಅಡಿಕೆ ಮತ್ತು ತೆಂಗಿನ ಮರಗಳಿಗೆ ಬರತಕ್ಕ ರೋಗಗಳನ್ನು ತಡೆಗಟ್ಟುವ ವಿದಾನಗಳನ್ನು ಕಂಡುಹಿಡಿಯುವುದಕ್ಕೆ ಪ್ರಯತ್ನ ಮಾಡುವ ಬಗ್ಗೆ ಆ ವ್ಯವಸಾಯದಲ್ಲಿ ತೊಡಗಿರುವ ಜನರಿಗೆ ಆ ಬೆಳೆಯನ್ನು, ಬೆಳೆಯತಕ್ಕ ವೆಚ್ಚದಲ್ಲಿ ಇಲ್ಲವೇ ಆ ರೋಗಾದಿಗಳನ್ನು ತಡೆಗಟ್ಟುವುದಕ್ಕೆ ವಹಿಸಲಿರುವ ವೆಚ್ಚದಲ್ಲಿ ಶೇ. 50 ರಷ್ಟು ಸಬ್ ಸಿಡಿಯನ್ನು ಕೊಡುವುದಕ್ಕೂ ಕೂಡ ಏರ್ಪಾಡುಗಳನ್ನು ಮಾಡುವುದಕ್ಕೆ ಆಲೋಚನೆ ಮಾಡುತ್ತಿದ್ದೇವೆ. ಇನ್ನು ರಾಜ್ಯದ ಐದು ವಿಭಾಗಗಳಿಗೂ ತೋಟಗಾರಿಕೆಯನ್ನು ಮುಂದುವರಿಸಲು ಅಲ್ಲಲ್ಲೆ ಉತ್ತಮ ಜಮೀನನ್ನು ದೊರಕಿಸಿಕೊಳ್ಳುವುದಕ್ಕಾಗಿ ಪ್ರಯತ್ನ ಮಾಡಲಾಗಿದೆ. ನಮ್ಮ ಹಿಂದಿನವರು ನಗರ ಸೌಂದರ್ಯವನ್ನು ಹೆಚ್ಚಿಸುವ ಉದ್ದೇಶದಿಂದ ಬೆಳೆಸಿರುವ ಯಾವ ಯಾವ ಉದ್ಯಾನವನವನ್ನು ಕೈಬಿಡುವುದಕ್ಕೆ ತಯಾರಾಗಿಲ್ಲ. ಅವುಗಳನ್ನು ಅಭಿವೃದ್ಧಿ ಪಡಿಸುವುದಕ್ಕೆ ಸರ್ಕಾರದವರಿಂದ ಎಲ್ಲಾ ಪ್ರಯತ್ನಗಳನ್ನು ಮಾಡಲಾಗಿದೆ. ಆದರೆ ನನಗೆ ಇಲ್ಲಿ ಇನ್ನೂ ಕೆಲವು ವಿಚಾರಗಳ ಬಗ್ಗೆ ಉತ್ತರ ಕೊಡುವುದಕ್ಕೆ ಅವಕಾಶವಾಗದಿದ್ದರೂ ನಾನು ಮಾನ್ಯ ಸದಸ್ಯರು ಸೂಚಿಸಿರುವಂಥ ಎಲ್ಲ ಸಲಹೆಗಳನ್ನು ಬರೆದಿಟ್ಟುಕೊಂಡಿದ್ದೇನೆ. ಅವುಗಳ ಬಗ್ಗೆ ಸೂಕ್ತ ಕಾರ್ಯಕ್ರಮ ಕೈಗೊಳ್ಳುವ ಭರವಸೆಯನ್ನು ಕೊಡುತ್ತಿದ್ದೇನೆ. ಆದ್ದರಿಂದ ತಾವೆಲ್ಲರೂ ಈಗ ನಾವು ಸಭೆಯ ಮುಂದೆ ಮಂಡಿಸಿರುವಂಥ ಡಿಮ್ಯಾಂಡುಗಳನ್ನು ಅನುಮೋದಿಸಬೇಕಾಗಿ ಪ್ರಾರ್ಥಿಸುತ್ತೇನೆ.

## ಶಿಕ್ಷಣ ಇಲಾಖೆಯ ಬೇಡಿಕೆಯ ಮೇಲಿನ ಚರ್ಚೆಗೆ ಉತ್ತರ*

ಶ್ರೀ ಬಿ. ರಾಚಯ್ಯ (ಮಾನ್ಯ ಶಿಕ್ಷಣ ಮಂತ್ರಿಗಳು) : ಮಾನ್ಯ ಅಧ್ಯಕ್ಷರೆ, ಈ ಸದನದಲ್ಲಿ 22 ಜನ ಮಾನ್ಯ ಸದಸ್ಯರುಗಳು ಶಿಕ್ಷಣ ಇಲಾಖೆ ಬೇಡಿಕೆಯ ಮೇಲೆ ಚರ್ಚೆಯಲ್ಲಿ ಭಾಗವಹಿಸಿ ಅತ್ಯಂತ ಒಳ್ಳೆಯ ಸಲಹೆಗಳನ್ನು ಕೊಟ್ಟಿದ್ದಾರೆ. ಕೆಲವರು ಟೀಕೆಗಳನ್ನು ಮಾಡಿದ್ದಾರೆ. ಮತ್ತೆ ಕೆಲವರು ಶಿಕ್ಷಣ ಇಲಾಖೆ ನವ ಚೈತನ್ಯವನ್ನು ಪಡೆದು ಹೆಚ್ಚಿನ ರೀತಿಯಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ಅನುಕೂಲವಾಗುವ ರೀತಿಯಲ್ಲಿ ಕೆಲಸ ಮಾಡಬೇಕೆಂದು ತಿಳಿಸಿದ್ದಾರೆ. ಯುವಜನ ಸೇವಾ ಮಂತ್ರಿಗಳಾದ ಶ್ರೀ ಜೀವರಾಜ ಆಳ್ವ ಅವರು ಶಿಕ್ಷಣ ಇಲಾಖೆಗೆ ಸಂಬಂಧಪಟ್ಟಂತೆ ಕೆಲವು ಬೇಡಿಕೆಗಳಿಗೆ ಉತ್ತರ ಕೊಟ್ಟಿದ್ದಾರೆ. ಪ್ರಾಥಮಿಕ ಪ್ರೌಢ ಶಿಕ್ಷಣ, ಕಿರಿಯ ಕಾಲೇಜುಗಳು, ಪ್ರಥಮ ದರ್ಜೆ ಕಾಲೇಜುಗಳು, ತಾಂತ್ರಿಕ ಶಿಕ್ಷಣ ಸಂಸ್ಥೆಗಳು, ವೃತ್ತಿ ಶಿಕ್ಷಣಗಳಿಗೆ ಸಂಬಂಧ ಪಟ್ಟ ಹಾಗೆ ಮಾನ್ಯ ಸದಸ್ಯರ ಮಾತುಗಳನ್ನು ಅತ್ಯಂತ ಗಮನ ಕೊಟ್ಟು ನಾನು ಕೇಳಿದ್ದೇನೆ. ಬಹುಶಃ ಮಾತನಾಡಿದ ಎಲ್ಲಾ ಸದಸ್ಯರೂ ಕೂಡ ಗ್ರಾಮಾಂತರ ಪ್ರದೇಶಗಳಲ್ಲಿರುವ ಪ್ರಾಥಮಿಕ ಶಾಲೆಗಳ ಮತ್ತು ಪೂರ್ವ ಪ್ರಾಥಮಿಕ ಶಾಲೆಗಳ ಸ್ಥಿತಿ ಅನಾವಸ್ಥೆಯಲ್ಲಿದೆ. ಸಾಕಷ್ಟು ರೀತಿಯಲ್ಲಿ ಅದಕ್ಕೆ ಹಣ ಒದಗಿಸಿ ಶಾಲಾ ಕಟ್ಟಡಗಳನ್ನು ಕಟ್ಟಿಸಿಕೊಡುವುದರ ಜೊತೆಗೆ ಉಪಾಧ್ಯಾಯರನ್ನು ನೇಮಿಸಬೇಕೆಂದು ಹೇಳಿದ್ದಾರೆ. ಹಂಗಾಮಿಯಾಗಿಯಾದರೂ ಉಪಾಧ್ಯಾಯರ ಹುದ್ದೆಗಳನ್ನು ಭರ್ತಿ ಮಾಡಬೇಕು ಮತ್ತು ಹಂಗಾಮಿಯಾಗಿರುವವರನ್ನು ಹೇಗಾದರೂ ಮಾಡಿ ಖಾಯಂ ಮಾಡಬೇಕು. ಎಂದೂ ಹೇಳಿದ್ದಾರೆ. ಅದಕ್ಕೆ ಕೊಟ್ಟಿರುವಂಥ ಹಣಕೂಡ ಸಾಕಷ್ಟಿಲ್ಲ ಎಂದೂ ಸಹ ಹೇಳಿದ್ದಾರೆ. 6 ವರ್ಷಗಳಿಂದ 10 ವರ್ಷಗಳವರೆಗಿನ ಮಕ್ಕಳಿಗೆ ಉಚಿತ ಶಿಕ್ಷಣವನ್ನು ಕೊಡಬೇಕೆಂದು ರಾಜ್ಯಾಂಗದಲ್ಲಿ ಹೇಳಿದ್ದರೂ ಕೂಡ 35 ವರ್ಷ ಕಾಲದಿಂದಲೂ ನಾವು ಕೊಡುವುದಕ್ಕಾಗಲಿಲ್ಲ ಎಂಬ ಮಾತನ್ನು ಸದಸ್ಯರು ಒಪ್ಪಿದ್ದಾರೆ. ಅದನ್ನು ನಾವೂ ಒಪ್ಪಿದ್ದೇವೆ. ಅಂದ ಮೇಲೆ ಹಿಂದೆ ಇದ್ದವರು ಕೊಟ್ಟಂಥ ಬಳುವಳಿಯನ್ನು ಹೊತ್ತುಕೊಂಡು ನಾವು ಕೆಲಸ ಮಾಡಬೇಕಾಗಿರುವುದರಿಂದ ಅವರೂ ನಾವು ಒಟ್ಟಿಗೆ ಸೇರಿ ಕೆಲಸಗಳನ್ನು ತ್ವರಿತವಾಗಿ ಮಾಡಬೇಕಾಗಿದೆ.

ರಾಜ್ಯದಲ್ಲಿ ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ 1666 ಶಿಶುವಿಹಾರಗಳಿವೆ, ರಾಜ್ಯಾಂಗ ಬದ್ಧವಾಗಿ ಕಡ್ಡಾಯವಾಗಿ ಶಾಲೆಗಳ್ನು ತೆರೆಯಬೇಕೆಂಬ ಉದ್ದೇಶ ಇಲ್ಲದಿದ್ದರೂ ಪಟ್ಟಣಗಳಲ್ಲಿ ಪೂರ್ವ ಪ್ರಾಥಮಿಕ ಶಾಲೆಗಳನ್ನು ತೆರೆದು ಯಾವ ರೀತಿ ಮಕ್ಕಳಿಗೆ ತರಬೇತಿ ಕೊಡುತ್ತಿದ್ದೇವೋ, ಮತ್ತು ಪಟ್ಟಣಗಳಲ್ಲಿರುವಂಥ ಕೊಳಚೆ ಪ್ರದೇಶಗಳ ಹಾಗೂ ಹಿಂದುಳಿದ ಪ್ರದೇಶಗಳ ಮಕ್ಕಳಿಗೆ ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ಯಾವ ರೀತಿ ತರಬೇತಿ ನೀಡಿ ಪ್ರಾಥಮಿಕ ಶಾಲೆಗಳಿಗೆ ಹೋಗಲು ಅನುಕೂಲ ಮಾಡಿಕೊಟ್ಟಿದ್ದೇವೋ ಅದೇ ರೀತಿ ಗ್ರಾಮಾಂತರ ಪ್ರದೇಶದ ಮಕ್ಕಳಿಗೂ ಮಾಡಬೇಕೆಂದು ಮೊದಲು ಮಾತನಾಡಿದ ಮಲ್ಲಿಕಾರ್ಜುನ ಖರ್ಗೆಯವರು ಮತ್ತು ಕೊನೆಯಲ್ಲಿ ಮಾತನಾಡಿದ ಹನುಮಂತರಾವ್ ದೇಸಾಯಿಯವರು ಹೇಳಿರುವುದಲ್ಲದೆ ಎಲ್ಲಾ ಸದಸ್ಯರೂ

* ವಿಧಾನ ಸಭೆ ನಡವಳಿಕೆ ದಿನಾಂಕ 5ನೇ ಸೆಪ್ಟೆಂಬರ್, 1983 ಪುಟ 151-172

ಒಂದಲ್ಲ ಒಂದು ರೀತಿಯಲ್ಲಿ ಇದೇ ರೀತಿಯ ಅಭಿಪ್ರಾಯಗಳನ್ನು ಹೇಳಿದ್ದಾರೆ. ಹಂತ, ಹಂತವಾಗಿ ಹಣಕಾಸಿನ ಪರಿಸ್ಥಿತಿಯನ್ನು ನೋಡಿಕೊಂಡು ಮುಂದಿನ ವರ್ಷ 2 ಸಾವಿರ ಪೂರ್ವ ಪ್ರಾಥಮಿಕ ಶಾಲೆಗಳನ್ನು ಅಂದರೆ ಶಿಶುವಿಹಾರಗಳನ್ನು ತೆರೆಯಬೇಕು ಎಂದು ಸರ್ಕಾರ ಆಲೋಚನೆ ಮಾಡಿದೆ. ಇದಕ್ಕೆ ಸಂಬಂಧ ಪಟ್ಟ ಹಾಗೆ ಒಂದು ಯೋಜನೆ ಇಲ್ಲ ಎಂದು ಮಾನ್ಯ ಹಿರಿಯ ಶಾಸಕರಾದ ಕೆ.ಎಚ್. ರಂಗನಾಥ್ ಅವರು ಹೇಳಿದರು. ಈ ವರ್ಷ 1983-84 ರಿಂದ 1990-94ರ ವರೆಗೆ 65 ಕೋಟಿ ರೂಪಾಯಿಗಳ ಅಂದಾಜಿನಲ್ಲಿ ಪ್ರಾಥಮಿಕ ಮತ್ತು ಪೂರ್ವ ಪ್ರಾಥಮಿಕಕ್ಕೆ ಸಂಬಂಧಪಟ್ಟಂತೆ ದೀರ್ಘವಾದ ಯೋಜನೆಯೊಂದನ್ನು ತಯಾರು ಮಾಡಿದ್ದೇವೆ. ಆದ್ದರಿಂದ ಮಾನ್ಯ ಸದಸ್ಯರು ಯೋಜನೆ ಇಲ್ಲ ಎಂದು ಹಿಂದೆ ಇದ್ದುದನ್ನು ನೋಡಿ ಹೇಳಿದ್ದಾರೆಂದು ಭಾವಿಸಿಕೊಂಡಿದ್ದೇನೆ. ಈ ವರ್ಷ ಈ ಯೋಜನೆಯನ್ನು ತಯಾರು ಮಾಡಿದ್ದು ಇದು ಸರ್ಕಾರದ ಪರಿಶೀಲನೆಯಲ್ಲಿದೆ, ಈ ಅಂಗವಾಗಿ ಮುಂದಿನ ವರ್ಷ 2 ಸಾವಿರ ಶಿಶುವಿಹಾರಗಳನ್ನು ತೆರೆಯುತ್ತೇವೆ. 300 ಜನಸಂಖ್ಯೆ ಇರುವ ಕಡೆ ಪಾಠಶಾಲೆಗಳನ್ನು ತೆರೆಯುತ್ತೇವೆ. 30 ಸಂಖ್ಯೆಯಲ್ಲಿ ಪ್ರಾಥಮಿಕ ಶಾಲೆಗೆ ಮಕ್ಕಳು ಬಂದರೆ ಅವರೆಲ್ಲರಿಗೂ ಪ್ರಾಥಮಿಕ ಶಾಲೆಗಳನ್ನು ಕೊಡಬೇಕೆಂದು ಈ ಸರ್ಕಾರ ತೀರ್ಮಾನ ಮಾಡಿದೆ. ಆದ್ದರಿಂದ ಈ ರಾಜ್ಯದಲ್ಲಿ ಇರುವಂಥ ಸುಮಾರು 36 ಸಾವಿರ ಪ್ರಾಥಮಿಕ ಶಾಲೆಗಳು ಏನಿವೆ ಅವುಗಳ ಸಂಖ್ಯೆಗೆ ಅನುಗುಣವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಉಪಾಧ್ಯಾಯರೂ ಕೂಡ ಬೇಕಾಗುತ್ತಾರೆ. ಈ ದೃಷ್ಟಿಯಿಂದ ಇರುವಂಥ ಒಂದು ಲಕ್ಷದ ಆರು ಸಾವಿರದ ಎಂಬತ್ತೈದು ಶಿಕ್ಷಕರ ಸಂಖ್ಯೆ ಏನಿದೆ. ಇವದರಲ್ಲಿ ಸುಮಾರು ಹದಿನೇಳು ಸಾವಿರ ಶಾಲೆಗಳಲ್ಲಿ ಏಕೋಪಾಧ್ಯಾಯ ಶಿಕ್ಷಕರು ಇದ್ದಾರೆ. ಆದನ್ನು ಪರಿವರ್ತನೆ ಮಾಡುವಂಥ ಒಂದು ಯೋಜನೆ ಇದೆ.

ಹಳ್ಳಿಗಳಲ್ಲಿ ಒಂದು ಶಾಲೆಯಲ್ಲಿ ಒಬ್ಬರೇ ಉಪಾಧ್ಯಾಯರು ಇದ್ದು ಅವರು ರಜಾ ಹಾಕಿಬಿಟ್ಟರೆ ಮಕ್ಕಳಿಗೆ ಪಾಠಪ್ರವಚನ ಮಾಡುವುದಕ್ಕೆ ಯಾರೂ ಇರುವುದಿಲ್ಲವೆಂದು ತಿಳಿದು ಹಂತ, ಹಂತವಾಗಿ ಇದನ್ನು ಹೆಚ್ಚು ಮಾಡಬೇಕೆಂದು ಮುಂದಿನ ವರ್ಷ ಎರಡು ಸಾವಿರ ಹೊಸ ಶಾಲೆಗಳನ್ನು ತೆರೆಯತಕ್ಕದ್ದು. ಹೊಸ ಕಟ್ಟಡಗಳನ್ನು ನಿರ್ಮಾಣ ಮಾಡತಕ್ಕದ್ದು. ಈ ಅಂಶಗಳನ್ನು ಕೂಡ ಅದರಲ್ಲಿ ಅಳವಡಿಸಿಕೊಂಡಿದ್ದೇವೆ. ಬಹುಶಃ ಕಟ್ಟಡಗಳನ್ನು ಕಟ್ಟುವಂಥ ಕಾಲದಲ್ಲಿಯೇ ಇದುವರೆಗೆ ಸುಮಾರು 1066 ಕಟ್ಟಡಗಳನ್ನು ಈ ವರ್ಷ ಕಾಲದಲ್ಲಿಯೇ ಇದುವರೆಗೆ ಸುಮಾರು 1066 ಕಟ್ಟಡಗಳನ್ನು ಈ ವರ್ಷ ಎನ್.ಆರ್.ಇ.ಪಿಯಲ್ಲಿ ಕಟ್ಟಿಸಿದ್ದೇವೆ. ಎಂಬುದಾಗಿ ಸರ್ಕಾರಕ್ಕೆ ವರದಿ ಬಂದಿದೆ. ಇನ್ನು ಉಳಿದಂಥ ಹೊಸ ಕಟ್ಟಡಗಳನ್ನು ಕಟ್ಟಿಸತಕ್ಕದ್ದು. ನಮ್ಮ ಮುಂದೆ ಇದೆ. ಈ ಎಲ್ಲ ಕಟ್ಟಡಗಳು ಬಿದ್ದು ಹೋಗಿವೆ. ಅವುಗಳನ್ನು ರಿಪೇರಿ ಮಾಡುವುದಕ್ಕೆ ದುಡ್ಡು ಇಲ್ಲವೆಂದು ಹೇಳಿದ್ದಾರೆ. ಈ ವರ್ಷ 65 ಸಾವಿರ ರೂಪಾಯಿಗಳನ್ನು ಮೀಸಲಾಗಿಟ್ಟು ಬಿದ್ದುಹೋಗಿರುವಂಥ ಕಟ್ಟಡಗಳನ್ನು ದುರಸ್ತಿ ಮಾಡಿಸುತ್ತಿದ್ದೇವೆ. ಒಂದು ವೇಳೆ ರಿಪೇರಿ ಮಾಡಿಸುವುದಕ್ಕೆ ಆಗದೆ ಇದ್ದರೆ ಹೊಸಕಟ್ಟಡವನ್ನು ಕಟ್ಟಬೇಕೆಂಬ ಯೋಜನೆಯನ್ನು ನಾವು ಇಟ್ಟುಕೊಂಡಿದ್ದೇವೆ. ------- ಪ್ರಾಥಮಿಕ ಶಾಲೆಗಳನ್ನು ಕಟ್ಟುವುದಕ್ಕೆ ಮತ್ತು ದುರಸ್ತಿ ಮಾಡುವುದಕ್ಕೆ

ಸರ್ಕಾರ ಈಗಾಗಲೇ ತೊಂಬತ್ತು ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡುವುದಕ್ಕೆ ಒಪ್ಪಿದೆ. ಪ್ರಾಥಮಿಕ ಶಾಲೆಗಳಲ್ಲಿ ಉಪಾಧ್ಯಾಯರನ್ನು ನೇಮಿಸುವುದಕ್ಕೆ ಹಾಗೂ ಅವರಿಗೆ ಹೀಗಾಗಲೆ ನಾನು ಪ್ರಸ್ತಾಪ ಮಾಡಿದ್ದೇನೆ. ಪ್ರಾಥಮಿಕ ಶಾಲೆಗಳಲ್ಲಿ ಈಗ 13 ಸಾವಿರ ಉಪಾಧ್ಯಾಯರ ಜಾಗಗಳು ಖಾಲಿ ಇವೆ. ಮೊದಲಿನಿಂದಲೂ ಕೂಡ ಈ ಹುದ್ದೆಗಳನ್ನು ಭರ್ತಿ ಮಾಡಿದ್ದರೆ ಈ ಪರಿಸ್ಥಿತಿ ಬರುತ್ತಿರಲಿಲ್ಲ. ಆದರೂ ಕೂಡ ಹಿಂದಿನ ಮಂತ್ರಿಗಳಿಗೆ ಅಭಿನಂದನೆ ಸಲ್ಲಿಸಬೇಕಾಗಿದೆ. ಸುಮಾರು ಏಳುಸಾವಿರ ಚಿಲ್ಲರೆ ಉಪಾಧ್ಯಾಯರನ್ನು ಹಂಗಾಮಿಯಾಗಿ ನೇಮಿಸಿಕೊಂಡಿದ್ದಾರೆ. ಉಳಿದಿರುವಂಥ ಆರುಸಾವಿರ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಜಿಲ್ಲಾ ಮಟ್ಟದ ನೇಮಕಾತಿ ಸಮಿತಿಗಳನ್ನು ಕೂಡ ಪ್ರಕಟಿಸಿದ್ದೇವೆ. ಆದರ ಮಧ್ಯ ಶ್ರೇಷ್ಠ ನ್ಯಾಯಾಲಯ ಹಂಗಾಮಿಯಾಗಿ ಯಾರನ್ನು ನೇಮಿಸಿಕೊಳ್ಳಕೂಡದೆಂದು ಆದೇಶಕೊಟ್ಟಿದ್ದರಿಂದ ಸಧ್ಯಕ್ಕೆ ಈ ಹುದ್ದೆಗಳಿಗೆ ಹತ್ತು ರೂಪಾಯಿ ಕಡಿಮೆ ಸಂಬಳದಲ್ಲಿ ನೇಮಿಸಿಕೊಳ್ಳಬೇಕೆಂದು ನಿಯಮಾವಳಿಗಳನ್ನು ಮಾಡಿದ್ದೇವೆ. ಇಷ್ಟೇ ಅಲ್ಲ ಇನ್ನೂ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ.

ಹಿಂದಿನ ಸರ್ಕಾರದವರು 29 ವರ್ಷದಿಂದ 40ರವರೆಗಿನವರು ಮಾತ್ರ ಕೆಲಸಕ್ಕೆ ಅರ್ಜಿಹಾಕಿಕೊಳ್ಳಬಹುದೆಂಬ ಕಾನೂನನ್ನು ಜಾರಿಗೆ ತಂದಿದ್ದರಿಂದ ಅವರಿಗೆ ಬಹಳ ಕಷ್ಟವಾಯಿತು. ಇಂದು ನಾವು 18 ವರ್ಷಗಳಿಂದ 48 ವರ್ಷಗಳವರೆಗೆ ವಯೋಮಿತಿಯನ್ನು ನಿಗದಿಮಾಡಿ ಅವರೆಲ್ಲರಿಗೂ ಅರ್ಜಿ ಹಾಕಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದೇವೆ. ಮತ್ತು ಅರ್ಜಿ ಶುಲ್ಕ ಐದು ರೂಪಾಯಿ ಇದ್ದುದನ್ನು ಒಂದು ರೂಪಾಯಿಗೆ ಇಳಿಸಿದ್ದೇವೆ. ಇವತ್ತು ಸ್ಟೈಪೆಂಡರಿ ಪದವೀಧರರು ಹಂಗಾಮಿ ಶಿಕ್ಷಕರು ಬಾರಿಬಾರಿಗೂ ಅರ್ಜಿಹಾಕುವುದು ಕಷ್ಟವಾಗುತ್ತದೆ ಎಂದು ಹೇಳಿದ್ದರಿಂದ ಅದನ್ನು ಕೂಡ ಬದಲಾವಣೆ ಮಾಡಿ ಒಂದು ರೂಪಾಯಿ ಶುಲ್ಕದೊಡನೆ ಒಂದು ಅರ್ಜಿ ಕೊಟ್ಟರೆ ಸಾಕು ಎಂದು ಮಾಡಿದ್ದರಿಂದ ಅವರೂ ಕೂಡ ಇದರಿಂದ ತೃಪ್ತರಾಗಿದ್ದಾರೆಂದು ನಾನು ತಿಳಿದುಕೊಂಡಿದ್ದೇನೆ. ಅರ್ಜಿ ಹಾಕಿದ ಆರು ತಿಂಗಳೊಳಗಾಗಿ ಅವರು ಹಂಗಾಮಿ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದರೆ. ಅವರು ಈ ಹುದ್ದೆಗಳಿಗೆ ಅರ್ಜಿ ಹಾಕುವುದಕ್ಕೆ ಅರ್ಹರಾಗಿರುತ್ತಾರೆ. ಮತ್ತೆ ಒಂದು ವರ್ಷ ಹಿಂದೆ ಕೆಲಸದಲ್ಲಿ ಇದ್ದರೆ ಸ್ಟೈಪೆಂಡರಿ ಪದವೀಧರರೂ ಕೂಡ ಇದನ್ನು ಪಡೆಯಬಹುದೆಂದು ಮಾಡಿದ್ದೇವೆ. ಇಷ್ಟೆಲ್ಲಾ ಬದಲಾವಣೆಗಳನ್ನು ನಿಯಮಾವಳಿಗಳಲ್ಲಿ ಮಾಡಿದ್ದರಿಂದ ಅವರು ಬಹುಮಟ್ಟಿಗೆ ಸಮಾಧಾನಗೊಂಡಿದ್ದಾರೆ. ಬಹುಶಃ ಮುಂದಿನ ವರ್ಷ ಬೇಕಾಗಿರುವಂಥ ಇನ್ನೂ ಐದು ಸಾವಿರ ಉಪಾಧ್ಯಾಯರು ಏನು ಇದ್ದಾರೆ, ಅವರನ್ನು ಭರ್ತಿ ಮಾಡುವುದರಿಂದ ಈ ಆರು ಸಾವಿರ ಮತ್ತು ಐದು ಸಾವಿರ ಒಟ್ಟು ಹನ್ನೊಂದು ಸಾವಿರ ಅಭ್ಯರ್ಥಿಗಳನ್ನು ಭರ್ತಿ ಮಾಡುವಂಥ ಅವಕಾಶ ಇರುವುದರಿಂದ ಹಂಗಾಮಿಯಾಗಿ ಕೆಲಸ ಮಾಡುತ್ತಿರುವವರು ಯೋಚನೆ ಮಾಡಬೇಕಾದ ಅವಶ್ಯಕತೆ ಇಲ್ಲ. ಕಾನೂನು ಬದ್ಧವಾಗಿ ಅವರನ್ನು ಭರ್ತಿ ಮಾಡುವುದಕ್ಕೆ ಈ ರೀತಿ ಡ್ರಿಲ್ ಮಾಡಬೇಕಾಗುತ್ತದೆ. ಹಂಗಾಮಿ ಶಿಕ್ಷಕರ ವಿಷಯದಲ್ಲಿ ಅವರಿಗೆ ತರಬೇತಿ ಸಾಕಷ್ಟು ಸಿಗುತ್ತಿಲ್ಲವಾದ್ದರಿಂದ ಇನ್ನು ಮುಂದೆ 10% ನಷ್ಟು ಹೆಚ್ಚಿನ ಪ್ರಮಾಣ ಮಾಡಿ ಟಿ.ಸಿ.ಹೆಚ್.ಗೆ ಅವರು ಕುಳಿತು ಕೊಳ್ಳುವುದಕ್ಕೆ ಅವಕಾಶ ಮಾಡಿಕೊಡುತ್ತಿದ್ದೇವೆ.

ಇನ್ನು ಪಠ್ಯ ಪುಸ್ತಕಗಳ ವಿಚಾರದಲ್ಲಿ ಏನೇನು ಲೋಪದೋಷಗಳು ಇದೆ ಎನ್ನುವುದನ್ನು ಮಾನ್ಯ ಸದಸ್ಯರುಗಳು ತಿಳಿಸಿದ್ದಾರೆ, ಬಹುಶಃ ಲಕ್ಷಾಂತರ ಪುಸ್ತಕಗಳನ್ನು ನಾವು ಪ್ರಕಟಣೆ ಮಾಡುವಾಗ ಇಂತಹ ಲೋಪದೋಷಗಳು ಸಾಮಾನ್ಯವಾಗಿ ಆಗುತ್ತವೆ. ಸರ್ಕಾರಿ ಮುದ್ರಣಾಲಯದಲ್ಲಿ ಅಲ್ಲದೆ ಖಾಸಗಿ ಮುದ್ರಣಾಲಯಗಳಲ್ಲಿ ಇಂತಹ ಲೋಪದೋಷಗಳು ಆಗಿರುವಂತಹ ನಿದರ್ಶನಗಳಿವೆ. ಇದು ಆಗಬಾರದಾಗಿತ್ತು. ಈ ಲೋಪದೋಷಗಳು ಎಲ್ಲಿ ಕಂಡು ಬಂದಿವೆ ನೋಡಿ. ಇಂತಹ ಪುಸ್ತಕಗಳನ್ನು ವಾಪಸ್ಸು ತೆಗೆದುಕೊಂಡು ಬೇರೆ ಪುಸ್ತಕ ಕೊಡಲು ವ್ಯವಸ್ಥೆ ಮಾಡಿದ್ದೇವೆ. ಮಾನ್ಯ ಸದಸ್ಯರುಗಳು ಪಠ್ಯ ಪುಸ್ತಕಗಳಲ್ಲಿ ಯಾವ, ಯಾವ ವಿಷಯಗಳಿರಬೇಕೆಂದು ಹೇಳಿದ್ದಾರೆ. ಮಾನ್ಯ ಸದಸ್ಯರಾದ ಕೃಷ್ಣನ್ ಕೆ.ಹೆಚ್. ರಂಗನಾಥ್ ಮತ್ತು ಮೊದಲಾದವರು ಪಠ್ಯಪುಸ್ತಕಗಳಲ್ಲಿರಬೇಕಾದ ಕೆಲವು ಸಲಹೆಗಳನ್ನು ಕೊಟ್ಟಿದ್ದಾರೆ. ಶಿಕ್ಷಣ ಎಂದರೆ ಸ್ವಾಮಿ ವಿವೇಕಾನಂದರವರು ಹೇಳಿದ ಹಾಗೆ ವ್ಯಕ್ತಿಯಲ್ಲಿ ಜಡತ್ವವನ್ನು ನೀಗಿ ವಿಕಾಸ ದತ್ತ ಕರೆದೊಯ್ಯುವುದು ಶಿಕ್ಷಣದ ಗುರಿ ಬಹುಶಃ ನಾವೆಲ್ಲರೂ ವಿದ್ಯಾರ್ಥಿಯ ಭೌತಿಕ, ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ಸರ್ವತೋಮುಖವಾದ ಅನುಕೂಲತೆಗೆ ಅವಶ್ಯಕವಾದ ವಿದ್ಯಾಭ್ಯಾಸವನ್ನು ಕೊಡುವುದಕ್ಕೆ ಎಲ್ಲ ರೀತಿಯ ಪರಿಸರವನ್ನು ಸೃಷ್ಟಿ ಮಾಡಬೇಕು. ಇದರ ಬಗ್ಗೆ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ. ಸಮಾಜದಲ್ಲಿರುವಂಥ ಪ್ರತಿಯೊಬ್ಬರೂ ಕೂಡ ಇದನ್ನು ಅರಿತುಕೊಳ್ಳಬೇಕು. ಮಾನ್ಯ ಕೃಷ್ಣನ್‌ರವರು ಮಾತನಾಡುತ್ತಾ; ಅವಾಸ್ತಿಕವಾದ ವಿಷಯ ಅಭ್ಯಾಸ ಕ್ರಮದಲ್ಲಿ ಇದೆ ಎಂದು ಹೇಳಿದರು. ರಾಜ್ಯಾಂಗದಲ್ಲಿರುವ ಹಾಗೆ ವಿಷಯಗಳು ನಮ್ಮ ರಾಜ್ಯದಲ್ಲಿ ಹಾಗೂ ನಮ್ಮ ದೇಶದಲ್ಲಿ ಅನೇಕ ಮತಗಳು ಧರ್ಮಗಳು ಮತ್ತು ಸಿದ್ಧಾಂತಗಳು ಇವೆ. ಎಲ್ಲವನ್ನು ಸಮಾನವಾಗಿ ನೋಡಿಕೊಂಡು ಹೋಗಬೇಕೆಂದು ನಮ್ಮ ಹಿರಿಯರು ಹೇಳಿಕೊಟ್ಟಿರುವುದರಿಂದ, ಭಾವೈಕ್ಯತೆಯನ್ನು ಮೂಡಿಸುವುದಕ್ಕೆ, ಸಮಾನತೆಯನ್ನು ಬೆಳೆಸುವುದಕ್ಕೆ ಪಾಠಪ್ರವಚನಗಳಲ್ಲಿ ಅವಕಾಶವಿದೆ. ಇದನ್ನು ಒಂದೇ ದೃಷ್ಟಿಯಿಂದ ನೋಡಬಾರದೆಂದು ಈ ಸಂದರ್ಭದಲ್ಲಿ ವಿನಂತಿಸಿಕೊಳ್ಳುತ್ತೇನೆ. ಪಠ್ಯ ಪುಸ್ತಕಗಳ ವಿಷಯದಲ್ಲಿ ಹೊರಬಾರದಷ್ಟು ಹೊರೆಯನ್ನು ಹಾಕಿದ್ದಾರೆ; ನುಂಗಬಾರದಷ್ಟು ಚೆಂಡನ್ನು ಇಟ್ಟಿದ್ದೀರಿ ಎಂದು ಮಾನ್ಯ ರಂಗನಾಥ್ ರವರು ಹೇಳಿದರು. ಹಿಂದಿನಿಂದಲೂ ಮಾಡುವಂಥ ಅಕ್ಷರ ಅಭ್ಯಾಸ, ವ್ಯಾಕರಣ ಹಾಗೂ ಒತ್ತಕ್ಷರಗಳು ಬಾಲಬೋಧೆ ಇಂದು ಇಲ್ಲ. ವೈಜ್ಞಾನಿಕ ವಿಷಯಗಳನ್ನು ಸಣ್ಣ ಮಕ್ಕಳು ತಿಳಿದುಕೊಳ್ಳುತ್ತಿರುವುದರಿಂದ ಅಂಥ ಪರಿಸರದಲ್ಲಿ ಯಾವ, ಯಾವ ಪಾಠಗಳನ್ನು ಕಲಿಸಿಕೊಡಬೇಕೆಂಬುದರ ಬಗ್ಗೆ ತಜ್ಞರು ವಿಮರ್ಶೆಮಾಡಿದ್ದಾರೆ. ಇವತ್ತು ರಾಷ್ಟ್ರದಲ್ಲಿ ಹಾಗೂ ರಾಜ್ಯದಲ್ಲಿ ಮಾನ್ಯ ಸದಸ್ಯರು ಹೇಳಿರುವಂಥ ವಿಷಯಗಳ ಬಗ್ಗೆ ಮಾರ್ಪಾಡುಗಳನ್ನು ಮಾಡುವುದಕ್ಕೆ ಸಾಧ್ಯ ಇದೆ. ಎನ್ನುವುದನ್ನು ಮಾನ್ಯ ಸದಸ್ಯರಿಗೆ ತಿಳಿಸುತ್ತೇನೆ.

ಶಿಕ್ಷಣ ಇಲಾಖೆಯ ಬಗ್ಗೆ ಮಾತನಾಡುತ್ತಾ; ಅದರಲ್ಲಿಯೂ ಪ್ರಾಥಮಿಕ ಶಾಲೆಗಳಿಗೆ ಸಿಕ್ಕಿರುವಂಥ ಆದ್ಯತೆ ಬಗ್ಗೆ ಎಲ್ಲರೂ ತಮ್ಮ ಅನುಕಂಪವನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಮಾತನಾಡಿದವರೆಲ್ಲಾ ಇದಕ್ಕೆ ಕಡಿಮೆ ಹಣ ಕೊಟ್ಟಿದ್ದಾರೆಂದು ಹೇಳಿದರು. ಎಲ್ಲಾ ವಿಷಯಗಳನ್ನು

ವಿದ್ಯಾಭ್ಯಾಸದ ಬಗ್ಗೆ ಪಕ್ಷಾತೀತವಾಗಿ ಪರಿಗಣಿಸಬೇಕೆಂದು ಹೇಳಿದ್ದಾರೆ. ಲೋಪದೋಷಗಳು ಇವತ್ತು ಸೃಷ್ಟಿಯಾಗಿಲ್ಲ; ಮಾನ್ಯ ಮಲ್ಲಿಕಾರ್ಜುನ ಖರ್ಗೆಯವರ ಕಾಲದಿಂದಲೂ ಇವೆ. ನನಗೇನು ಅನುಕಂಪ ಇದೆ; ಅದೇ ಅನುಕಂಪ ಅವರಿಗೂ ಇತ್ತೆಂದು ಕಾಣುತ್ತೆ. ಏಕಕಾಲದಲ್ಲಿ ಎಲ್ಲಾ ಕಟ್ಟಡಗಳನ್ನು ಕಟ್ಟಿಸುವುದಕ್ಕೆ ಆಗುವುದಿಲ್ಲ. ಎಲ್ಲಾ ಉಪಾಧ್ಯಾಯರುಗಳನ್ನು ಒಂದೇ ಸಾರಿ ನೇಮಕ ಮಾಡುವುದಕ್ಕೆ ಅನೇಕ ರೀತಿಯ ಎಡರುತೊಡರುಗಳು ಇವೆ. ಒಟ್ಟಿನಲ್ಲಿ ಇನ್ನೊಂದು ವರ್ಷದಲ್ಲಿ ಉಪಾಧ್ಯಾಯರ ಖಾಲಿಜಾಗಗಳನ್ನು ತುಂಬುವುದಕ್ಕೆ ಮಾನ್ಯ ಮುಖ್ಯಮಂತ್ರಿಗಳು ಒಪ್ಪಿಗೆ ಕೊಟ್ಟಿದ್ದಾರೆ: ಅದರಂತೆ ಭರ್ತಿಮಾಡುವುದಕ್ಕೆ ಈ ಸಂದರ್ಭದಲ್ಲಿ ಹೇಳುತ್ತೇನೆ. ಹಾಗೂ ಈ ಸದನಕ್ಕೆ ಈ ರೀತಿ ಆಶ್ವಾಸನೆ ಕೊಡುತ್ತೇನೆ. ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳಲ್ಲಿಯೂ ಉಪಾಧ್ಯಾಯರ ಕೊರತೆ ಇದೆ. ಇವತ್ತು ಹೆಚ್ಚಿನ ಪ್ರಮಾಣದಲ್ಲಿ-ಪ್ರೌಢಶಾಲೆಗಳನ್ನು ಕೊಟ್ಟಿರುವುದರ ಬಗ್ಗೆ ಕೂಡ ಮಾನ್ಯ ಸದಸ್ಯರು ಪ್ರಸ್ತಾಪ ಮಾಡಿದ್ದಾರೆ. ಹೆಚ್ಚಿನ ಪ್ರಮಾಣದಲ್ಲಿ ಪ್ರೌಢಶಾಲೆಗಳನ್ನು ಕೊಟ್ಟ ತಕ್ಷಣ ಎಲ್ಲಾ ಸರಿ ಹೋಗುತ್ತವೆಂದು ನಾನು ತಿಳಿದುಕೊಂಡಿಲ್ಲ.

ಗ್ರಾಮಾಂತರ ಪ್ರದೇಶಗಳ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲ ಒದಗಿಸುವ ದೃಷ್ಟಿಯಿಂದ ಹಾಗೂ ಮಕ್ಕಳಿಗೆ ಈಗ ಇರುವಂಥ ತೊಂದರೆಯನ್ನು ತಪ್ಪಿಸುವ ದೃಷ್ಟಿಯಿಂದ ವಿಕೇಂದ್ರೀಕರಣ ಮಾಡಿ ಸಾಧ್ಯವಾದ ಮಟ್ಟಿಗೆ ವಿದ್ಯಾ ಇಲಾಖೆಯ ನಿರ್ದೇಶಕರಿಂದ ಸಲಹೆಗಳನ್ನು ತರಿಸಿಕೊಂಡು ಹಳ್ಳಿಗಳಿಗೆ ಪ್ರೌಢಶಾಲೆಗಳನ್ನು ಕೊಟ್ಟಿದ್ದೇವೆ. ಹೊಸಸರ್ಕಾರ ಬಂದ ಮೇಲೆ ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಎಷ್ಟು ಪ್ರೌಢಶಾಲೆಗಳಿವೆ? ಎಷ್ಟು ಶಾಲೆಗಳನ್ನು ಕೊಡಬೇಕಾಗುತ್ತದೆ ಎನ್ನುವ ವಿವರಗಳನ್ನು ತರಿಸಿಕೊಂಡು ಮಂಜೂರು ಮಾಡಿದೆ. ಹಿಂದಿನ ಸರ್ಕಾರದವರು ಮೊದಲಿನಿಂದಲೂ ಸರಿಯಾಗಿ ಮಾಡಿಕೊಂಡು ಬಂದಿದ್ದರೆ ಈ ಒಂದು ಇಂಬಾಲೆನ್ಸ್ ಆಗುತ್ತಿರಲಿಲ್ಲ ಎನ್ನುವ ವಿಷಯವನ್ನು ಮಾನ್ಯ ರಂಗನಾಥ್‌ರವರಿಗೆ ತಿಳಿಸುತ್ತೇನೆ. ಇದಕ್ಕೆ ನಾನು ಹೊಣೆಯಲ್ಲ. ವಿಕೇಂದ್ರೀಕರಣ ಮಾಡಿರುವಂಥ ಉದ್ದೇಶ ಪಟ್ಟಣಕ್ಕೆ ಬಂದು ಮಕ್ಕಳೆಲ್ಲರೂ ಒಂದೇ ಕಡೆ ಓದುವುದು ಕಷ್ಟವಾಗುತ್ತದೆ. ಹತ್ತಿರದಲ್ಲಿಯೇ ಶಾಲೆಗಳನ್ನು ಮಾಡುವುದರಿಂದ ಬಡವರ ಮಕ್ಕಳಿಗೂ ಅನುಕೂಲವಾಗುತ್ತದೆ ಎಂದು ಯೋಚನೆ ಮಾಡಿ 300 ಪ್ರೌಢಶಾಲೆಗಳನ್ನು ಕೊಟ್ಟಿದ್ದೇವೆ. 100 ಪ್ರೌಢಶಾಲೆಗಳನ್ನು ಕಿರಿಯ ಕಾಲೇಜುಗಳನ್ನಾಗಿ ಪರಿವರ್ತನೆ ಮಾಡಿದ್ದೇವೆ. ಇರತಕ್ಕಂಥ ಪ್ರೌಢಶಾಲೆಗಳನ್ನು ಮೇಲ್ದರ್ಜೆಗೇರಿಸಿದ್ದೇವೆ. ನಾಲ್ಕು ಸ್ಥಳಗಳಲ್ಲಿ ಸ್ವತಂತ್ರವಾಗಿರುವ ಜೂನಿಯರ್ ಕಾಲೇಜುಗಳನ್ನು ಮಾಡಿದ್ದೇವೆ. ಮಲ್ಲೇಶ್ವರಂನಲ್ಲಿ ಹೆಣ್ಣು ಮಕ್ಕಳಿಗಾಗಿ ಒಂದು ಕಾಲೇಜನ್ನು ಪ್ರಾರಂಭ ಮಾಡಿದ್ದೇವೆ. ವಿದ್ಯಾರ್ಥಿನಿಯರಿಗೆ ಪ್ರತ್ಯೇಕವಾದಂಥ ಒಂದು ಕಿರಿಯ ಕಾಲೇಜನ್ನು ಕೊಡಬೇಕೆಂದು ಮನವಿ ಬಂದಾಗ ಕೋಲಾರ ಜಿಲ್ಲೆಯಲ್ಲಿ ಅಂಥ ಒಂದು ಕಾಲೇಜನ್ನು ಸ್ಥಾಪನೆ ಮಾಡಿದ್ದೇವೆ. ಹೀಗೆ ಮಾಡುವಾಗ ಐದು-ಹತ್ತು ಮೈಲಿಗಳ ಅಂತರವನ್ನು ನೋಡಿಕೊಂಡು ಪ್ರಾರಂಭ ಮಾಡಿದ್ದೇವೆ. ಇದು ಪಟ್ಟಣಕ್ಕೆ ಅನ್ವಯಿಸುವುದಿಲ್ಲ. ಹೊಸದಾಗಿ ಕೊಟ್ಟಂತಹ ಶಾಲೆಗಳಿಗೆ ಉಪಾಧ್ಯಾಯರನ್ನು ನೇಮಕ ಮಾಡುವ ವಿಷಯದಲ್ಲಿ ಗಮನ ಕೊಟ್ಟಿದ್ದೇವೆ. ಅನುಭವ ಇರುವ ಉಪಾಧ್ಯಾಯರನ್ನು ಹೊಸ ಶಾಲೆಗಳಿಗೆ ಮತ್ತು ಜ್ಯೂನಿಯರ್ ಕಾಲೇಜುಗಳಿಗೆ ಕೊಟ್ಟಿದ್ದೇವೆ.

ಪ್ರೌಢಶಾಲೆಗಳಿಗೆ ಉಪಾಧ್ಯಾಯರನ್ನು ನೇಮಕ ಮಾಡುವಂಥವರು ಲೋಕ ಸೇವಾ ಆಯೋಗದವರು, 93 ಅಭ್ಯರ್ಥಿಗಳನ್ನು ಚುನಾಯಿಸಿದ ತಕ್ಷಣ ಅವರ ವಿದ್ಯಾರ್ಹತೆಯನ್ನು ಕೇಳದೆ, ವಿದ್ಯಾರ್ಥಿಗಳಿಗೆ ಅನುಕೂಲವಾಗುವ ದೃಷ್ಟಿಯಿಂದ ಬೇಗ ಆದೇಶ ನೀಡಿ ಕಳುಹಿಸಿಕೊಡುವುದಕ್ಕೆ ತೀರ್ಮಾನ ಮಾಡಿದ್ದೇವೆ. ಅದೇ ರೀತಿ ಕಿರಿಯ ಕಾಲೇಜುಗಳಿಗೆ ಕೆಲವು ಅಭ್ಯರ್ಥಿಗಳು ಬಂದಿದ್ದರು. ಸರ್ಕಾರ ಕೂಡಲೇ ಆಜ್ಞೆ ಹೊರಡಿಸಿ 63 ಜನರನ್ನು ನೇಮಕ ಮಾಡಿದೆ. ಈಗ ಇರುವಂತಹ ಉಪನ್ಯಾಸಕರುಗಳಿಗೆ, ರೀಡರುಗಳಿಗೆ, ಹಾಗೂ ಪ್ರೊಫೆಸರುಗಳಿಗೆ ಬಡ್ತಿ ಕೊಡುವ ಸಲುವಾಗಿ ಸೀನಿಯಾರಿಟಿ ಪಟ್ಟಿಯನ್ನು ಹಂಗಾಮಿಯಾಗಿ ತಯಾರು ಮಾಡಿದ್ದೇವೆ. ಹಿಂದಿನಿಂದಲೂ ಇದನ್ನು ಮಾಡದೇ ಇದ್ದುದರಿಂದ ಇವರಲ್ಲಿ ಈಗ ಎರಡು ಗುಂಪುಗಳಾಗಿವೆ. ಒಂದು ಗುಂಪು ನ್ಯಾಯಾಲಯಕ್ಕೆ ಹೋಗಿ ತಡೆಯಾಜ್ಞೆ ತಂದಿದೆ. ಈಗ ಅದನ್ನು ಒಂದು ಅಂತಿಮ ಘಟ್ಟಕ್ಕೆ ತಂದಿದ್ದೇವೆ. ಎರಡೂ ವರ್ಗಗಳಿಗೂ ನ್ಯಾಯ ದೊರಕಿಸುವ ವ್ಯವಸ್ಥೆ ಮಾಡಲಾಗುವುದು. ಹಿಂದಿನಿಂದಲೂ ಬಂದಿರುವಂಥ ಉಪನ್ಯಾಸಕರುಗಳಿಗೆ, ರೀಡರುಗಳಿಗೆ ಹಾಗೂ ಪ್ರೊಫೆಸರುಗಳಿಗೆ ವಿದ್ಯಾರ್ಹತೆಯಲ್ಲಿ ರಿಯಾಯಿತಿ ಕೊಡಬೇಕೆಂದು ಕೇಳಿದ್ದಾರೆ: ಇದರ ಬಗ್ಗೆ ತಿದ್ದುಪಡಿ ಮಾಡಬೇಕಾಗುತ್ತದೆ. ಎರಡನೆಯ ದರ್ಜೆಯಲ್ಲಿ ಪಾಸಾಗಿರುವಂಥ ಉಪನ್ಯಾಸಕರುಗಳಿಗೆ ಹಾಗೂ ಪ್ರೊಫೆಸರುಗಳಿಗೆ ಬಡ್ತಿ ಕೊಡುವ ಬಗ್ಗೆ ಕೂಡ ಯೋಚನೆ ಮಾಡಲಾಗುವುದು. ಜೊತೆಗೆ ಇರುವಂತಹ ಹುದ್ದೆಗಳನ್ನು ಭರ್ತಿ ಮಾಡುವ ಕ್ರಮ ತೆಗೆದುಕೊಳ್ಳಲಾಗುವುದು. ಇಂದು ಐವತ್ತು ಸಾವಿರ ರೂಪಾಯಿಗಳ ಒಂದು ಪ್ರೌಢಶಾಲೆಯನ್ನು ಕೊಡಬೇಕಾಗಿದ್ದರೆ, ಸಂಬಂಧಪಟ್ಟವರು ಇಂತಿಷ್ಟು ಹಣ ಡಿಪಾಸಿಟ್ ಮಾಡುವುದರ ಜೊತೆಗೆ ಐದು ಎಕರೆ ಜಮೀನನ್ನು ಕೊಡಬೇಕಾಗಿರುತ್ತದೆ. ಈ ಎಲ್ಲಾ ಷರತ್ತುಗಳನ್ನು ಹಾಕಿದಾಗ ಹಳ್ಳಿಯವರಾದ ನಾವು ಹಂತ, ಹಂತವಾಗಿ ಕೊಡಲಿಕ್ಕೆ ಪ್ರಯತ್ನ ಮಾಡುತ್ತೇವೆ. ಸಾಧ್ಯವಾದಷ್ಟು ಮಟ್ಟಿಗೆ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಈ ರೀತಿ ಧಾರಾಳವಾಗಿ ಕೊಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದೇವೆ. ಈ ಕಡೆಯ ಮತ್ತು ಆಕಡೆಯ ಸದಸ್ಯರು ಪ್ರೌಢಶಾಲೆಗಳನ್ನು ಕೊಡುವುದರಲ್ಲಿ ಬಹಳ ಉದಾರವಾದಿಗಳಾಗಿದ್ದೀರಿ ಎಂದು ಹೇಳಿದ್ದಾರೆ. ಮಾನ್ಯ ಖರ್ಗೆಯವರು ಎಲೆ-ಯಾಳ್‌ದಲ್ಲಿ ಒಂದು ಕಡೆ ಸ್ಕೂಲನ್ನು ಕೊಟ್ಟು ಅದನ್ನು ಬದಲಾಯಿಸಿದ್ದೀರಿ ಮತ್ತು ಅಲ್ಲಿನ ಸ್ಥಳದ ಬಗ್ಗೆ ಭೂಪಟ ಗೊತ್ತಾಗಲಿಲ್ಲ ಎಂದು ಹೇಳಿದರು. ಅಲ್ಲಿಗೆ ಯಾವ ಪಾಠಶಾಲೆ ಮಂಜೂರು ಮಾಡಿದ್ದೇವೆ. ಅದನ್ನು ನಡೆಸಿಕೊಂಡು ಹೋಗಲಿ ಎಂದು ಸರ್ಕಾರದಿಂದ ಆದೇಶ ಹೋಗುತ್ತಿದೆ. ಒಟ್ಟಿನಲ್ಲಿ ಪಕ್ಷಾತೀತವಾಗಿ ಶಿಕ್ಷಣವನ್ನು ಎಲ್ಲಾಕಡೆ ಕೊಡುತ್ತಿದ್ದೇವೆ.

ಆತ್ಮಸಾಕ್ಷಿಯಾಗಿ ಹೇಳುತ್ತಿದ್ದೇನೆ. ಕಂದಕೂರು-ಅಲ್ಲಿ ಮೂವತ್ತು ವರ್ಷದಿಂದ ಶಾಲೆ ಕೊಟ್ಟಿರಲಿಲ್ಲ. ನಮ್ಮ ಪಕ್ಷದ ಮಂತ್ರಿಗಳು ಆ ಭಾಗದವರು, ಅವರು ಕೂಡ ಹೇಳಿದರು ನಾನು ಅವರಿಗೂ ಕೊಟ್ಟಿದ್ದೇನೆ ನಿಮಗೂ ಕೊಡುತ್ತೇನೆ. ಎಂದು ಹೇಳಿದಾಗ ಅವರು ಅವರಿಗೂ ಶಾಲೆಯನ್ನು ಕೊಡಿ ಎಂದು ಹೇಳಿದ್ದಾರೆ. ಅಧ್ಯಕ್ಷರೇ, ಅವರಿಗೆ ಎಷ್ಟು ಉದಾರ ಭಾವನೆ ಇತ್ತು ಅಷ್ಟು ಇವರಿಗೆ ಇಲ್ಲ. ಹಿಂದಿನ ಸಾರಿಯೇ ಶಿಫಾರಸ್ಸು ಆಗಿತ್ತು. ಅವರಿಗೆ ಕೊಡಬೇಕಾಗುತ್ತದೆ. ಇದನ್ನು ಪಕ್ಷಾತೀತವಾಗಿ ಮಾಡಿದ್ದೇನೆ. ಈ ದೃಷ್ಟಿಯಿಂದ 300 ಶಾಲೆಗಳಿಂದ, ಮಕ್ಕಳು ಪಟ್ಟಣಕ್ಕೆ ಬರುವಂಥ ಕಷ್ಟ ಏನಿತ್ತು ಅದು ಕಡಿಮೆಯಾಗುತ್ತದೆ. ಇನ್ನು ಒಳ್ಳೆಯ ಉಪಾಧ್ಯಾಯರನ್ನು ಹಾಕಬೇಕೆಂದು ಹೊರಟಾಗ ಏನಾಗುತ್ತದೆ ಎಂದರೆ, ಪಟ್ಟಣದಲ್ಲಿ ಮಕ್ಕಳು ಓದುತ್ತಿದ್ದಾರೆಂದು ಏನಾದರೂ ಒಂದು ಸಂಬಂಧ ತಂದು ಅವರು ಹಳ್ಳಿಗೆ ಹೋಗುವುದಿಲ್ಲ ಪ್ರಾಥಮಿಕ ಶಿಕ್ಷಕರು ಕೂಡ ನಮ್ಮ ಮಕ್ಕಳು ಕಾಲೇಜಿನಲ್ಲಿ ಓದಬೇಡವೆ ಎಂದು ಕೇಳುತ್ತಾರೆ. ಈಗ ನಾವು ಸರ್ಕಾರದ ನಿಯಮಾವಳಿ ಪ್ರಕಾರ ಕೆಲಸ ಮಾಡುತ್ತಿದ್ದೇವೆ.

ಇನ್ನು ವರ್ಗಾವರ್ಗಿ ವಿಷಯದಲ್ಲಿ ಒಂದು ಕಡೆ ಪ್ರಸ್ತಾಪ ಮಾಡಿದರು. ಪ್ರೈಮರಿ ಸ್ಕೂಲು ಉಪಾಧ್ಯಾಯರುಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ವರ್ಗ ಮಾಡಿದ್ದಾರೆಂದು ಕೆಲವರು ಹೇಳಿದ್ದಾರೆ. ಈ ರೀತಿ ವರ್ಗಾವರ್ಗಿ ಮಾಡುವುದರಿಂದ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿ ಖರ್ಚಾಗುತ್ತದೆಂದು ಹೇಳಿದ್ದಾರೆ. ಅದನ್ನು ಹೇಳಿರುವವರು ಆ ಕಡೆಯ ಸದಸ್ಯರಾಗಲಿ, ಈಕಡೆಯ ಸದಸ್ಯರಾಗಲಿ, ಅವರಿಗೆ ಒಂದು ವಿಚಾರ ನಾನು ತಿಳಿಸಬೇಕೆಂದರೆ ಯಾರು ಕಷ್ಟದಲ್ಲಿರುತ್ತಾರೆ. ಗಂಡ ಒಂದು ಕಡೆ, ಹೆಂಡತಿ ಇನ್ನೊಂದು ಕಡೆ, ಮತ್ತು ಗಂಡ ನಿವೃತ್ತಿಯಾಗಿ, ಹೆಂಡತಿ ದೂರದಲ್ಲಿದ್ದು ಕಷ್ಟ ಎದುರಿಸುತ್ತಿರುವಂತಹ ಸಂದರ್ಭದಲ್ಲಿ; ಹಿಂದುಳಿದವರಿಗೆ, ಹರಿಜನರಿಗೆ, ಗಿರಿಜನರಿಗೆ ಎಲ್ಲಿ ಮನೆಗಳು ಸಿಕ್ಕುವುದಿಲ್ಲವೋ ಅಂಥ ಸಂದರ್ಭದಲ್ಲಿ; ಯಾರು ಆಸ್ಪತ್ರೆಯಲ್ಲಿರುತ್ತಾರೆ, ಯಾರು ಕಷ್ಟದಲ್ಲಿರುತ್ತಾರೆ, ಮತ್ತು ಯಾರು ಅನಾರೋಗ್ಯದಿಂದ ನರುಳುತ್ತಿದ್ದಾರೆ ಅಂತಹ ಸಂದರ್ಭಗಳಲ್ಲಿ, ಸರ್ಕಾರದ ನಿಯಮಾವಳಿ ಐದು ವರ್ಷ ಕಡ್ಡಾಯ ಸೇವೆಸಲ್ಲಿಸಬೇಕೆಂದಿದ್ದರೂ ಸಹ ಅದನ್ನು ಸಡಿಲಿಸಿ ಕೆಲವೊಂದು ವರ್ಗಾವಣೆ ಮಾಡಬೇಕಾಗಿದೆ. ಇದುವರೆಗೂ ಇದು ಮುಖ್ಯ ಮಂತ್ರಿಗಳ ಕೈಯಲ್ಲಿತ್ತು. ಆದರೆ ಈಗ ಅದನ್ನು ವಿಕೇಂದ್ರೀಕರಣಗೊಳಿಸಿ, ಆಯಾ ಮಂತ್ರಿಗಳೇ ಮಾಡಬೇಕೆಂದು ಮಾಡಿದ್ದಾರೆ. ಅದು ನನಗೆ ಹೆಚ್ಚಿನ ಅನುಕೂಲವಾಗಿದೆ ಎಂದು ಹೇಳುವ ಬದಲು ಜಾಸ್ತಿ ಹೊರೆಯಾಗಿದೆ ಎಂದು ಹೇಳಬೇಕಾಗಿದೆ. ನಮಗೆ ಬಂದಿರುವಂಥ ಹದಿನಾರುಸಾವಿರ ಅವಧಿ ಪೂರ್ಣ ಅರ್ಜಿಗಳನ್ನು ನೋಡಿದಾಗ ನಾವು ಕೊಟ್ಟಿರುವಂತಹ ವರ್ಗಾವಣೆ ಮೂರು ಸಾವಿರ ಚಿಲ್ಲರೆ. ಒಟ್ಟು ವರ್ಗ ಆಗಿರುವಂಥದು 8133 ಏನು ಬಂದಿದೆ. ಅದರಲ್ಲಿ ಅವಧಿ ಪೂರ್ಣವಾಗಿರುವಂತಹದು ಮೂರು ಸಾವಿರಕ್ಕೂ ಕಡಿಮೆ ಇದೆ. ಅಂದರೆ ಎಷ್ಟು ಪರ್ಸೆಂಟ್ ಆಯಿತು? ಒಂದೂವರೆ ಲಕ್ಷ ಈ ಇಲಾಖೆಯ ಉಪಾಧ್ಯಾಯರ ಸಂಖ್ಯೆ ನೋಡಬೇಕೆಂದಾಗ ನಾವು ವಿಚಕ್ಷಣೆಯಿಂದ ಇದರಲ್ಲಿ ಬಹಳ ಕಡಿಮೆ ಅವಕಾಶ ಮಾಡಿಕೊಟ್ಟಿದ್ದೇವೆ, ಅವರ ಕೇಳಿಕೆಯ ಮೇಲೆ ಕೊಟ್ಟಿರುವುದರಿಂದ ಅವರಿಗೆ ಟಿ.ಎ, ಡಿ.ಎ, ಬರುವುದಿಲ್ಲ. ಈ ರೀತಿಯಾಗಿ

ಮಾನವೀಯತೆಯ ದೃಷ್ಟಿಯಿಂದ ಮಾಡಿದ್ದೇವೆಯೇ ಹೊರತು ಕಣ್ಣು ಮುಚ್ಚಿಬಿಟ್ಟು ಮಾಡಿಲ್ಲ. ಮಾನ್ಯ ರಂಗನಾಥ್ ಅವರು ಕೇಳಿಕೊಂಡಂತಹ ವರ್ಗ ಮಾಡಿಲ್ಲ ಎಂದು ಹೇಳಿದರು. ಪತ್ರಿಕೆಗಳಲ್ಲಿ ಈ ಬಗ್ಗೆ ಹೇಳಿಕೆ ಕೊಡುವಂತಹದು ಇನ್ನೊಂದು ರೀತಿಯಲ್ಲಿ ಅಲ್ಲೋಲ, ಕಲ್ಲೋಲವಾಗಿದೆ ಎಂದು ಹೇಳಿದಾಗ 1-6-1983ರಲ್ಲಿ ಯಾವುದನ್ನು ವರ್ಗಮಾಡಬೇಕೆಂದು ಮಾಡಿದ್ದೆವೋ ಅದನ್ನು ನಿಲ್ಲಿಸಬೇಕೆಂದು ಕಟ್ಟಿ ಇಟ್ಟಿದ್ದೇವೆ. ಆ ಒಂದು ಗುಂಪಿನಲ್ಲಿ ಇವರ ಆಪ್ಲಿಕೇಷನ್ ಸೇರಿರಬೇಕು ಮುಂದಿನ ವರ್ಷ ಪ್ರಿಮೆಚ್ಯೂರ್ ಟ್ರಾನ್ಸ್‌ಫರ್‌ಗೆ ನಾವು ಅನುಮತಿ ಕೊಟ್ಟಿದ್ದೇವೆ. ಮಾನ್ಯ ರಂಗನಾಥ್ ಅವರ ಮೇಲೆ ಕೋಪ ಇಲ್ಲ. ನಮಗೆ ಈ ವಿಚಾರದಲ್ಲಿ ಕೆಟ್ಟ ಉದ್ದೇಶವೂ ಇಲ್ಲ. ಕಷ್ಟದಲ್ಲಿರುವವರಿಗೆ. ಕೆಲವು ಸಂದರ್ಭದಲ್ಲಿ ನಾವು ವರ್ಗ ಮಾಡಬೇಕಾಗುತ್ತದೆ. ಈ ಪ್ರಿಮೆಚ್ಯೂರ್ ಟ್ರಾನ್ಸ್‌ಫರ್ ನ್ಯಾಯವಾಗಿ ಮಾಡಬೇಕೆಂದು ಕೆಲವರು ಹೇಳಿದ್ದಾರೆ. ಅದನ್ನು ಮಾಡಿದ್ದೇನೆ. ಇನ್ನು ಟ್ರಾನ್ಸ್‌ಫರ್ ಪವರ್ ಏತಕ್ಕೆ ನೀವೇ ಇಟ್ಟುಕೊಂಡಿದ್ದೀರಿ. ನಿಮ್ಮ ಅಧಿಕಾರಿಗಳಿಗೆ ವಿಕೇಂದ್ರೀಕರಣ ಮಾಡಿ, ನಿಮಗೆ ಭಾರ ಕಡಿಮೆಯಾಗುತ್ತದೆ ಎಂದೂ ಹೇಳಿದ್ದಾರೆ. ಈ ಒಂದು ಅಧಿಕಾರವನ್ನು ಅಧಿಕಾರಿಗಳಿಗೆ ಕೊಟ್ಟಿದ್ದೇವೆ.

ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಐದು ವರ್ಷದ ಅವಧಿ ಆದ ಮೇಲೆ ಯಾವ ಅಧಿಕಾರಿಗೆ ಅಧಿಕಾರವಿದೆಯೋ ಅವರೇ ಮಾಡಬಹುದು. ಪ್ರೌಢಶಾಲೆ ಉಪಾಧ್ಯಾಯರು ನಾಲ್ಕುವರ್ಷ ಪೂರೈಸಿದರೆ ಕಮಿಷನರ್‌ರವರಿಗೆ ಮತ್ತು ಡಿವಿಜನ್ ಕೆಲಸ ಮಾಡುವಂಥ ಅಧಿಕಾರಿಗಳಿಗೆ ವರ್ಗಾವಣೆ ಮಾಡುವಂಥ ಅಧಿಕಾರ ಕೊಟ್ಟಿದ್ದೇವೆ. ಮೂರು ವರ್ಷ ಕೆಲಸಮಾಡಿರುವಂಥ ಅಧಿಕಾರಿಗಳು ಯಾರು ಇದ್ದಾರೆ ಅವರನ್ನು ಅಧಿಕಾರದಲ್ಲಿದ್ದವರೆ ಮಾಡಬಹುದೆಂದು ಮಾಡಿದ್ದೇವೆ. ಈ ಅವದಿಪೂರ್ಣ ಏನಿದೆ ಅಂತಹವರನ್ನೆಲ್ಲ ಲೆಕ್ಕಕ್ಕೆ ತೆಗೆದುಕೊಂಡರೆ ಅದು ಲಕ್ಷಾನುಗಟ್ಟಲೆ ಆಗುತ್ತದೆ. ಒಬ್ಬರಿಗೆ ವರ್ಗ ಮಾಡುತ್ತೇವೆಂದರೆ ಒಂದು ಸಾವಿರ ರೂಪಾಯಿಗಳ ಟಿ.ಎ.ಡಿ.ಎ. ಕೊಡಬೇಕು. ವರ್ಗಾವರ್ಗಿ ಬಗ್ಗೆ ಲೆಕ್ಕ ಹಾಕಿದರೆ ಕೋಟ್ಯಾಂತರ ರೂಪಾಯಿಗಳ ಖರ್ಚು ಮಾಡಬೇಕಾಗುತ್ತದೆ. ಅಷ್ಟು ಹಣ ಇಲ್ಲ. ಎಲ್ಲಿ ಆಗತ್ಯ ಇದೆ ಅಲ್ಲಿ ವರ್ಗ ಮಾಡಬೇಕಾಗುತ್ತದೆ. ಇದನ್ನು ಮಾಡುವಂಥ ಕಾಲದಲ್ಲಿ ನಾವು ನ್ಯಾಯಬದ್ಧವಾಗಿ ಮಾಡಬೇಕೆಂಬ ದೃಷ್ಟಿಯಿಂದ ಮಾಡಿದ್ದೇವೆ. ಇದರ ಬಗ್ಗೆ ಆದಷ್ಟು ಕಡಿಮೆ ಮಾಡಿಕೊಂಡು ಆಯಾಯ ಅಧಿಕಾರಿಗಳಿಗೆ ಅಧಿಕಾರ ಕೊಟ್ಟರೆ ಒಳ್ಳೆಯದು ಎಂದು ನಾನು ವೈಯಕ್ತಿಕವಾಗಿ ಹೇಳಿದ್ದೇನೆ.

ಇನ್ನು ನೇಮಕಾತಿ ವಿಷಯದಲ್ಲಿ ಹೇಳುವುದಾದರೆ ಪ್ರೌಢಶಾಲೆಯಲ್ಲಿ ಕೆಲಸ ಮಾಡುವವರನ್ನು ಪ್ರಾಥಮಿಕ ಶಾಲೆಯಲ್ಲಿ ಹಂಗಾಮಿ ಶಿಕ್ಷಕರಾಗಿ ಏನು ಕೆಲಸ ಮಾಡುತ್ತಿದ್ದಾರೆ ಅವರನ್ನು ಮುಂದುವರಿಸಿಕೊಂಡು ಬಂದಿದ್ದೇವೆ. ಹಾಗೆಯೇ, ಜೂನಿಯರ್ ಕಾಲೇಜಿನಲ್ಲಿ ಕೆಲಸಮಾಡುವವರನ್ನು ಮುಂದುವರಿಸಿಕೊಂಡು ಹೋಗಿದ್ದೇವೆ. ಈ ಹಂಗಾಮಿಯಾಗಿ ಕೆಲಸ ಮಾಡುವವರ ಜೊತೆಗೆ ಪಾರ್ಟ್‌ಟೈಮ್ ಲೆಕ್ಚರರ್ಸ್‌ಗೆ 200 ರೂಪಾಯಿಗಳನ್ನು ಕೊಡುತ್ತಿದ್ದುದನ್ನು 400 ರೂಪಾಯಿಗಳಿಗೆ ಹೆಚ್ಚಿಸಿದ್ದೇವೆ. ಹೈಸ್ಕೂಲಿನಲ್ಲಿ ಐವತ್ತು ರೂಪಾಯಿ ಕೊಡುತ್ತಿದ್ದವರಿಗೆ 100 ರೂಪಾಯಿಗೆ ಹೆಚ್ಚು ಮಾಡಿದ್ದೇವೆ. ಐದು ವಿಷಯಗಳಲ್ಲಿ ಪಾಠ ಮಾಡಬೇಕು ಅಂದರೆ

ಒಬ್ಬೊಬ್ಬರಿಗೆ ನೂರು ರೂಪಾಯಿ ಅಂದರೆ 500 ರೂಪಾಯಿಗಳು ಆಗುತ್ತವೆ. ಇದು ಕಡಿಮೆ ಎಂದು ಕೆಲವರು ಹೇಳಿದರು. ಅದು ಕಡಿಮೆ ಆಗಲಾರದು.

ಶ್ರೀ ಎಂ. ಎಸ್. ಕೃಷ್ಣನ್- ಹಂಗಾಮಿ ಉಪಾಧ್ಯಾಯರ ವಿಷಯವನ್ನು ಮಾನ್ಯ ಮಂತ್ರಿಗಳು ತಿಳಿಸಬೇಕು. ಈ ದೃಷ್ಟಿಯಿಂದ ಇವತ್ತು ಪಾರ್ಟ್‌ಟೈಂ ಲೆಕ್ಚರರ್ಸ್ ಯಾರಿದ್ದಾರೆ ಅವರಿಗೆ 50 ರೂಪಾಯಿಗಳಿಂದ 100 ರೂಪಾಯಿಗಳಿಗೆ ಹೆಚ್ಚು ಮಾಡಿದ್ದೇವೆ. ಜೂನಿಯರ್ ಕಾಲೇಜಿನಲ್ಲಿ ಫುಲ್ ಟೈಂ ಲೆಕ್ಚರರ್ಸ್‌ಗೆ 200 ರೂಪಾಯಿಗಳಿಂದ 400 ರೂಪಾಯಿಗಳಿಗೆ ಹೆಚ್ಚು ಮಾಡಿದ್ದೇವೆ. ಹಿಂದೆ ಇವರಿಗೆ ಮಿನಿಮಂ ವೇಜಸ್ 100 ರೂಪಾಯಿ ಕೊಟ್ಟಿದ್ದನ್ನು ಈಗ 400 ರೂಗಳಿಗೆ ಹೆಚ್ಚು ಮಾಡಿದ್ದೇವೆ. ಅದಕ್ಕೂ ಅವರು ಸಮಾಧಾನಪಟ್ಟುಕೊಳ್ಳದಿದ್ದರೆ ನಾವು ಏನು ಮಾಡುವುದಕ್ಕೆ ಬರುತ್ತದೆ? ಇವತ್ತು ಸಂಬಳದ ಸ್ಕೇಲ್‌ನಲ್ಲಿ 10 ರೂಪಾಯಿ ಕಡಿಮೆ ಮಾಡಿ ಅವರಿಗೆ ಕಾಂಟ್ರಾಕ್ಟ್ ಬೇಸಿಸ್ ಮೇಲೆ ಸಂಬಳವನ್ನು ಕೊಡುವಂತೆ ನಿಯಮಾವಳಿಗಳನ್ನು ಸಡಿಲ ಮಾಡಿದ್ದೇವೆ. ಹೈಸ್ಕೂಲು ಶಾಲಾಕಟ್ಟಡಗಳ ವಿಚಾರದಲ್ಲಿ ಹೇಳುವುದಾದರೆ, ಯಾರಾದರೂ ಸಾರ್ವಜನಿಕರು ಮುಂದೆ ಬಂದು ತಮ್ಮ ವಂತಿಗೆಯನ್ನು ಕೊಡುತ್ತಾರೋ ಅವರು ಕಟ್ಟಡಕ್ಕೆ ತಗಲುವ ವೆಚ್ಚದಲ್ಲಿ ಅರ್ಧಭಾಗದಷ್ಟು ಹಣವನ್ನು ಕೊಟ್ಟರೆ ಅವರ ಹೆಸರನ್ನು ಕಲ್ಲಿನಲ್ಲಿ ಕೆತ್ತಿಸಿ ಹಾಕುತ್ತೇವೆ. ಇದಕ್ಕೆ ಸಾರ್ವಜನಿಕರ ಸಹಕಾರ ಅಗತ್ಯ. ಇವತ್ತು ಶಾಲಾ ಕಾಲೇಜುಗಳ್ಲಲಿ ಬೆಂಚು, ಕುರ್ಚಿ, ಬೋರ್ಡುಗಳು ಸರಿಯಾಗಿಲ್ಲ ಎಂದು ಹಿಂದಿನ ಮಾನ್ಯ ವಿದ್ಯಾ ಸಚಿವರು ಹೇಳಿದರು. ಹಿಂದೆ ಶಾಲಾಕಾಲೇಜುಗಳಲ್ಲಿ ಬೆಟರ್‌ಮೆಂಟ್ ಕಮಿಟಿ ಎಂದು ಅವರೇ ನಡೆಸುತ್ತಿದ್ದರು. ಅದನ್ನು ನಾವು ಮುಂದುವರಿಸಿಕೊಂಡು ಬರುತ್ತಿದ್ದೇವೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:- ಬಜೆಟ್‌ನಲ್ಲಿ ಹೆಚ್ಚಿನ ಹಣವನ್ನು ಇಟ್ಟಿದ್ದೀರಾ ಎಂದು ನಾನು ತಮ್ಮನ್ನು ಕೇಳಿದೆ. ಪ್ರಾಥಮಿಕ ಶಾಲಾ ಕಟ್ಟಡಕ್ಕೆ ಎಷ್ಟು ಹಣವನ್ನು ಇಟ್ಟಿದ್ದೀರಿ? ಹೈಸ್ಕೂಲು ಕಟ್ಟಡಕ್ಕೆ ಎಷ್ಟು ಹಣವನ್ನು ಇಟ್ಟಿದ್ದೀರಿ? ಈ ಹಳೇ ಕಟ್ಟಡಗಳ ರಿಪೇರಿಗಾಗಿ ಎಷ್ಟು ಹಣವನ್ನು ಇಟ್ಟಿದ್ದೀರಿ ಎಂಬುದನ್ನು ಹೇಳಿ; ಅದು ಬಿಟ್ಟು ಹಿಂದಿನವರು ಮಾಡಿದ್ದನ್ನೇ ಮುಂದುವರೆಸಿಕೊಂಡು ಹೋಗುತ್ತಿದ್ದೇವೆಂದು ಏತಕ್ಕೆ ಹೇಳುತ್ತೀರಿ? ಈ ವರ್ಷ ಎರಡು ಸಾವಿರ ಹೈಸ್ಕೂಲ್ ಕಟ್ಟಡಗಳನ್ನು ಕಟ್ಟಿಸುವ ಸಲುವಾಗಿ ಮೂರುಕೋಟಿ ರೂಪಾಯಿಗಳನ್ನು ಇಟ್ಟಿದ್ದೇವೆ. ಅಥವಾ ಹತ್ತುಸಾವಿರ ಪೂರ್ವ ಪ್ರಥಮಿಕ ಶಾಲಾ ಕಟ್ಟಡಗಳನ್ನು ಕಟ್ಟಿಸುವ ಸಲುವಾಗಿ ಎಷ್ಟು ಹಣವನ್ನು ತೆಗೆದಿಟ್ಟಿದ್ದೇವೆಂದು ಹೇಳಿ.

ಶ್ರೀ ಬಿ. ರಾಚಯ್ಯ- ನಾನ್ ಪ್ಲಾನ್ಡ್ ಸ್ಕೀಂನಲ್ಲಿ ಪ್ರಾಥಮಿಕ ಶಾಲಾ ಕಟ್ಟಡಕ್ಕೋಸ್ಕರ ಹಿಂದಿನ ಸರ್ಕಾರದವರು 117 ಕೇಟಿ ರೂಪಾಯಿಗಳನ್ನು ಇಟ್ಟಿದ್ದರು. ಆದರೆ ನಾವು ಈ 136 ಕೋಟಿ ರೂಪಾಯಿಗಳನ್ನು ಇಟ್ಟಿದ್ದೇವೆ. ಈ ವರ್ಷ ನಾನ್ ಪ್ಲಾನ್ಡ್ ಸ್ಕೀಂಮ್‌ನಲ್ಲಿ ಕೂಡ ಇದಕ್ಕಾಗಿ 90 ಲಕ್ಷ ರೂಪಾಯಿಗಳನ್ನು ಇಟ್ಟಿದ್ದೇವೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ– ನೀವು ಇಟ್ಟಿರುವ 90 ಲಕ್ಷ ರೂಪಾಯಿ 900 ಕ್ಲಾಸ್ ರೂಮ್‌ಗಳೂ ಕೂಡ ಆಗುವುದಿಲ್ಲ. ಇದರಲ್ಲಿ ರಿಪೇರಿಗೂ ಹಣವನ್ನು ಕೊಟ್ಟರೆ 500 ರೂಮ್‌ಗಳೂ ಕೂಡ ಆಗುವುದಿಲ್ಲ.

ಶ್ರೀ ಬಿ. ರಾಚಯ್ಯ– ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಇವತ್ತಿನ ಪರಿಸ್ಥಿತಿಯಲ್ಲಿ ಇಷ್ಟನ್ನಾದರೂ ಖರ್ಚು ಮಾಡುವುದಕ್ಕೆ ಸಾಧ್ಯವೇ? ಎಂಬುದನ್ನು ನಾವು ಯೋಚನೆ ಮಾಡುತ್ತಿದ್ದೇವೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ– ತಾವು ದೊಡ್ಡ ಮನಸ್ಸು ಮಾಡಿ ಮುಖ್ಯ ಮಂತ್ರಿಗಳ ಜೊತೆ ಮಾತನಾಡಿ ಇನ್ನೂ 2-3 ಕೋಟಿ ರೂಪಾಯಿಗಳನ್ನು ತೆಗೆದುಕೊಂಡು ಹಂತ, ಹಂತವಾಗಿ ಮಾಡಿ. ಇದನ್ನು ಯೋಚನೆ ಮಾಡುವುದನ್ನು ಬಿಟ್ಟು ಹಿಂದಿನ ಸರ್ಕಾರದವರು ಮಾಡಲಿಲ್ಲ. ಹಿಂದಿನ ಸರ್ಕಾರದವರು ಮಾಡಲಿಲ್ಲ ಎಂದು ಹೇಳುವುದಕ್ಕೆ ಏಕೆ ಹೊರಟಿದ್ದೀರಿ?

ಶ್ರೀ ಬಿ. ರಾಚಯ್ಯ– ಈ ವರ್ಷ 65 ಲಕ್ಷದ ಜೊತೆಗೆ ಇನ್ನೂ 90 ಲಕ್ಷ ರೂಪಾಯಿಗಳನ್ನು ಖರ್ಚು ಮಾಡುತ್ತೇವೆಂದು ಹೇಳಿದ್ದೇವೆ. ಅಂದರೆ $1^1/_2$ ಕೋಟಿಗಿಂತಲೂ ಹೆಚ್ಚು ಹಣವನ್ನು ಖರ್ಚು ಮಾಡುತ್ತಿದ್ದೇವೆ. ಅಲ್ಲದೆ ಹಣವನ್ನು ಖರ್ಚು ಮಾಡುವಾಗ ಇಲಾಖೆಗಳ ಅವಶ್ಯಕತೆಗಳನ್ನು ನೋಡಿ ಮಾಡಬೇಕಾಗುತ್ತದೆ. ಈ ವರ್ಷ ಇಷ್ಟು ಖರ್ಚು ಮಾಡಿ. ಮುಂದಿನ ವರ್ಷ 17 ಕೋಟಿ ರೂಪಾಯಿಗಳ ಅಂದಾಜನ್ನು ತಯಾರು ಮಾಡುತ್ತೇವೆ. ಮುಂದಿನ ವರ್ಷ 2 ಸಾವಿರ ಶಾಲಾ ಕೊಠಡಿಗಳನ್ನು ಕಟ್ಟಿಸುವುದು. ಪೂರ್ವ ಪ್ರಾಥಮಿಕ ಪಾಠಶಾಲೆಗಳನ್ನು ಕಟ್ಟಿಸುವುದು, ಇನ್ನೂ ಮುಂತಾದ ನಾಲ್ಕಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ. ಇಂಥ ಯೋಜನೆ ಇಲ್ಲದಿರುವ ಕಡೆ ಹೊಸ ಯೋಜನೆಯನ್ನು ಮುಂದಿನ ವರ್ಷ ಸೇರಿಸಿಕೊಳ್ಳೋಣ.

ಇನ್ನು ಶಾಲಾ ಕಾಲೇಜುಗಳಲ್ಲಿ ಮಕ್ಕಳ ಹಾಜರಾತಿ ಬಗ್ಗೆ ಹೇಳುವುದಾದರೆ ಎಲ್ಲಾ ಮಕ್ಕಳಲ್ಲೂ ಬಡತನ ಜಾಸ್ತಿ ಇರುವುದರಿಂದ ರೈತರು ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳುಹಿಸದೆ ದೊಡ್ಡ ಮಕ್ಕಳಿದ್ದರೆ ಸಣ್ಣ ಮಕ್ಕಳನ್ನು ನೋಡಿಕೊಳ್ಳುವಂತೆ ಹೇಳುತ್ತಾರೆ. ಅಥವಾ ವ್ಯವಸಾಯ ಕೆಲಸವನ್ನು ನೋಡಿಕೊಳ್ಳಲು ಕಳುಹಿಸುತ್ತಾರೆ. ಇದರಿಂದಾಗಿ ಶಾಲೆಗಳಲ್ಲಿ ಮಕ್ಕಳ ಹಾಜರಾತಿ ಕಡಿಮೆಯಾಗುತ್ತಿದೆ ಎಂಬುದನ್ನು ಗಮನಿಸಿ ಇವರ ಹಾಜರಾತಿಯನ್ನು ಹೆಚ್ಚಿಸಲು ಮದ್ಯಾಹ್ನದ ಊಟವನ್ನು ಕೊಡುವುದು, ಶಿಕ್ಷಣದ ಗುಣಮಟ್ಟವನ್ನು ಹೆಚ್ಚುಮಾಡುವುದು ಮುಂತಾದ ಹಲವಾರು ಯೋಜನೆಗಳನ್ನು ನಾವು ಹಾಕಿಕೊಂಡಿದ್ದೇವೆ. ಇದರಲ್ಲಿ ಕೇವಲ 12 ಲಕ್ಷ ಮಕ್ಕಳಿಗೆ ಮಾತ್ರ ಕೊಡಲು ಸಾಧ್ಯವಾಗಿದೆ. ಆದರೆ ಶಾಲೆಗೆ ಹೋಗುವ ಎಲ್ಲಾ ಮಕ್ಕಳಿಗೂ ಸಂಪೂರ್ಣವಾಗಿ ಮಧ್ಯಾಹ್ನದ ಊಟವನ್ನು ಕೊಡಲು ಸಾಧ್ಯವಾಗುವುದಿಲ್ಲ. ಹಾಗೆ ಕೊಡಬೇಕಾದರೆ ಹೆಚ್ಚಿನ ಹಣ ಬೇಕಾಗುತ್ತದೆ. ತಮಿಳುನಾಡು ಮತ್ತು ಆಂಧ್ರದಲ್ಲಿ ಈ ರೀತಿ ಮಾಡುತ್ತಿರುವುದರಿಂದ ನೀವೂ ಏತಕ್ಕೆ ಮಾಡಬಾರದೆಂದು ಮಾನ್ಯ ಸದಸ್ಯರು ಕೇಳಿದರು. ಆದರೆ ನಾನು ಇಷ್ಟು ಮಾತ್ರ ಹೇಳಬಯಸುತ್ತೇನೆ. ಮುಂದಿನ ವರ್ಷ ಇನ್ನೂ ಹೆಚ್ಚು ಮಕ್ಕಳಿಗೆ ಊಟ, ಉಪಹಾರಗಳನ್ನು

ಕೊಡುವ ವ್ಯವಸ್ಥೆ ಮಾಡುತ್ತೇವೆ. ಆದರೆ ರಾಜ್ಯದಲ್ಲಿ ಶಾಲೆಗಳಿಗೆ ಹೋಗುವ ಮಕ್ಕಳಿಗೆಲ್ಲಾ ಊಟಕೊಡಲು ಸರ್ಕಾರಕ್ಕೆ ಕಷ್ಟವಾಗುತ್ತದೆ. ಈ ಮಧ್ಯಾಹ್ನದ ಊಟದ ವ್ಯವಸ್ಥೆಯಲ್ಲಿ ಸ್ವಲ್ಪ ನ್ಯೂನತೆಗಳು ಬಂದಿವೆ ಎಂದು ಹೇಳಿದರು. ಆಹಾರವನ್ನು ಕೊಡುವಾಗ ಊಟವನ್ನು ಹಾಕುವಾಗ ಕೆಲವು ತೊಂದರೆಗಳಾಗುತ್ತವೆ. ಆದ್ದರಿಂದ ಈಗ ನಾವು ಕೆಲವಾರು ಪಾಠಶಾಲೆಗಳನ್ನು ಸೇರಿಸಿ ಈ ಮಕ್ಕಳಿಗೆಲ್ಲಾ ಒಂದೇ ಕಡೆ ಅಡಿಗೆ ಮಾಡಿ ನಂತರ ಸರಬರಾಜು ಮಾಡುವ ವ್ಯವಸ್ಥೆಯನ್ನು ಮಾಡಿದ್ದೇವೆ. ಸಂಬಂಧ ಪಟ್ಟ ಶಾಲೆಯ ಉಪಾಧ್ಯಾಯರುಗಳು ಹತ್ತಿರದಲ್ಲಿರುವ ಬಸ್ ನಿಲ್ದಾಣಕ್ಕೆ ಬಂದು ಊಟವನ್ನು ಮಕ್ಕಳಿಗೆ ತೆಗೆದುಕೊಂಡು ಹೋಗುವಂತೆ ಮಾಡಿದ್ದೇವೆ. ಆದರೆ ಈ ಊಟದ ಸಾಗಾಣಿಕೆಯನ್ನು ಸರ್ಕಾರವೇ ವಹಿಸಿಕೊಳ್ಳಬೇಕೆಂದು ಹೇಳಿದರು. ಇದು ಎಷ್ಟರ ಮಟ್ಟಿಗೆ ಸಾಧ್ಯ ಎಂಬುದನ್ನು ಪರಿಶೀಲಿಸಿ ನೋಡುತ್ತೇವೆ.

ಇದುವರೆಗೆ ನಮಗೆ ಕೇಂದ್ರ ಸರ್ಕಾರದಿಂದ ಏನು ಆಹಾರ ಬರುತ್ತಿತ್ತು ಅದು ಇವತ್ತು ಕಡಿಮೆಯಾಗಿರುವುದರಿಂದ ನಾವೂ ಕೂಡ ಮಕ್ಕಳಿಗೆ ಸ್ವಲ್ಪ ಕಡಿಮೆ ಮಾಡಿದ್ದೇವೆ. ನಮ್ಮ ಸರ್ಕಾರದ ವತಿಯಿಂದ ಪೌಷ್ಟಿಕ ಆಹಾರವನ್ನು ಮಕ್ಕಳಿಗೆ ಕೊಡುವ ಸಲುವಾಗಿ ಅದನ್ನು ತಯಾರಿಸಲು ನಾಲ್ಕಾರು ಕಾರ್ಖಾನೆಗಳವರಿಗೆ ಹೇಳಿದ್ದೇವೆ. ಮತ್ತೆ ಕೆಲವು ಕಡೆ ಬ್ರೆಡ್ಡನ್ನು ಕೂಡ ತಯಾರಿಸಿ ಸರಬರಾಜು ಮಾಡಲು ವ್ಯವಸ್ಥೆ ಮಾಡಿದ್ದೇವೆ. ಇಷ್ಟೇ ಅಲ್ಲದೆ ಸಾರ್ವಜನಿಕರಿಂದಲೂ ಕೂಡ ಏನಾದರೂ ಸಹಾಯ ಸಿಕ್ಕಿದರೆ ತೆಗೆದುಕೊಳ್ಳುವಂತೆ ಬೆಟರ್‌ಮೆಂಟ್ ಕಮಿಟಿಯವರಿಗೆ ಹೇಳಿದ್ದೇವೆ. ಬಡಮಕ್ಕಳಿಗೋಸ್ಕರ ಸಾರ್ವಜನಿಕರಿಂದ ಬರಬಹುದಾದ ಎಲ್ಲಾ ರೀತಿಯ ಸೌಲಭ್ಯಗಳನ್ನು ತೆಗೆದುಕೊಂಡು ಹಂಚಲು ವ್ಯವಸ್ಥೆ ಮಾಡುತ್ತಿದ್ದೇವೆ. ಎಲ್ಲಕ್ಕಿಂತ ಹೆಚ್ಚಾಗಿ ಕೇವಲ ಹರಿಜನರ ಮಕ್ಕಳಿಗೇ ಎಲ್ಲಾ ಸೌಲಭ್ಯಗಳನ್ನು ಕೊಟ್ಟರೆ ಬೇರೆ ಬಡ ಮಕ್ಕಳಿಗೆ ಅನ್ಯಾಯ ಮಾಡಿದಂತಾಗುತ್ತದೆ. ಆ ರೀತಿ ಮಾಡಿದರೆ ಆ ಮಕ್ಕಳ ಮನಸ್ಸಿನಲ್ಲೂ ತಪ್ಪು ಕಲ್ಪನೆ ಬರುತ್ತದೆ. ಅದು ಬರದಂತೆ ನೋಡಿಕೊಳ್ಳುವ ಸಲುವಾಗಿ ಪ್ರಾಥಮಿಕ ಹಂತದಲ್ಲಿ ಹರಿಜನ ಮಕ್ಕಳು ಮತ್ತು ಬಡಮಕ್ಕಳಿಗೆ ಅದರಲ್ಲೂ ಹಿಂದುಳಿದ ಪ್ರದೇಶದಲ್ಲಿರುವ ಮಕ್ಕಳಿಗೆ ಏನು ಸೌಲಭ್ಯಗಳನ್ನು ಕೊಡಲು ಸಾಧ್ಯವಿದೆ ಎಂಬುದನ್ನು ನೋಡಿ ಅದನ್ನೆಲ್ಲಾ ಮುಂದಿನ ವರ್ಷದಿಂದ ಕೊಡುವ ವ್ಯವಸ್ಥೆ ಮಾಡುತ್ತಿದ್ದೇವೆ.

ಇನ್ನು ಶಿಕ್ಷಣ ಸುಧಾರಣೆ ಮಾಡಿ ಹಾಜರಾತಿಯನ್ನು ಹೆಚ್ಚಿಸುವ ಕಾರ್ಯಕ್ರಮವನ್ನೂ ಕೂಡ ನಾವು ಹಾಕಿಕೊಂಡಿದ್ದೇವೆ. ಅಂದರೆ 1ನೇ ತರಗತಿಯಿಂದ 7ನೇ ತರಗತಿಯವರೆಗೆ ಹೋಗುವ ಹೊತ್ತಿಗೆ ಬಹಳ ಜನ ವಿದ್ಯಾರ್ಥಿಗಳು ಶಾಲೆಯನ್ನು ಬಿಡುತ್ತಿದ್ದುದನ್ನು ಗಮನಿಸಿ ಈಗ 21 ತಾಲ್ಲೂಕುಗಳಲ್ಲಿ ಹೆಚ್ಚಿನ ಉಪಾಧ್ಯಾಯರನ್ನು ಹಾಕುವುದು ಮಧ್ಯಾಹ್ನ ಊಟ, ಉಪಾಹಾರವನ್ನು ಕೊಡುವುದು, ಬೇರೆ ಕಡೆಯಿಂದ ಉಪಾಧ್ಯಾಯರನ್ನು ಕರೆಸಿ ಪಾಠ ಹೇಳಿಸಿಕೊಡುವುದು ಮುಂತಾದುವನ್ನು ಮಾಡುತ್ತಿರುವುದರಿಂದ ಸುಮಾರು 10-11 ಪರ್ಸೆಂಟ್ ಮಕ್ಕಳ ಹಾಜರಾತಿ ಶಾಲೆಗಳಲ್ಲಿ ಜಾಸ್ತಿಯಾಗಿದೆ. ಇದನ್ನು ನೋಡಿದ ಮೇಲೆ ಇನ್ನೂ 20 ತಾಲ್ಲೂಕುಗಳಿಗೆ ಈ ಯೋಜನೆಯನ್ನು ವಿಸ್ತರಣೆ ಮಾಡಲಿಚ್ಛಿಸಿದ್ದೇವೆ. ಇನ್ನು ಮುಂದೆ

ಪ್ರತಿವರ್ಷವೂ ಈ ಯೋಜನೆಯನ್ನು ಮುಂದುವರೆಸಿಕೊಂಡು ಹೋಗುವುದಲ್ಲದೆ ಪಾಠ ಪ್ರವಚನಗಳ ಗುಣಮಟ್ಟದ ಕಡೆಗೆ ಗಮನ ಹೆಚ್ಚು ಕೊಡುವುದಲ್ಲದೆ, ಶಾಲಾ ಕಾಲೇಜುಗಳಿಗೆ ಪೀಠೋಪಕರಣಗಳನ್ನೊದಗಿಸುವುದರ ಜೊತೆಗೆ ಅಲ್ಲಿ ಓದುವ ಎಲ್ಲಾ ಹರಿಜನ ಮಕ್ಕಳಿಗೂ 7ನೇ ತರಗತಿಯವರೆಗೂ ಸಮವಸ್ತ್ರವನ್ನು ಕೊಡುವ ವ್ಯವಸ್ಥೆಯನ್ನು ಮುಂದಿನ ವರ್ಷದಿಂದ ಮಾಡುತ್ತೇವೆ. ಆದ್ದರಿಂದ ಅನೇಕ ವರ್ಷಗಳಿಂದ ಪಾಠಶಾಲೆಗಳಲ್ಲಿ ಓದುವಂಥ ಎಲ್ಲಾ ಹರಿಜನ ಹೆಣ್ಣು ಮಕ್ಕಳಿಗೆ ಸಮವಸ್ತ್ರ ಕೊಡುವಂಥ ಯೋಜನೆಯನ್ನು ಇಟ್ಟುಕೊಂಡು, ಏಳನೇ ತರಗತಿಯಲ್ಲಿ ಓದುವಂಥ ಎಲ್ಲಾ ಹರಿಜನ ಮಕ್ಕಳಿಗೆ ಬಟ್ಟೆಗಳನ್ನು ಕೊಡುವಂತಹ ವ್ಯವಸ್ಥೆಯನ್ನು ಈಗ ಮಾಡಿದ್ದೇವೆ. ಮತ್ತೆ ಈಗ ಹರಿಜನರಲ್ಲದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ಅವರ ಪ್ರತಿಭೆಯನ್ನು ಗುರುತಿಸಿ ಹೆಚ್ಚಿಸಿದ್ದೇವೆ. ಅದರಂತೆ 50 ರಿಂದ 75 ರೂಪಾಯಿಗಳ ವಿದ್ಯಾರ್ಥಿ ವೇತನವನ್ನು ಕೊಡಲು ನಾವು ನಿರ್ಧರಿಸಿದ್ದೇವೆ. 50 ರೂಪಾಯಿಗಳಿಂದ 75 ರೂಪಾಯಿಗಳಿಗೆ ಹೆಚ್ಚಿಸಿರುವುದರಿಂದ ಒಂದು ರೀತಿಯ ಉತ್ಸಾಹ ಮಕ್ಕಳಲ್ಲಿ ಉಂಟಾಗಿ ಹೆಚ್ಚಿನ ಮಕ್ಕಳು ಶಾಲೆಗೆ ಬರುವುದಕ್ಕೆ ಆರಂಭಿಸಿದ್ದಾರೆ. ಸಮಾಜದಲ್ಲಿ ಹಿಂದುಳಿದಿರುವವರ ವಿಷಯದಲ್ಲಿ ಹೆಚ್ಚಿನ ಅನುಕಂಪ ಇರುವಂತಹವರು ಸಾಧ್ಯವಾದ ಮಟ್ಟಿಗೆ ಅವರ ಒಂದು ಪ್ರಬಾವ ಬೀರಿ ಮಕ್ಕಳು ಶಾಲೆಗೆ ಹೋಗುವಂತೆ ಮಾಡಬೇಕೆಂದು ಕೋರಿಕೊಳ್ಳುತ್ತೇವೆ. ಕೇವಲ ಉಪಾಧ್ಯಾಯರಿಂದಲೇ ಎಲ್ಲವೂ ಆಗುತ್ತದೆ ಎಂದು ಭಾವಿಸಿಕೊಂಡರೆ ತಪ್ಪಾಗುತ್ತದೆ. ಉಪಾಧ್ಯಾಯರಂತೆ ಡಿಪಾರ್ಟ್‌ಮೆಂಟಿನ ಎಲ್ಲರೂ ನಿಷ್ಠೆಯಿಂದ ತಮ್ಮ ಮಕ್ಕಳು ಶಾಲೆಗೆ ಹೋಗಿ 28 ಇಂಜಿನಿಯರಿಂಗ್ ಕಾಲೇಜುಗಳು ಏನು ಇವೆ, ಅವುಗಳಿಂದ 20% ಸೀಟ್‌ಗಳನ್ನು ಸರ್ಕಾರಕ್ಕೆ ಕೊಡಬೇಕೆಂದು ಮಾಡಿದ್ದಾರೆ. ಆದರೂ ಸಹ ಅವರು ಇದನ್ನು ಒಪ್ಪದೆ ನ್ಯಾಯಾಲಯದ ಮುಂದೆ ಹೋಗಿ ವಾದ ಮಾಡಿ ಕೊನೆಗೆ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧಿಪತಿಗಳು ಸಲಹೆಯನ್ನು ಕೊಟ್ಟ ಮೇಲೆ ನಾವು 10% ಇನ್‌ಟೇಕನ್ನು ಕೊಡುವುದಕ್ಕೆ ಒಪ್ಪಿಕೊಂಡ ಮೇಲೆ ಅವರು 20% ತೆಗೆದುಕೊಳ್ಳುವುದಕ್ಕೆ ಅವಕಾಶವಾಗುತ್ತದೆಂದು ಹೇಳಿದರು. ಈ ಸಲಹೆಯ ಮೇಲೆ ಇಂದು 10% ಇನ್‌ಟೇಕ್ ಹೆಚ್ಚು ಮಾಡಿದ್ದೇವೆ. 20% ಮೆರಿಟ್ ಸೀಟ್ ಬಗ್ಗೆ ಭರ್ತಿ ಮಾಡುವ ಅವಕಾಶ ಇರುವಂಥ ಕಾಲದಲ್ಲಿ ಸುಮಾರು ಒಂದು ಸಾವಿರ ವಿದ್ಯಾರ್ಥಿಗಳಿಗೆ ಪ್ರವೇಶ ಅವಕಾಶವನ್ನು ಮಾಡಲು ಸಾಧ್ಯವಾಯಿತು.

ಅದೇ ರೀತಿ ಕೂಡ ಹಿಂದಿನ ಸರ್ಕಾರ ಏನು ಅನುಸರಿಸಿಕೊಂಡು ಬಂದಿದೆ ಎನ್ನುವುದನ್ನು ನಾವು ನೇಡಿದಾಗ, ವಿಶ್ವವಿದ್ಯಾನಿಲಯದವರು ಈ ಕಾಲೇಜುಗಳಿಗೆ ಪರವಾನಗಿಯನ್ನು ಕೊಡಬೇಕು ಎಂದು ಹೇಳಿ ಶಿಫಾರಸ್ಸು ಮಾಡಿದ್ದಾರೆಯೇ ಹೇಗೆ? ರಾಜ್‌ಕಮಿಟಿಯಲ್ಲಿ ಹೇಳಿರುವ ರೀತಿ ಕೆಲವು ವಿಷಯಗಳಲ್ಲಿ ನ್ಯಾಯಯುತವಾಗಿ ಕಾಲೇಜುಗಳನ್ನು ಕೊಡಬೇಕೆಂದು ಹೇಳುವಾಗ ಅವರಿಗೆ ಅಗತ್ಯತೆಯನ್ನು ನೋಡಿ 11 ಕಾಲೇಜುಗಳನ್ನು ಕೊಟ್ಟಿರುವಂಥ ಕಾಲದಲ್ಲಿ ಸರ್ಕಾರ ಅಧಿಕಾರ ತೆಗೆದುಕೊಂಡು ಅದನ್ನೆಲ್ಲಾ ರ್‍ಯಾಟಿಫೈ ಮಾಡುವುದಕ್ಕೋಸ್ಕರರಾಗಿ ಸುಗ್ರೀವಾಜ್ಞೆಯನ್ನು ಹೊರಡಿಸಲಾಯಿತು. ಇದರಿಂದಾಗಿ ಹೆಚ್ಚಿನ ಜನರನ್ನು ಮೆರಿಟ್ ಮೇಲೆ ತೆಗೆದುಕೊಳ್ಳುವುದಕ್ಕೆ

ಸಾಧ್ಯವಾಯಿತೆಂದು ನಮ್ರತೆಯಿಂದ ತಿಳಿಸಲು ಇಚ್ಛೆ ಪಡುತ್ತೇನೆ. ಆ ಹಿಂದಿನ ಸರ್ಕಾರದವರು ಇಂಜಿನಿಯರ್ ಕಾಲೇಜುಗಳಲ್ಲಿ ಶಿಫಾರಸ್ಸು ಮಾಡಿದ ಸೀಟುಗಳ ಮೇಲೆ ಸುಮಾರು ಸೀಟುಗಳನ್ನು ಅವರಿಗೆ ಹೆಚ್ಚಿಗೆ ಕೊಟ್ಟುಬಿಟ್ಟರು: ಇದನ್ನು ನಾವು ಕೊಟ್ಟಿಲ್ಲ ಇಂದು ಸರ್ಕಾರ ಇಂತಿಂಥ ಕಾಲೇಜುಗಳಿಗೆ ಇಷ್ಟಿಷ್ಟು ಎಂದು ಸರ್ಕಾರ ತೀರ್ಮಾನ ತೆಗೆದುಕೊಳ್ಳುತ್ತದೆ. ಅದರ ಪ್ರಕಾರ 9 ಸಾವಿರ ಚಿಲ್ಲರೆ ಅಭ್ಯರ್ಥಿಗಳು ಪ್ರವೇಶ ಪಡೆದಿದ್ದಾರೆ. 1300 ಜನಕ್ಕಿಂತ ಹೆಚ್ಚಿಗೆ ನಾವು ಕೊಟ್ಟಿಲ್ಲ ಮತ್ತು ಈ ವಿಚಾರವಾಗಿ ಟೆಕ್ನಿಕಲ್ ಕಮಿಟಿಯವರನ್ನು ಎಲ್ಲಾ ಕಾಲೇಜುಗಳಿಗೆ ಕಳುಹಿಸಿ ಇರುವ ಇನ್‌ಫಾರ್ಮ್‌ನ ಸ್ಟಕ್ಚರ್ ಏನು ಇದೆ, ಅದನ್ನೆಲ್ಲಾ ಅವರು ತಿಳಿದುಕೊಂಡು ಬಂದಿದ್ದಾರೆ. ಮತ್ತು ವರದಿಯನ್ನು ಸಲ್ಲಿಸಿದ್ದಾರೆ. ವರದಿ ಪ್ರಕಾರ ನಾವು ಹಿಂದೆ ವಿಶ್ವವಿದ್ಯಾನಿಲಯದವರು ಏನು ಶಿಫಾರಸ್ಸು ಮಾಡಿದ್ದರು ಅದನ್ನು ಅನುಸರಿಸಿ ಕೊಟ್ಟಿದ್ದೇವೆ. ಈಗ ಕೊಟ್ಟಿರುವ 10% ಏನು ಇದೆ ಅದಕ್ಕಿಂತ ಹೆಚ್ಚಾಗುವುದಿಲ್ಲ. ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳಿಗೆ ತೊಂದರೆಯಾಗಬಾರದು. ಕ್ಯಾಪಿಟೇಷನ್ ಫೀಸ್ ತೆಗೆಯಬೇಕು, ಬೇರೆಯವರಿಂದ ಹಣವನ್ನು ವಸೂಲಿ ಮಾಡಿಕೊಂಡರೂ ಸಹ ನಮ್ಮ ವಿದ್ಯಾರ್ಥಿಗಳಿಗೆ ಪುಕ್ಕಟೆ ಆಗಬೇಕೆಂದು ಈ ಸುಗ್ರೀವಾಜ್ಞೆಯನ್ನು ತಂದೆವು. ಐದು ವರ್ಷಗಳ ಪ್ರವೇಶ ಕೋರಿಬರುವಂತಹ ವಿದ್ಯಾರ್ಥಿಗಳು ಏನು ಇದ್ದಾರೆ. ಕರ್ನಾಟಕ ರಾಜ್ಯದಲ್ಲಿ ಓದುವಂತಹ ಕನ್ನಡಿಗರಿಗೆಲ್ಲರಿಗೂ ಪ್ರವೇಶದ್ವಾರೆಯೇ ಇಲ್ಲವೇ ಎನ್ನುವುದನ್ನು ನೋಡುವಂಥ ಕೆಲಸವನ್ನು ಅವರು ಮಾಡಿದ್ದಾರೆಂದು ನಾನು ಭಾವಿಸಿಕೊಂಡಿದ್ದೇನೆ. ಒಟ್ಟಿನಲ್ಲಿ ಈ ವರ್ಷ ಪ್ರೈಮರಿ ಶಾಲೆ, ಪೂರ್ವ ಪ್ರೈಮರಿ ಶಾಲೆಗಳ ಬಗ್ಗೆ ಒಂದು ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ಅದಕ್ಕೆ ಯಾವ ರೀತಿ ಆದ್ಯತೆಯನ್ನು ಕೊಡಬೇಕು ಎಂದು ಹೇಳಿರುತ್ತಾರೋ ಅದನ್ನು ನಾನು ಒಪ್ಪುತ್ತೇನೆ. ಮೇಲಾಗಿ ಹಣಕಾಸುಗಳನ್ನು ಒದಗಿಸುವುದಕ್ಕೆ ಮಕ್ಕಳ ಹಿತದೃಷ್ಟಿಯಿಂದ ಪ್ರಯತ್ನ ಮಾಡುತ್ತೇನೆ. ಈ ವರ್ಷ ಕೊಟ್ಟಿರುವಂಥ ಹಣ ಉಳಿಯುವ ಹಾಗೆ ಹೆಚ್ಚು ಖರ್ಚು ಮಾಡುವುದಕ್ಕೆ ಅವಕಾಶ ಮಾಡಿದ್ದೇವೆ.

ಇನ್ನು ಪಠ್ಯ ಪುಸ್ತಕಗಳ ಬಗ್ಗೆ ಕಂಡು ಬಂದಿರುವ ಲೋಪದೋಷಗಳನ್ನು ಸರಿಮಾಡಲಿಕ್ಕೆ ಈಗಾಗಲೇ ಕ್ರಮ ತೆಗೆದುಕೊಳ್ಳುವುದಕ್ಕೆ ಹೇಳಿದ್ದೇನೆ. ಹಳ್ಳಿಗಳಲ್ಲಿರುವ ಶಾಲೆಗಳಿಗೆ ಕೂಡ ಗ್ರಂಥಾಲಯವನ್ನು ಕೊಡಬೇಕೆಂದು ಮಾನ್ಯ ಸದಸ್ಯರು ಕೇಳಿರುವಂತಹದನ್ನು ಕೊಡಬೇಕೆಂದು ಯೋಚನೆಯನ್ನು ಕೂಡ ಮಾಡಿರುತ್ತೇವೆ. ಕೇವಲ ಪಟ್ಟಣಗಳಲ್ಲಿ ಮಾತ್ರವಲ್ಲ ಪ್ರತಿಯೊಂದು ಹಳ್ಳಿಯಲ್ಲಿಯೂ ಕೂಡ ಒಂದು ಗ್ರಂಥಾಲಯ ಇರಬೇಕೆಂದು ಅದಕ್ಕೋಸ್ಕರವಾಗಿ ವಿಶೇಷವಾದಂಥ ಒಂದು ಕಾರ್ಯಕ್ರಮವನ್ನು ನಾವು ಹಾಕಿಕೊಂಡಿದ್ದೇವೆ. ಕೊನೆಯದಾಗಿ ಈ ಒಂದು ಶಾಲೆಗಳ ವಿಷಯದಲ್ಲಿ ಇಷ್ಟೊಂದು ಕಳಕಳಿಯನ್ನು ವ್ಯಕ್ತ ಪಡಿಸಿ ಎಲ್ಲರೂ ಕೂಡ ಏಕಕಂಠದಿಂದ ಪ್ರಾಥಮಿಕ ಶಾಲೆಗಳಿಗೆ ಮತ್ತು ಪ್ರೌಢ ಶಾಲೆಗಳಿಗೆ ಹೆಚ್ಚಿನ ಹಣವನ್ನು ಕೊಡಲು ಒಪ್ಪಿಗೆ ಕೊಡುತ್ತೀರೆಂದು ಭಾವಿಸಿಕೊಂಡಿದ್ದೇನೆ. ಕೆಲವು ಮಾನ್ಯ ಸದಸ್ಯರುಗಳು ಎರಡನೆಯ ದಿವಸ ಮಾಡಿದಂಥ ಭಾಷಣಗಳನ್ನು ಕೇಳಿದ್ದೇನೆ. ಮಾನ್ಯ ವೀರಪ್ಪಮೊಯಿಲಿ ಅವರಿಂದ ಹಿಡಿದು ಕೊನೆಯ ಸದಸ್ಯರವರೆಗೂ ಅವರು ಏನು ವ್ಯಕ್ತಮಾಡಿದ್ದಾರೆ ಅದನ್ನು ನೋಡಿದಾಗ ನನಗೆ ಹೆಚ್ಚು ಕಡಿಮೆ

ಖೇದವಾಯಿತೆಂದು ಹೇಳಿದರೆ ತಪ್ಪಾಗಲಾರದು. ರಾಜ್ ಕಮಿಟಿಯ ವರದಿಯನ್ನು ತರಿಸಿ ಸರ್ಕಾರದವರು 1981ನೇ ಇಸವಿಯಲ್ಲಿ ಒಂದು ಆರ್ಜ್ಞೆಯನ್ನು ಹೊರಡಿಸಿ ಕ್ಯಾಪಿಟೇಷನ್ ಫೀಜನ್ನು ಐದು ವರ್ಷಗಳ ಕಾಲಕಲೆಕ್ಟ್ ಮಾಡುವಂತೆ ಹೇಳಿ ಒಂದು ಸುಗ್ರೀವಾಜ್ಞೆಯನ್ನು ಹೊರಡಿಸಿದರು. ಅದರ ಮೇಲೆ ಖಾಸಗೀ ಶಾಲೆಗಳವರು ನ್ಯಾಯಾಲಯಕ್ಕೆ ಹೋಗಿ ದಾವೆ ಹಾಕಿದರು. ನಾವು ಬಂದ ಮೇಲೆಯೂ ಕೂಡ ಹಾಗೆಯೇ ನಡೆಯುತ್ತಿದ್ದನ್ನು ನೋಡಿ ರಾಜ್‌ಕಮಿಟಿಯ ಆಧಾರದ ಮೇಲೆ ಮಾನ್ಯ ಮುಖ್ಯಮಂತ್ರಿಗಳು ಇನ್ನು ಐದು ವರ್ಷಗಳು ಈ ಒಂದು ತಲೆಗಂದಾಯ ಹಾಕುವಂತಹದು ವಿದ್ಯಾರ್ಥಿಗಳ ಮೇಲೆ ಏನು ಇದೆ, ಅದನ್ನು ಹಂತ, ಹಂತವಾಗಿ ತೆಗೆದುಹಾಕಬೇಕೆಂದು ಹೇಳಿರುತ್ತಾರೆ. ಅದನ್ನು ಅನುಸರಿಸಿ ಇಂದು ಸರ್ಕಾರದವರು ಒಂದು ಸುಗ್ರೀವಾಜ್ಞೆಯನ್ನು ಹೊರಡಿಸಿದ್ದಾರೆ. ಇದರಿಂದ ನಮ್ಮಲ್ಲಿರುವಂತಹ ಎಲ್ಲಾ ಖಾಸಗೀ ಮತ್ತು ಸರ್ಕಾರಿ ಶಾಲೆಗಳನ್ನು 27 ಶಾಲೆಗಳು ಸರ್ಕಾರದ ಗ್ರಾಂಟನ್ನು ಪಡೆದಿಲ್ಲ. ಸರ್ಕಾರವೂ ಕೂಡ ಯಾವ ಸಹಾಯವನ್ನು ಕೊಟ್ಟಿಲ್ಲ. ಅವಕಾಶ ಕೊಡುವ ದೃಷ್ಟಿಯಿಂದ ಈ ಆದೇಶವನ್ನು ವಿಸ್ತಾರಮಾಡಿ ಮುಂದೆ ಕನ್ನಡಿಗರಿಗೆ ಯಾವುದೇ ವಿಧ್ಯಾಭ್ಯಾಸದ ಕಾಲೇಜುಗಳಲ್ಲಾಗಲಿ, ಅಥವಾ ಟೆಕ್ನಿಕಲ್ ಕಾಲೇಜುಗಳಲ್ಲಾಗಲಿ ಆದೇಶಾನುಸಾರವಾಗಿ ವಿದ್ಯಾರ್ಥಿಗಳಿಗೆ ಪ್ರವೇಶ ಸಿಕ್ಕುವಂತೆ ಮಾಡಿದ್ದೇವೆ. ಬಹುಶಃ ಈ ವರ್ಷ ಹಿಂದಿನ ವರ್ಷಕ್ಕಿಂತ ಹೆಚ್ಚಿಗೆ ಸಿಕ್ಕಿದೆ, ಹಂತ ಹಂತವಾಗಿ ಅಂದರೆ 20% ಮುಂದಿನ ವರ್ಷ 40% ಅದಕ್ಕೆ ಮುಂದಿನ ವರ್ಷ 60-80% ಈ ರೀತಿ ತೆಗೆದುಕೊಂಡು ಹೋಗಿಕೊನೆಗೆ 90% ಗೆ ತರಬೇಕೆಂದು ಇದೆ.

ರಾಜ್‌ಕಮಿಟಿ ವರದಿಯನ್ನು ಅನುಸರಿಸಿ ಕರ್ನಾಟಕ ರಾಜ್ಯದಲ್ಲಿ ಇರುವ ವಿದ್ಯಾರ್ಥಿಗಳಿಗೆ ಅನುಕೂಲವಾಗಲಿ ಎನ್ನುವ ದೃಷ್ಟಿಯಿಂದ ಸರ್ಕಾರ ತಂದಿರುವಂಥ ಈ ಸುಗ್ರೀವಾಜ್ಞೆಯನ್ನು ವಿದ್ಯಾರ್ಥಿಗಳು ಮೆಚ್ಚಿಕೊಂಡಿರುತ್ತಾರೆ. ಮತ್ತು ಅವರ ತಂದೆ ತಾಯಿಗಳೂ ಕೂಡ ಮೆಚ್ಚಿ ಕೊಂಡಿರುತ್ತಾರೆ. ಇದೇ ಸಂದರ್ಭದಲ್ಲಿ ಈ ಕಾಲೇಜುಗಳನ್ನು ರಾಷ್ಟ್ರೀಕರಣ ಮಾಡಬೇಕೆಂಬ ವಿಚಾರವನ್ನು ಮಾನ್ಯ ಸದಸ್ಯರು ಹೇಳಿರುತ್ತಾರೆ. ಅದೇ ರೀತಿ ನನಗೂ ಅಭಿಪ್ರಾಯವಿರುತ್ತದೆ ಅದರಲ್ಲಿ ನನ್ನದೇನೂ ಭಿನ್ನಾಭಿಪ್ರಾಯವಿಲ್ಲ. ಆದರೆ ಇದು ಹೇಳುವಷ್ಟು ಸುಲಭವಲ್ಲ. ಒಂದು ವೇಳೆ ಕೇಂದ್ರ ಸರ್ಕಾರದವರು ಏನಾದರೂ ಇಷ್ಟು ಕೋಟಿ ರೂಪಾಯಿಗಳನ್ನು ಕೊಡುತ್ತೇವೆ. ಈ ಕ್ಯಾಫಿಟೇಷನ್ ಫೀ ತೆಗೆಯಿರಿ ಎಂದು ತಮ್ಮ ಒಂದು ಪ್ರಭಾವವನ್ನು ಬೀರಿಕೊಟ್ಟರೆ I will be the first person to accept it with gratefulness. ಇಲ್ಲಿರುವಂಥ ವಿಷಯವೆಂದರೆ ನಮಗೆ 18 ಕೋಟಿ ರೂಪಾಯಿಗಳು ಖರ್ಚಿಗೆ ಬೇಕಾಗುತ್ತದೆ. ಪರಿಹಾರಕೊಡುವುದು ಬೇರೆ. 90 ಕೋಟಿ ರೂಪಾಯಿಗಳು ಇತರೇ ಬೇರೆ ಬೇರೆ ಖರ್ಚಿಗೆ ಬೇಕಾಗುತ್ತದೆ. ಇಷ್ಟು ದುಡ್ಡು ಕೊಡುವುದಾದರೆ ಇಂದು ಇದನ್ನು ನಾನು ಸ್ವಾಗತ ಮಾಡುತ್ತೇವೆ. ಮತ್ತು ಇವುಗಳನ್ನು ರಾಷ್ಟ್ರೀಕರಣ ಮಾಡಲು ಏನು ಮಾಡಬೇಕೋ ಅದನ್ನು ಮಾಡುತ್ತೇವೆ. ಪ್ರೈಮರಿ ಶಾಲೆಗಳನ್ನೂ ಸಹ ಏತಕ್ಕೆ ರಾಷ್ಟ್ರೀಕರಣ ಮಾಡಬಾರದೆಂದು ಕೆಲವರು ಕೇಳಿದ್ದಾರೆ. ಇವುಗಳನ್ನು ನಿಯಂತ್ರಣ ಮಾಡುವುದಕ್ಕಾಗಿ ನಾವು ಒಂದು ಮಸೂದೆಯನ್ನು ತಂದಿದ್ದೇವೆ. ಇದು ಇಲ್ಲಿ ವಿವರವಾದಂಥ ಚರ್ಚೆಗೆ

ಬರುವುದರಿಂದ ನಾನು ಅದರ ಬಗ್ಗೆ ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ. ಈಗ ಖಾಸಗಿಯವರು ಎಷ್ಟು ಶಾಲೆಗಳನ್ನು ನಡೆಸುತ್ತಿದ್ದಾರೆ ಮತ್ತು ಎಲ್ಲಾ ಶಾಲೆಗಳಿಗೂ ಅನುಮತಿ ಪಡೆದಿದ್ದಾರೆಯೇ ಅಥವಾ ಇಲ್ಲವೇ ಹಾಗೂ ರಿಜಿಸ್ಟ್ರೇಷನ್ ಮಾಡಿಸಿದ್ದಾರೆಯೇ ಅಥವಾ ಇಲ್ಲವೇ ಎಂಬುದನ್ನೆಲ್ಲಾ ವಿವರವಾಗಿ ನೋಡಲು 3-4 ಕಮಿಟಿಗಳನ್ನು ರಚನೆ ಮಾಡುವ ವಿಚಾರ ಈ ಮಸೂದೆಯಲ್ಲಿದೆ. ಈಗ ಇದು ವಿವರವಾದಂತಹ ಪರಿಶೀಲನೆಗಾಗಿ ಜಾಯಿಂಟ್ ಸೆಲೆಕ್ಟ್ ಕಮಿಟಿ ಮುಂದೆ ಹೋಗಿದೆ.

ಶ್ರೀ ವೀರಪ್ಪಮೊಯಿಲಿ ಅವರು ಕ್ಯಾಪಿಟೇಷನ್ ಫೀ ವಿಚಾರ ಇಲ್ಲಿ ಪ್ರಸ್ತಾಪ ಮಾಡಿದ್ದರಿಂದ ಈ ಬಗ್ಗೆ ರಾಜ್‌ಕಮಿಟಿಯಲ್ಲಿ ಏನು ಹೇಳಿದೆ ಎಂಬುದನ್ನು ಹೇಳಬೇಕಾಯಿತು. ಈ ಕ್ಯಾಪಿಟೇಷನ್ ಫೀ ವಿಚಾರದಲ್ಲಿ ಖಾಸಗೀ ಕಾಲೇಜುಗಳನ್ನು ನಡೆಸುವಂತಹ ಮಾಲೀಕರ ಜೊತೆ ಈ ಸರ್ಕಾರ ಶಾಮೀಲಾಗಿದೆ ಎಂದು ಏನು ಅವರು ಹೇಳಿದರು. ಇದನ್ನು ಅವರ ಹಿಂದಿನವರ ಅನುಭವದಿಂದ ಹೇಳಿರಬಹುದು. ಆದರೆ ನಮಗೆ ಇನ್ನೂ ಆ ಅನುಭವ ಬಂದಿಲ್ಲ. ಈ ವಿದ್ಯಾ ಇಲಾಖೆಯಲ್ಲಿರುವಂತಹ ಲೋಪ ದೋಷಗಳನ್ನು ಹಾಗೂ ಇರಬಹುದಾದ ಅಪ್ರಮಾಣಿಕತೆಯನ್ನು ಹೋಗಲಾಡಿಸುವುದು ಒಬ್ಬರ ಕೈಯಲ್ಲಿ ಆಗುವುದಿಲ್ಲ ಎಂಬುದನ್ನು ನಾನು ಒಪ್ಪುತ್ತೇನೆ. ಅದಕ್ಕಾಗಿ ಮಾನ್ಯ ಸದಸ್ಯರು ಮತ್ತು ಮಂತ್ರಿಮಂಡಲದವರೆಲ್ಲ ಸೇರಿ ಈ ಕೆಲಸ ಮಾಡಬೇಕಾಗಿದೆ. ಇದರ ಜೊತೆಗೆ ನಮ್ಮ ಸಮಾಜ ಕೂಡ ಇದಕ್ಕೆ ಸಹಕಾರ ನೀಡಬೇಕು. ಈ ವಿಚಾರದಲ್ಲಿ ನಾನು ಈಗಾಗಲೇ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಯಾವ ಒಬ್ಬ ವ್ಯಕ್ತಿಯ ಪ್ರಭಾವಕ್ಕೂ ಒಳಗಾಗದೆ ಲೋಪಗಳು ಕಂಡು ಬಂದ ಕೂಡಲೇ ಸಂಬಂಧಪಟ್ಟವರ ಮೇಲೆ ಕಾನೂನುಬದ್ಧವಾಗಿ ಕ್ರಮ ಕೈಗೊಳ್ಳುವುದಕ್ಕೆ ಪ್ರಯತ್ನ ಮಾಡಿದ್ದೇನೆ. ನಾನು ಈ ರೀತಿ ಕೈಗೊಂಡಿರುವ ಕ್ರಮದಿಂದ ಕೆಲವರಿಗೆ ನೋವಾಗಿದ್ದರೂ ಸಹ ಬಹುಮಂದಿಗೆ ಇದರ ಲಾಭವಾಗಿದೆ.----

ಶ್ರೀ ಗೋವಿಂದ ಡಿ. ಒಡೆಯರಾಜ್- ಕೋರ್ಟಿನಲ್ಲಿರುವ ಸ್ಟೇ ಆರ್ಡರನ್ನು ವೆಕೇಟ್ ಮಾಡಿಸಲು ಸರ್ಕಾರದವರು ಏನು ವ್ಯವಸ್ಥೆ ಮಾಡಿದ್ದಾರೆಂದು ಶ್ರೀ ವೀರಪ್ಪಮೊಯ್ಲಿ ಅವರು ಕೇಳಿದ್ದುದು?

ಶ್ರೀ ಬಿ. ರಾಚಯ್ಯ- ಈಗ ಕೋರ್ಟಿನ ಮುಂದಿರುವ ತಡೆಯಾಜ್ಞೆಯ ಬಗ್ಗೆ ಆದಷ್ಟು ಬೇಗ ತೀರ್ಮಾನ ಕೈಗೊಳ್ಳುವ ವಿಚಾರದಲ್ಲಿ ನಾವು ನಮ್ಮ ಅಡ್ವೋಕೇಟ್ ಜನರಲ್ ಅವರಿಗೆ ಪದೇ ಪದೇ ತಿಳಿಸಿದ್ದೇವೆ. ಈಗ ಆರ್ಗ್ಯುಮೆಂಟ್ಸ್ ನಡೆದು ಕೊನೆಯ ಹಂತಕ್ಕೆ ಬಂದಿರಬಹುದೆಂದು ಕಾಣುತ್ತದೆ. ಆದರೆ ಇಷ್ಟು ಕೆಲಸವನ್ನೂ ಸಹ ಈ ಹಿಂದಿನ ಸರ್ಕಾರ ಮಾಡಿರಲಿಲ್ಲವೆಂದು ನಾನು ಹೇಳುತ್ತಿದ್ದೇನೆ.

* * * * *

– ಒಳ್ಳೆಯ ಕೆಲಸಗಳನ್ನು ಮಾಡಿದ್ದರೆ ಅದನ್ನು ಎರವಲಾಗಿ ತೆಗೆದುಕೊಳ್ಳಬೇಕಾಗುತ್ತದೆ. ಹಿಂದಿನವರು ಒಳ್ಳೆಯ ಕೆಲಸ ಮಾಡಿದ್ದರೆ, ಮಾಡಿದ್ದಾರೆಂದು ನಾವು ಹೇಳುತ್ತೇವೆ. ಅದೇ ರೀತಿ ನಾವು ಮಾಡಿದ್ದರೆ, ಮಾಡಿದ್ದಾರೆ ಎಂದು ನೀವು ಹೇಳಿ. ಆ ದೃಷ್ಟಿಯಿಂದ ಭಾಷಾನೀತಿ ಬಹುಮುಖ

ನೀತಿಯಲ್ಲ. ಆದ್ದರಿಂದ ಕನ್ನಡ ಶಾಲೆಗಳನ್ನು ತೆರೆಯುತ್ತೇವೆ. ಕನ್ನಡ ಶಾಲೆಗಳಲ್ಲಿ ಕನ್ನಡೇತರ ಮಕ್ಕಳಿಗೆ ಕನ್ನಡ ಕಲಿಸಲು ಉಪಾಧ್ಯಾಯರುಗಳನ್ನು ನೇಮಿಸುವುದು ತಡವಾಗಿದೆ. ಇದು ನಮಗೆ ಗೊತ್ತಿರುವ ವಿಷಯ. ಕಡ್ಡಾಯವಾಗಿ ಕನ್ನಡವನ್ನು ಕಲಿಯಬೇಕು, ಕನ್ನಡೇತರ ಮಕ್ಕಳಿಗೆ 10 ವರ್ಷಗಳವರೆಗೆ 15 ಕೃಪಾಂಕಗಳನ್ನು ಕೊಟ್ಟು ಮುಂದಿನ ತರಗತಿಗೆ ಹೋಗುವ ಒಂದು ರಿಯಾಯಿತಿಯನ್ನು ತೋರಿಸಿದ್ದೇವೆ. 10 ವರ್ಷಗಳವರೆಗೆ 15 ಕೃಪಾಂಕಗಳನ್ನು ಕೊಡುವುದನ್ನು ತಾವು ಹಿಂದೆಯೇ ಮಾಡಿದ್ದೀರಿ. ತಾವು ತಂದಂತಹ ನೀತಿಯನ್ನು ನಾವು ಮುಂದುವರಿಸಿಕೊಂಡು ಹೋಗುತ್ತಿದ್ದೇವೆ. ಹೀಗೆ ಮಾಡುವುದರಿಂದ ಬಾರ್ಡರ್ ಏರಿಯಾದಲ್ಲಿರುವವರಿಗೆ, ಪರಭಾಷೆ ಮಾತನಾಡುವವರಿಗೆ, ಬಹಳ ತೊಂದರೆಯಾಗುತ್ತದೆ. ಕನ್ನಡ ನಾಡಿನಲ್ಲಿರುವವರು ಎಲ್ಲರೂ ಕನ್ನಡವನ್ನು ಕಲಿಯಬೇಕು. ಕನ್ನಡೇತರ ಶಾಲೆಗಳಿಗೆ ಉಪಾಧ್ಯಾಯರುಗಳನ್ನು ನೇಮಕ ಮಾಡಲಾಗುತ್ತದೆ. ಜೊತೆಗೆ ಪಾಠ ಪ್ರವಚನಗಳನ್ನು ಒದಗಿಸುವ ಕೆಲಸವನ್ನು ಮಾಡಲಾಗುತ್ತಿದೆ. ಕನ್ನಡಭಾರತಿ ಎಂಬ ಪುಸ್ತಕವನ್ನು ಗೊತ್ತುಮಾಡಿ ವಾರದಲ್ಲಿ 5 ಪಾಠಗಳನ್ನು ಮಾಢಲು ಗೊತ್ತು ಮಾಡಲಾಗಿದೆ. ಕೆಲವು ವಿಷಯಗಳನ್ನು ತೆಗೆದುಹಾಕಿದ್ದೇವೆ. ಇದು ಎಷ್ಟರಮಟ್ಟಿಗೆ ಪ್ರಗತಿಯಲ್ಲಿದೆ ಎನ್ನುವುದನ್ನು ಮಾನ್ಯ ಸದಸ್ಯರುಗಳು ತಿಳಿದುಕೊಳ್ಳಬೇಕು. ಮಂತ್ರಿಮಂಡಲದಲ್ಲಿರುವ ಮಾನ್ಯ ಅಜೀಜ್‌ಸೇಠ್‌ರವರು ಉರ್ದು ಶಾಲೆಗಳಲ್ಲಿ ಕಡ್ಡಾಯವಾಗಿ ಕನ್ನಡವನ್ನು ಕಲಿಸಬೇಕೆಂದು ಮೊದಲಿನಿಂದಲೂ ಹೇಳುತ್ತಲೇ ಬಂದಿದ್ದಾರೆ. ಕನ್ನಡ ಬಾರದೆ ಇರುವವರೆಗೆ ಕೆಲಸ ಕೊಡುವುದಿಲ್ಲವೆಂದು ಹೇಳುವುದು ಸರಿಯಲ್ಲ. ಅವರಿಗೆ ಕೆಲಸಕೊಟ್ಟು ಅವರೂ ಸಹ ಕನ್ನಡ ಕಲಿತು ಕೊಳ್ಳಲಿಕ್ಕೆ ಎರಡು ವರ್ಷ ಸಮಯ ಕೊಡಬೇಕೆಂದು ಹೇಳಿದ್ದಾರೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ- ಮಾನ್ಯ ಅಜೀಜ್ ಸೇಠ್‌ರವರು ಕ್ಯಾಬಿನೆಟ್ ಮಂತ್ರಿಗಳಲ್ಲವೆ? ಮಂತ್ರಿಗಳು ಅದನ್ನು ಹೇಳುತ್ತಾರೆಂದರೆ ಇದು ಸರ್ಕಾರದ ನೀತಿಯೆಂದು ತಿಳಿದುಕೊಳ್ಳುತ್ತೇವೆ. ಇದು ನನ್ನ ವೈಯಕ್ತಿಕ ಅಭಿಪ್ರಾಯವೆಂದು ಹೇಳಲಿ, ಆದರೆ ಅವರು ನಾನು ಇದನ್ನು ಮಾಡುವುದಕ್ಕೆ ಬಿಡುವುದಿಲ್ಲವೆಂದು ಹೇಳುತ್ತಿದ್ದಾರೆ.

ಶ್ರೀ ಬಿ. ರಾಚಯ್ಯ- ಮಾನ್ಯ ಅಜೀಜ್ ಸೇಠ್‌ರವರು ಭಾಷಾ ನೀತಿಯನ್ನು ಒಪ್ಪಿಕೊಂಡಿದ್ದಾರೆ. ಕರ್ನಾಟಕ ಲೋಕಸೇವಾ ಆಯೋಗ ಮತ್ತು ಇತರ ಪರೀಕ್ಷೆಗಳನ್ನು ನಡೆಸುವಾಗ ಐ.ಪಿ.ಎಸ್. ಮತ್ತು ಐ.ಎ.ಎಸ್ ಅಧಿಕಾರಿಗಳಿಗೆ ಯಾವ ರೀತಿಯ ಅವಕಾಶವನ್ನು ಕೊಡುತ್ತೀರಿ ಆ ಒಂದು ಅವಕಾಶವನ್ನು ನಮಗೂ ಕೊಡಿ ಎಂದು ಕೇಳುತ್ತಿದ್ದಾರೆ. ಭಾಷಾ ನೀತಿಯ ಬಗ್ಗೆ ಬಹು ಮುಖ ನೀತಿ ಏನೂ ಇಲ್ಲ. ಎಲ್ಲರೂ ಕೂಡ ಕನ್ನಡವನ್ನು ಕಲಿಯಬೇಕು. ಅದಕ್ಕೆ ಕಾಲಾವಕಾಶ ಬೇಕಾಗಿದೆ. ಅದಕ್ಕೆ ಏನು ಕಾರ್ಯಕ್ರಮ ಬೇಕೋ ಅದನ್ನು ಹಾಕಿಕೊಂಡು ಮುಂದುವ್ರೆಸಿಕೊಂಡು ಹೋಗುತ್ತಿದ್ದೇವೆ. ಕನ್ನಡನಾಡಿನ ಬಗ್ಗೆ ಹೆಚ್ಚಿನ ಅಭಿಮಾನವಿಟ್ಟು ಕನ್ನಡ ಶಾಲೆಗಳು ಬರುವುದಕ್ಕೆ ಈ ಸರ್ಕಾರ ಬಹಳವಾಗಿ ಶ್ರಮಿಸಿದೆ. ಕೆಲಸ ನಿಧಾನವಾಗಿರುವುದರ ಬಗ್ಗೆ ಅವರಿಗೆ ಹೇಳಿದ ಮೇಲೆ ಬಹು ಜನ ನೀವು ಹೋಗಿರುವ ದಾರಿ ಸರಿ ಎಂದು ಹೇಳಿದ್ದಾರೆ.

- ಉರ್ದು ಮೀಡಿಯಂ ಶಾಲೆಗಳಲ್ಲಿ ಕನ್ನಡ ಉಪಾಧ್ಯಾಯರುಗಳನ್ನು ಹಾಕಿದ್ದೇವೆ. ಎಲ್ಲೆಲ್ಲಿ ಕನ್ನಡ ಉಪಾಧ್ಯಾಯರುಗಳು ಇಲ್ಲ ಅಂತಹ ಕಡೆಗಳಿಗೆ ಉಪಾಧ್ಯಾಯ ರುಗಳನ್ನು ಹಾಕುವ ಪ್ರಯತ್ನ ಮಾಡುತ್ತಿದ್ದೇವೆ. ಮಾನ್ಯ ಅಜೀಜ್ ಸೇಠ್‌ರವರು ಕೂಡ ನಮ್ಮವರು ಸರ್ಕಾರಿ ಕೆಲಸದಲ್ಲಿ 2% ಕೂಡ ಇಲ್ಲ ಆದ್ದರಿಂದ ಉರ್ದು ಶಾಲೆಗಳಲ್ಲಿ ಕನ್ನಡವನ್ನು ಕಲಿಯಬೇಕು. ಜೊತೆಗೆ ಅವರು ನಮ್ಮ ಭಾಷಾನೀತಿಯನ್ನು ಒಪ್ಪಿಕೊಂಡಿದ್ದಾರೆ. ಕೆಲವು ಮಾನ್ಯ ಸದಸ್ಯರುಗಳು ಇಂಗ್ಲಿಷ್ ಮೀಡಿಯಂ ಸ್ಕೂಲುಗಳನ್ನು ಏತಕ್ಕೆ ಕೊಟ್ಟಿದ್ದೀರಿ ಎಂದು ಕೇಳಿದರು. ಇಂಗ್ಲಿಷ್ ಮೀಡಿಯಂ ಶಾಲೆಗಳನ್ನು ಬೆಳಗಾಂ ಮತ್ತು ಲೋಂಡಾದಲ್ಲಿ ಕೊಟ್ಟಿರತಕ್ಕದ್ದು ನಿಜ. ರಾಜ್ಯಾಂಗದಲ್ಲಿರುವ ಅಂಶವನ್ನು ಗಮನದಲ್ಲಿಟ್ಟುಕೊಂಡು ಆ ಕೆಲಸವನ್ನು ಮಾಡಬೇಕಾಗುತ್ತದೆ. ರಾಜ್ಯಾಂಗದಲ್ಲಿರುವುದನ್ನು ಒಪ್ಪಿಕೊಂಡ ಮೇಲೆ ಅವರವರ ಮಾತೃಭಾಷೆಯಲ್ಲಿ ಮಕ್ಕಳು ವಿಧ್ಯಾಭ್ಯಾಸ ಮಾಡುವುದಕ್ಕೆ ಅವಕಾಶವಿದೆ. ಆಂಗ್ಲೋ-ಇಂಡಿಯನ್ ತನ್ನ ಮಾತೃಭಾಷೆಯಲ್ಲಿ ಮಕ್ಕಳು ವಿಧ್ಯಾಭ್ಯಾಸ ಮಾಡುತ್ತಾನೆ. ಅದನ್ನು ತಪ್ಪಿಸುವುದಕ್ಕಾಗುವುದಿಲ್ಲ. ಹಿಂದಿನಿಂದ ಬಾರ್ಡರ್ ಏರಿಯಾದಲ್ಲಿ 7ನೇ ತರಗತಿಯವರೆಗೂ ಓದಿಕೊಂಡು ಬಂದಿದ್ದಾರೆ. 10ನೇ ತರಗತಿಯವರೆಗೆ ಅವಕಾಶ ಕೊಡುವುದಿಲ್ಲ ಎಂದರೆ ತಪ್ಪಾಗುತ್ತದೆ. ಈಗಿನ ನೀತಿಯ ಪ್ರಕಾರ ಕೇಂದ್ರ ಸರ್ಕಾರದ ಅಧಿಕಾರಿಗಳು ಇಲ್ಲಿದ್ದಾರೆ.

ಎರಡು ಇಂಗ್ಲಿಷ್ ಮೀಡಿಯಂ ಶಾಲೆಗಳನ್ನು ಮಂತ್ರಿಮಂಡಲ ತೀರ್ಮಾನ ಮಾಡುವುದಕ್ಕೆ ಮೊದಲು ಕೊಟ್ಟಿರುವುದು ನಿಜ. ಭಾಷಾ ನೀತಿಯನ್ನು ಈ ಸಭೆಯೇ ಒಪ್ಪಿರುವುದರಿಂದ ಅದರಲ್ಲಿ ಏನು ಹೇಳಿದ್ದಾರೆಂದರೆ ಕೇಂದ್ರ ಸರ್ಕಾರದ ನೌಕರರು ಒಂದು ಕಡೆಯಿಂದ ಮತ್ತೊಂದು ಕಡೆಗೆ ವರ್ಗಾವಣೆಯಾಗುವುದರಿಂದ ಅವರ ಮಕ್ಕಳಿಗೆ ವಿದ್ಯಾಭ್ಯಾಸ ಒದಗಿಸುವಾಗ ಒಂದೇ ನೀತಿಯನ್ನು ಅಡಾಪ್ಟ್ ಮಾಡಿದರೆ ಅವರ ಮಕ್ಕಳು ವಿದ್ಯಾಭ್ಯಾಸ ಮಾಡುವುದು ಕಷ್ಟವಾಗುತ್ತದೆ. ಆಗ ನೀತಿಯನ್ನು ಸಡಿಲ ಮಾಡಬೇಕಾಗುತ್ತದೆಂದು ಹೇಳಿದ್ದೇನೆ. ಆಂಗ್ಲೊ ಇಂಡಿಯನ್ಸ್ ಅವರಿಗೆ ಅವರ ಭಾಷೆಯಲ್ಲಿ ವಿದ್ಯಾಭ್ಯಾಸ ಮಾಡಲು ಅವಕಾಶ ಕೊಡಬೇಕಾಗಿ ಬರುತ್ತದೆ. ನಾಲ್ಕು ತರಹದ ನೀತಿಯನ್ನು ಹಾಕಿದ್ದೇವೆ. ಅದನ್ನು ಪುನರ್ ವಿಮರ್ಶೆ ಮಾಡಬೇಕಾಗಿ ಬರುತ್ತದೆ. ಎಲ್ಲೆಲ್ಲಿ ಇಂಗ್ಲಿಷ್ ಮಿಡಿಯಂ ಶಾಲೆಗಳನ್ನು ನಡೆಸುತ್ತಿದ್ದಾರೆ. ಅವುಗಳನ್ನು ಮುಂದುವರಿಸಬೇಕೇ ಅಥವಾ ಬೇಡವೇ ಎನ್ನುವುದನ್ನು ತೀರ್ಮಾನ ಮಾಡಬೇಕಾಗುತ್ತದೆ. ಈಗ ಇನ್ನೊಂದು ವಾದ ಬಂದಿದೆ. ಈಗ ಎಲ್ಲಾ ಕಡೆಗೂ ಮೆರಿಟ್ ಮೇಲೆ ಸೀಟುಗಳನ್ನು ಕೊಡಲಾಗುತ್ತಿದೆ. ಹೈಸ್ಕೂಲ್, ಟೆಕ್ನಿಕಲ್‌ಸ್ಕೂಲ್, ಎಸ್.ಎಸ್.ಎಲ್.ಸಿ., ಪಿ.ಯು.ಸಿ ಎಲ್ಲಾ ಕಡೆಗಳಿಂದ ಬಂದಿರುವವರನ್ನು ನೋಡಿದಾಗ ಇಂಗ್ಲಿಷ್ ಮಿಡಿಯಂ ಶಾಲೆಗಳಿಂದ ಬಂದಿರುವ ವಿದ್ಯಾರ್ಥಿಗಳು ಮೆರಿಟ್‌ನಲ್ಲಿ ಬಂದಿದ್ದಾರೆ. ಕನ್ನಡ ಶಾಲೆಗಳಲ್ಲಿ ಕಲಿತಿರುವ ಮಕ್ಕಳು ಯಾರಿದ್ದಾರೆ ಅವರನ್ನು ಯಾರೂ ಮೆರಿಟ್‌ನಲ್ಲಿ ಬರುವುದಕ್ಕೆ ಆಗಿಲ್ಲ. ಅವರಿಗೆ ಅಲ್ಲಿ ಸರಿಯಾದ ಅವಕಾಶವಿಲ್ಲದೆ ಇರಬಹುದು ಅವರಿಗೆ ಅಲ್ಲಿ ಪ್ರೋತ್ಸಾಹ ಇಲ್ಲದೆ ಇರಬಹುದು. ಒಳ್ಳೆಯ ಉಪಾಧ್ಯಾಯರು ಇಲ್ಲದೆ ಇರಬಹುದು. ಕನ್ನಡ ಶಾಲೆಯ ಮಕ್ಕಳು ಇಂಗ್ಲಿಷ್ ಶಾಲೆಯ ಮಕ್ಕಳ ಮಟ್ಟಕ್ಕೆ ಬರುವುದಕ್ಕೆ

ಆಗಿಲ್ಲ. ಹಾಗೆಂದು ಎಲ್ಲಾ ಕಡೆಗೂ ಇಂಗ್ಲಿಷ್ ಮಿಡಿಯಂ ಶಾಲೆಗಳನ್ನು ಕೊಡಿ ಎಂದರೆ ಕೊಡುವುದಕ್ಕೆ ಆಗುವುದಿಲ್ಲ. ಎಲ್ಲಿ ಕೇಂದ್ರ ಸರ್ಕಾರದ ನೌಕರರು ಜಾಸ್ತಿಇದ್ದಾರೆ. ಅಲ್ಲಿ ಅವರು ಒತ್ತಾಯ ತಂದಿದ್ದಾರೆ. ನಾವು ಎಲ್ಲಾ ವಿಚಾರಗಳನ್ನು ಗಮನದಲ್ಲಿಟ್ಟು ರಾಜ್ಯಾಂಗದ ವಿಧಿಗಳಿಗೆ ಧಕ್ಕೆ ಬಾರದ ರೀತಿಯಲ್ಲಿ ಕೆಲಸಮಾಡಬೇಕಾಗುತ್ತದೆ. ಅವರಿಗೆ ಒಂದು ಶಾಲೆಯನ್ನು ಕೊಟ್ಟಾಗ ಅಲ್ಲಿ ನಮ್ಮ ಮಕ್ಕಳು ಹೋಗುತ್ತವೆ. ಆಗ ಇದು ದ್ವಿಮುಖ ನೀತಿಯಲ್ಲ. ಇನ್ನು ವೃತ್ತಿಶಿಕ್ಷಣ, ಟೆಕ್ನಿಕಲ್, ಶಾಲೆಗಳನ್ನು ಮಾಡಿಲ್ಲವೆಂದು ಹೇಳಿದ್ದಾರೆ. ಈ ವರ್ಷ ವೃತ್ತಿ ಶಿಕ್ಷಣಕ್ಕೆ ಸಂಬಂಧಪಟ್ಟ 36 ಜೂನಿಯರ್ ಕಾಲೇಜುಗಳನ್ನು ಹೊಸದಾಗಿ ತೆರೆದಿದ್ದೇವೆ. ಯಾವ್ಯಾವ ಭಾಗದಲ್ಲಿ, ಯಾವ್ಯಾವ ಕೆಲಸ ಸಿಗುತ್ತದೆ. ಯಾವುದು ಅವಶ್ಯಕವಿದೆ ಅದನ್ನು ನಾವು ಗಮನದಲ್ಲಿಟ್ಟು ಕೊಡುತ್ತಿದ್ದೇವೆ.

ಇನ್ನು ಪ್ರಾಥಮಿಕ ಶಾಲೆಯಿಂದ ಹಿಡಿದು ವಿಶ್ವವಿದ್ಯಾನಿಲಯದವರೆಗೂ, ವಿಶ್ವವಿದ್ಯಾ ನಿಲಯಗಳನ್ನೊಳಗೊಂಡಂತೆ ಅಗ ಬೇಕಾದ ಕೆಲಸ ಕಾರ್ಯಗಳ ಬಗ್ಗೆ ಅಲ್ಲಿಯ ನೌಕರರಿಗೆ ಅನುಕೂಲಗಳು ಸ್ವಲ್ಪಮಟ್ಟಿಗೆ ತಡವಾಗಿರುವ ವಿಷಯಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಈ ಒಂದು ಪದ್ಧತಿ ಹಿಂದಿನಿಂದಲೂ ನಡೆದುಕೊಂಡು ಬಂದಿರುವುದರಿಂದ ಈಗ ಒಂದೇ ಸಾರಿ ಅದನ್ನು ಸರಿಮಾಡಲು ಕಷ್ಟವಾಗಬಹುದು. ಈ ಇಲಾಖೆಯ ನೌಕರ ವರ್ಗದವರಿಗೆ ನ್ಯಾಯ ದೊರಕಬೇಕು ಎನ್ನುವ ದೃಷ್ಟಿಯಿಂದ ಅವರು ನ್ಯಾಯಾಲಯಕ್ಕೆ ಹತ್ತಿದ್ದಾರೆ. ಈ ಬಗ್ಗೆ ಅನೇಕ ವಿಷಯಗಳು ನಮಗೆ ಎದ್ದು ಕಾಣುತ್ತಾ ಇವೆ. ಟೆಕ್ನಿಕಲ್ ಕಾಲೇಜುಗಳಲ್ಲಿ ಇದ್ದಂತಹ ಅಧಿಕಾರಿಗಳ ಸೀನಿಯಾರಿಟಿ ಪಟ್ಟಿಯನ್ನು ನಾವು ಬಗೆಹರಿಸಿ ಅವರಿಗೆಲ್ಲಾ ಕೊಡಬೇಕಾದ ಬಡ್ತಿ ಕೊಟ್ಟಿದ್ದಾಗಿದೆ. ಹಾಗೆಯೇ ವಿದ್ಯಾ ಇಲಾಖೆಯಲ್ಲಿ ಡಿ.ಪಿ.ಐ. ಡಿ.ಪಿ.ಐ.ಐ. ಇಅವರಿಗೆ ಕೊಡಬೇಕಾದ ಪ್ರಮೋಷನ್ ಅನ್ನು ಕೊಟ್ಟಿದ್ದೇವೆ. ಇನ್ನು ಅವರ ಕೆಳಗೆ ಇರುವಂಥ ಎ.ಇ.ಓ ಮತ್ತು ಇ.ಓ ಅವರ ಸೀನಿಯಾರಿಟಿ ಬಗ್ಗೆ ಒಂದು ಪಟ್ಟಿಯನ್ನು ತಯಾರು ಮಾಡಿದ್ದೇವೆ. ಮಾನ್ಯ ಸದಸ್ಯರಾದ ಶ್ರೀ ಬಿ.ಬಿ.ಶೆಟ್ಟಿಯವರು ಅಥವಾ ಯಾರೋ ಹೇಳಿದರು ಐದು ಸಾವಿರ ರೂಪಾಯಿಗಳನ್ನು ಕೊಟ್ಟರೆ ಆರ್ಡರ್ ಕೊಡುತ್ತೇನೆಂದು. ಅವರು ಯಾರು ಎಂದು ನಾನು ಮಾನ್ಯ ಸದಸ್ಯರನ್ನು ಪ್ರತ್ಯೇಕವಾಗಿ ಕೇಳಿದ್ದಕ್ಕೆ ಅವರ ಹೆಸರು ಹೇಳಲಿಲ್ಲ. ಯಾರೇ ಆಗಲಿ ಹಣವನ್ನು ವಸೂಲ್ಮಾಡಿ ಆಮೇಲೆ ಸರ್ಕಾರಿ ಆರ್ಡರ್ ಕೊಟ್ಟಿರುವುದಾದರೆ ಅಂಥಾ ವಿಷಯವನ್ನು ಸರ್ಕಾರದ ಗಮನಕ್ಕೆ ತಂದರೆ ನಿಜವಾಗಿಯೂ ಅದರ ಬಗ್ಗೆ ಎನ್‌ಕ್ವೈರಿ ಮಾಡುವುದಲ್ಲದೆ ಅವರ ಮೇಲೆ ತೀವ್ರತರವಾದ ಕಾರ್ಯಕ್ರಮ ತೆಗೆದುಕೊಳ್ಳುತ್ತೇನೆಂದು ಹೇಳುತ್ತೇನೆ.

ಶ್ರೀ ಪಿ. **ರಾಮಚಂದ್ರರಾವ್**- ಧಾರವಾಡದಲ್ಲಿ ಒಬ್ಬ ಎ.ಇ.ಓ. ಈ ರೀತಿ ಹಣ ವಸೂಲ್ಮಾಡಿದ್ದಕ್ಕೆ ಆ ಅಧಿಕಾರಿಯ ವಿರುದ್ಧ ಸರದಿ ಉಪವಾಸ ಸತ್ಯಾಗ್ರಹ ನಡೆಸಿದರು.

ಶ್ರೀ ಬಿ. **ರಾಚಯ್ಯ**- ಅವರು ಯಾವುದೇ ಸತ್ಯಾಗ್ರಹ ಹೂಡಿದರು ಅನ್ನುವುದನ್ನು ಸರಿಯಾಗಿ ತಿಳಿಯಬೇಕು. ಹಣ ಕೊಟ್ಟಿದ್ದಕ್ಕೋ ಅಥವಾ ಇನ್ನಾವ ಕಾರಣಕ್ಕೋ ಅದು ಸರಿಯಾಗಿ ನಮಗೆ ಗೊತ್ತಿಲ್ಲ. ಅದನ್ನು ಸರಿಯಾಗಿ ವಿಚಾರ ಮಾಡಿ ಹೇಳಿದ್ದಾರೆ ತಕ್ಕ ಕ್ರಮ ತೆಗೆದುಕೊಳ್ಳುತ್ತೇವೆ.

ಅದರ ಬಗ್ಗೆ ಏನೂ ತಿಳಿಯದೇ "ಎತ್ತು ಈದಿದೆ ಎಂದರೆ ಕೊಟ್ಟಿಗೆಗೆ ಕಟ್ಟು" ಎಂಬ ಗಾದೆ ಇದೆ. ಆ ರೀತಿಯಾಗಿ ಹೇಳಿದರೆ ಏನು ಮಾಡುವುದಕ್ಕೆ ಆಗುತ್ತದೆ. ಯಾರು ಈ ವರ್ಗದ ಜನರಿಗೆ ತೊಂದರೆ ಕೊಡುತ್ತಾರೋ ನಿಜವಾಗಿಯೂ ಅವರು ಲಂಚಕೋರರು ಆಗಿದ್ದರೆ, ಅಕ್ರಮ ಸಂಭಾವನೆಯನ್ನು ತೆಗೆದುಕೊಳ್ಳುವುದರಲ್ಲಿ ತೊಡಗಿದ್ದರೆ ಅವರನ್ನು ವರ್ಗಮಾಡುವುದೇಕೆ ಅವರನ್ನು ಮನೆಗೆ ಕಳುಹಿಸುತ್ತೇವೆ ಎನ್ನುವ ಮಾತನ್ನು ಹೇಳಬಯಸುತ್ತೇನೆ.

ಇನ್ನು ವಿಶ್ವ ವಿದ್ಯಾನಿಲಯಗಳ 'ಸ್ವಾಯತ್ತತೆ' ಬಗ್ಗೆ ಪ್ರಸ್ತಾಪಮಾಡಿದ್ದಾರೆ, ಇದರ ಬಗ್ಗೆ ಸಂಪೂರ್ಣ ಉತ್ತರ ಕೊಡಲಿಕ್ಕೆ ಆಗದಿದ್ದರೂ ಕೂಡ ಸ್ವಲ್ಪ ಮಟ್ಟಿಗೆ ಹೇಳುತ್ತೇನೆ. ಈಗ ವಿಶ್ವವಿದ್ಯಾನಿಲಯಗಳಿಗೆ ಏನು ಸ್ವಾಯತ್ತತೆ ಇದೆ ಅದು ಈಗಲೂ ಇದೆ. ಆದರೆ ಸರ್ಕಾರದ ಹಣಕಾಸಿನ ಪರಿಸ್ಥಿತಿಯನ್ನು ನೋಡಿಕೊಂಡು ಖರ್ಚು ಮಾಡಬೇಕಾಗಿದೆ. ಅದರ ವಿವೇಚನೆ ಇಲ್ಲದೆ ಹೆಚ್ಚು, ಹೆಚ್ಚು ಅಧಿಕಾರಿಗಳಲ್ಲಿ ಸೃಷ್ಟಿ ಮಾಡುವುದಕ್ಕೆ ನೇಮಕ ಮಾಡಿಕೊಳ್ಳುವುದಕ್ಕೆ ಹೊರಟರೆ ಅದಕ್ಕೆ ಸರ್ಕಾರ ಸ್ವಲ್ಪ ಕಡಿವಾಣ ಹಾಕಬೇಕಾಗುತ್ತದೆ. ಯಾವುದೇ ವಿದ್ಯೆ ಆಗಲಿ, ಪರೀಕ್ಷೆ ಆಗಲಿ ಇದಕ್ಕೆ ಸಂಬಂಧ ಪಟ್ಟಂತೆ ಇದ್ದರೆ ಅದಕ್ಕೆ ಪೂರ್ಣ ಸ್ವಾಯತ್ತತೆಯನ್ನು ಕೊಟ್ಟಿದೆ. ಅದರ ಬಗ್ಗೆ ನಾವು ಯಾವುದಕ್ಕೂ ಕೂಡ ಮಧ್ಯೆ ಪ್ರವೇಶ ಮಾಡಿಲ್ಲ. ಯಾವುದೇ ಒಂದು ಕಾಲೇಜಿಗೆ ಅನುಮತಿ ಕೊಡಬೇಕಾದರೂ ಸಹ ಅವರ ಒಂದು ಪರವಾನಗಿ ಇಲ್ಲದೆ ನಾವು ಮುಂದೆ ಹೋಗಿ ಕೊಟ್ಟಿಲ್ಲ. ಒಂದು ಜೂನಿಯರ್ ಕಾಲೇಜ್ ಆಗಲಿ, ಒಂದು ಪ್ರಥಮ ದರ್ಜೆ ಕಾಲೇಜ್ ಆಗಲಿ, ಅಥವಾ ಒಂದು ಟೆಕ್ನಿಕಲ್ ಕಾಲೇಜ್ ಆಗಲಿ, ಇದು ಸರ್ಕಾರಕ್ಕೆ ಸಂಬಂಧಪಟ್ಟ ವಿಷಯವಾಗಿದ್ದರೂ ಸಹ ವಿಶ್ವವಿದ್ಯಾನಿಲಯದ ಪರವಾನಗಿ ಇಲ್ಲದೆ, ಅವರ ಒಂದು ಶಿಫಾರಸ್ಸು ಇಲ್ಲದೆ ಕೊಟ್ಟಿಲ್ಲ. ಅವರು ಹೇಳಿದ ಯಾವುದನ್ನೂ ಸಹ ನಾವು ಉಲ್ಲಂಘನೆ ಮಾಡಿಲ್ಲ. ನಮ್ಮ ಸರ್ಕಾರದ ಒಂದು ನೀತಿಯೂ ಸಹ ಈ ರೀತಿ ಇದೆ. ಈ ವಿಶ್ವವಿದ್ಯಾನಿಲಯಕ್ಕೆ ಯಾವ ರೀತಿಯಾಗಿ ಸ್ವಾಯತ್ತತೆ ಕೊಡಬೇಕು ಎನ್ನುವುದರ ಬಗ್ಗೆ ಈಗಾಗಲೇ ರಾಜ್ ಕಮಿಟಿಯವರು ಇದರ ಬಗ್ಗೆ ಏನು ಒಂದು ವರದಿ ಕೊಟ್ಟಿದ್ದಾರೆ ಅದನ್ನು ಪರಿಶೀಲನೆ ಮಾಡಿ ಅದರಲ್ಲಿ ಯಾವುದನ್ನು ವಾಪಸ್ಸು ಮಾಡಬೇಕು ಯಾವುದನ್ನು ಸರ್ಕಾರ ಉಳಿಸಿಕೊಳ್ಳಬೇಕು ಎನ್ನುವುದನ್ನು ತೀರ್ಮಾನ ಮಾಡುತ್ತೇವೆ. ಆದರೆ ವಿಶ್ವವಿದ್ಯಾನಿಲಯಕ್ಕೆ ಪೂರ್ಣ ಸ್ವಾಯತ್ತತೆ ಕೊಡುವುದನ್ನು ನಾವೂ ಸಹ ಒಪ್ಪುತ್ತೇವೆ.

ಈ ವಿಶ್ವವಿದ್ಯಾನಿಲಯದ ಸ್ವಾಯತ್ತತೆ ಬಗ್ಗೆ ಈಗ ಏನು ಒಂದು ಅಧಿಕಾರ ಕೊಟ್ಟಿದ್ದೇವೋ ಅದನ್ನು ಹಾಗೆಯೇ ಉಳಿಸಿಕೊಂಡು ಬರುತ್ತೇವೆ. ನಾವು ಮಧ್ಯೆ ಕೈಹಾಕುವುದಕ್ಕೆ ಹೋಗುವುದಿಲ್ಲ. ಆರ್ಟಿಕಲ್ 8ರ ಪ್ರಕಾರ ವಿಶ್ವವಿದ್ಯಾನಿಲಯದ ಉಪಕುಲಪತಿಗಳ ಕೆಲಸಕಾರ್ಯಗಳು ಏನು ಇವೆ ಅದರ ಬಗ್ಗೆ ನಾವು ಕೈ ಹಾಕುವುದಿಲ್ಲ. ಯಾರ್‍ಯಾರಿಗೆ ಪ್ರಮೋಷನ್ ಕೊಡಬೇಕು, ಯಾರಾದರೂ ತಪ್ಪು ಮಾಡಿದರೆ ಅವರನ್ನು ಎನ್‌ಕ್ವೈರಿ ಮಾಡಿ ನಿಜಾಂಶವನ್ನು ಪತ್ತೆ ಹಚ್ಚುವುದಕ್ಕೆ ಈಗ ಅವರಿಗೆ ಏನು ಅಧಿಕಾರ ಇದೆಯೋ ಅದು ಇದ್ದೇ ಇದೆ. ಈಗಾಗಲೇ ಮೈಸೂರು ಉಪಕುಲಪತಿಗಳು ಬರೆದಿರುವಂಥ ಕೆಲವು ವಿಷಯಗಳ ಮೇಲೆ ನನ್ನನ್ನು ಶಿಫಾರಸ್ಸು

ಮಾಡಬೇಕು ಎಂದು ಹೇಳಿದ್ದಾರೆ. ಹಿಂದೆ ಒಂದು ಸಾರಿ ವಿಶ್ವವಿದ್ಯಾನಿಲಯದಲ್ಲಿ ಇಂತಹ ಅಕ್ರಮಗಳು ನಡೆದಿವೆ ಎಂದು ಬಂದಾಗ ಶ್ರೀ ಗೋಪಿವಲ್ಲಭ ಐಯಾಂಗಾರ್ ಅವರ ನೇತೃತ್ವದಲ್ಲಿ ಒಂದು ಕಮಿಟಿ ಮಾಡಿದ್ದರು. ಹಾಗೆಯೇ ಒಂದು ವೇಳೆ ಅದರಲ್ಲಿ ತಪ್ಪು ಏನಾದರೂ ನಡೆದಿದ್ದರೆ ನಿಜವಾಗಿಯೂ ಅವರು ತಪ್ಪಿತಸ್ಥರೇ ಇಲ್ಲವೇ ಎನ್ನುವುದರ ಬಗ್ಗೆ ಪರಿಶೀಲನೆ ಮಾಡುವುದಕ್ಕೋಸ್ಕರ ಈ ಸದನದ ಒಂದು ಕಮಿಟಿಯನ್ನು ಮಾಡುವುದರ ಬಗ್ಗೆ ಪರೀಶೀಲನೆ ಮಾಡಿ ಅದರ ಬಗ್ಗೆ ತಕ್ಕ ಕಾರ್ಯಕ್ರಮ ತೆಗೆದುಕೊಳ್ಳುತ್ತೇನೆಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಈ ವಿಶ್ವವಿದ್ಯಾನಿಲಯಗಳಿಗೆ ನಾವು ಏನು ಸ್ವಾಯತ್ತತೆ ಸ್ಥಾನಮಾನಗಳನ್ನು ಈಗ ಕೊಟ್ಟಿದ್ದೇವೋ ಅವು ಇದ್ದೇ ಇರುತ್ತದೆ. ಆದರೆ ಅವರು ಸರ್ಕಾರದ ನೀತಿ ನಿಯಮಾವಳಿಗನುಸಾರವಾಗಿ ನಾನು ಹಿಂದೆ ಹೇಳಿದ ಹಾಗೆ ಹಣಕಾಸಿನ ಪರಿಸ್ಥಿತಿಯಲ್ಲಿ ನಾವು ಹೇಳಿದ ಹಾಗೆ ನಡೆದುಕೊಂಡು ಹೋಗಬೇಕು. ತಮಗೆ ಉದಾಹರಣೆ ಹೇಳಬೇಕಾದರೆ ನಾನು ಬೆಂಗಳೂರಿನಲ್ಲಿರುವ ಒಂದು ಹಾಸ್ಟಲಿಗೆ ಹೋಗಿದ್ದಾಗ ಅಲ್ಲಿಯ ಮಕ್ಕಳ ಪರಿಸ್ಥಿತಿ ನೋಡಿ ತಕ್ಷಣ ಅದರ ಬಗ್ಗೆ ಕಾರ್ಯಕ್ರಮ ತೆಗೆದುಕೊಳ್ಳುವುದಕ್ಕೆ 15 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದೇವೆ. ಹಾಗೆ ಕೊಟ್ಟಾಗ ಆ ಅಧಿಕಾರಿಗಳು ತಕ್ಷಣ ಕಾರ್ಯಕ್ರಮ ತೆಗೆದುಕೊಳ್ಳಬೇಕಾಗಿತ್ತು. ನಾನು ಆ ಬಗ್ಗೆ ಹೇಳಿಬಂದರೂ ಕೂಡ ಆ ಮಕ್ಕಳಿಗೆ ಯಾವ ವಿದವಾದಂಥ ಸೌಕರ್ಯವನ್ನು ಸಹ ಒದಗಿಸಿ ಕೊಡಲಿಲ್ಲ. ಅಲ್ಲಿನ ರೂಮ್‌ಗಳಲ್ಲಿ ಟ್ಯೂಬ್ಸ್ ಇಲ್ಲದೆ ಲೈಟ್ ಇಲ್ಲದೆ ಮಕ್ಕಳು ಬಹಳ ತೊಂದರೆಗೊಳಗಾದರೂ ಹಾಗೆ ಮಾಡದೆ ಹೋದರೆ, ಅಲ್ಲಿ ಏತಕ್ಕೆ ಹೀಗಾಯಿತು ಎನ್ನುವುದನ್ನು ನಾವು ಕೇಳಬೇಕೆ ಬೇಡವೆ? ನಾವು ಮುಂದಿನ ವರ್ಷ ಇನ್ನೂ ಹೆಚ್ಚು ಹೆಚ್ಚಾಗಿ ವಿಶ್ವವಿದ್ಯಾನಿಲಯದ ಹಾಸ್ಟೆಲುಗಳನ್ನು ತೆರೆಯ ಬೇಕೆಂದು ಇದ್ದೇವೆ. ಈಗ ವಿಶ್ವವಿದ್ಯಾನಿಲಯಗಳಲ್ಲಿ ಅರ್ಧಂಬರ್ಧ ಕೆಲಸಗಳು ಏನು ಆಗಿವೆಯೋ ಅದಕ್ಕೆ ಸಾಕಷ್ಟು ಹಣಕೊಟ್ಟು ಮುಗಿಸುವುದಕ್ಕೆ ಪ್ರಯತ್ನ ಮಾಡುತ್ತೇವೆ. ಆಗ ಹುಡುಗರಿಗೆ ಹೆಚ್ಚು ಹೆಚ್ಚು ಸೌಕರ್ಯಗಳು ಸಿಕ್ಕಿ ಅವರ ಸಮಸ್ಯೆಗಳೆಲ್ಲ ಕಡಿಮೆಯಾಗುತ್ತವೆ.

ಇನ್ನು ಇಲ್ಲಿ ಹಂಗಾಮಿ ನೌಕರರು ಏನು ಕೆಲಸಮಾಡುತ್ತಿದ್ದಾರೋ ಅವರನ್ನು ಖಾಯಂ ಮಾಡಬೇಕಾಗುತ್ತದೆ. ಅವರಿಗೆ ಬಡ್ತಿ ವಗೈರೆ ಸೌಲಭ್ಯಗಳನ್ನು ಕೊಡಬೇಕಾಗುತ್ತದೆ. ಯಾವ ರೀತಿಯ ರೂಲು ನಿಯಮಗಳು ಬೇರೆಯವರಿಗೆ ಅನ್ವಯಸುತ್ತವೆಯೋ ಅದು ಇವರಿಗೂ ಹಾಗೆಯೇ ಅನ್ವಯಿಸುತ್ತದೆ. ಇದಕ್ಕೆ ಸರ್ಕಾರ ಒಪ್ಪಿಕೊಂಡಿದೆ. ಇನ್ನು ಇವರಿಗೆ ಯು.ಜಿ.ಸಿ. ಸ್ಕೇಲ್ ಏನು ಇದೆಯೋ ಅದನ್ನು ಈಗಾಗಲೇ ಜಾರಿಗೆ ಕೊಟ್ಟಿದ್ದೇವೆ. 1973 ರಿಂದ ಯು.ಜಿ.ಸಿ. ಸ್ಕೇಲ್ ಕೊಡಬೇಕಾಗಿತ್ತು. ಅದನ್ನು ಒಪ್ಪಿಕೊಂಡು ಇಲ್ಲಿಯವರೆಗೂ ಜಾರಿಗೆ ಕೊಟ್ಟಿದ್ದೇವೆ. ಆದರೆ ಇದರ ಬಗ್ಗೆ ಸ್ವಲ್ಪ ತಡವಾದುದರಿಂದ ಉಪಾಧ್ಯಾಯರು ಸತ್ಯಾಗ್ರಹ ಹೂಡಿದ್ದರು. ಈ ದೃಷ್ಟಿಯಿಂದ ನಾನು ಕೇಳುತ್ತೇನೆ. ನಾವು ಏನೇನು ಮಾಡಿದ್ದೇವೆ ಅದನ್ನಾದರೂ ಹೇಳಬೇಡವೆ? ಇನ್ನು ಇಂಜಿನಿಯರಿಂಗ್ ಮತ್ತು ಮೆಡಿಕಲ್ ಸೀಟುಗಳನ್ನು ಮೆರಿಟ್ ಪ್ರಕಾರ ಏನು ಕೊಟ್ಟಿದ್ದೇವೆ ಅದರ ಬಗ್ಗೆ ಮಾನ್ಯ ಸದಸ್ಯರಿಂದ ಶ್ಲಾಘನೀಯವಾದ ಒಂದು ಮಾತೂ ಬೇಡವೆ? ಅದರ ಬಗ್ಗೆ ಒಂದೂ ಮಾತೂ ಹೇಳಿಲ್ಲ. ಯಾವಾಗಲೂ ಒಳ್ಳೆಯ ಕೆಲಸ ಮಾಡಿದರೆ ಅದನ್ನೂ ಸಹ ತಾವು

ಹೇಳಬೇಕು. ದೇವರನ್ನು ಹೊಗಳಿ, ಹೊಗಳಿ ಸ್ತೋತ್ರ ಮಾಡಿದರೆ ಹೇಗೆ ಭಕ್ತಿ ಉಕ್ಕುತ್ತದೋ ಹಾಗೆ ನಾವು ಮಾಡಿರುವ ಒಳ್ಳೆಯ ಕೆಲಸವನ್ನು ಹೊಗಳಿದರೆ ಇನ್ನೂ ಚೆನ್ನಾಗಿ ಕೆಲಸ ಮಾಡಬಹುದು. ಈ ಬಗ್ಗೆ ಮಾನ್ಯ ಒಡೆಯ ರಾಜ್ ರವರು ಒಂದು ಮಾತನ್ನಾದರೂ ಹೇಳಿದ್ದಾರೆಯೇ? ಯಾರು ತಪ್ಪು ಮಾಡುತ್ತಾರೋ ಅವರ ಮೇಲೆ ಕಠಿಣವಾದ ಕಾರ್ಯಕ್ರಮ ತೆಗೆದುಕೊಳ್ಳೋಣ.

- 50 ಸಾವಿರ ರೂಪಾಯಿಗಳ ಡಿಪಾಸಿಟ್ ಕೊಡತಕ್ಕದ್ದರಲ್ಲಿ ಮೆರಿಟನ್ನು ನೋಡತಕ್ಕದ್ದು ಇಲ್ಲ. ಸರ್ಕಾರದ ಹತ್ತು ಸೀಟುಗಳು ಏನು ಇವೆ ಅವುಗಳಿಗೂ ಕೂಡ ಮೆರಿಟ್‌ನಲ್ಲಿ ಕೊಡಬೇಕು ಎಂದು ಹೇಳಿದ್ದೇವೆ. ಇಲ್ಲಿ ನಾವು ಮಿನಿಮಂ ಮಾರ್ಕ್ಸ್ 50% ಎಂದು ಮಾಡಿರುವುದರಿಂದ ಅದಕ್ಕೂ ಕಡಿಮೆ ಅಂಕಗಳು ಬಂದ ವಿದ್ಯಾರ್ಥಿಗಳಿಗೆ ಸೀಟುಗಳನ್ನು ಕೊಡುವ ಪ್ರಶ್ನೆ ಬರುವುದಿಲ್ಲ. ಈ ಕೆಟಗರಿಯಲ್ಲೂ ಸಹ ಕನ್ನಡದವರಿಗೆ ಸುಮಾರು 30% ಸೀಟುಗಳನ್ನು ಕೊಡಬೇಕು ಎಂದು ಹೇಳಿದ್ದೇವೆ. ಈ 30% ಮತ್ತು ಸರ್ಕಾರದಲ್ಲಿದ್ದ 20% ಸೀಟುಗಳೂ ಸಹ ಕನ್ನಡದವರಿಗೆ ಸಿಕ್ಕುವ ಹಾಗೆ ಮಾಡಿದ್ದೇವೆ. ಹಿಂದೆ ಇದು ಇರಲಿಲ್ಲ. ಎಸ್.ಸಿ. ಮತ್ತು ಎಸ್.ಟಿ. ಯವರಿಗೆ ಹೋದ ವರ್ಷ ಯಾರೂ 60% ಮಿನಿಮಮ್ ಮಾರ್ಕ್ಸ್ ತೆಗೆದಿದ್ದಾರೋ ಅವರಿಗೆ ಈ ಪ್ರೊಫೆಷನಲ್ ಕಾಲೇಜಿನಲ್ಲಿ ಸೀಟು ದೊರೆಯುತ್ತಿತ್ತು. ಈ ವರ್ಷ 50% ಮಾರ್ಕ್ಸ್ ತೆಗೆದಿದ್ದವರಿಗೂ ಸಹ ಸೀಟು ದೊರೆಯುವ ಅವಕಾಶವಾಗಿದೆ. ಇದರ ಪ್ರಕಾರ ಸುಮಾರು 150 ಹರಿಜನ ಗಿರಿಜನರಿಗೆ ಸೀಟುಗಳು ಎಕ್ಸ್‌ಸ್ಟ್ರಾ ಸಿಕ್ಕಿವೆ. ಸರ್ಕಾರದ ಹೊಸ ನೀತಿಯಿಂದಾಗಿ ಹೆಚ್ಚಿನ ಸಂಖ್ಯೆಯಲ್ಲಿ ಹಿಂದುಳಿದವರಿಗೆ, ಹರಿಜನರಿಗೆ, ಗಿರಿಜನರಿಗೆ, ಹೆಚ್ಚಿನ ಅವಕಾಶವಾಗಿದೆ. ತಾವು ಇದರ ಬಗ್ಗೆ ಅಂಕಿ ಸಂಖ್ಯೆಗಳನ್ನು ನೋಡಿದರೆ ಗೊತ್ತಾಗುತ್ತದೆ. ನಿಜವಾಗಿಯೂ ಮಾನ್ಯ ಸದಸ್ಯರುಗಳು ಈ ಕೆಲಸವನ್ನು ಮಾಡಿದಕ್ಕೆ ತಮ್ಮ ಮೆಚ್ಚಿಗೆಯನ್ನು ಇಲ್ಲಿ ವ್ಯಕ್ತ ಮಾಡಬೇಕಾಗಿತ್ತು. ಮತ್ತೆ ಈ ಸಂಸ್ಥೆಗಳನ್ನು ರಾಷ್ಟ್ರೀಕರಣ ಮಾಡಬೇಕು ಎನ್ನುವ ಅಭಿಪ್ರಾಯವನ್ನು ಕೆಲವರು ಹೇಳಿದ್ದಾರೆ. ಸದ್ಯಕ್ಕೆ ನಾವು ಕ್ಯಾಪಿಟೇಷನ್ ಬಿಲ್ಲನ್ನು ತಂದಿದ್ದೇವೆ. ಅದನ್ನು ತಾವು ಒಪ್ಪಿಕೊಳ್ಳಬೇಕು ನಂತರ ಕಾಂಪ್ರಹನ್ಸಿವ್ ಬಿಲ್ ಸದನದ ಮುಂದೆ ಬರುವುದಿದೆ. ಅದನ್ನೂ ಸಹ ತಾವು ಹಾಕಿಕೊಟ್ಟ ಕಾನೂನಿನ ಚೌಕಟ್ಟಿನಲ್ಲಿ ತಂದಿದ್ದೇವೆ.

## ಕರ್ನಾಟಕ ವಿಶ್ವವಿದ್ಯಾನಿಲಯಗಳ (ಅಧಿನಿಯಮ) ಮಸೂದೆ- 1984 *

Shri B. Rachaiah- I Move "that the Karnataka State Universities (Amendment) Bill 1984 be taken into consideration the Question was proposed.

ಉಪಾಧ್ಯಾಕ್ಷರು- ಮಾನ್ಯ ಸಚಿವರು ವಿಧೇಯಕದ ಬಗ್ಗೆ ವಿವರಣೆ ಕೊಡಿ:

ಶ್ರೀ ಬಿ. ರಾಚಯ್ಯ, ಮಾನ್ಯ ಉಪಾಧ್ಯಕ್ಷರೆ ಈ ವಿಧೇಯಕದಲ್ಲಿ ಮೂರು ತಿದ್ದುಪಡಿಗಳನ್ನು ತಂದಿದ್ದೇವೆ. ಮೊದಲನೆಯದಾಗಿ ವಿಶ್ವವಿದ್ಯಾನಿಲಯದ ಸೆನೆಟ್ ಸಿಂಡಿಕೇಟ್ ಮತ್ತು ಅಕಾಡೆಮಿಕ್ ಕೌನ್ಸಿಲ್ ಮೀಟಿಂಗ್ ನಡೆಯತಕ್ಕ ಸಂದರ್ಭದಲ್ಲಿ ಯಾರಾದರೂ ನ್ಯಾಯಾಲಯಕ್ಕೆ ಹೋಗುವ ಅವಕಾಶವಿದೆ. ನ್ಯಾಯಾಲಯದಿಂದ ತಡೆಯಾಜ್ಞೆ ಬಂದರೆ ಮೀಟಿಂಗ್ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ನ್ಯಾಯಾಲಯದಿಂದ ತಡೆಯಾಜ್ಞೆ ಬಂದರೂ ಸಭೆಯಲ್ಲಿ ಮುಕ್ಕಾಲು ಭಾಗ ಸದಸ್ಯರು ಇದ್ದರೆ ಮೀಟಿಂಗ್ ಮಾಡುವುದಕ್ಕೆ ಅನುಕೂಲವಾಗುವಂತೆ ಸೆನೆಟ್ ಎಂದು ಹೇಳತಕ್ಕದ್ದು ಒಂದು ತಿದ್ದುಪಡಿ. ಎರಡನೆಯ ತಿದ್ದುಪಡಿ ಯೂನಿವರ್ಸಿಟಿ ಗ್ರಾಂಟ್ ಕಮಿಷನ್ ಆರ್ಟಿಕಲ್ 12ರ ಪ್ರಕಾರ, ನಮಗೆ ಗ್ರಾಂಟ್ ಕೊಡಬೇಕಾದ ಪಕ್ಷದಲ್ಲಿ ನಾವು ರೆಕಗ್ನೈಸ್ ಮಾಡಬೇಕಾಗುತ್ತದೆ. ರೆಕಗ್ನೈಸ್ ಮಾಡಬೇಕಾದರೆ ಯೂನಿವರ್ಸಿಟಿಯಲ್ಲಿ ಒಂದು ಪ್ಲಾನಿಂಗ್ ಬೋರ್ಡ್ ಮಾಡಬೇಕೆಂದು ಅವರು ಹೇಳಿದ್ದಾರೆ, ಯೂನಿವರ್ಸಿಟಿ ಪ್ಲಾನಿಂಗ್ ಬೋರ್ಡ್ ಮಾಡಿದರೆ ಯೂನಿವರ್ಸಿಟಿ ಅಕಾಡಮಿಕ್ ಕೌನ್ಸಿಲ್ ಸೆನೆಟ್ ಮತ್ತು ಸಿಂಡಿಕೇಟ್‌ಗೆ ರೆಕಗ್ನೈಸ್ ಪಡೆಯುವುದಕ್ಕೋಸ್ಕರ ಅವರು ಏನೊಂದು ಸೂಚನೆ ಕೊಟ್ಟಿದ್ದಾರೆ. ಅದರ ಪ್ರಕಾರ ಯೂನಿವರ್ಸಿಟಿ ಪ್ಲಾನಿಂಗ್ ಬೋರ್ಡ್ ಮಾಡುತ್ತೇವೆ. ಅದಕ್ಕೋಸ್ಕರ ತಿದ್ದುಪಡಿ ತಂದಿದ್ದೇವೆ. ಮೂರನೆಯದಾಗಿ ಕೆಲವು ವಿಶ್ವವಿದ್ಯಾನಿಲಯಗಳ ಹಿಡಿತದಲ್ಲಿರತಕ್ಕ ಕಾಲೇಜುಗಳವರು ಅಲ್ಲಿ ಅಕಾಡೆಮಿಕ್ ಹೆಚ್ಚಿಸಿಕೊಳ್ಳುವುದಕ್ಕೋಸ್ಕರ ಅವರು ಪರೀಕ್ಷೆಗಳನ್ನು ಸ್ವತಂತ್ರವಾಗಿ ಮಾಡಿಕೊಳ್ಳುವುದಕ್ಕೆ ಕೇಳಿದ್ದಾರೆ. ಯೂನಿವರ್ಸಿಟಿಗ್ರಾಂಟ್ ಕಮಿಷನ್‌ರವರು ಮಂಗಳೂರು ಮತ್ತು ಗುಲ್ಬರ್ಗಾ ಯೂನಿವರ್ಸಿಟಿಗಳಿಗೆ ಗ್ರಾಂಟ್-ಇನ್-ಏಡ್ ರೆಕಗ್ನೈಸ್ ಕೊಡದೆ ಇರುವುದರಿಂದ, ಎರಡೂ ಯೂನಿವರ್ಸಿಟಿಗಳನ್ನು ಕಂಟಿನ್ಯೂ ಮಾಡುತ್ತೇವೆಂದು ತಿದ್ದುಪಡಿಯನ್ನು ತಂದಿದ್ದೇವೆ. ಮಾನ್ಯ ರಾಜ್ಯಪಾಲರ ಜೊತೆಯಲ್ಲಿ ಚರ್ಚಿಮಾಡಿ ಈ ರೀತಿ ಮಾಡಿದ್ದೇವೆಂದು ಹೇಳಿದ ಮೇಲೆ ಯು.ಜಿ.ಸಿ. ಯವರು ಒಪ್ಪಿಕೊಂಡಿದ್ದಾರೆ. ಈ ರೀತಿ ಮಾಡಿದರೆ ಯು.ಜಿ.ಸಿ. ಯಿಂದ ನಮಗೆ ಅನುಕೂಲಗಳು ಸಿಗುತ್ತವೆ.

------ ಮಾನ್ಯ ಅಧ್ಯಕ್ಷರೇ, ಮಂಗಳೂರು ಮತ್ತು ಗುಲ್ಬರ್ಗ ವಿಶ್ವವಿದ್ಯಾನಿಲಯಕ್ಕೆ ಅನುದಾನ ಪಡೆಯುವುದಕ್ಕೋಸ್ಕರ ಕೆಲವು ಷರತ್ತುಗಳನ್ನು ಯೂನಿವರ್ಸಿಟಿ ಗ್ರಾಂಟ್ ಕಮಿಷನ್‌ರವರು ನಮಗೆ ಕಳುಹಿಸಿಕೊಟ್ಟಿದ್ದರು. ಅದರ ಪ್ರಕಾರ ನಮ್ಮ ಹಳೆಯ ಬಿಲ್‌ನಲ್ಲಿ

* ವಿಧಾನ ಸಭಾ ನಡವಳಿಕೆ ದಿನಾಂಕ 3ನೇ ಫ್ರುಬ್ರವರಿ, 1984 ಪುಟ 352-355

ಸೆಕ್ಷನ್ 33ರಲ್ಲಿ ಈ ಒಂದು ಅಮೆಂಡ್‌ಮೆಂಟ್‌ನ್ನು ತಂದಿರತಕ್ಕದ್ದು ಆಗಿದೆ. ----------- ವಿಶ್ವವಿದ್ಯಾನಿಲಯದ ಕೆಲಸಗಳು ನಡೆಯಲಿ ಎನ್ನುವ ಉದ್ದೇಶವೇ ವಿನಹ ಇಲ್ಲಿ ಯಾರನ್ನು ರಕ್ಷಿಸುವ ಉದ್ದೇಶವಿಲ್ಲ. ಎರಡನೆಯದಾಗಿ ಕೊಠಾರಿ ಕಮಿಷನ್ ಮತ್ತು ಗಜೇಂದ್ರ ಗಡ್ಕರ್ ಕಮೀಷನ್ ರವರು ಆಟಾನಮಸ್ ಬಾಡಿ ಬೇಕೆಂದು ಶಿಫಾರಸ್ಸು ಮಾಡಿದ್ದರು. ಅದರ ಪ್ರಕಾರ ಯೂನಿವರ್ಸಿಟಿ ಗ್ರಾಂಟ್ ಕಮಿಷನ್ ನವರು ಇವತ್ತು ಅಟಾನಮಸ್ ಬಾಡಿ ಏಕೆ ಇರಬೇಕೆಂದು ಕೇಳಿ ಕೆಲವು ಸಂದರ್ಭದಲ್ಲಿ ಪರಿಣತರು ಬೇಕು ಸ್ವಾಯತ್ತತೆ ಇರಬೇಕು ಮತ್ತು ಸಾಕಷ್ಟು ಮಟ್ಟಿಗೆ ಇದಕ್ಕೆ ಅವಕಾಶ ನೀಡಬೇಕೆಂದು ಇದನ್ನು ಸೇರಿಸಿ ಎಂದು ಬರೆದಿದ್ದರು. ಹಿಂದೆ ಕರ್ನಾಟಕ ರಾಜ್ಯದಲ್ಲಿರತಕ್ಕಂಥ ಒಂದು ಕಾಲೇಜನ್ನು ಬೇರೆ ಹೊರನಾಡಿನಲ್ಲಿರತಕ್ಕಂತ ವಿಶ್ವವಿದ್ಯಾನಿಲಯಕ್ಕೆ ಅಫಿಲಿಯೇಟ್ ಮಾಡಿದ್ದಾರೆ. ಎಂದರೆ ಅದು ವಿಪರ್ಯಾಸವಾಗುತ್ತದೆ. ಅಟಾನಮಸ್ ಕಾಲೇಜನ್ನು ಒಪ್ಪಿಕೊಳ್ಳಬೇಕೆಂದು ಕೊಠಾರಿ ಕಮಿಶನ್ ಮತ್ತು ಗಜೇಂದ್ರಗಡ್ಕರ್ ಕಮಿಷನ್ ವರದಿಯಲ್ಲಿ ಕೂಡ ಇದೆ. ಇದನ್ನು ಮಾಡುವುದರಿಂದ ಅಕಾಡೆಮಿಕ್ ಎಕ್ಸಲೆನ್ಸ್ ಮಾಡುವುದಕ್ಕೋಸ್ಕರ ಅವಕಾಶ ಮಾಡಿದ ಹಾಗೆ ಆಗುತ್ತದೆ ಒಪ್ಪಿಕೊಳ್ಳಿ ಎಂದು ಇದನ್ನು ಬರೆದಿದ್ದಾರೆ.

ಇನ್ನು ಎರಡನೆಯದಾಗಿ ಹೇಳಬೇಕಾದರೆ ಇಂಡಿಪೆಂಡೆಂಟ್ ಪ್ಲಾನಿಂಗ್ ಬೋರ್ಡ್ ಮಾಡಬೇಕೆಂದು ಛಾನ್ಸ್‌ಲರ್ ಅನ್ನು ಕೇಳಿದಾಗ this should be a creation of Academic council this should be over and above this academic council senate syndicate ಅನ್ನುವ ಅಭಿಪ್ರಾಯ ಬಂತು.ಇದರ ಮೇಲೆ ಅಕಾಡಮಿಕ್ ಕೌನ್ಸಿಲ್ ಮೀಟಿಂಗ್ ಕರೆದು ಅವರ ಒಂದು ಒಪ್ಪಿಗೆ ಮೇಲೆ ಇದನ್ನು ಮಾಡಿದ್ದೇವೆ. ತಮಗೆ ಹೇಳಬೇಕಾದರೆ ಮಂಗಳೂರು ಗುಲ್ಬರ್ಗಾ ವಿಶ್ವವಿದ್ಯಾನಿಲಯಕ್ಕೆ ಇದುವರೆಗೆ 2.5 ಕೋಟಿ ರೂಪಾಯಿ ಖರ್ಚು ಮಾಡಿದ್ದೇವೆ. ಯೂನಿವರ್ಸಿಟಿ ಪ್ಲಾನಿಂಗ್ ಬೋರ್ಡ್ ಇರಬೇಕೆಂದು ಸೂಚಿಸಿದ್ದರು. ಹಾಗೆ ಮಾಡದೆ ಹೋದರೆ ನಮಗೆ ಗ್ರಾಂಟ್ ಸಿಗುವುದಿಲ್ಲ. ಆದುದರಿಂದ ಈ ಒಂದು ಮಸೂದೆಯನ್ನು ಅವರ ಸಲಹೆ ಪ್ರಕಾರ ತಂದಿದ್ದೇನೆ. ತಾವು ಈ ಒಂದು ತಿದ್ದುಪಡಿಯನ್ನು ಒಪ್ಪಿಕೊಂಡರೆ ವಿಶ್ವವಿದ್ಯಾನಿಲಯಕ್ಕೆ ಗ್ರಾಂಟ್ ಅಥವಾ ಫಂಡ್ ಬರಲು ಸಹಾಯವಾಗುತ್ತದೆ. ದಯಮಾಡಿ ಇದನ್ನು ಒಪ್ಪಿಕೊಳ್ಳಬೇಕು ಎಂದು ತಮ್ಮನ್ನು ಕೇಳಿಕೊಳ್ಳುತ್ತೇನೆ.

## ಕರ್ನಾಟಕ ಶಿಕ್ಷಣ ಸಂಸ್ಥೆಗಳ ಕ್ಯಾಪಿಟೇಶನ್ ಶುಲ್ಕ ವಸೂಲಾತಿ ನಿಷೇಧ ಮಸೂದೆ - 1984 *

ಶ್ರೀ ಬಿ. ರಾಚಯ್ಯ (ಮಾನ್ಯ ಶಿಕ್ಷಣ ಮಂತ್ರಿಗಳು) ಮಾನ್ಯ ಅಧ್ಯಕ್ಷರೆ, ಸುಗ್ರಿವಾಜ್ಞೆಯನ್ನು ರೀಪ್ಲೇಸ್ ಮಾಡುವುದಕ್ಕೆ ತಂದಿರತಕ್ಕ ಈ ಮಸೂದೆಯ ಕೆಲವು ಮುಖ್ಯ ಅಂಶಗಳನ್ನು ಹಿಂದಿನ ಸಭೆಯಲ್ಲಿ ನಾನು ಹೇಳುವುದಕ್ಕೆ ಪ್ರಯತ್ನ ಮಾಡುವಾಗ ಮುಂದಿನ ದಿವಸ ಇದನ್ನು ತೆಗೆದುಕೊಳ್ಳೋಣ ಎಂದು ಹೇಳಿದರು. ಆದ್ದರಿಂದ ಈಗ ಕೆಲವು ಅಂಶಗಳನ್ನು ಈ ಸಭೆಯ ಮುಂದಿಡುವುದಕ್ಕೆ ತಮ್ಮ ಅಪ್ಪಣೆ ಕೇಳುತ್ತೇನೆ. ಕರ್ನಾಟಕದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಕ್ತಿಪರ ಶುಲ್ಕ ವಸೂಲು ಮಾಡುವುದನ್ನು ನಿಲ್ಲಿಸಬೇಕೆಂದು ಹಿಂದಿನ ಸರ್ಕಾರ 1981ರಲ್ಲೆ ಆಜ್ಞೆ ಹೊರಡಿಸಿತ್ತು. ಆಜ್ಞೆ ಶ್ರೇಷ್ಠ ನ್ಯಾಯಾಲಯಕ್ಕೆ ಹೋಗಿ ಅನುರ್ಜಿತವಾದ ಮೇಲೆ ಅದನ್ನು ಕಾನೂನಿನ ಚೌಕಟ್ಟಿನಲ್ಲಿ ತರಬೇಕೆಂದು ಆದೇಶ ಕೊಟ್ಟಿದ್ದರಿಂದ ನಾವು ಇದಕ್ಕೆ ಕಾನೂನಿನ ಚೌಕಟ್ಟನ್ನು ಕೊಡುವುದಕ್ಕೆ ಪ್ರಯತ್ನ ಮಾಡಿದೆವು. ಆಗಿನ ಸಂದರ್ಭದಲ್ಲಿ ಶಾಸನ ಸಭೆ ಇಲ್ಲದಿದ್ದುದರಿಂದ ಮತ್ತು ಇದು ತ್ವರಿತವಾಗಿ ಆಗಬೇಕಾಗಿದ್ದುದರಿಂದ ಸರ್ಕಾರ ಸುಗ್ರೀವಾಜ್ಞೆಯನ್ನು ಹೊರಡಿಸಿತು, 1981ರಿಂದ 5 ವರ್ಷಗಳ ಅವಧಿಯಲ್ಲಿ ಏನು ಮಾಡಬೇಕೆಂದು ಸರ್ಕಾರ ಎಕ್ಸಿಕ್ಯೂಟಿವ್ ಆರ್ಡರ್‌ನಲ್ಲಿ ಆಜ್ಞೆ ಮಾಡಿತೋ ಅದರ ಬಗ್ಗೆ ಕಳೆದ ಶಾಸನ ಸಭೆಯಲ್ಲಿ ಆಯವ್ಯಯವನ್ನು ಮಂಡಿಸುವ ಕಾಲದಲ್ಲಿ ಮುಖ್ಯಮಂತ್ರಿಗಳು ಹೇಳಿದ್ದರು.

(ಶ್ರೀ ಪಿ. ರಾಮದೇವ್ ಅವರು ಅಧ್ಯಕ್ಷ ಪೀಠವನ್ನು ಅಲಂಕರಿಸಿದರು.)

ಆ ಒಂದು ವ್ಯಕ್ತಿಪರ ಶುಲ್ಕವನ್ನು ಐದು ವರ್ಷಗಳಲ್ಲಿ ಹಂತ, ಹಂತವಾಗಿ ತೆಗೆದುಕೊಂಡು ಹೋಗುತ್ತೇವೆಂದ ಮೇಲೆ ಈ ಸುಗ್ರೀವಾಜ್ಞೆಯನ್ನು ಹೊರಡಿಸಲಾಯಿತು. ಈಗಾಗಲೇ ಮೂರು ಸಾವಿರ ಜನ ನಿರುದ್ಯೋಗಿ ಇಂಜಿನಿಯರ್‌ಗಳು ತಮ್ಮ ಹೆಸರನ್ನು ಉದ್ಯೋಗ ವಿನಿಮಯ ಕಛೇರಿಯಲ್ಲಿ ನೋಂದಣಿ ಮಾಡಿಕೊಂಡಿದ್ದಾರೆ. ಹಾಗೂ 1984-85ರಲ್ಲಿ ವಿದ್ಯಾಭ್ಯಾಸ ಪಡೆದು ಹೊರಬರುವ ಇಂಜಿನಿಯರುಗಳ ಸಂಖ್ಯೆ ಹನ್ನೊಂದು ಸಾವಿರ. ಇಷ್ಟು ಜನ ನಿರುದ್ಯೋಗಿ ಪದವೀಧರರು ನಮ್ಮ ರಾಜ್ಯದಲ್ಲಿ ಉಳಿಯುತ್ತಾರೆ. ನಮ್ಮ ರಾಜ್ಯದಲ್ಲಿ 4 ಸರ್ಕಾರಿ ಹಾಗೂ ಎಂಟು ಖಾಸಗೀ ಇಂಜಿನಿಯರ್ ಕಾಲೇಜುಗಳು ಇದ್ದವು. ಅನಂತರ ಸುಮಾರು 23 ಖಾಸಗೀ ಇಂಜಿನಿಯರ್‌ಕಾಲೇಜುಗಳು ಬಂದವು. ಇವುಗಳ ಫಲಿತಾಂಶವನ್ನು ನೋಡಿ 1978-79ರಲ್ಲಿ ಹೊಸದಾಗಿ 9 ಇಂಜಿನಿಯರಿಂಗ್ ಕಾಲೇಜುಗಳಿಗೆ ಅವಕಾಶ ಮಾಡಿಕೊಡಲಾಯಿತು. 1980-81ರಲ್ಲಿ ಒಟ್ಟು ಸುಮಾರು 13 ಕಾಲೇಜುಗಳು ಅಸ್ತಿತ್ವಕ್ಕೆ ಬಂದವು. ಆವತ್ತಿನ ದಿನ ವಿಶ್ವವಿದ್ಯಾನಿಲಯದವರು ಏನು ಶಿಫಾರಸ್ಸು ಮಾಡಿರುತ್ತಾರೆ ಅವುಗಳನ್ನು ಅನುಸರಿಸಿ ಸರ್ಕಾರ ಹೊಸಕಾಲೇಜುಗಳನ್ನು ಮಾಡಬೇಕಾಗಿತ್ತು. ಆದರೆ ಆಕಾಲದಲ್ಲಿ ಅನುಮತಿ ಇಲ್ಲದೆ ಕೊಟ್ಟಿರುವುದರಿಂದ ಈ ನ್ಯೂನತೆಯನ್ನು ಸರಿಪಡಿಸುವುದಕ್ಕೆ ಆಗಿನ ಸರ್ಕಾರ ಒಂದು

---

* ವಿಧಾನ ಸಭಾ ನಡವಳಿಕೆ ದಿನಾಂಕ ಫೆಬ್ರವರಿ, 1984 ಪುಟ 406-407

ಸುಗ್ರೀವಾಜ್ಞೆಯನ್ನು ಹೊರಡಿಸಿ ಸರ್ಕಾರವೇ ಆ ಒಂದು ಅಧಿಕಾರವನ್ನು ತೆಗೆದುಕೊಂಡಿತ್ತು. ಆ ಪ್ರಕಾರ ವಿಶ್ವವಿದ್ಯಾನಿಲಯದವರ ಶಿಫಾರಸು ಇಲ್ಲದೆ ಕಾಲೇಜುಗಳಿಗೆ ಅನುಮತಿ ಕೊಡುವ ಒಂದು ಅವಕಾಶವನ್ನು ತೆಗೆದುಕೊಂಡು ಆ ಅವಧಿಯಲ್ಲಿ 23 ಹೊಸ ಕಾಲೇಜುಗಳು ಅಸ್ತಿತ್ವಕ್ಕೆ ಬರುವುದಕ್ಕೆ ದಾರಿ ಮಾಡಿಕೊಟ್ಟಿತ್ತು. ಒಟ್ಟು ಇರುವ 44 ಕಾಲೇಜುಗಳಲ್ಲಿ ಸುಮಾರು 27 ಖಾಸಗೀ ಕಾಲೇಜುಗಳನ್ನು ನಾವು ನೋಡುತ್ತಿದ್ದೇವೆ. ಈ ಖಾಸಗೀ-ಕಾಲೇಜುಗಳಲ್ಲಿ ವಸೂಲು ಮಾಡತಕ್ಕ ವೃತ್ತಿಪರ ಶುಲ್ಕವನ್ನು ರದ್ದು ಮಾಡಬೇಕೆಂದೂ, ಇದು ಕಮರ್ಷಿಯಲೈಸ್ ಆಗುತ್ತದೆಂದೂ ಶಾಸನ ಸಭೆಗಳಲ್ಲಿ ಚರ್ಚೆಯಾಯಿತು ಮತ್ತು ಈ ಬಗ್ಗೆ ಇಡೀ ರಾಷ್ಟ್ರದಲ್ಲಿ ಒಳ್ಳೆಯ ಅಭಿಪ್ರಾಯ ಬರಲಿಲ್ಲವಾದ್ದರಿಂದ ಹಿಂದಿನ ಸರ್ಕಾರ ಇದನ್ನು ರದ್ದು ಪಡಿಸಬೇಕೆಂದು ಹೇಳಿ ಎಕ್ಸಿಕ್ಯೂಟಿವ್ ಆರ್ಡರನ್ನು ಮಾಡಿತು. ಅದನ್ನು ಸರಿಪಡಿಸುವುದಕ್ಕೆ ಕಾನೂನು ಚೌಕಟ್ಟಿನಲ್ಲಿ ತಂದೆವು. ಅದನ್ನು ಒಂದೇ ಸಾರಿ ಏಕೆ ತೆಗೆಯಬಾರದೆಂದು ಹೇಳುತ್ತಿದ್ದಾರೆ. ಆಂಧ್ರ ಪ್ರದೇಶದಲ್ಲಿ 13 ಕಾಲೇಜುಗಳು ಇದ್ದು ಅವುಗಳಲ್ಲಿ ಹನ್ನೊಂದು ಕಾಲೇಜುಗಳು ಅಭಿವೃದ್ಧಿಯಾಗಿದ್ದು, ಇನ್ನು ಕಾಲೇಜಿನ ಅಭಿವೃದ್ಧಿ ಮಾಡಲಾಗುತ್ತದೆಂದು ಹೇಳಿದ್ದಾರೆ. ಆ ಬಗ್ಗೆ ಅವರು ಆಜ್ಞೆ ಮಾಡಿರುತ್ತಾರೆ. ಅಲ್ಲಿನ ಒಂದು ಪರಿಸ್ಥಿತಿ ನಮ್ಮಲ್ಲೂ ಇದ್ದರೆ ಅದನ್ನು ಮಾಡಬಹುದಾಗಿತ್ತು. ಆದರೆ ನಮ್ಮಲ್ಲಿ 27 ಖಾಸಗೀ ಕಾಲೇಜುಗಳು ಇದ್ದು ಅವುಗಳನ್ನು ಅಭಿವೃದ್ಧಿ ಮಾಡುವುದಕ್ಕೆ ಬೇಕಾಗಿರುವ ಹಣ ಮತ್ತು ಪ್ರತಿವರ್ಷವು ಕೊಡಬೇಕಾಗಿರುವ ಅನುದಾನ ಏನಿದೆ ಇದನ್ನೆಲ್ಲಾ ಲೆಕ್ಕಹಾಕಿ ನೋಡಿದರೆ ಪ್ರತಿವರ್ಷ ಒಟ್ಟು 19 ಕೋಟಿ ರೂಪಾಯಿಗಳನ್ನು 5 ವರ್ಷಗಳಲ್ಲಿ ಸುಮಾರು 95 ಕೋಟಿ ರೂಪಾಯಿಗಳನ್ನು ಸರ್ಕಾರ ಈ ಬಾಬಿಗೆ ಕೊಡಬೇಕಾಗುತ್ತದೆ.

ಇಷ್ಟು ಹಣವನ್ನು ಸರ್ಕಾರ ಈಗಿನ ಪರಿಸ್ಥಿತಿಯಲ್ಲಿ ಒದಗಿಸುವುದಕ್ಕಾಗುವುದಿಲ್ಲ. ನಾವು ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಬಗ್ಗೆಯೂ ಆದ್ಯತೆ ಕೊಡಬೇಕಾಗುತ್ತದೆ. ಆದ್ದರಿಂದ ಆದ್ಯತೆ ಕೊಡುವ ದೃಷ್ಟಿಯಿಂದ, ಸರ್ಕಾರದ ಹಣಕಾಸಿನ ಕ್ಲಿಷ್ಟ ಪರಿಸ್ಥಿತಿಯನ್ನು ನೋಡಿ ಖಾಸಗೀ ಕಾಲೇಜುಗಳಿಗೆ ಹೊರಗಡೆಯಿಂದ ಬರುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿರುವುದರಿಂದ ಅವರಿಗೋಸ್ಕರ ಸರ್ಕಾರದ ಹಣವನ್ನು ಹೆಚ್ಚು ಖರ್ಚು ಮಾಡುವುದರ ಬದಲು ನಾವು ಹೆಚ್ಚು ಪ್ರೈಮರಿ ಹಾಗೂ ಪ್ರೌಢ ಶಾಲೆಗಳಿಗೆ ಆದ್ಯತೆ ಕೊಡುವುದು ಸರಿ ಎಂದು ನಿರ್ಧರಿಸಲಾಯಿತು. ನಾನು ಲೆಕ್ಕ ಹಾಕಿ ನೋಡಿದಾಗ ಸುಮಾರು 65% ನಷ್ಟು ವಿದ್ಯಾರ್ಥಿಗಳು ಹೊರಗಡೆಯಿಂದ ಬರುತ್ತಿರುವವರಾಗಿದ್ದಾರೆ. ಮೊದಲನೆಯದಾಗಿ ಇನ್ನು ಮುಂದೆ ಸ್ಥಾಪನೆಯಾಗುವ ಇಂಜಿನಿಯರ್ ಕಾಲೇಜುಗಳಾಗಲೀ, ಬಿ.ಪಿ.ಎಡ್, ಬಿ.ಇಡಿ. ಸಿಪಿಎಡ್, ಪಾಲಿಟೆಕ್ನಿಕ್ ಕಾಲೇಜುಗಳಾಗಲೀ, ವ್ಯಕ್ತಿಪರ ಶುಲ್ಕವನ್ನು ವಸೂಲು ಮಾಡುವುದಕ್ಕಾಗುವುದಿಲ್ಲ. ಆದರೆ ತಾತ್ಕಾಲಿಕವಾಗಿ ಬರುವ ಐದು ವರ್ಷಗಳಲ್ಲಿ ಈಗ ಇರುವ ಕಾಲೇಜುಗಳೆಷ್ಟಿವೆ ಅಷ್ಟನ್ನು ಪಡೆದುಕೊಳ್ಳತಕ್ಕದೆಂದು ಮಾಡಲಾಗಿದೆ. ಆದರ ಪ್ರಕಾರ ಖಾಸಗೀ ಏಡೆಡ್ ಕಾಲೇಜುಗಳಲ್ಲದೇ, ಏಡೆಡ್ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸರ್ಕಾರದ ಅನುಮತಿ ಪಡೆದು 6 ಸಾವಿರ ರೂಪಾಯಿಗಳನ್ನು ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳಿಂದರೂ ಮತ್ತು 12 ಸಾವಿರ ರೂಪಾಯಿಗಳನ್ನು

ಹೊರಗಡೆಯಿಂದ ಬರುವ ವಿದ್ಯಾರ್ಥಿಗಳಿಂದಲೂ ಪಡೆದುಕೊಳ್ಳಬಹುದೆಂದು ಇದೆ. ಆದರೆ ಖಾಸಗೀ ಕಾಲೇಜುಗಳಲ್ಲಿನ ಪೀಸ್ ಬಗ್ಗೆ ಪರಿಶೀಲನೆ ಮಾಡಲಾಗುತ್ತಿದೆ. ಇನ್ನು ಎರಡನೆಯದಾಗಿ 1982-83ರ ಹಿಂದೆ ಏನು ಡಿಸ್ಕ್ರೀಷನರಿ ಸೀಟ್ಸ್ ಎಂದು ತೆಗೆದುಕೊಳ್ಳಲಾಗುತ್ತಿತ್ತೋ ಅದರಲ್ಲಿ ಪ್ರಭಾವ ಮತ್ತು ಇನ್ನಿತರ ವ್ಯವಹಾರಗಳು ಆಗಬಹುದೆಂದು ಹೇಳಿ ಅದನ್ನು ಮೆರಿಟ್‌ಪುಲ್ ಮಾಡಬೇಕೆಂದು ಅದನ್ನು ಮಾಡಿದ್ದೇವೆ.

ಸರ್ಕಾರಿ ಇಂಜಿನಿಯರ್ ಕಾಲೇಜುಗಳಲ್ಲಿ 56% ಹಾಗೂ ಖಾಸಗೀ ಕಾಲೇಜುಗಳಲ್ಲಿ 50% ಆದರೂ ಕನ್ನಡದವರಿಗೆ ಅವಕಾಶ ಸಿಗಬೇಕೆಂದು ಇದರಲ್ಲಿ ಮಾಡಿಕೊಂಡಿದ್ದವು. ಆದರೆ ಇವರಿಗೆ 49% ಮಾತ್ರ ಸಿಕ್ಕಿರುವುದು ನಾವು ನೋಡಿದ್ದೇವೆ ಹಾಗೂ 20% ಜನರನ್ನು ಮೆರಿಟ್ ಪುಲ್‌ನಲ್ಲಿ ತೆಗೆದುಕೊಂಡು ಎಂದರೆ ಮೆರಿಟ್ ಇರುವವರು ಮತ್ತು ರಿಸರ್ವೇಷನ್ ಪ್ರಕಾರ ಬ್ಯಾಕ್‌ವರ್ಡ್‌ಕ್ಲಾಸ್, ಎಸ್.ಸಿ. ಹಾಗೂ ಎಸ್.ಟಿ ಯವರಿಗೆ ಏನು ಕೊಡಬೇಕೋ ಅದರ ಪ್ರಕಾರ ವಹಿಸಬೇಕೆಂದು 20% ತೆಗೆದುಕೊಂಡಿದ್ದೇವೆ. ಅನುದಾನ ಇಲ್ಲದ ಪಾಲಿಟೆಕ್ನಿಕ್‌ಗಳಲ್ಲಿ 15 ಹಾಗೂ 3% ಸೀಟ್‌ಗಳನ್ನು ಎಸ್.ಸಿ. ಹಾಗೂ ಎಸ್.ಟಿ. ವಿದ್ಯಾರ್ಥಿಗಳಿಗೆ ಕೊಡಬೇಕೆಂದು ನಿಬಂಧನೆ ಹಾಕಿದ್ದೇವೆ. ಹಾಗೂ ಐದು ವರ್ಷಗಳು ಆದ ಮೇಲೆ 20% ಸೀಟುಗಳನ್ನು ಸರ್ಕಾರಕ್ಕೆ ಕೊಡಬೇಕೆಂದು ಹೇಳಿ ಇಟ್ಟಿದ್ದೇವೆ. ಇನ್ನು ಖಾಸಗೀ ಕಾಲೇಜುಗಳಲ್ಲಿ ಹಿಂದೆ ಇದ್ದ 300 ರೂಪಾಯಿಗಳಿಗಿಂತ 2 ರಷ್ಟು ಹಣವನ್ನು ವಿದ್ಯಾರ್ಥಿಗಳಿಂದ ವಸೂಲು ಮಾಡಬೇಕೆಂದು ಹೇಳಿ ಅವಕಾಶ ಮಾಡಿಕೊಟ್ಟಿದ್ದೇವೆ. ವಸೂಲು ಮಾಡುವ ಹಣಕ್ಕೆ ಲೆಕ್ಕ ಪತ್ರ ಇಟ್ಟು ರೇಗ್ಯುಲೇಟ್ ಮಾಡುವುದಕ್ಕೆ ಸರ್ಕಾರ ಅಧಿಕಾರ ತೆಗೆದುಕೊಂಡಿದೆ. ಈ ಒಂದು ದೃಷ್ಟಿಯಿಂದ ಶಾಸನ ಸಭೆ ಅಧಿವೇಶನ ಇಲ್ಲದಿದ್ದುದರಿಂದ ಇದನ್ನು ತುರ್ತಾಗಿ ಜಾರಿಗೆ ತರಬೇಕೆಂದು ಸುಗ್ರೀವಾಜ್ಞೆ ತಂದಿದ್ದು, ಆ ಬಗ್ಗೆ ಈ ಒಂದು ಕಾನೂನನ್ನು ತಂದಿದ್ದೇವೆ. ಇದಕ್ಕೆ ಸಭೆ ಅನುಮತಿಯನ್ನು ಕೊಡಬೇಕಾಗಿದೆ. ಈ ಒಂದು ಸುಗ್ರೀವಾಜ್ಞೆಯ ಪ್ರಕಾರ ಏನು ಇವತ್ತಿನವರೆಗೆ ಹಂಚಿಕೆ ಮಾಡಲಾಗಿದೆ ಅದನ್ನು ವ್ಯಾಲಿಡೇಟ್ ಮಾಡಬೇಕಾಗಿದೆ. ಈ ರೀತಿ ಮಾಡದೆ ಇದ್ದರೆ ಬಹುಶಃ ಇವತ್ತು ಖಾಸಗಿ ಸಂಸ್ಥೆಯವರು ಇದಕ್ಕಿಂತಲೂ ಹೆಚ್ಚು ತೆಗೆದುಕೊಂಡಿದ್ದರೆ ಅವರ ಮೇಲೆ ಕ್ರಮ ತೆಗೆದುಕೊಳ್ಳುವುದಕ್ಕೆ ಕಷ್ಟವಾಗುತ್ತದೆ. ಈ ದಿನ ಈ ಸಂಸ್ಥೆಗಳಲ್ಲಿ 50 ಹಾಗೂ 56% ನಷ್ಟು ಸೀಟುಗಳು ಕರ್ನಾಟಕದವರಿಗೆ ಜಖಾಗಬೇಕಾಗಿದೆ ಹಾಗೂ 20% ಸೀಟುಗಳನ್ನು ಮೆರಿಟ್ ನವರೆಗೆ ಕೊಡಬೇಕಾಗಿದೆ. ಇನ್ನು ಮುಂದೆ ಸ್ಥಾಪನೆ ಆಗುವ ಕಾಲೇಜುಗಳಲ್ಲಿ ಕ್ಯಾಪಿಟೇಷನ್ ಫೀಯನ್ನು ರದ್ದು ಮಾಡಬೇಕೆಂದು ಎಲ್ಲಾ ಅಂಶಗಳನ್ನು ಒಳಗೊಂಡಿರುವ ಈ ವಿಧೇಯಕಕ್ಕೆ ಸಭೆ ತನ್ನ ಅನುಮತಿಯನ್ನು ಕೊಡಬೇಕೆಂದು ಕೇಳಿಕೊಳ್ಳುತ್ತಿದ್ದೇನೆ.

## 1986-87ನೆ ಸಾಲಿನ ಗೃಹ ಇಲಾಖೆಯ ಬೇಡಿಕೆಗಳ ಮೇಲಿನ ಚರ್ಚೆ

ಶ್ರೀ ಬಿ. ರಾಚಯ್ಯ [ಗೃಹ ಸಚಿವರು] - ಸನ್ಮಾನ್ಯ ಸಭಾಧ್ಯಕ್ಷರೇ, ಪೊಲೀಸ್ ಇಲಾಖೆ ಬೇಡಿಕೆಗಳ ಬಗ್ಗೆ ನಿನ್ನೆಯ ದಿವಸ ಸುಮಾರು 11 ಜನ ಮಾನ್ಯ ಶಾಸನ ಸಭಾಸದಸ್ಯರು ಚರ್ಚೆಯಲ್ಲಿ ಭಾಗವಹಿಸಿದ್ದಾರೆ. ಈ ಇಲಾಖೆಯಲ್ಲಿ ನಡೆಯಬಹುದಾದಂಥ ಕೆಲವು ಅಪರಾಧಗಳು ಮತ್ತು ಈ ಇಲಾಖೆಯವರು ಅನುಸರಿಸಬೇಕಾದಂಥ ಸಂಯಮ, ನೀತಿನಿಯಮಗಳ ಬಗ್ಗೆ ಮಾತನಾಡಿದ್ದಾರೆ. ಮತ್ತೆ ಈ ಇಲಾಖೆಯಲ್ಲಿ ಹೆಚ್ಚು ಹೊತ್ತಿರುವುದರಿಂದ, ಅವರಿಗೆ ಕೊಡಬೇಕಾಗಿರುವಂತಹ ಸೌಲಭ್ಯಗಳು ಖೂನಿ ದರೋಡೆ ಮತ್ತು ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರ, ಸರಗಳ್ಳತನ ಇವುಗಳ ಮೇಲೆ ವಿವರಗಳನ್ನು ಕೊಡಬೇಕೆಂದು ಹೇಳಿ ಡಕಾಯಿತರನ್ನು ಹಿಡಿಯುವುದರಲ್ಲಿ ವಿಫಲರಾಗಿದ್ದಾರೆ ಎಂದು ಹೇಳಿದ್ದಾರೆ, ಮತ್ತು ನಾನಾ ರೀತಿಯಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವರೆಲ್ಲರಿಗೂ ಕೂಡ ನಾನು ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಬಹುಶಃ ಪ್ರಜಾ ಪ್ರಭುತ್ವದಲ್ಲಿ ಆಡಳಿತ ನಡೆಸುತ್ತಿರುವ ಪಕ್ಷದ ಆಡಳಿತ ವೈಖರಿ, ಲೋಪದೋಷಗಳು ಮತ್ತು ಅವುಗಳನ್ನು ತಿದ್ದಿಕೊಳ್ಳುವುದಕ್ಕೆ ಅವಕಾಶವನ್ನು ಕೊಡುವಂತಹದು ವಿರೋಧ ಪಕ್ಷದ ಮಾನ್ಯ ಸದಸ್ಯರುಗಳ ಕರ್ತವ್ಯವಾಗಿದೆ. ಆ ದೃಷ್ಟಿಯಲ್ಲಿ ವಿರೋಧಪಕ್ಷದ ಸದಸ್ಯರಾಗಿರುವ ಶ್ರೀಮಾನ್ ಧರ್ಮಸಿಂಗ್ ಅವರು ಪ್ರಥಮವಾಗಿ ಈ ಬೇಡಿಕೆಗಳ ಮೇಲೆ ಮಾತನಾಡಿ, ಉತ್ತಮವಾಗಿರುವಂತಹ ಸಲಹೆಗಳನ್ನು ಕೊಟ್ಟಿದ್ದಾರೆ, ಮತ್ತು ಅಷ್ಟೇ ತೀವ್ರವಾಗಿ, ನಮ್ಮ ಕರ್ತವ್ಯಗಳ ಬಗ್ಗೆ ತಿವಿದು ಹೇಳಿದ್ದಾರೆ. ಆ ದೃಷ್ಟಿಯಿಂದ ಇಲ್ಲಿ ಸಾಕಷ್ಟು ಪ್ರಸ್ತಾಪ ಮಾಡುತ್ತಾ, ಕೆಲವು ವಿಷಯಗಳ ಬಗ್ಗೆ ಮಾಹಿತಿಗಳನ್ನು ಕೊಡುವುದು ನನ್ನ ಕರ್ತವ್ಯವೆಂದು ಹೇಳಿ, ಈ ದಿವಸ ಈ ಸಮಯವನ್ನು, ಉಪಯೋಗಿಸಿಕೊಂಡು ಅವರಿಗೆ ಉತ್ತರ ಕೊಡುವುದಕ್ಕೆ ಪ್ರಯತ್ನ ಮಾಡುತ್ತೇನೆ. ಮೊಕದ್ದಮೆಗಳನ್ನು ನೋಂದಾಯಿಸಿಕೊಳ್ಳತಕ್ಕ ವಿಷಯದಲ್ಲಿ ಈ ವರ್ಷ ಹೆಚ್ಚು ನೋಂದಾವಣೆಗಳಾಗಿವೆ. ಹೋದ ವರ್ಷಕ್ಕೆ ಹೋಲಿಸಿ ನೋಡಿದಾಗ 5-6 ಸಾವಿರ ಮೊಕದ್ದಮೆಗಳು ಜಾಸ್ತಿಯಾಗಿವೆ. ಈ ಅಪರಾಧಗಳು ಸತ್ಯಕ್ಕೆ ದೂರವಾದವು. ಎಂದು ಹೇಳಲಾರೆ. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಹೊರ ರಾಜ್ಯಗಳಲ್ಲಿ, ನಡೆಯುತ್ತಿರುವ, ನಡೆದಿರುವ, ಕೆಲವಾರು ವಿಷಯಗಳನ್ನು ಪ್ರಸ್ತಾಪ ಮಾಡಿದರೆ ಬಹುಶಃ ಅದರಿಂದ ಮಾನ್ಯ ಸದಸ್ಯರಿಗೆ ಅರ್ಥವಾಗುತ್ತದೆಂದು ತಿಳಿದುಕೊಂಡಿದ್ದೇನೆ.

ಈ ಅಪರಾಧಗಳು ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿಲ್ಲ ಇಡೀ ರಾಷ್ಟ್ರದಲ್ಲಿ, ಬೇರೆ ಬೇರೆ ಪ್ರಾಂತ್ಯಗಳಲ್ಲಿ ಈ ಹೆಚ್ಚಳವನ್ನು ನಾವು ಕಾಣುತ್ತಿದ್ದೇವೆ, ಬಿಹಾರ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ತಮಿಳುನಾಡು, ಆಂಧ್ರ-ಪ್ರದೇಶ, ಈ ರಾಜ್ಯಗಳಲ್ಲೂ ಕೂಡ ಅಪರಾಧಗಳ ನೋಂದಾವಣೆ ಸಂಖ್ಯೆ ಹೆಚ್ಚಾಗಿದೆ. ಉತ್ತರ ಪ್ರದೇಶದಲ್ಲಿ ಖೂನಿಗಳು 5983, ಬಿಹಾರ 3084, ಮಧ್ಯಪ್ರದೇಶದಲ್ಲಿ 2610, ಮಹಾರಾಷ್ಟ್ರದಲ್ಲಿ 2112, ತಮಿಳುನಾಡಿನಲ್ಲಿ 1335, ಆಂಧ್ರ

* ವಿಧಾನ ಸಭಾ ನಡವಳಿಕೆ ದಿನಾಂಕ 1ನೇ ಮಾರ್ಚ್, 1986 ಪುಟ 533-553.

ಪ್ರದೇಶದಲ್ಲಿ 1347, ಕರ್ನಾಟಕ ರಾಜ್ಯದಲ್ಲಿ 1984ರಲ್ಲಿ 1117, 1985ರಲ್ಲಿ 1002 ಖೂನಿ ಪ್ರಕರಣಗಳ ವರದಿ ಆಗಿವೆ. ಅಪರಾಧಗಳು ಎಂದರೆ, ದರೋಡೆ, ಸುಲಿಗೆ, ಕಳ್ಳತನ, ಮಹಿಳೆಯರ ಮೇಲೆ ಅತ್ಯಾಚಾರ ಇವು ನಮ್ಮ ರಾಜ್ಯದಲ್ಲಷ್ಟೇ ಅಲ್ಲ, ದೇಶದ ಇತರೆ ರಾಜ್ಯಗಳಲ್ಲೂ ಕೂಡ ಈ ಹೆಚ್ಚಳವನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಇಲ್ಲೂ ಕೂಡ ಸ್ವಲ್ಪ ಮಟ್ಟಿಗೆ ಈ ಒಂದು ಸಂಖ್ಯೆ ಹೆಚ್ಚಾಗಿದೆ.

– ನಾನು, ನಮ್ಮ ರಾಜ್ಯದ ಸಂಖ್ಯೆಯ ವಿವರಗಳನ್ನು ಹೇಳಿ, ಸಮರ್ಥಿಸಿಕೊಳ್ಳುತ್ತೇನೆ ಎಂದಲ್ಲ. ಸಾಧ್ಯವಾದ ಮಟ್ಟಿಗೂ ಈ ಹೆಚ್ಚಳ, ಹಿಂದಿನ ವರ್ಷಕ್ಕೆ ಹೋಲಿಸಿ ನೋಡಿದಾಗ ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ. ಈ ಕಾರಣಕ್ಕೋಸ್ಕರ ಈ ಸಂಖ್ಯೆಗಳನ್ನಾಗಿ ಕೊಟ್ಟಿದ್ದೇನೆ. ಅಪರಾಧಗಳು ಆಗಿರುವುದು ಸರಿ ಎಂದು ನಾನು ಸಮರ್ಥಿಸಿಕೊಳ್ಳುತ್ತಿಲ್ಲ. ಈ ಹೆಚ್ಚಳ ಸ್ವಲ್ಪಮಟ್ಟಿಗೆ ಹೊರರಾಜ್ಯಗಳಿಗೆ ಹೋಲಿಸಿ ನೋಡಿದಾಗ, ಇಲ್ಲೂ ಕೂಡ ಆಗಿದೆ. ಕರ್ನಾಟಕದ ಸಂಸ್ಕೃತಿಯೇ ಬೇರೆ, ಬೇರೆ ರಾಜ್ಯಗಳ ಸಂಸ್ಕೃತಿಯೇ ಬೇರೆ ಇಲ್ಲಿ ಶಾಂತಪ್ರಿಯ ಜನರಿದ್ದಾರೆ. ಇಂತಹ ಸಂದರ್ಭಗಳಲ್ಲಿ ಜನರ ಮನಸ್ಸಿನ ಮೇಲೆ ಆಘಾತವಾಗಿದೆ ಎಂದು ಅರಿತುಕೊಂಡಿದ್ದೇನೆ. ನಗರಗಳಿಗೆ, ಹೊರ ರಾಜ್ಯದಿಂದ ಜನರು ಬಂದು ನೆಲೆಸುವ ಕಾಲದಲ್ಲಿ, ಅವರ ಗುಣಗಳು, ಇತ್ಯಾದಿಗಳ ಪರಿಣಾಮವಾಗಿ ಈ ಸಂಖ್ಯೆ ಹೆಚ್ಚಾಗಿದೆ ಎನ್ನುವ ದೃಷ್ಟಿಯಿಂದ ಈ ಮಾತನ್ನು ಹೇಳುತ್ತಿದ್ದೇನೆ. ಆಗಿರುವಂತಹದನ್ನು ನಾನು ಸಮರ್ಥಿಸಿಕೊಳ್ಳುವುದಿಲ್ಲ. ಇತ್ತೀಚೆಗೆ ಆದ ದರೋಡೆಗಳು ಮತ್ತು ಮಂಗಳೂರಿನಲ್ಲಿ ಆದ ದರೋಡೆ ಪ್ರಕರಣ, ಕರ್ನಾಟಕದ ಜನರ ಮೇಲೆ ಪರಿಣಾಮ ಆಗಿದೆ. ಇವುಗಳು ಅಮಾನುಷವಾಗಿ ನಡೆದುದರಿಂದ, ಪತ್ರಿಕೆಗಳು ಮತ್ತು ಅನೇಕರು ಹೆಚ್ಚು ರೀತಿಯಲ್ಲಿ ಪ್ರತಿಭಟನೆ, ಮಾಡಿದುದರಿಂದ ಜನರ ಮನಸ್ಸಿನಲ್ಲಿ ಒಂದು ರೀತಿಯ ಭೀತಿಯ ವಾತಾವರಣ ಉಂಟಾಗಿದೆ ಎಂಬುದನ್ನು ಅಲ್ಲಗಳೆಯುತ್ತಿಲ್ಲ. ಅದಕ್ಕೋಸ್ಕರವಾಗಿಯೇ ಹೇಳಿದೆ. ಇಂತಹ ಅಪರಾಧಗಳನ್ನು ರಿಜಿಸ್ಟರ್ ಮಾಡಿಕೊಂಡು ಅಪರಾಧಗಳನ್ನು ಪತ್ತೆಹಚ್ಚುವುದಕ್ಕೆ ಎಲ್ಲಾ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆಂದು ಹಿಂದೆ ಕೂಡ ಹೇಳಿದ್ದೇನೆ. ಈ ದೃಷ್ಟಿಯಿಂದ ಅಂಕಿ ಅಂಶಗಳನ್ನು ಕೊಡುವುದರಿಂದ ನಾನು ಸಮರ್ಥಿಸಿಕೊಳ್ಳುತ್ತೇನೆ ಎಂದಲ್ಲ. ಆದಾಗ್ಯೂ ಸ್ವಲ್ಪ ಮಟ್ಟಿಗೆ ನಮ್ಮಲ್ಲೂ ಕೂಡ ಈ ಪ್ರಕರಣಗಳು ಹೆಚ್ಚಳವಾಗಿದೆ ಅದಕ್ಕೆ ಎಚ್ಚೆತ್ತುಕೊಂಡು ಕೆಲಸ ಮಾಡಬೇಕಾಗಿದೆ: ಇನ್ನು ಪರಿಶಿಷ್ಟ ಜಾತಿಗೆ ಸಂಬಂಧಪಟ್ಟ ವಿಷಯವನ್ನು ಮಾನ್ಯ ಧರ್ಮಸಿಂಗ್ ಅವರು ಹೇಳಿದರು. ಅವರ ಮೇಲಾಗಿರುವ ಕೆಲವು ಅಪರಾಧ ಪ್ರಕರಣಗಳು ಏನಿವೆ ಅವು 1982ರಲ್ಲಿ 369, 1983ರಲ್ಲಿ 196, ಪ್ರಕರಣಗಳು ವರದಿಯಾಗಿವೆ. 1984ರಲ್ಲಿ 171, 1985ರಲ್ಲಿ 282 ಪ್ರಕರಣಗಳು ವರದಿಯಾಗಿದ್ದು ಶೀಘ್ರವಾಗಿ ತನಿಖೆ ಮಾಡಿ ನ್ಯಾಯಾಲಯದ ಮುಂದೆ ಮೊಕದ್ದಮೆಯನ್ನು ದಾಖಲು ಮಾಡಲಾಗಿದೆ. ಅವರಿಗೆ ಹೆಚ್ಚಿನ ರೀತಿಯಲ್ಲಿ ನಷ್ಟಉಂಟಾಗಿದ್ದರೆ, ಕೆಲವು ಪರಿಹಾರಗಳನ್ನು ಕೊಡುವುದಕ್ಕೆ ನಾವು ಎಲ್ಲಾ ರೀತಿಯ ಪ್ರಯತ್ನವನ್ನೂ ಮಾಡುತ್ತೇವೆ. ಬಡವರಾಗಿರುವವರಿಗೆ, ದಲಿತರಿಗೆ ಎಲ್ಲಿ ಅತ್ಯಾಚಾರಗಳು ಆಗಿವೆ. ಅವುಗಳನ್ನು ನೋಂದಾಯಿಸಿಕೊಳ್ಳುವುದಕ್ಕೋಸ್ಕರ ವಿಶೇಷ ಘಟಕಗಳನ್ನು ಬೆಂಗಳೂರಿನಲ್ಲಿ

ಡಿ.ಐ.ಜಿ. ಅವರ ನೇತೃತ್ವದಲ್ಲಿ ನೇಮಿಸಿದ್ದೇವೆ. ಬೆಂಗಳೂರು, ಮೈಸೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲೂ ಕೂಡ ಅವರಿಗೆ ಸಹಾಯ ಮಾಡುವುದಕ್ಕೆ ಕೆಲವು ಅಧಿಕಾರಿಗಳನ್ನೂ ಕೂಡ ಈ ಘಟಕಗಳಿಗೆ ನಾವು ನೇಮಿಸಿದ್ದೇವೆ. ಇತ್ತೀಚೆಗೆ ಸಮಾಜದಲ್ಲಿರುವಂತಹ ಅನೇಕ ಏರುಪೇರುಗಳು ಏನಿವೆ, ಜಾತೀಯ ಆಧಾರದ ಮೇಲೆ ಇಟ್ಟುಕೊಂಡಿರುವ ಹೋಟೆಲ್‌ಗಳು, ಜಾತಿ ಆಧಾರದ ಕೆಲವು ಸಾಮಾಜಿಕ ಕಾರ್ಯಕ್ರಮಗಳು, ಇವುಗಳನ್ನು ಹೋಗಲಾಡಿಸಬೇಕೆಂದು ಕೇಂದ್ರ ಸರ್ಕಾರದವರು ಒಂದು ಮಸೂದೆಯನ್ನು ಜಾರಿಯಲ್ಲಿ ತಂದಿದ್ದರೆ, ಮೊದಲನೇ ಸಾರಿ ಕರ್ನಾಟಕದಲ್ಲಿ ಡಿ.ಐ.ಜಿ ಅವರನ್ನು ನೇಮಿಸಿ ನಾಲ್ಕು ಜಿಲ್ಲೆಗಳಲ್ಲೂ ಕೂಡ ಸಂಬಂಧಪಟ್ಟ ಅಧಿಕಾರಿಗಳನ್ನು ನೇಮಿಸಿ ಘಟಕಗಳನ್ನು ಪ್ರಾರಂಭ ಮಾಡಿದ್ದೇವೆ. ಆದ್ದರಿಂದ ಬಂದಂಥ ಅರ್ಜಿಗಳು ಏನಿವೆ ಮತ್ತು ದೂರುಗಳು ಏನಿವೆ ಅವುಗಳನ್ನೆಲ್ಲಾ ನೋಂದಾಯಿಸಿಕೊಂಡು ತನಿಖೆ ಪ್ರಾರಂಭ ಮಾಡುತ್ತಾರೆ. ಈ ಸಂದರ್ಭದಲ್ಲಿ ತನಿಖೆಯಲ್ಲಿ ಬಹುಶಃ ಶಿಕ್ಷೆಗೊಳಗಾಗಿರುವಂತಹದು ಬಹಳ ಕಡಿಮೆ. ಸಾಧ್ಯವಾದ ಮಟ್ಟಿಗೂ ಒಬ್ಬರಿಗೊಬ್ಬರು ಸೌಹಾರ್ದದಿಂದ ನಡೆದುಕೊಂಡು ಹೋಗಬೇಕೆಂದು ಹೋಗಬೇಕೆಂದು ಹೇಳುತ್ತಿದ್ದಾರೆ.

ಒಟ್ಟಿನಲ್ಲಿ ಸಾಮಾಜಿಕ ಬದಲಾವಣೆ ಆಗಬೇಕು, ಸಮಾಜದಲ್ಲಿ ಮೇಲ್ವರ್ಗ ಎಂದು ಯಾರಿದ್ದಾರೆ ಅವರು ಅತ್ಯಂತ ಸಹಾನುಭೂತಿಯಿಂದ ವರ್ತಿಸಬೇಕು ಅವರಿಗೂ ಒಂದು ರೀತಿಯ ಆತ್ಮಗೌರವ ಇದೆ. ಮಾನವೀಯತೆ ಇದೆ ಅವರನ್ನೂ ನಮ್ಮ ಜೊತೆಯಲ್ಲಿ ಕೊಂಡೊಯ್ಯುವುದು ನಮ್ಮ ಕರ್ತವ್ಯವೆಂದು ಹೇಳಿ, ಪ್ರಯತ್ನ ಮಾಡಬೇಕು. ಅವರಲ್ಲಿರುವ ಮೌಢ್ಯತೆ ಮತ್ತು ಕೆಲವಾರು ದುಷ್ಟ ಚಟಗಳನ್ನು ಹೋಗಲಾಡಿಸುವುದಕ್ಕೆ ಸಮಾಜದ ಕಾರ್ಯಕರ್ತರು ಪ್ರಯತ್ನ ಮಾಡಬೇಕು. ಈ ಕೆಲಸಗಳನ್ನು ಮಾಡುವುದರಿಂದ ಅವರ ಮೇಲೆ ಆಗುವ ಅತ್ಯಾಚಾರಗಳನ್ನು ಕಡಿಮೆ ಮಾಡುವುದಕ್ಕೆ ಸಾಧ್ಯ. ಇತ್ತೀಚೆಗೆ ಅದರಲ್ಲೂ ಕೂಡ ವಿದ್ಯಾವಂತರು ಮುಂದೆ ಬರುತ್ತಿದ್ದಾರೆ. ತಮ್ಮ ಹಕ್ಕು ಬಾಧ್ಯತೆಗಳನ್ನು ಅರಿತುಕೊಳ್ಳುತ್ತಿದ್ದಾರೆ. ಇಂತಹ ಅಪರಾಧಗಳು ಆದ ಕಾಲದಲ್ಲಿ ಸಾರ್ವಜನಿಕರೂ ಸರ್ಕಾರದ ಗಮನಕ್ಕೆ ತರುತ್ತಿದ್ದಾರೆ. ಈ ಒಂದು ದೃಷ್ಟಿಯಲ್ಲಿ ನೀವು ಇನ್ನು ಹೆಚ್ಚಿನ ರೀತಿಯಲ್ಲಿ ನೆರವನ್ನು ಕೊಡಬೇಕೆಂದು ಸುತ್ತೋಲೆಗಳನ್ನು ಕಳುಹಿಸಿಕೊಟ್ಟಿದ್ದೇವೆ.

ಬಹುಶಃ ಹರಿಜನರು ಅಥವಾ ದಲಿತ ಪಂಗಡದವರು ಎಲ್ಲೆಲ್ಲಿ ಇದ್ದಾರೋ ಅವರು ಪೊಲೀಸ್ ಸ್ಟೇಷನ್‌ಗೆ ಹರಕು ಬಟ್ಟೆಯಲ್ಲಾದರೂ ಹೋಗಲಿ, ಕೊಳಕು ಬಟ್ಟೆಯಲ್ಲಾದರೂ ಹೋಗಲಿ ಅವರನ್ನು ತಿರಸ್ಕಾರದಿಂದ ಕಾಣದೆ ಅವರು ಹೇಳುವುದನ್ನು ಸಮಾಧಾನದಿಂದ ಕೇಳಿ ಅವರ ಕಂಪ್ಲೆಂಟನ್ನು ನೋಂದಾಯಿಸಿಕೊಂಡು ಅವರಿಗೆ ಸೂಕ್ತ ಪರಿಹಾರ ಕೊಡಬೇಕೆಂಬ ಆದೇಶ ಕೊಟ್ಟಿದ್ದೇನೆ. ಏತಕ್ಕೆ ನಾನು ಈ ಮಾತನ್ನು ಹೇಳುತ್ತಿದ್ದೇನೆಂದರೆ ಇತ್ತೀಚೆಗೆ ಇದರ ಬಗ್ಗೆ ಅನೇಕ ನಿದರ್ಶನಗಳು ಬಂದಿವೆ. ಬಹುಶಃ ಮಳವಳ್ಳಿಯಲ್ಲಿ ದಲಿತ ವಿದ್ಯಾರ್ಥಿಗಳು ಮತ್ತು ಸವರ್ಣಿಯರ ಮನೆಯಲ್ಲಿ ಊಟ ಮಾಡುವುದಕ್ಕೆ ಹೋದಾಗ ಸವರ್ಣೀಯ ಮುಖಂಡರು ಅವರ ತಲೆ ಬೋಳಿಸಿ ದಂಡವನ್ನು ವಸೂಲ್ಮಾಡಿರುವುದು ಗೊತ್ತಾದ ಮೇಲೆ ಆ ಕೇಸನ್ನು ನೋಂದಾಯಿಸಿಕೊಂಡು ಅವರ ಮೇಲೆ ಒಂದು ಕೇಸನ್ನು ದಾಖಲು ಮಾಡಿಕೊಂಡಿದ್ದೇವೆ. ಈ

ವಿಷಯ ಕೇಂದ್ರ ಸರ್ಕಾರದ ಗಮನಕ್ಕೂ ಬಂದಿದೆ. ಇಂಥಾ ಘಟನೆಗಳು ಮುಂದೆ ಆಗದೆ ಇರುವ ರೀತಿಯಲ್ಲಿ, ಯಾವ ಅಪರಾಧಿಗಳು ಪೊಲೀಸ್ ಸ್ಟೇಷನ್‌ಗೆ ಬರುತ್ತಾರೋ ಅವರ ಕಂಪ್ಲೇಂಟನ್ನು ನೋಂದಾಯಿಸಿಕೊಂಡು ಅವರನ್ನು ಒಳ್ಳೆಯ ರೀತಿಯಲ್ಲಿ ನೋಡಿ ಕೊಳ್ಳುವ ಹಾಗೆ ಹೇಳಿದ್ದೇನೆ. ಅದಕ್ಕೆ ಸಾಕ್ಷಿರುಜುವಾತು ಇಲ್ಲದೆ ಮಾಡುವ ಹಾಗೆ ಇಲ್ಲ. ಇದರಲ್ಲಿ ಸಾಕ್ಷಿ ರುಜುವಾತು ಬರುವುದು ಬಹಳ ಕಡಿಮೆ ಇದೆ. ಆದುದರಿಂದ ಈ ದೃಷ್ಟಿಯಲ್ಲಿ ಸಾಮಾಜಿಕ ಪಿಡುಗುಗಳನ್ನೂ ಹೋಗಲಾಡಿಸಬೇಕಾದರೆ ಸಾರ್ವಜನಿಕರು ವಿಶೇಷವಾಗಿ ವಿರೋಧ ಪಕ್ಷದ ಮಾನ್ಯ ಸದಸ್ಯರು ಎಲ್ಲರೂ ಕೂಡ ಇದರ ಬಗ್ಗೆ ಪ್ರಯತ್ನ ಮಾಡಬೇಕು. ಈ ದೃಷ್ಟಿಯಲ್ಲಿ ನಾವು ನೋಂದಾಯಿಸಿರುವಂತಹ ಪ್ರಕರಣಗಳನ್ನು ನೋಡಿದಾಗ ಈ ಸಂಖ್ಯೆ ಬಹಳ ಕಡಿಮೆ ಇದೆ. ದಾಖಲ್ ಮಾಡಿಕೊಂಡಿರುವ ಕೇಸುಗಳು ಕೆಲವು ಹಾಗೆಯೇ ಇವೆ. ಇನ್ನೂ ಕೆಲವು ಸಂದರ್ಭಗಳಲ್ಲಿ ಸುಳ್ಳು ಇರುತ್ತದೆ. ಅದರಲ್ಲಿ ಕೆಲವು ಪ್ರಕರಣಗಳು ವರದಿಯಾಗಿದೆ.

ಈ ದೃಷ್ಟಿಯಲ್ಲಿ ಹೇಳುವ ಪಕ್ಷದಲ್ಲಿ ಈ ಪಿ.ಸಿ.ಆರ್. ಆಕ್ಟ್ ಏನು ಇದೆ ಮತ್ತು ದಲಿತ ಪಂಗಡದವರ ಮೇಲೆ ಬರುವಂತಹ ಕೇಸು ಏನು ಇದೆ ಅವುಗಳೆಲ್ಲಾ ಪೂರ್ಣವಾಗಿ ಯಶಸ್ವಿಯಾಗಿದೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಆದಾಗ್ಯೂ ಕೂಡ ಆ ಬಗ್ಗೆ ಹೆಚ್ಚಿಗೆ ಗಮನಕೊಟ್ಟು ಅವರಿಗೆಲ್ಲಾ ರಕ್ಷಣೆಯನ್ನು ಕೊಡುವುದಕ್ಕೆ ಪ್ರಯತ್ನ ಮಾಡುತ್ತೇನೆ. ತಮ್ಮ ಗಮನಕ್ಕೆ ನಾನು ಈ ಒಂದು ವಿಷಯವನ್ನು ತರುತ್ತೇನೆ. ಅದೇನೆಂದರೆ 1984ನೇ ಇಸವಿಯಲ್ಲಿ 7786 ಮೊಕದ್ದಮೆಗಳನ್ನು ನೋಂದಾಯಿಸಿಕೊಂಡಿದ್ದರಲ್ಲಿ 5765 ಕೇಸುಗಳಲ್ಲಿ ಸಜಾ ಆಗಿದೆ. 1730 ಪ್ರಕರಣಗಳಲ್ಲಿ ಅಪರಾಧಿಗಳನ್ನು ಖುಲಾಸೆ ಮಾಡಲಾಗಿದೆ. 1586 ಪ್ರಕರಣಗಳಲ್ಲಿ ರಾಜಿ ಆಗಿದೆ. ಅದರಲ್ಲಿ 3914 ಮೊಕದ್ದಮೆಗಳು ನಿಜವಲ್ಲವೆಂದು ಸಾಬೀತಾಗಿದೆ. ಇನ್ನು 29867 ಪ್ರಕರಣಗಳು ನ್ಯಾಯಾಲಯದಲ್ಲಿ ವಿವಿಧ ಹಂತಗಳಲ್ಲಿ ವಿಚಾರಣೆಯಲ್ಲಿದೆ. 21740 ಪ್ರಕರಣಗಳು ತನಿಖಾ ಹಂತದಲ್ಲಿ ಇವೆ. ಇನ್ನು 1985ರಲ್ಲಿ ದಾಖಲಾದ 82691 ಮೊಕದ್ದಮೆಗಳಲ್ಲಿ 6047 ಕೇಸುಗಳಲ್ಲಿ ಅಪರಾಧಿಗಳಿಗೆ ಶಿಕ್ಷೆಯಾಗಿದೆ. 1440 ಪ್ರಕರಣಗಳಲ್ಲಿ ಅಪರಾಧಿಗಳು ಖುಲಾಸೆ ಆಗಿದೆ. 1735 ಪ್ರಕರಣಗಳಲ್ಲಿ ರಾಜಿ ಆಗಿದೆ 5284 ಕೇಸುಗಳು ನಿಜವಲ್ಲ ಎಂದು ಆಗಿದೆ. 35244 ಪ್ರಕರಣಗಳು ನ್ಯಾಯಾಲಯದಲ್ಲಿ ವಿವಿಧ ಹಂತಗಳಲ್ಲಿ ವಿಚಾರಣೆಯಲ್ಲಿದೆ. ಇನ್ನು 18074 ಕೇಸುಗಳ ತನಿಖೆ ಮುಂದುವರೆಯುತ್ತಾ ಇದೆ. ನಿಮಗೆ ಪತ್ತೆಯಾದ ಮೊಕದ್ದಮೆಗಳ ಬಗ್ಗೆ ಹೇಳಬೇಕಾದರೆ 1982 ರಲ್ಲಿ 68%, 1983ರಲ್ಲಿ 52.41%, 1984ರಲ್ಲಿ 51.96%, 1985ರಲ್ಲಿ 57.46% ಕೇಸುಗಳು ಪತ್ತೆ ಆಗಿವೆ. ಇದನ್ನು ನೋಡಿದರೆ ಈ ಇಲಾಖೆ ಹೆಚ್ಚು ದಕ್ಷತೆಯಿಂದ ಕೆಲಸ ಮಾಡುತ್ತಾ ಇದೆ ಎನ್ನುವುದು ವೇದ್ಯವಾಗುತ್ತದೆ. ಈ ಇಲಾಖೆ ಏನೂ ಮಾಡಲಿಲ್ಲ, ಅಂತ ಹೇಳುವುದು ಸರಿಯಲ್ಲ. ಇನ್ನು ಮಾನ್ಯ ಸದಸ್ಯರಾದ ಶ್ರೀ ಧರ್ಮಸಿಂಗ್‌ರವರು ಮಹಿಳೆಯರ ಅತ್ಯಾಚಾರದ ಬಗ್ಗೆ ವಿವರವಾಗಿ ಹೇಳಿಲ್ಲ ಎಂದು ಹೇಳಿದರು. ಈ ಬಗ್ಗೆ 131 ಪ್ರಕರಣಗಳು ಬಂದಿವೆ.

ಶ್ರೀ **ಧರ್ಮಸಿಂಗ್ ನಾರಾಯಣಸಿಂಗ್**- ಈ ಇಲಾಖೆ ಏನೂ ಮಾಡಲಿಲ್ಲ ಎಂದು ಹೇಳಲಿಲ್ಲ. ಈ ಇಲಾಖೆಯ ಬಗ್ಗೆ ಮಾತನಾಡಬೇಕಾದರೆ ನಮಗೆ ಇದರ ಬಗ್ಗೆ ಹೆಚ್ಚು

ಮಾಹಿತಿಯನ್ನು ಒದಗಿಸಿ ಕೊಟ್ಟರೆ ಈ ಬಗ್ಗೆ ಮಾತನಾಡುವುದಕ್ಕೆ ಅವಕಾಶವಾಗುತ್ತಿತ್ತು. ಈ ಬಗ್ಗೆ ಯಾವ ರಿಪೋರ್ಟನ್ನೂ ಒದಗಿಸಿಕೊಟ್ಟಿಲ್ಲ, ಒದಗಿಸಿಕೊಟ್ಟಿದ್ದರೆ ಚೆನ್ನಾಗಿತ್ತು. ಅಂತ ಹೇಳಿದ್ದು.

ಶ್ರೀ ಬಿ. ರಾಚಯ್ಯ- ಅದಕ್ಕೋಸ್ಕರವಾಗಿ ನಾನು ಈಗ ಅದರ ಅಂಕಿಅಂಶಗಳನ್ನು ಹೇಳುತ್ತಿದ್ದೇನೆ.

ಅಧ್ಯಕ್ಷರು- ಯಾರಾದರೂ ಏನಾದರೂ, ಕ್ಲಾರಿಫಿಕೇಷನ್ ಕೇಳಬೇಕಾದರೆ ಮಾನ್ಯ ಮಂತ್ರಿಗಳು ಉತ್ತರ ಮುಗಿದ ಮೇಲೆ ಕೇಳಿ.

ಶ್ರೀ ಕೆ.ಎಚ್. ಪಾಟೀಲ್- ನಾವು ವಾಸ್ತವಿಕವಾದ ಸಂಗತಿ ಹೇಳಬೇಕಾದರೆ ಈ ಇಲಾಖೆಯಲ್ಲಿ ಯಾವುದರಲ್ಲಿ ಎಷ್ಟೆಷ್ಟು ಕೇಸುಗಳು ಬಂದಿವೆ ಅನ್ನುವುದರ ಬಗ್ಗೆ ಹೇಳಬೇಕಾದರೆ ಇದರ ಬಗ್ಗೆ ವರದಿಯನ್ನು ಕೊಡುವ ಹಾಗೆ ಮಾನ್ಯ ಅಧ್ಯಕ್ಷರು ಅವರಿಗೆ ಉಪದೇಶ ಮಾಡಬೇಕಾಗಿದೆ. ನಮಗೆ ಪೊಲೀಸ್ ರಿಪೋರ್ಟಿನ ವರದಿಕೊಡುವುದಿಲ್ಲ. ನಾವು ಭಾಷಣ ಪ್ರಾರಂಭ ಮಾಡುವ ಮೊದಲೇ ಮಾನ್ಯ ಮಂತ್ರಿಗಳು ಈ ವರದಿಯನ್ನು ಒದಗಿಸಿಕೊಟ್ಟಿದ್ದರೆ ಚೆನ್ನಾಗಿತ್ತು. ಅದನ್ನು ನೋಡಿಕೊಂಡು ನಾವು ಭಾಷಣ ಮಾಡುತ್ತಿದ್ದೆವು. ಅದು ಇಲ್ಲದೇ ಹೋದದ್ದರಿಂದ ಪತ್ರಿಕಾ ವರದಿಯ ಆಧಾರದ ಮೇಲೆ ನಾವು ಹೇಳಬೇಕಾಗುತ್ತದೆ.

ಶ್ರೀ ಬಿ. ರಾಚಯ್ಯ- ಮಹಿಳೆಯರ ಅತ್ಯಾಚಾರದ ಬಗ್ಗೆ ಹೇಳಬೇಕಾದರೆ 1984ರಲ್ಲಿ 131 ಅತ್ಯಾಚಾರ ಪ್ರಕರಣಗಳು ವರದಿಯಾಗಿದ್ದವು. 1985ರಲ್ಲಿ 88 ಪ್ರಕರಣಗಳು ವರದಿ ಆಗಿವೆ. ಸನ್ಮಾನ್ಯ ಸದಸ್ಯರ ಗಮನವನ್ನು ಬೇರೆ ರಾಜ್ಯಗಳಲ್ಲಿ ವರದಿಯಾದ ಪ್ರಕರಣಗಳ ಬಗ್ಗೆ ಸೆಳೆಯಲು ಯೋಚಿಸಿದ್ದೇನೆ. ಈ ಎರಡು ವರ್ಷಗಳಲ್ಲಿ ಹೆಣ್ಣು ಮಕ್ಕಳ ಅತ್ಯಾಚಾರಗಳ ಬಗ್ಗೆ ಆಗಿರುವುದನ್ನು ಹೇಳುತ್ತೇನೆ. 1984ರಲ್ಲಿ 120, 1985ರಲ್ಲಿ 88 ಪ್ರಕರಣಗಳು ಆಗಿವೆ. ಇದರಿಂದ ನಮಗೆ ಅರ್ಥವಾಗುತ್ತದೆ ಈ ಎರಡು ವರ್ಷದಲ್ಲಿ ಇದರ ಬಗ್ಗೆ ಎಷ್ಟು ಇಳಿಮುಖವಾಗಿದೆ ಎಂದು. ಇದರ ಜೊತೆಗೆ ಬೇರೆ ರಾಜ್ಯಗಳ ಅಂಕಿ ಅಂಶಗಳನ್ನೂ ಕೊಡಲು ಬಯಸುತ್ತೇನೆ. ಮಧ್ಯ ಪ್ರದೇಶದಲ್ಲಿ 1305, ಉತ್ತರ ಪ್ರದೇಶದಲ್ಲಿ 897, ಮಹಾರಾಷ್ಟ್ರದಲ್ಲಿ 675, ಪಶ್ಚಿಮ ಬಂಗಾಳದಲ್ಲಿ 594, ಬಿಹಾರದಲ್ಲಿ 475, ರಾಜಾಸ್ಥಾನದಲ್ಲಿ 375, ಆಂಧ್ರದಲ್ಲಿ 276, ತಮಿಳುನಾಡಿನಲ್ಲಿ 207, ಗುಜರಾತಿನಲ್ಲಿ 139, ಕೇರಳದಲ್ಲಿ 124 ಕರ್ನಾಟಕದಲ್ಲಿ ಮೇಲೆ ಹೇಳಿದಂತೆ 131. ಈ ವರ್ಷ ಆಗಿರುವುದು 88. ಇದನ್ನು ಬೇರೆ, ಬೇರೆ ರಾಜ್ಯಕ್ಕೆ ಹೋಲಿಸಿ ನೋಡಿದರೆ ನಮ್ಮ ರಾಜ್ಯದಲ್ಲಿ ಈ ಪಿಡುಗು ಎಷ್ಟು ಕಡಿಮೆಯಾಗಿದೆ ಅನ್ನುವುದು ಅರ್ಥವಾಗುತ್ತದೆ. ಅಷ್ಟೇ ಅಲ್ಲದೆ ಸಾಧ್ಯವಾದ ಮಟ್ಟಿಗೆ ಈ ಒಂದು ಪಿಡುಗು ಸಂಪೂರ್ಣವಾಗಿ ಇಲ್ಲದೇ ಇರುವ ಹಾಗೆ ಮಾಡಬೇಕೆಂದು ಪ್ರಯತ್ನ ಮಾಡುತ್ತಿದ್ದೇವೆ. ಬಹುಶಃ ಈ ಹೆಣ್ಣು ಮಕ್ಕಳು ಏನು ಇದ್ದಾರೆ ಇವರನ್ನು ವಿಶೇಷವಾಗಿ ಗೌರವಯುತವಾಗಿ ನೋಡಿಕೊಳ್ಳುವ ಹಾಗೆ ಅವರು ರಾಷ್ಟ್ರದಲ್ಲಿ ಹೊರಗೇ ಇರಲಿ, ಒಳಗೇ ಇರಲಿ, ಅವರ ಮೇಲೆ ಅತ್ಯಾಚಾರ ಆಗದೇ ಇದ್ದ ಹಾಗೆ ನೋಡಿಕೊಳ್ಳುವುದು ನಮ್ಮ ಧರ್ಮ. ಈ ಮಹಿಳೆಯ ಅತ್ಯಾಚಾರ ವಿಷಯದಲ್ಲಿ ಇನ್ನೂ ಹೆಚ್ಚು ನಿಗಾ ಇಟ್ಟು ಕೆಲಸ

ಮಾಡಿ ಮುಂದೆ ಆ ರೀತಿಯಾಗಿ ನಡೆಯದೇ ಇರುವ ಹಾಗೆ ಮಾಡುವುದಕ್ಕೆ ಏನೇನು ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೋ ಅದನ್ನು ತೆಗೆದುಕೊಂಡಿದ್ದೇವೆ. ಈ ವರ್ಷ ಎಷ್ಟು ಅತ್ಯಾಚಾರವಾಗಿದೆಯೋ ಅದು ಮುಂದಿನ ವರ್ಷಗಳಲ್ಲಿ ಇನ್ನು ಕಡಿಮೆ ಆಗುವ ಹಾಗೆ ಮಾಡುವ ಉದ್ದೇಶ ಇದೆ. ಅದಕ್ಕೋಸ್ಕರವಾಗಿ ಈ ವಿಷಯದಲ್ಲಿ ಈ ಇಲಾಖೆ ಹೆಚ್ಚು ದಕ್ಷತೆಯಿಂದ ಕೆಲಸ ಮಾಡುತ್ತಾ ಇದೆ ಎಂದು ಹೇಳುವುದರಲ್ಲಿ ಅಡ್ಡಿ ಇಲ್ಲ ಎಂದು ಹೇಳುತ್ತೇನೆ.

ಇನ್ನು ವರದಕ್ಷಿಣೆ ಸಾವಿನ ಬಗ್ಗೆ ಮಾಹಿತಿ ನೀಡಿಲ್ಲವೆಂದು ಮಾನ್ಯ ಸದಸ್ಯರು ಹೇಳಿದ್ದಾರೆ. ನಿಜ ಅದರ ಬಗ್ಗೆ ಮಾಹಿತಿಕೊಟ್ಟಿಲ್ಲ ಈಗ ಆ ರಿಪೋರ್ಟನ್ನು ಕೊಡುವುದಕ್ಕೆ ಈ ಸಭೆಯ ಅನುಮತಿಯನ್ನು ಕೇಳುತ್ತೇನೆ. ಈ ವರದಕ್ಷಿಣೆ ಸಾವಿನ ಬಗ್ಗೆ 1983ರಲ್ಲಿ 31 ಪ್ರಕರಣಗಳು ವರದಿಯಾಗಿದ್ದರೆ ಅವುಗಳಲ್ಲಿ 10, ಪ್ರಕರಣಗಳು ನಿಜವಲ್ಲ ಎಂಬ ವರದಿಯನ್ನು ಸಲ್ಲಿಸಲಾಗಿದೆ. 21 ಪ್ರಕರಣಗಳಲ್ಲಿ, ನ್ಯಾಯಾಲಯಕ್ಕೆ ಛಾರ್ಜ್‌ಶೀಟ್ ಕಳುಹಿಸಲಾಯಿತು. ಒಂದು ಕೇಸಿನಲ್ಲಿ ಶಿಕ್ಷೆಯಾಗಿದೆ. ಒಂದು ಕೇಸು ಖುಲಾಸೆಯಾಗಿದೆ. 19 ಪ್ರಕರಣಗಳು ನ್ಯಾಯಾಲಯಗಳಲ್ಲಿ ವಿವಿಧ ಹಂತಗಳಲ್ಲಿ ವಿಚಾರಣೆಯಲ್ಲಿವೆ. 1984ರಲ್ಲಿ 48 ಪ್ರಕರಣಗಳು ವರದಿಯಾಗಿದ್ದವು. ಅವುಗಳಲ್ಲಿ 6 ಪ್ರಕರಣಗಳಲ್ಲಿ ಅವು ನಿಜವಲ್ಲವೆಂಬ ವರದಿಯನ್ನು ಸಲ್ಲಿಸಲಾಯಿತು. 28 ಪ್ರಕರಣಗಳಲ್ಲಿ ಛಾರ್ಜ್‌ಶೀಟ್ ಆಗಿವೆ. 2 ಪ್ರಕರಣಗಳಲ್ಲಿ ಖುಲಾಸೆಗೊಂಡು 26 ಪ್ರಕರಣಗಳು ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿವೆ. 1985ರಲ್ಲಿ 31 ಪ್ರಕರಣಗಳು ವರದಿಯಾಗಿ 10 ಪ್ರಕರಣಗಳು ನ್ಯಾಯಾಲಯದಲ್ಲಿವೆ, ಒಂದು ಕೇಸಿನಲ್ಲಿ ಸಜ ಆಗಿದೆ. 20 ಕೇಸುಗಳು ತನಿಖಾ ವ್ಯವಸ್ಥೆಯಲ್ಲಿವೆ. ತನಿಖೆಯನ್ನು ಶೀಘ್ರವಾಗಿ ಮುಗಿಸಬೇಕೆಂದು ಆದೇಶ ನೀಡಲಾಗಿದೆ. ಇಂತಹ, ಪ್ರಕರಣಗಳು ವರದಿಯಾದಾಗ ಸಿ.ಓ.ಡಿ. ಘಟಕದವರು ಶೀಘ್ರವಾಗಿ ತನಿಖೆಯನ್ನು ಮಾಡಬೇಕೆಂದು ಆದೇಶ ಕೊಟ್ಟಿದ್ದೇನೆ. ವರದಕ್ಷಣೆಯ ಪಿಡುಗಿನ ಅವರ ಕಷ್ಟವನ್ನು ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುವ ಸಂದರ್ಭ ಇರುವುದರಿಂದ ಅವೆಲ್ಲವನ್ನೂ ಗೊತ್ತಾದ ಕೂಡಲೇ ಸಿ.ಓ.ಡಿ.ಯವರು ಶೀಘ್ರವಾಗಿ ತನಿಖೆ ಮಾಡಬೇಕೆಂದು ಆದೇಶ ಕೊಟ್ಟಿದ್ದೇನೆ. ಈ ಪ್ರಕರಣ ಎಲ್ಲೇ ಆಗಲಿ ಈ ಬಗ್ಗೆ ಅನುಮಾನಾಸ್ಪದವಾದಂತಹ ಸಾವು ಆಗಿದ್ದಲ್ಲಿ ಅದರ ಬಗ್ಗೆ ಸಿ.ಓ.ಡಿ. ಯವರು ತನಿಖೆಮಾಡಬೇಕೆಂದು ಹೇಳಿದ್ದೇನೆ. ಇಬ್ಬರು ಡಾಕ್ಟರ್‌ಗಳು ಪೋಸ್ಟ್ ಮಾರ್ಟಮ್ ಮಾಡಿ ಸರಿಯಾಗಿ ಎಕ್ಸಾಮಿನ್ ಮಾಡಿ ಆ ವಿಚಾರದಲ್ಲಿ ನಿರ್ದೇಶನ ಕೊಡಬೇಕೆಂದೂ ಕೂಡ ನಾನು ಆದೇಶ ನೀಡಿದ್ದೇನೆ.

ಇನ್ನು ಡಕಾಯಿತಿ ಪ್ರಕರಣಗಳು ಬೆಂಗಳೂರು-ಮಂಗಳೂರು ಭಾಗದಲ್ಲಿ ಅತ್ಯಂತ ಅಮಾನುಷವಾದ ರೀತಿಯಲ್ಲಿ ನಡೆದಿದೆ. ಇದರಲ್ಲಿ ದೊಡ್ಡವರು, ಮಧ್ಯಮ ವರ್ಗದವರು, ಚಿಕ್ಕವರು, ಸಣ್ಣವರು ಎನ್ನುವುದನ್ನು ನೋಡದೆ ಅಮಾನುಷವಾದ ರೀತಿಯಲ್ಲಿ ಅವರ ಮನೆಗೆ ನುಗ್ಗಿ ಬೀಗ ಮುರಿದು, ಅವರನ್ನು ಹೊಡೆದು ಸಾಯಿಸಿರುವ ಪ್ರಕರಣಗಳೂ ಇವೆ.

ನಮ್ಮ ರಾಜ್ಯದಲ್ಲಿ ಯಾವಾಗಲೂ ಇಷ್ಟೊಂದು ಅಮಾನುಷವಾದಂಥ ಘಟನೆಗಳು ನಡೆದಿಲ್ಲ. ನಮ್ಮ ರಾಜ್ಯದಲ್ಲಿರುವಂಥ ಪ್ರತಿಯೊಬ್ಬ ಪ್ರಜೆಯೂ ಈ ಕಡೆ ಗಮನಹರಿಸಿದ್ದಾರೆ. ಬೆಂಗಳೂರು ಮತ್ತು ಮಂಗಳೂರಿನಲ್ಲಿ ಜನರು ನಿದ್ರೆಯಿಲ್ಲದೆ ಅನೇಕ ರಾತ್ರಿಗಳನ್ನು ಕಳೆದಿದ್ದಾರೆ. ಜನರಲ್ಲಿ ಬಹಳ ಮಟ್ಟಿಗೆ ಭೀತಿ, ಭಯ ಉಂಟಾಗಿದೆ ಎನ್ನುವುದನ್ನು ನಾನು ಹಿಂದೆ ಒಪ್ಪಿಕೊಂಡಿದ್ದೇನೆ. ಆ ಪ್ರಯುಕ್ತ ಆಯಾ ಜಿಲ್ಲೆಯಲ್ಲಿ ದರೋಡೆಗಳು ಅಥವಾ ಅಪರಾಧಗಳು ನಡೆಯದ ರೀತಿಯಲ್ಲಿ ನೋಡಿಕೊಳ್ಳುವುದಕ್ಕೆ ಕ್ರೈಮ್ ಸ್ಕ್ವಾಡನ್ನು ಪ್ರತಿಜಿಲ್ಲೆಯಲ್ಲೂ ಏರ್ಪಾಡು ಮಾಡಿದ್ದೇವೆ. ಅದೇ ರೀತಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅಲ್ಲಿನ ಅಧಿಕಾರಿಗಳ ನೇತೃತ್ವದಲ್ಲಿ ಒಂದು ದಳವನ್ನೇ ನೇಮಕಮಾಡಿ ಅಲ್ಲಿ ನಡೆದಂಥ ಅಮಾನುಷ ದರೋಡೆಗಳಿಗೆ ಕಾರಣ ಕರ್ತರಾದವರನ್ನು ಪತ್ತೆ ಹಚ್ಚುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಕೇರಳ ರಾಜ್ಯದ ತ್ಯಾಗನೂರು ಮತ್ತೊಂದು ಕಡೆ ಸುಮಾರು 11 ಪ್ರಕರಣಗಳಲ್ಲಿ 5 ಜನ ಖೂನಿಯಾಗಿದ್ದಾರೆ. ನಮ್ಮಲ್ಲೂ 9 ಜನರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಮಾನುಷವಾದಂತಹ ಡಕಾಯಿತಿ ನಡೆದಿದೆ. ಇದರಲ್ಲಿ ಅಲ್ಲಿನ ರಾಜ್ಯದ ಪೊಲೀಸ್ ಅಧಿಕಾರಿಗಳು ಮತ್ತು ನಮ್ಮ ರಾಜ್ಯದ ಪೊಲೀಸ್ ಅಧಿಕಾರಿಗಳ ವಿಚಾರ ವಿನಿಮಯಮಾಡಿ ಬಹುಶಃ ಇದರಲ್ಲಿ ಕಾರಣಾವಾಗಿರುವವರನ್ನು ಗುರುತಿಸಿ ಅವರನ್ನು ಹಿಡಿಯುವುದಕ್ಕೆ ನಮ್ಮ ರಾಜ್ಯದವರೇ ಮುಂದಾಳುಗಳಾಗಿ ಇಂಥವರೇ ಮಾಡಿರಬೇಕೆಂದು ಗುರುತಿಸಿ ಸೂಚನೆ ಕೊಟ್ಟರು. ಕೇರಳ ರಾಜ್ಯದಲ್ಲಿ ಮುಂಚಿತವಾಗಿ ಇಂತಹ ಪ್ರಕರಣ ನಡೆದಿದೆ. ಕಾಡಿನಲ್ಲಿ ಅವರು ಅವಿತುಕೊಂಡರು. ಅದರಿಂದ ಸ್ವಲ್ಪ ತೊಂದರೆಯಾಯಿತು. ಅದಾಗ್ಯೂ 3 ಜನ ಡಕಾಯಿತರನ್ನು ದಕ್ಷಿಣ ಕನ್ನಡ ಜಿಲ್ಲೆಯ ಎಸ್.ಪಿ.ಯವರ ನೇತೃತ್ವದಲ್ಲಿ ರಚಿಸಿದಂಥ ಸುಮಾರು 40 ಜನ ಪೊಲೀಸರ ತಂಡ ಪತ್ತೆ ಹಚ್ಚಿದೆ. ಇದನ್ನು ತಿಳಿಸಲು ಕೊನೇ ಪಕ್ಷ ನನ್ನ ಮನಸ್ಸಿಗಾದರೂ ಒಂದು ತೃಪ್ತಿಯನ್ನು ತಂದಿದೆ.

ರಾಜ್ಯದಲ್ಲಿ ಮಹಿಳಾ ಪೊಲೀಸರ ಸಂಖ್ಯೆಯನ್ನು ಹೆಚ್ಚಿಸಬೇಕೆಂದು ಮಾನ್ಯ ಸದಸ್ಯರಾದ ವೇದಾಂತ ಹೆಮ್ಮಿಗೆಯವರು ತಮ್ಮ ಭಾಷಣದಲ್ಲಿ ತಿಳಿಸಿದ್ದಾರೆ. ಕರ್ನಾಟಕದಲ್ಲಿ ಇದುವರೆಗೆ 3 ಜನ ಐಪಿ.ಎಸ್. ಮಹಿಳಾ ಪೊಲೀಸ್ ಅಧಿಕಾರಿಗಳಿದ್ದಾರೆ. 23 ಮಹಿಳಾ ಪೊಲೀಸ್ ಸಬ್ ಇನ್ಸ್ ಪೆಕ್ಟರ್ ಇದ್ದಾರೆ. 47 ಮಹಿಳಾ ಹೆಡ್ ಕಾನ್‌ಸ್ಟೇಬಲ್ಸ್ ಇದ್ದಾರೆ. 242 ಮಹಿಳಾ ಪೊಲೀಸ್ ಕಾನ್ಸ್ ಸ್ಟೇಬಲ್ಸ್ ಇದ್ದಾರೆ. ಮಹಿಳಾ ಐ.ಪಿ.ಎಸ್. ಅಧಿಕಾರಿಗಳಲ್ಲಿ ಒಬ್ಬರು ಎಸ್.ಪಿ. ಆಗಿರುತ್ತಾರೆ. ಇನ್ನಿಬ್ಬರು ಎ.ಎಸ್.ಪಿ. ಯಾಗಿದ್ದಾರೆ. ಈ ಒಂದು ಸಂಖ್ಯೆಯನ್ನು ಹಂತ ಹಂತವಾಗಿ ಹೆಚ್ಚಿಸಬೇಕು, ಸಾಧ್ಯಮಟ್ಟಿಗೆ ದೊಡ್ಡ ನಗರಗಳಲ್ಲಿ ಅದರಲ್ಲೂ ಹೆಣ್ಣುಮಕ್ಕಳ ಮೇಲೆ ನಡೆಯುವ ಅತ್ಯಾಚಾರಗಳು ಹಾಗೂ ಅವರ ಮೇಲೆ ಬರುವ ದೂರುಗಳ ವಿಚಾರಣೆ ಮಾಡಲು ಮಹಿಳಾ ಐ.ಪಿ.ಎಸ್. ಅದಿಕಾರಿಗಳ ನೇತೃತ್ವದಲ್ಲಿ ಒಂದು ಸೆಲ್‌ಅನ್ನು ಕ್ರಿಯೇಟ್ ಮಾಡುತ್ತೇನೆಂದು ಹೇಳಿದ್ದೇನೆ. ಅದನ್ನು ಈ ವರ್ಷ ಪ್ರಾರಂಭ ಮಾಡುತ್ತೇನೆ. ಇದರ ಮುಖಾಂತರ ಮಹಿಳೆಯರ ಮೇಲೆ ಆಗಿರುವ ಅನ್ಯಾಯಗಳನ್ನು ಗೋಪ್ಯವಾಗಿ ವಿಚಾರಣೆ ಮಾಡುವುದಕ್ಕೆ, ಹಾಗೂ ಅವರ ಮಾನವನ್ನು ಕಾಪಾಡುವುದಕ್ಕೆ ಅನುಕೂಲವಾಗುತ್ತದೆ. ಮೇಲ್ಮನೆಯಲ್ಲಿ ಈ ಬಗ್ಗೆ ಸಲಹೆಯನ್ನು

ಕೊಟ್ಟರು. ಮಹಿಳಾ ಉನ್ನತಾಧಿಕಾರಿಗಳು ಕಡಿಮೆ ಇರುವುದರಿಂದ ಇದುವರೆವಿಗೂ ಕೂಡ ಇದನ್ನು ಮಾಡುವುದಕ್ಕೆ ಆಗಲಿಲ್ಲ. ಈಗ ಈ ಒಂದು ಸೆಲ್ಲನ್ನು ಕ್ರಿಯೇಟ್ ಮಾಡುವುದರಿಂದ ಮಹಿಳೆಯರು ತಮ್ಮ ಮನಸ್ಸಿನಲ್ಲಿ ಉಂಟಾದ ತೊಂದರೆಗಳನ್ನು ಹೇಳಿಕೊಳ್ಳುವುದಕ್ಕೆ ಮತ್ತು ಅವರ ಮೇಲೆ ಆದಂತಹ ಅತ್ಯಾಚಾರಗಳನ್ನು ಹೇಳಿಕೊಳ್ಳುವುದಕ್ಕೆ ಅವಕಾಶವಾಗುತ್ತದೆ. ಈ ದೃಷ್ಟಿಯಿಂದ ಮಹಿಳಾ ಐ.ಪಿ.ಎಸ್. ಅಧಿಕಾರಿಗಳ ನೇತೃತ್ವದಲ್ಲಿ ಒಂದು ಸೆಲ್ಲನ್ನು ಮಾಡುವುದಕ್ಕೆ ಯೋಚನೆ ಮಾಡಿದ್ದೇನೆ.

ಈ ಪೊಲೀಸ್ ಇಲಾಖೆಯಲ್ಲಿ ಕೆಲಸ ಮಾಡುವಂತಹವರಿಗೆ ಹೆಚ್ಚು ಹೊರೆಯಾಗಿದೆ. ಬಹುಶಃ ಅವರಿಗೆ ಸ್ವಲ್ಪ ಮಟ್ಟಿಗಾದರೂ ಕೂಡ ಕಾಲವನ್ನು ಗೊತ್ತು ಮಾಡಬೇಕಾಗುತ್ತದೆ. ಒಬ್ಬರು ಮಾಡುವಂತಹ ಕೆಲಸಕ್ಕೆ ಇಬ್ಬರನ್ನು ನೇಮಿಸಿದರೆ ಒಳ್ಳೆಯದೆಂದು ಮಾನ್ಯ ಪ್ರತಾಪ ಚಂದ್ರಶೆಟ್ಟಿಯವರು ಹೇಳಿದರು. ಹೆಚ್ಚು ಸಂಖ್ಯೆಯಲ್ಲಿ ನೇಮಿಸುವುದಕ್ಕೆ ಪ್ರಯತ್ನ ಮಾಡುತ್ತೇನೆ. ಅಲ್ಲದೆ ಗೃಹ ನಿರ್ಮಾಣಕ್ಕೆ ಸಂಬಂಧಪಟ್ಟ ಹಾಗೆ ಮಹಿಳಾ ಪೊಲೀಸ್ ಅವರಿಗಾಗಲೀ ಅಥವಾ ಸಾಮಾನ್ಯ ಪೊಲೀಸ್ ರವರಿಗಾಗಲೀ ಮನೆಗಳನ್ನು ಕೊಡದೆ ಇದ್ದರೆ, ಅವರು ಬೇರೆ ಆಶ್ರಯದಲ್ಲಿದ್ದು ನಿಷ್ಪಕ್ಷಪಾತವಾಗಿ ಕೆಲಸ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ ಹಾಗೂ ಅಪರಾಧಗಳು ನಡೆದಂತಹ ಕಾಲದಲ್ಲಿ ತಕ್ಷಣ ಬಂದು ಕಾರ್ಯಾಚರಣೆ ಮಾಡುವುದಕ್ಕೆ ಅವಕಾಶವಾಗುವುದಿಲ್ಲವೆಂಬ ದೃಷ್ಟಿಯಿಂದ ಅವರಿಗೆ ವಾಸದ ಮನೆಗಳನ್ನು ಕಟ್ಟಿಸುವಂತಹ ವ್ಯವಸ್ಥೆ ಮಾಡಬೇಕೆಂದು ಮಾನ್ಯ ಮಲ್ಲಿಕಾರ್ಜುನ ಖರ್ಗೆ ಯವರು ಹಾಗೂ ಇನ್ನಿತರ ಸದಸ್ಯರು ಹೇಳಿದ್ದಾರೆ. ಕಳೆದ ವರ್ಷ "ಪೊಲೀಸ್ ಹೌಸಿಂಗ್ ಕಾರ್ಪೊರೇಷನ್ ನಿಗಮ" ಎಂದು ಮಾಡಿ ಅದಕ್ಕೆ ಒಂದು ಕೋಟಿ ರೂಪಾಯಿ ಬಂಡವಾಳ ಕೊಟ್ಟಿದ್ದೇವೆ. ಈಗ ಸುಮಾರು 10 ಕೋಟಿ ರೂಪಾಯಿಗಳನ್ನು ಬಂಡವಾಳವಾಗಿ ಕೊಟ್ಟಿದ್ದೇವೆ. ಸುಮಾರು 7 ಕೋಟಿ 55 ಲಕ್ಷ ರೂಪಾಯಿಗಳನ್ನು ಸಾಲವಾಗಿ ಪಡೆಯುತ್ತಿದ್ದೇವೆ. ಈ ವರ್ಷ ಒಂದು ಸಾವಿರ ಮನೆಗಳನ್ನು 5 ಭಾಗಗಳಾಗಿ ಕಟ್ಟಿಸುವುದಕ್ಕೆ ಪ್ರಯತ್ನ ಮಾಡುತ್ತೇವೆ. ಇದುವರೆಗೆ 45% ನಷ್ಟು ಜನಕ್ಕೆ ಮಾತ್ರ ಮನೆಗಳು ಇವೆ. ಪೊಲೀಸ್ ಇನ್ಸ್‌ಪೆಕ್ಟರ್ ರವರಿಗೆ, ಕಾನ್ಸ್ ಸ್ಟೇಬಲ್ಸ್ ರವರಿಗೆ, ಉಚಿತವಾಗಿ ವಸತಿ ಗೃಹಗಳನ್ನು ಕೊಡುವಂತಹ ಪದ್ಧತಿ ಹಿಂದಿನಿಂದ ನಡೆದುಕೊಂಡು ಬಂದಿದೆ ಈಗ ನಾವು 1900 ಜನಕ್ಕೆ ಮಾತ್ರ ವಸತಿಗಳನ್ನು ಒದಗಿಸಿದ್ದೇವೆ. ಪ್ರತಿ ವರ್ಷ ಒಂದು ಸಾವಿರ ಮನೆಗಳನ್ನು ಕಟ್ಟಿಕೊಂಡು ಹೋದರೂ ಕೂಡ 25 ವರ್ಷಗಳು ಬೇಕಾಗುತ್ತದೆ. ಈ ಮನೆಗಳ ಸಂಖ್ಯೆಯನ್ನು ಹೆಚ್ಚಿಸಲೇ ಬೇಕಾಗಿದೆ. ಈ ವರ್ಷ ನಿಗಮವನ್ನು ವಿಸ್ತಾರಗೊಳಿಸಿ ಹೆಚ್ಚು, ಹೆಚ್ಚು ರೀತಿಯಲ್ಲಿ ಆದಷ್ಟು ಬೇಗ ಮನೆಗಳನ್ನು ಕಟ್ಟಿಸಿಕೊಟ್ಟು ಅವರ ತೊಂದರೆ ಏನಿದೆ. ಆ ತೊಂದರೆಯನ್ನು ನೀಗಿಸಿ ಬಹುಮಟ್ಟಿಗೆ ಅವರು ತಮ್ಮ ಕರ್ತವ್ಯದಲ್ಲಿ ನಿರತರಾಗುವುದಕ್ಕೆ ಎಲ್ಲಾ ರೀತಿಯ ಸೌಲಭ್ಯವನ್ನು ಒದಗಿಸುವುದಕ್ಕೆ ಪ್ರಯತ್ನ ಮಾಡುತ್ತೇನೆ. ಪ್ರಥಮ ಬಾರಿಗೆ ನಮ್ಮ ಸರ್ಕಾರ ರಾಜ್ಯದಲ್ಲಿ ಈ ಒಂದು ನಿಗಮವನ್ನು ಜಾರಿಗೆ ತಂದಿದ್ದೇವೆ. ನೀಲಸಂದ್ರದಲ್ಲಿ ಆಗಲೇ ಮನೆಗಳು ಮೊದಲನೇ ಹಂತ ಪೂರೈಸಿದೆ. ಮತ್ತೊಂದು ಕಡೆ ಅಂದರೆ ಕೋರಮಂಗಲದಲ್ಲಿ 494 ಮನೆಗಳು ಎದ್ದು ನಿಂತಿದೆ ಭದ್ರಾವತಿಯಲ್ಲಿ 180 ಮನೆಗಳು,

ಶಿವಮೊಗ್ಗದಲ್ಲಿ 180 ಮನೆಗಳನ್ನು ಮಾಡಿದ್ದೇವೆ. ಮೈಸೂರಿನಲ್ಲಿ 166 ಮನೆಗಳನ್ನು ಪ್ರಾರಾಂಭಮಾಡಿದ್ದೇವೆ. ಹೀಗೆ ಗುಲ್ಬರ್ಗಾ, ಮಂಗಳೂರು, ಬೆಳಗಾಂ, ಧಾರವಾಡ ಡಿವಿಜನ್ ಹಾಗೂ ಎಲ್ಲಾ ಭಾಗಗಳಲ್ಲಿ ಆ ಭಾಗಗಳಿಗನುಗುಣವಾಗಿ ಈ ಸಂಖ್ಯೆಯನ್ನು ಹೆಚ್ಚಿಸಿಕೊಂಡು ಮನೆಗಳನ್ನು ಕಟ್ಟಿಸುವಂತಹ ವ್ಯವಸ್ಥೆ ಮಾಡಿದ್ದೇವೆ. ಇದರ ಜೊತೆಗೆ ಎಲ್ಲೆಲ್ಲಿ ಸರ್ಕಾರಿ ಕಟ್ಟಡಗಲಿಲ್ಲವೋ ಎಲ್ಲೆಲ್ಲಿ ಭೂಮಿ ಸುಲಭವಾಗಿ ದೊರೆಯುತ್ತದೆ, ಎಲ್ಲಿ ಇದರ ಹೆಚ್ಚಿನ ಅವಶ್ಯಕತೆ ಇದೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ಆದ್ಯತೆ ಮೇಲೆ ಮನೆಗಳನ್ನು ಕಟ್ಟಿಸುವಂತಹ ಏರ್ಪಾಡನ್ನು ಮಾಡುತ್ತಿದ್ದೇವೆ. ಗೃಹ ನಿರ್ಮಾಣದ ಮುಖಾಂತರ ಕಟ್ಟಿಸುವಂತಹ ಮನೆಗಳಿಗೆ ಬಾಡಿಗೆ ಇರುವುದಿಲ್ಲ. ಹಾಗೂ ಅದಕ್ಕೆ ರೆಕವರಿ ಕೂಡ ಇರುವುದಿಲ್ಲ. ಹೀಗಾಗಿ ಸರ್ಕಾರದ ಮೇಲೆ ಹೆಚ್ಚು ಹೊರೆಯಾಗುತ್ತಿದೆ. ಇದಕ್ಕೆ ಹಣ ಕೊಡುವುದಕ್ಕಾಗುವುದಿಲ್ಲವೆಂದು ಹಣಕಾಸಿನ ಸಚಿವರೂ ಆದ ಮುಖ್ಯಮಂತ್ರಿಗಳು ಹೇಳಿದರು.

ಅನಂತರ ನಾವು ಎಷ್ಟೋ ಒತ್ತಡ ತಂದ ಮೇಲೆ ಕಡೆಗೆ ಹಣ ಕೊಡಬೇಕಾಗಿದ್ದರೆ ಕಷ್ಟಪಟ್ಟು ಏನೋ ಕೊಡೋಣ ಎನ್ನುವ ರೀತಿಯಲ್ಲಿ ಕೊಟ್ಟಿದ್ದಾರೆ ರಾಜ್ಯದಲ್ಲಿ ಇವತ್ತು ಡಕಾಯಿತಿ ಪ್ರಕರಣಗಳು ನಡೆಯುತ್ತಿವೆ. ಪೊಲೀಸ್ ಸ್ಟೇಷನ್‌ಗಳಿಗೆ ಹೆಚ್ಚು ಸಂಖ್ಯೆಯ ವಾಹನಗಳು ಮತ್ತು ವೈರ್‌ಲೆಸ್ ಸೆಟ್‌ಗಳನ್ನು ಕೊಡಬೇಕಾಗುತ್ತವೆ. ಇದನ್ನೆಲ್ಲಾ ಲೆಕ್ಕ ಹಾಕಿ ನೋಡಿದಾಗ ನಮ್ಮ ಇಲಾಖೆಗೆ ಎಷ್ಟು ಹಣ ದೊರಕಬೇಕಿತ್ತು ಅಷ್ಟು ಹಣ ದೊರಕಲಿಲ್ಲ. ಈರೀತಿ ಮಾಡದೆ ಇದ್ದ ಪಕ್ಷದಲ್ಲಿ ಸರ್ಕಾರದ ಮೇಲೆ ಬರುವಂತಹ ಟೀಕೆಗಳನ್ನು ನಾನು ಒಬ್ಬನೇ ಹೊತ್ತು ಕೊಳ್ಳುವುದಕ್ಕೆ ಬದಲಾಗಿ ನಮ್ಮ ಸರ್ಕಾರ ಸಂಪೂರ್ಣವಾಗಿ ಹೊರಬೇಕಾಗುತ್ತದೆ. ಬೆಂಗಳೂರು ನಗರದ ಪೊಲೀಸ್ ಸ್ಟೇಷನ್‌ಗಳಿಗೆ ಬೇಕಾಗಿರುವಂತಹ ವಾಹನಗಳು, ವೈರ್‌ಲೆಸ್ ಸೆಟ್‌ಗಳು ಹಾಗೂ ಅವರು ಚೆನ್ನಾಗಿ ಕೆಲಸ ಮಾಡಲು ಆಧುನೀಕರಣ ರೀತಿಯಲ್ಲಿ ಕೆಲಸ ಮಾಡುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಕಳೆದ ವರ್ಷ ಕೇಂದ್ರ ಸರ್ಕಾರದವರು ಸುಮಾರು 31 ಲಕ್ಷ ರೂಪಾಯಿಗಳನ್ನು ಕೊಟ್ಟರು. ಹಿಂದಿನ ವರ್ಷ 31 ಲಕ್ಷ ರೂಪಾಯಿಗಳನ್ನು ಕೊಟ್ಟರು. ಆದರೆ ಈ ವರ್ಷ 21 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ ಬೇರೆ ರಾಜ್ಯಗಳನ್ನು ನೋಡಿದಾಗ ನಮಗೆ ಇದು ಅತ್ಯಂತ ಕಡಿಮೆಯಾಗಿದೆ ಎಂದು ಅನಿಸುತ್ತದೆ. ಇಧಕ್ಕೆ ಕಾರಣವೇನೆಂದರೆ ಅವರು ಮ್ಯಾಚಿಂಗ್ ಗ್ರಾಂಟ್ ಕೊಡುತ್ತಾರೆ. ನಾವು ಎಷ್ಟು ಖರ್ಚು ಮಾಡುತ್ತೇವೆಯೋ ಅಷ್ಟು ಮ್ಯಾಚಿಂಗ್ ಗ್ರಾಂಟನ್ನು ಅವರು ನಮಗೆ ಕೊಡುತ್ತಾರೆ. 42 ಲಕ್ಷ ರೂಪಾಯಿಗಳು ಬರಬೇಕೆಂದು ನಿರೀಕ್ಷೆಮ ಮಾಡಿದ್ದೇವೆ. ಈ ಹಣವನ್ನು ಖರ್ಚು ಮಾಡಿದ ಮೇಲೆ ಅದನ್ನು ಒದಗಿಸಿ ಕೊಡಿ ಎಂದು ಕೇಳುತ್ತೇವೆ. ಕೇಂದ್ರ ಸರ್ಕಾರದ ಒಳಾಡಳಿತ ಸಚಿವರಾದ ಶ್ರೀ ಅರುಣ್ ನೆಹರೂರವರು ಪೊಲೀಸ್‌ರವರಿಗೆ ವಿಶೇಷ ರೀತಿಯಲ್ಲಿ ತರಬೇತಿ ಕೊಡಬೇಕು ಈಗ ಅವರಿಗೆ ಕೊಟ್ಟಿರುವಂತಹ ತರಬೇತಿ ಸಾಲುವುದಿಲ್ಲ ಅವರು ಹೊಸ ಉಪಕರಣಗಳನ್ನು, ಆಯುಧಗಳನ್ನು, ಹಿಡಿಯಬೇಕಾದ ಪಕ್ಷದಲ್ಲಿ ಅವರಿಗೆ ಹೊಸ ರೀತಿಯ ತರಬೇತಿ ಆಗಲೇ ಬೇಕೆಂದು ಹೇಳಿದ್ದಾರೆ. ಆ ದೃಷ್ಟಿಯಿಂದ ಕರ್ನಾಟಕ ರಾಜ್ಯದಲ್ಲಿ ಪೊಲೀಸ್ ಟ್ರೈನಿಂಗ್ ಸ್ಕೂಲ್‌ಗಳಾದ, ಮೈಸೂರು, ಚನ್ನಪಟ್ಟಣ, ರಾಯಪುರ,

ಮಾಗೋಡು ಹಾಗೂ ಖಾನಾಪುರದಲ್ಲಿ ಅವರಿಗೆ ಕೊಡುವಂತಹ ಟ್ರೈನಿಂಗ್, ಡ್ರಿಲ್ ಫಿಸಿಕಲ್ ಟ್ರೈನಿಂಗ್ ಹಾಗೂ ಇನ್ನೂ ಏನೇನು ನೀಡಬೇಕೋ ಅದನ್ನೆಲ್ಲಾ ಮಾಡುತ್ತೇವೆ. ಆದರೆ ಸಾರ್ವಜನಿಕರು ಅವರ ಹತ್ತಿರ ಹೋಗುವಂತಹ ಕಾಲದಲ್ಲಿ, ಯಾವ ರೀತಿ ನಡೆದುಕೊಳ್ಳಬೇಕು, ಅವರಿಗೂ ಸಾರ್ವಜನಿಕರಿಗೂ ಇರುವಂತಹ ಸಂಬಂಧ ಹೇಗೆ ಇರಬೇಕು ಎಂಬ ವಿಷಯದಲ್ಲಿ ವಿಶೇಷ ತರಬೇತಿಯನ್ನು ಕೊಡಬೇಕೆಂದು ನಮ್ಮ ಕರಿಕ್ಯುಲರ್‌ನಲ್ಲಿ ಬದಲಾವಣೆ ಮಾಡಿದ್ದೇವೆ. ಈ ಪೊಲೀಸ್ ಕಲ್ಚರ್ ಏನಿದೆ, ಅದನ್ನು ಒಂದೇ ದಿವಸದಲ್ಲಿ ಹೋಗಲಾಡಿಸುವುದಕ್ಕೆ ಕಷ್ಟವಾಗುತ್ತದೆ. ಉಚ್ಚ ನ್ಯಾಯಾಲಯದವರು ಕಾನ್ಸಿಟ್ಯೂಷನ್ 311 ನೇ ಆರ್ಟಿಕಲ್ ಅನ್ನು ರದ್ದುಗೊಳಿಸಿರುವ ಚರ್ಚೆ ವಿರುದ್ಧವಾಗಿ ಸರ್ಕಾರಿ ನೌಕರರು ಎಲ್ಲಾ ಕಡೆ ಬಂದ್‌ನ್ನು ಆಚರಿಸಿದರು.

ವಿಧಾನಸೌಧದ ನೌಕರರು ಕೂಡ ಮುಷ್ಕರದಲ್ಲಿ ಪಾಲ್ಗೊಂಡಿದ್ದರು. ಸುಮಾರು 16 ಜನರು ಮೆಟ್ಟಿಲ ಹತ್ತಿರ ಕಛೇರಿಗೆ ಹೋಗುವವರನ್ನು ತಡೆಗಟ್ಟಬೇಕೆಂದು ಪ್ರಯತ್ನ ಮಾಡಿದರು. ಆ ಸಂದರ್ಭದಲ್ಲಿ ನೀವು ಏಕೆ ನಮ್ಮನ್ನು ತಡೆಗಟ್ಟುತ್ತೀರಿ. ನಿಮ್ಮ ಕೆಲಸ ನೀವು ಮಾಡಿ ಎಂದು ಕೇಳಿದಂತಹ ಕಾಲದಲ್ಲಿ ಅವರಿಗೂ ಪೊಲೀಸ್ ಅಧಿಕಾರಿಗಳಿಗೆ ಒಂದು ರೀತಿಯಾದಂತಹ ಘರ್ಷಣೆ ನಡೆದಿದೆ ಪೊಲೀಸ್ ಅಧಿಕಾರಿಗಳು ಅವರ ಕರ್ತವ್ಯವನ್ನು ಮಾಡಿದ್ದಾರೆ. ಇವರೂ ಕೂಡ ಅಂದರೆ ಸ್ಟ್ರೈಕ್ ಮಾಡುತ್ತಿದ್ದವರು ಅವಾಚ್ಯ ಶಬ್ದಗಳಿಂದ ಬೈದಿದ್ದಾರೆ. ಈ ಘರ್ಷಣೆ ಆಗಿರುವುದರಿಂದ ಪೊಲೀಸ್‌ನವರು ಹೊಡಿದ್ದಾರೆ. ಪೊಲೀಸ್‌ನವರ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ಸಸ್ಪೆಂಡ್ ಮಾಡಬೇಕೆಂದು ಒತ್ತಾಯ ತಂದರು. ವಿಚಾರಣೆ ಮಾಡುವ ಸಂದರ್ಭದಲ್ಲಿ ಎರಡೂ ಕಡೆಯವರದು ತಪ್ಪು ಎಂದು ಕಾಣುತ್ತದೆ, ನೀವೆಲ್ಲರೂ ಸರ್ಕಾರದ ಸಂಬಳ ಪಡೆಯುವವರು ಈ ನ್ಯಾಯಾಲಯದ ತೀರ್ಪು ನಿಮಗೂ ಅನ್ವಯವಾಗುತ್ತದೆ ನೀವೇಕೆ ಈ ಮುಷ್ಕರದಲ್ಲಿ ಭಾಗವಹಿಸಿಲ್ಲವೆಂದು ಅವಾಚ್ಯ ಶಬ್ದಗಳಿಂದ ಬೈದಿದ್ದಾರೆ. ಪೊಲೀಸ್‌ನವರು ಇದನ್ನು ಕೇಳಲಾರದೆ ಕೆನ್ನೆಗೆ ಹೊಡೆದಿರಬಹುದೆಂದು ಕಾಣುತ್ತದೆ. ಆದುದರಿಂದ ಇದನ್ನು ಕೂಲಂಕುಷವಾಗಿ ಪರಿಶೀಲನೆ ಮಾಡುವುದಕ್ಕೋಸ್ಕರ ಸಿ.ಓ.ಡಿ.ಗೆ ರೆಫರ್ ಮಾಡುತ್ತಿದ್ದೇನೆ. ಅವರು ಹೊಡೆದಿಲ್ಲವೆಂದು ಹೇಳಲಾರೆ ಹಾಗೂ ಇವರು ಬೈದಿಲ್ಲವೆಂದೂ ಹೇಳಲಾರೆ.

ಶ್ರೀ ಬಿ. ರಾಚಯ್ಯ- ಇನ್ನು ಸಿ.ಓ.ಡಿ ಇಲಾಖೆಯವರು ಮಾಡಿರುವ ಕೆಲಸ ಕಾರ್ಯಗಳ ಮಾಹಿತಿಯನ್ನು ಕೊಡುವುದಕ್ಕೆ ಇಚ್ಛೆ ಪಡುತ್ತೇನೆ. ಎಷ್ಟು ಕೇಸುಗಳು ವಿಲೆಯಾಗಿವೆ, ಎಷ್ಟು ಜನರಿಗೆ ಸಹಾಯವಾಗಿದೆ ಎನ್ನುವ ವಿವರಗಳನ್ನು ಕೊಡುತ್ತೇನೆ. 1981ರಲ್ಲಿ 195 ಕೇಸುಗಳು 1982ರಲ್ಲಿ 308 ಕೇಸುಗಳು ಬಂದಿದ್ದು, ಪೆಂಡಿಂಗ್ ಉಳಿದಿರುವಂತಹವು 189 ಕೇಸುಗಳು. 1981ರಲ್ಲಿ 32 ಕೇಸುಗಳಲ್ಲಿ ಚಾರ್ಜ್‌ಷೀಟ್ ಹಾಕಲಾಗಿದ್ದು 143 ಕೇಸುಗಳು ಡಿಸ್‌ಪೋಸಲ್ ಆಗಿವೆ. 1982 ರಲ್ಲಿ 202 ಕೇಸುಗಳು ಡಿಸ್‌ಪೋಸಲ್ ಆಗಿವೆ. 1983ರಲ್ಲಿ 95 ಕೇಸುಗಳಲ್ಲಿ ಚಾರ್ಜ್‌ಷೀಟ್ ಹಾಕಲಾಗಿದ್ದು 153 ಡಿಸ್‌ಪೋಸಲ್ ಆಗಿವೆ. 1983ರಲ್ಲಿ 96 ಕೇಸುಗಳಲ್ಲಿ ಚಾರ್ಜ್‌ಷೀಟ್ ಹಾಕಲಾಗಿದೆ. 1984 ರಲ್ಲಿ 281 ಕೇಸುಗಳಲ್ಲಿ 129 ಚಾರ್ಜ್‌ಷೀಟ್ ಹಾಕಲಾಗಿದೆ.

ಇನ್ನು 180 ಕೇಸುಗಳು ಪೆಂಡಿಂಗ್‌ನಲ್ಲಿವೆ. ಇವುಗಳಲ್ಲಿ ಬಹಳ ಮುಖ್ಯವಾಗಿ ಸ್ಕಾಲರ್‌ಷಿಪ್‌ಗೆ ಸೇರಿದಂಥವು. ವೈಶ್ಯ ಕೋ ಆಪರೇಟಿವ್ ಬ್ಯಾಂಕ್‌ನಲ್ಲಿ 69 ಕೋಟಿ ರೂಪಾಯಿ ದುರುಪಯೋಗಪಡಿಸಿಕೊಂಡಿದ್ದು ಪತ್ತೆ ಹಚ್ಚಿದ್ದಾರೆ. ಬ್ಯಾಂಕ್ ಚೀಟಿಂಗ್ ಕೇಸುಗಳ ಬಗ್ಗೆ ಹೇಳುವುದಾದರೆ ಒಟ್ಟು 24 ಕೇಸುಗಳನ್ನು ಸಿ.ಓ.ಡಿ. ತನಿಖೆಗೆ ತೆಗೆದುಕೊಂಡಿದ್ದು ಅದರಲ್ಲಿ 16 ಕೇಸುಗಳಿಗೆ ಚಾರ್ಜ್‌ಷೀಟ್ ಹಾಕಿದರೆ, ಉಳಿದ 8 ಕೇಸುಗಳಿಗೆ ತನಿಖೆ ನಡೆಯುತ್ತಿದೆ. ಅದನ್ನು ಒರಿಜನಲ್ ಡಾಕುಮೆಂಟ್ಸ್ ಸಿವಿಲ್ ಕೋರ್ಟ್‌ನಿಂದ ಪಡೆಯಬೇಕಾಗಿದೆ. ಪಿ.ಯು.ಇ. ಬೋರ್ಡಿಗೆ ಸಂಬಂಧಪಟ್ಟಂತೆ 41 ಕೇಸುಗಳನ್ನು ಸಿ.ಓ.ಡಿ. ತನಿಖೆಗೆ ತೆಗೆದುಕೊಂಡಿದ್ದು, 25 ಕೇಸುಗಳಲ್ಲಿ ಚಾರ್ಜ್‌ಷೀಟ್ ಹಾಕಲಾಗಿದೆ. 3 ಕೇಸುಗಳಲ್ಲಿ 'ಬಿ' ರಿಪೋರ್ಟ್ ಕೊಡಲಾಗಿದೆ. 8 ಕೇಸುಗಳು ಬೆರಳಚ್ಚು ತಜ್ಞರ ತನಿಖೆಯಿಂದ ತಡವಾಗಿದೆ. 3 ಕೇಸುಗಳಲ್ಲಿ ತನಿಖೆ ನಡೆಯುತ್ತಿದೆ. ಬಿ.ಡಿ.ಎಗೆ. ಸಂಬಂಧಪಟ್ಟ 3 ಕೇಸುಗಳಲ್ಲಿ ಒಂದು ಕೇಸಿನಲ್ಲಿ ಚಾರ್ಜ್‌ಷೀಟ್ ಹಾಕಿದೆ. 2 ಕೇಸುಗಳನ್ನು ತನಿಖೆಗೆ ತೆಗೆದುಕೊಂಡಿದ್ದಾರೆ. ಕಾಫಿ ಬೋರ್ಡ್‌ನಲ್ಲಿ ನಡೆದಿರುವ ಮಿಸ್ ಅಪ್ರೊಪ್ರಿಯೇಷನ್ ಕೇಸನ್ನು ಕೂಡ ತನಿಖೆಗೆ ತೆಗೆದುಕೊಂಡಿದ್ದಾರೆ. ಹುಣಸೂರು ಲ್ಯಾಂಡ್ ಅಕ್ವಿಜೇಷನ್ ಕೇಸ್ ತನಿಖೆಗೆ ತೆಗೆದುಕೊಂಡಿದ್ದಾರೆ. ಹಿಡಕಲ್ ಡ್ಯಾಂಗೆ ಸಂಬಂಧ ಪಟ್ಟಂತೆ ರಾಜಕಮಲ್ ಟ್ರಾನ್ಸ್ ಪೋರ್ಟ್ ಕೇಸನ್ನು ಕೂಡ ತನಿಖೆ ಮಾಡುತ್ತಿದ್ದಾರೆ. ಸಣ್ಣ ಕೈಗಾರಿಕೆಗಳಿಗೆ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ ಕೊಡುವಂಥ ಸಂದರ್ಭದಲ್ಲಿ ನಡೆದಂಥ ವ್ಯವಹಾರಗಳನ್ನು ತನಿಖೆಗೆ ತೆಗೆದುಕೊಂಡಿದ್ದಾರೆ. ಇಲಾಖೆಗಳಲ್ಲಿ ಎಲ್ಲೆಲ್ಲಿ ಹಣ ದುರುಪಯೋಗವಾಗಿದೆ. ಅಟಾನಮಸ್ ಬಾಡಿಗಳಲ್ಲಿ ಹಣ ಎಲ್ಲೆಲ್ಲಿ ದುರುಪಯೋಗವಾಗಿದೆ, ಬ್ಯಾಂಕ್‌ಗಳಲ್ಲಿ ಎಲ್ಲೆಲ್ಲಿ ಹಣ ದುರುಪಯೋಗವಾಗಿದೆ. ಅಂಥ ಎಲ್ಲಾ ಕೇಸುಗಳಲ್ಲಿಯೂ ಸಿ.ಓ.ಡಿಯವರು ತನಿಖೆ ಮಾಡಿದ್ದಾರೆ. ಕೋರ್ಟಿನಿಂದ ಡಾಕ್ಯುಮೆಂಟ್ಸ್ ತರುವ ಸಂದರ್ಭದಲ್ಲಿ ಮಾತ್ರ ವಿಳಂಬವಾಗಿದೆ. ಹೆಚ್ಚಿನ ರೀತಿಯಲ್ಲಿ ಕೆಲಸ ಮಾಡಿದ್ದಾರೆಂದು ಇದರಿಂದ ಗೊತ್ತಾಗುತ್ತದೆ. ಮಾನ್ಯ ವೆಂಕಟರಾಮಯ್ಯನವರು ಶ್ವಾನದಳದ ಬಗ್ಗೆ ಮಾತನಾಡಿದ್ದಾರೆ. ಅವರು ಕಳೆದ 20 ವರ್ಷಗಳಿಂದಲೂ ಕ್ರಿಮಿನಲ್ ಲಾಯರಾಗಿ ಕೆಲಸ ಮಾಡುತ್ತಿದ್ದಾರೆ. ಅವರು ಎಷ್ಟು ಜನ ಅಪರಾಧಿಗಳನ್ನು ಬಿಡಿಸಿದ್ದಾರೋ ಗೊತ್ತಿಲ್ಲ ರಾಷ್ಟ್ರದ ಅನೇಕ ದೇಶಗಳಲ್ಲಿ ಶ್ವಾನದಳ ಇದೆ. ಅದರ ಮುಖಾಂತರ ಇಂತಹ ಅಪರಾಧಿಗಳನ್ನು ಸಹಿತ ಪತ್ತೆ ಹಚ್ಚುವುದಕ್ಕೆ ಹೆಚ್ಚು ಸಹಕಾರಿಯಾಗಿರುವುದರಿಂದ ಡಾಗ್ ಸ್ಕ್ವಾಡ್ ನಲ್ಲಿ ಹೆಚ್ಚಾಗಿ ಶಾಸನಗಳನ್ನು ಸಾಕಬೇಕಾಗಿದೆ. 8 ಜಿಲ್ಲೆಗಳಲ್ಲಿ ಈ ಡಾಗ್ ಸ್ಕ್ವಾಡ್ ಇದೆ. ಹಿಂದೆ ಕೊಲೆಯಾಗಿ ಪತ್ತೆಯಾಗದೇ ಇದ್ದಂತಹ ಕೇಸುಗಳು ಸಹ ಪತ್ತೆಯಾಗಿವೆ. ಇತ್ತೀಚೆಗೆ ನಡೆದಂತಹ ಡಕಾಯಿತಿಗಳ ಕೇಸುಗಳಲ್ಲೂ ಇವುಗಳು ಸ್ವಲ್ಪ ಸಹಾಯಕವಾಗಿವೆ. ಆ ದೃಷ್ಟಿಯಿಂದ ಇನ್ನೂ ಕೆಲವು ಕಾಲ ಬೇಕಾಗಬಹುದು.---------

ಪೊಲೀಸ್ ಇಲಾಖೆಯ ತರಹ ಬೇರೆ ಇಲಾಖೆಗಳು ಸಹ ಕೆಲಸ ಮಾಡಬೇಕು ಆಯಾ ಇಲಾಖೆಗಳ ಕೆಲಸಗಳನ್ನು ಆಯಾ ಇಲಾಖೆಗಳು ನೋಡಿಕೊಂಡರೆ ಪೊಲೀಸ್ ಇಲಾಖೆಗೆ ಹೆಚ್ಚು ಹೊರೆ ಬೀಳುವುದಿಲ್ಲ ಯಾವುದೇ ಕೆಲಸ ಆಗಲಿ, ಬೇರೆ ಅಧಿಕಾರಿಗಳಿಂದ ಕೆಲಸ

ಆಗುತ್ತಿಲ್ಲವೆಂದು ಹೇಳುತ್ತಿಲ್ಲ. ಇರುವಂತಹ ಅಧಿಕಾರಿಗಳಿಂದ ಕೆಲಸ ಸಫಲವಾಗಿದೆ. ದಕ್ಷ ಅಧಿಕಾರಿಗಳು ಬಂದರೆ ಮಾತ್ರ ಕೆಲಸ ಚೆನ್ನಾಗಿ ನಡೆಯುತ್ತದೆ. ಯಾರ್‍ಯಾರು ಮೂರು ವರ್ಷಗಳಿಗಿಂತ ಹೆಚ್ಚು ಕಾಲ ಒಂದೇ ಸ್ಥಳದಲ್ಲಿದ್ದಾರೆ ಅಂತಹವನ್ನು ಬದಲಾವಣೆ ಮಾಡಿ ದಕ್ಷರಾಗಿರುವವರ ಕಡೆಯಿಂದ ಕೆಲಸ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆ. ಪೊಲೀಸ್ ಇಲಾಖೆಯಲ್ಲಿ ಶಿಸ್ತಿನ ಕ್ರಮವನ್ನು ತೆಗೆದುಕೊಂಡಿಲ್ಲವೆಂದು ಮಾನ್ಯ ಸದಸ್ಯರುಗಳು ಹೇಳಿದ್ದಾರೆ. ಬಹುಶಃ ಪೊಲೀಸ್ ಇಲಾಖೆಯಲ್ಲಿ ಆಗಿರುವಂತಹ ಶಿಸ್ತಿನ ಕ್ರಮವನ್ನು ತೆಗೆದುಕೊಂಡಿರುವ ಅಂಕಿಅಂಶಗಳನ್ನು ನೋಡಿದರೆ ಬೇರೆಲ್ಲೂ ಸಸ್ಪೆಂಡ್ ಡಿಸ್‌ಮಿಸ್ ಮಾಡಿಲ್ಲ ಶಿಸ್ತಿನ ಕ್ರಮ ತೆಗೆದುಕೊಂಡಿರುವುದು ಇದ್ದರೆ ಅದು ನಮ್ಮ ಇಲಾಖೆಯಲ್ಲಿದೆ, ಮೇಲಿನಾಧಿಕಾರಿಗಳಿಗೆ ಕೆಳಗಡೆ ಇರುವವರು ಸಲಾಮು ಹೊಡೆಯುತ್ತಾರೆಂದರೆ ಅಂತಹ ಶಿಸ್ತು ನಮ್ಮ ಇಲಾಖೆಯಲ್ಲಿದೆ. ಎಲ್ಲೋ ಒಂದು ಕಡೆ ಏನೋ, ಆದರೆ ರಾಜ್ಯದ ಆಡಳಿತ ಕುಸಿದು ಬೀಳುತ್ತದೆಂದು ಹೇಳುವುದು ಸರಿಯಲ್ಲ. ನಮ್ಮಲ್ಲಿಯೂ ಅಲ್ಪಸ್ವಲ್ಪ ದೋಷಗಳು ಇರಬಹುದು ಅದನ್ನೇ ಬೃಹದಾಕಾರ ಮಾಡಿ ರಾಜ್ಯದ ಜನತೆಗೆ ಏನೂ ನೆಮ್ಮದಿಯಿಲ್ಲ ಶಾಂತಿಯಿಲ್ಲ ಎಂದು ಹೇಳುವುದು ಸರಿಯಲ್ಲ. ಮಾನ್ಯ ಖರ್ಗೆಯವರು ಮಾತನಾಡುತ್ತಾ ಒಂದು ವಿಚಾರವನ್ನು ಹೇಳಿದ್ದಾರೆ. ಅದೇ ರೀತಿ ಮಾನ್ಯ ಸ್ವಾಮಿರಾವ್ ರವರು ಪ್ರಬಾವಕ್ಕೆ ಒಳಗಾಗಿದ್ದಾರೆಂದು ಹೇಳಿದ್ದಾರೆ. ಯಾರ್‍ಯಾರು ಅಧಿಕಾರದಲ್ಲಿರುತ್ತಾರೆ ಅವರು ಸ್ವಾಭಾವಿಕವಾಗಿ ಕೆಲವು ಸಂದರ್ಭಗಳಲ್ಲಿ ಪ್ರಭಾವಕ್ಕೆ ಒಳಗಾಗುತ್ತಾರೆ. ಮನುಷ್ಯರಾಗಿರುವವರು ತಪ್ಪು ಮಾಡುವುದಿಲ್ಲವೆಂದು ಹೇಳುವುದಿಲ್ಲ. ಕಾಂಗ್ರೆಸ್ ಪಕ್ಷದ ಅಧ್ಯಕ್ಷರ ಮೇಲೆ ಹಲ್ಲೆ ದೌರ್ಜನ್ಯ ಮಾಡಿದವರನ್ನು ಹಿಡಿಯಲಿಲ್ಲವೆಂದು ಹೇಳಿದರು. ಅವರನ್ನು ಹಿಡಿಯಲಿಕ್ಕೆ ಹಿಂದು ಮುಂದು ನೋಡುತ್ತಿದ್ದಾರೆಂದು ನನಗೆ ಆಗಾಗ್ಗೆ ಮೂದಲಿಸುತ್ತಿದ್ದಾರೆ. ಕಾಂಗ್ರೆಸ್ ಪಕ್ಷದ ಅಧ್ಯಕ್ಷರ ಮೇಲೆ ದೌರ್ಜನ್ಯ ನಡೆಸಿದಂತಹ ನಂದಕುಮಾರ್ ಅವರ ಹೇಳಿಕೆಯನ್ನು ಓದಬಾರದೆಂದು ಬಹಳ ದಿವಸಗಳಿಂದ ಇಟ್ಟುಕೊಂಡಿದ್ದೆ. ಈಗ ಅವರು ಒತ್ತಾಯ ಮಾಡಿ ನನ್ನನ್ನು ಮೂದಲಿಸುತ್ತಿರುವುದನ್ನು ನೋಡಿದರೆ ನಾನು ಆ ಹೇಳಿಕೆಯನ್ನು ಓದಬೇಕಾಗಿದೆ.

ಸಮಾಜದಲ್ಲಿರುವ ದಲಿತರ ಮೇಲೆ ಏನು ಹಲ್ಲೆಗಳು ನಡೆಯುತ್ತಿವೆ. ಅವುಗಳೆಲ್ಲವನ್ನೂ ಒಂದೇ ವರ್ಷದಲ್ಲಿ ಹೋಗಲಾಡಿಸುತ್ತೇವೆಂದು ಹೇಳುವುದಕ್ಕಾಗುವುದಿಲ್ಲ. ಯಾರೇ ದೂರು ಕೊಟ್ಟರೂ ಕೇಸನ್ನು ರಿಜಿಸ್ಟರ್ ಮಾಡಿಕೊಳ್ಳಬೇಕೆಂದು ಹೇಳಿದ್ದೇವೆ. ಆ ಬಗ್ಗೆ ನಾವು ಒಂದು ಸುತ್ತೋಲೆಯನ್ನು ಕೂಡ ಕೊಟ್ಟಿದ್ದೇವೆ. ಅದರ ವಿವರ ಈ ರೀತಿ ಇದೆ.

(1) ಮಹಿಳಾ ಅಪರಾಧಿಗಳಿಗೆ ಕೈಕೋಳಗಳನ್ನು ಹಾಕಬಾರದು.

(2) ಯಾವ ಮಹಿಳೆಯನ್ನೂ ಆಕೆಯ ವಾಸಸ್ಥಳವನ್ನು ಬಿಟ್ಟು ಬೇರೆ ಕಡೆಯಲ್ಲಿ ವಿಚಾರಣೆಗೆ ಕರೆಯಬಾರದು.

(3) ಮಹಿಳೆಯರನ್ನು ಮಹಿಳಾ ಪೊಲೀಸ್ ಅಧಿಕಾರಿಗಳಿಂದಲೇ ಶೋಧನೆ ಮಾಡಿಸಬೇಕು, ಹಾಗೂ ಪುರುಷ ಅಧಿಕಾರಿಗಳು ಇದನ್ನು ಮಾಡಬಾರದು ಮತ್ತು

ಮಹಿಳೆಯರು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಗಳಲ್ಲಿ ಆರೋಪಿತರಾಗಿದ್ದರೆ ಅವರನ್ನು ಪೊಲೀಸ್ ಸ್ಟೇಷನ್‌ನಲ್ಲಿ ಪ್ರಶ್ನೆಗಳಿಗಾಗಿ ಕರೆಯಬಾರದು.

(4) ಮಹಿಳೆಯರನ್ನು ಬಹಳ ಗೌರವದಿಂದ ನೋಡಿಕೊಳ್ಳಬೇಕು.

(5) ಮಹಿಳಾ ಪ್ರದರ್ಶನಕಾರರನ್ನು ಒರಟು ರೀತಿಯಲ್ಲಿ ನೋಡಿಕೊಳ್ಳಬಾರದು.

ಕ್ರಿಮಿನಲ್ ಪ್ರೊಸೀಜರ್ ಕೋಡ್ ಸೆಕ್ಷನ್ 52(2) 100(2)ಪ್ರಕಾರ ಎಂಬುದಾಗಿ ಮಹಿಳಾ ಅಪರಾಧಿಗಳ ಬಗ್ಗೆ ಪೊಲೀಸ್ ಅಧಿಕಾರಿಗಳು ಯಾವ ರೀತಿ ನಡೆದುಕೊಳ್ಳಬೇಕೆಂಬುದರ ಬಗ್ಗೆ ಈ ಒಂದು ಸುತ್ತೋಲೆಯನ್ನು ಕೊಟ್ಟಿದ್ದೇವೆ. ಈ ಒಂದು ಸುತ್ತೋಲೆಯನ್ನು ಕನ್ನಡದಲ್ಲಿ ತರ್ಜುಮೆ ಮಾಡಿಸಿ ಮಹಾ ನಿರ್ದೇಶಕರು 15-3, 1983ರಲ್ಲಿ ಕಳುಹಿಸಿಕೊಟ್ಟಿದ್ದಾರೆ. ಇದರ ಜೊತೆಗೆ ದಲಿತರ ವಿಷಯದಲ್ಲಿ ಇನ್ನೊಂದು ಸುತ್ತೋಲೆಯನ್ನು ಕೊಟ್ಟಿದ್ದೇವೆ. ಅದು ಈ ರೀತಿ ಇದೆ.

ಗೃಹ ಮಂತ್ರಿಗಳನ್ನು ಭೇಟಿ ಮಾಡಲು ಬರುತ್ತಿರುವ ಅನೇಕ ಅರ್ಜಿದಾರರುಗಳು ಠಾಣಾ ಮಟ್ಟದಲ್ಲಿ ತಮಗೆ ಉಂಟಾಗುತ್ತಿರುವ ಕಿರುಕುಳದ ಹಾಗೂ ದುವರ್ತನೆಗಳ ಬಗ್ಗೆ ದೂರನ್ನು ನೀಡಿದ್ದಾರೆ. ದೂರುಗಳ ಮುಖ್ಯಾಂಶಗಳು ಈ ಕೆಳಕಂಡಂತಿವೆ.

(1) ಅರ್ಜಿಯನ್ನು ಕೊಡಲು ಠಾಣೆಗೆ ಹೋದಾಗ ಅಲ್ಲಿ ಅವರನ್ನು ಬಹಳ ಹೊತ್ತು ನಿಲ್ಲಿಸಿಯೇ ಇರುತ್ತಾರೆ.

(2) ಅರ್ಜಿಗಳಿಗೆ ಹಿಂಬರಹವನ್ನು ಕೇಳಿದರೆ ವಾಚಾಮಗೋಚರವಾಗಿ ಬಯ್ಯುತ್ತಾರೆ.

(3) ಸ್ತ್ರೀಯರು, ಮಕ್ಕಳು ಬಂದರೆ ಅವರನ್ನು ಹೀನಾಯಮಾನವಾಗಿ ಕಾಣುವುದಲ್ಲದೆ, ಏಕ ವಚನದಲ್ಲೇ ಸಂಭೋಧಿಸುತ್ತಾರೆ.

(4) ನಲ್ಲಿ ಜಗಳ ಕಸ ಹಾಕುವುದು ಇತ್ಯಾದಿ ಚಿಕ್ಕ ಪುಟ್ಟ ದೂರುಗಳನ್ನು ತೆಗೆದುಕೊಂಡು ಹೋದಾಗ, ಸ್ಥಳಕ್ಕೆ ಹೋಗಿ ಎರಡೂ ಕಡೆಯವರಿಗೂ ಸಮಾಧಾನ ಮಾಡಿ ಪರಿಹಾರ ನೀಡುವ ಬದಲು ಉದ್ಧಟತನದಿಂದ ಮಾತನಾಡುತ್ತಾರೆ.

(5) ಮೇಲಾಧಿಕಾರಿಗಳಿಂದ ಅರ್ಜಿಗಳ ಮೇಲೆ ಶರಾವನ್ನು ಬರೆಸಿಕೊಂಡು ಹೋದರೆ ಠಾಣೆಗೇಕೆ ಬಂದಿರಿ ಆ ಅಧಿಕಾರಿಯ ಬಳಿ ಹೋಗಿರಿ ಎಂದು ಒರಟುತನದಿಂದ ಮಾತನಾಡಿ ಠಾಣೆಗಳಿಂದ ಹೊರಗೆ ಅಟ್ಟುತ್ತಾರೆ.

ಇಂತಹ ದೂರುಗಳು ಬಡಜನರಿಂದ ಬಹಳವಾಗಿ ಬರುತ್ತಿರುವುದರಿಂದ ನಿರೀಕ್ಷಣಾಧಿಕಾರಿಗಳು ಠಾಣೆಗಳಿಗೆ ನಿರೀಕ್ಷಿತ ಹಾಗೂ ಅನಿರೀಕ್ಷಿತ ಭೇಟಿಗಳನ್ನು ನೀಡಿ ಇಂತಹ ಅಸಭ್ಯ ನಡತೆಯನ್ನು ಮಟ್ಟ ಹಾಕಿ ಸಾರ್ವಜನಿಕರೊಂದಿಗೆ ವಿನಯಪೂರ್ವಕವಾಗಿ ನಡೆದುಕೊಳ್ಳುವಂತೆ ಠಾಣಾ ಮಟ್ಟದ ಅಧಿಕಾರಿಗಳಿಗೆ ಆದೇಶ ನೀಡಲಾಗಿದೆ. ದುರ್ವತನೆಯ ದೂರು ಬಂದಾಗ ಶೀಘ್ರವಾಗಿ ವಿಚಾರಣೆ ಮಾಡಿ ಸದಸ್ಯರೇ ಅಧಿಕಾರಿಗಳ ಮೇಲೆ ಕ್ರಮವನ್ನು ತೆಗೆದುಕೊಳ್ಳಬೇಕಾಗಿದೆ. ಠಾಣೆಗಳು ನೆಮ್ಮದಿ

ನೀಡುವ ಠಾಣೆಗಳು ಆಗಬೇಕೇ ಹೊರತು ದುರ್ವತನೆಯ ಕೇಂದ್ರಗಳಾಗಬಾರದೆಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಅವುಗಳನ್ನು ಮಾದರಿಯಾಗಿ ಮಾಡಬೇಕಾಗಿದೆ. ನಾನು ಹೇಳಿದ ಮೇಲೆ ಮಹಾ ನಿರ್ದೇಶಕರು ಒಂದು ಸುತ್ತೋಲೆಯನ್ನು ಎಲ್ಲಾ ಪೊಲೀಸ್ ಠಾಣೆಗಳಿಗೂ ಕಳುಹಿಸಿಕೊಟ್ಟಿದ್ದಾರೆ. ತಿಂಗಳಲ್ಲಿ ಒಂದು ದಿನವನ್ನು ದಲಿತರಿಗೋಸ್ಕರ ಮೀಸಲಿಡಬೇಕೆಂದು ಹೇಳಿದ್ದೇವೆ. ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡಗಳ ಹೆಣ್ಣು ಮಕ್ಕಳ ಮೇಲೆ ಮಾಡುವ ದೌರ್ಜನ್ಯಗಳು ಏನಿವೆ ಅವುಗಳಿಗೆ ಸಂಬಂಧಪಟ್ಟ ಅರ್ಜಿಗಳು ಎಷ್ಟು ಬಂದಿರುತ್ತವೋ ಅವೆಲ್ಲವನ್ನು ತಪಾಸಣೆ ಮಾಡಿ ಕ್ರಮ ಕೈಗೊಳ್ಳಬೇಕೆಂದು ಮಾಡಿದ್ದೇವೆ. ದಲಿತರಿಗೋಸ್ಕರ ಮೀಸಲಿಡುವ ವಾರ ಪ್ರತಿ ತಿಂಗಳ ಕಡೆಯ ಭಾನುವಾರವಾಗಿರಬೇಕೆಂದು ಹೇಳಿದ್ದೇವೆ. ಠಾಣಾಧಿಕಾರಿಗಳು ಎಲ್ಲ ಜನರ ಅರ್ಜಿಗಳನ್ನು ತೆಗೆದುಕೊಂಡು ಅದರ ಮೇಲೆ ತೆಗೆದುಕೊಂಡಿರುವ ಕ್ರಮದ ಬಗ್ಗೆ ಡಿವೈಎಸ್.ಪಿ. ಯವರು ಸಮೀಕ್ಷೆ ನಡೆಸಬೇಕೆಂದು ಹೇಳಿದ್ದೇವೆ. ಹಳ್ಳಿಗಳಿಗೆ ಹೋಗಿ ಸಮಸ್ಯೆಗಳನ್ನು ಬಗೆಹರಿಸಿ ತಪ್ಪಿತಸ್ಥಜನರ ವಿರುದ್ಧ ತೀವ್ರಕ್ರಮ ತೆಗೆದುಕೊಂಡು ಅಶಾಂತಿ ಹರಡದಂತೆ ನೋಡಿಕೊಳ್ಳಬೇಕೆಂದು ಹೇಳಿದ್ದೇವೆ. ಎಲ್ಲಾ ಎಸ್.ಪಿ. ಯವರು ಮೇಲ್ಕಂಡ ಕಾರ್ಯಕ್ರಮವನ್ನು ತೆಗೆದುಕೊಂಡಿದ್ದಾರೆಯೇ ಎಂಬುದನ್ನು ಪರಿಶೀಲಿಸಿ -

ಶ್ರೀ ಧರ್ಮಸಿಂಗ್- ಸೋಷಿಯಲ್ ವೆಲ್ ಫೇರಿಗೆ ಸಂಬಂಧಪಟ್ಟಂತೆ 2-3 ಸಾವಿರ ಕೇಸುಗಳು ಇವೆ. ಅದರಲ್ಲಿ ಕನ್ ವಿಕ್ಟೆಡ್ ಕೇಸಸ್ 10. ಇನ್ನು ಚಾರ್ಜ್‌ಷೀಟ್ ಹಾಕದೆ ಇರುವ ಕೇಸುಗಳು ಇವೆ. ಹೀಗಾದರೆ ಪೊಲೀಸ್ ಇಲಾಖೆ ಏನು ಮಾಡುತ್ತಿದೆ? ಇದರ ಬಗ್ಗೆ ಸ್ಪಷ್ಟವಾದ ಉತ್ತರಬೇಕು. ದಲಿತರ ಅನ್ಯಾಯವಾದರೆ ಸಿವಿಲ್ ರೈಟ್ 'ಸೆಲ್' ಕೇಳುತ್ತದೆಂದು ಹೇಳುತ್ತೀರಲ್ಲ ಅವರು ಏನು ಕ್ರಮ ತೆಗೆದುಕೊಂಡಿದ್ದಾರೆ? ಪೊಲೀಸ್ ಫೋರ್ಸ್ 45 ಸಾವಿರ ಇದೆ ಎಂದು ಹೇಳುತ್ತೀರಿ. ಆದರೆ ಅವರಿಂದ ಡಕಾಯಿತರನ್ನು ಹಿಡಿಯುವುದಕ್ಕೆ ಏಕೆ ಸಾಧ್ಯವಾಗಿಲ್ಲ? ಪೊಲೀಸ್ ಖಾತೆ ರೀಪಾರ್ಮ್ ಆಗಬೇಕೆಂದು 1983ರಲ್ಲಿ ವರದಿ ಬಂದಿದೆ. ಅದರ ಬಗ್ಗೆ ತಾವು ಏನು ಕ್ರಮ ತೆಗೆದುಕೊಂಡಿದ್ದೀರಿ? ಪೊಲೀಸ್ ಇಲಾಖೆಯನ್ನು ಸುಧಾರಣೆಮಾಡಲು ಕ್ರಮ ಕೈಗೊಳ್ಳುವ ವಿಚಾರ ಇದೆಯೇ?

ಶ್ರೀ ಬಿ. ರಾಚಯ್ಯ- ಮೊದಲನೇ ಪ್ರಶ್ನೆಗೆ ಈಗಾಗಲೇ ನಾನು ಉತ್ತರಿಸಿದ್ದೇನೆ. ಕೇಸುಗಳು ಅನೇಕ ಹಂತಗಳಲ್ಲಿವೆ. ಅದಕ್ಕೆಲ್ಲ ಸಾಕ್ಷಿದಾರರನ್ನು ಹೊಂದಿಸಿಕೊಡುವುದು ಕಷ್ಟವಾಗಿದೆ. 10 ಕೇಸುಗಳು ಮಾತ್ರ ತೀರ್ಮಾನವಾಗಿವೆ. ಒಂದು ಕೇಸ್‌ನಲ್ಲಿ ಮಾತ್ರ ಕನ್‌ವಿಕ್ಷನ್ ಆಗಿದೆ. ಉಳಿದ ಕೇಸುಗಳು ವಿಚಾರಣೆಯಲ್ಲಿವೆ. ತೀರ್ಮಾನವಾಗಿಲವೆಂದು ಆಗಲೇ ಹೇಳಿದ್ದೇನೆ. ಪೊಲೀಸ್ ಇಲಾಖೆಯಲ್ಲಿ ಇಷ್ಟೊಂದು ರೀತಿಯಲ್ಲಿ ನಡೆಯುತ್ತಿರುವಾಗ ಪೊಲೀಸ್ ಇಲಾಖೆಯನ್ನು ಸ್ವಚ್ಛಗೊಳಿಸುವುದಕ್ಕೆ ಆಗಲಿ, ವಿಸ್ತಾರಗೊಳಿಸುವುದಕ್ಕೆ ಆಗಲಿ ಪೊಲೀಸರನ್ನು ಹೆಚ್ಚಿಸುವುದಕ್ಕಾಗಲಿ ಏನು ಕ್ರಮ ತೆಗೆದು ಕೊಂಡಿದ್ದೀರೆಂದು ಕೇಳಿದ್ದಾರೆ. ಒಂದು ಕೋಟಿ ರೂಪಾಯಿ ಅಂದಾಜಿನಲ್ಲಿ ಈ ವರ್ಷ ಎಲ್ಲೆಲ್ಲಿ ಠಾಣೆಗಳ ಅವಶ್ಯಕತೆ ಇದೆ ಅಂಥ ಕಡೆ ಆದ್ಯತೆ ಮೇಲೆ ಕೊಡುತ್ತೇವೆ.

ಮೋಟಾರ್ ವಾಹನಗಳು, ಜೀಪುಗಳು, ವೈರ್‌ಲೆಸ್ ಸೆಟ್ಟುಗಳಿಗೆ ಇಷ್ಟು ಹಣವೆಂದು ಹೋದ ವರ್ಷ ಖರ್ಚು ಮಾಡಿದ್ದೇವೆ. ಕೇಂದ್ರ ಸರ್ಕಾರದವರು ನಮಗೆ ಈ ಬಾಬಿಗೆ 31 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದರೆ ನಾವು ಒಂದು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದೇವೆ. ಈ ವರ್ಷ 21 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ. ಇನ್ನು 21 ಲಕ್ಷ ರೂಪಾಯಿ ಬರಬೇಕಾಗಿದೆ. ಇಲಾಖೆಯನ್ನು ಸಜ್ಜುಗೊಳಿಸುವುದಕ್ಕೆ ಏನೇನು ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕೊ ಅದನ್ನು ಹಾಕಿಕೊಂಡಿದ್ದೇವೆ. ಆ ವಿವರಗಳನ್ನು ಹೇಳಲಿಲ್ಲವೆಂಬುದು ಬಹುಶಃ ಮಾನ್ಯ ಸದಸ್ಯರ ಮನಸ್ಸಿನಲ್ಲಿರಬಹುದು. ಇಲಾಖೆಯಲ್ಲಿ ಮಾಡಬೇಕಾದುದನ್ನು ಒಂದು ಮಾತಿನಲ್ಲಿ ತಿಳಿಸಿದ್ದೇನೆ. ಇಲಾಖೆಯನ್ನು ಆಧುನೀಕರಿಸಲು ನಾನು ಸತತವಾಗಿ ಕಾರ್ಯಕ್ರಮ ಕೈಗೊಂಡಿದ್ದೇನೆ. ಈ ದಿಸೆಯಲ್ಲಿ ಕೇಂದ್ರ ಸರ್ಕಾರದವರು 1983-84ರಲ್ಲಿ 31.29 ಲಕ್ಷ 84-85ರಲ್ಲಿ 31.52 ಲಕ್ಷ, 85-86ರಲ್ಲಿ ಈವರೆಗೆ 21.01-1.9 ಲಕ್ಷ,  84-85ರಲ್ಲಿ 31.52 ಲಕ್ಷ, 85-86ರಲ್ಲಿ ಈವರೆಗೆ 21.01-ಲಕ್ಷ ಹಣ ಬಂದಿದೆ. ಇದನ್ನು ವಾಹನಗಳ ಖರೀದಿ, ತರಬೇತಿ ಶಾಲೆಗಳ ಆಧುನೀಕರಣ, ವಿಧಿ ವಿಜ್ಞಾನ ಪ್ರಯೋಗಾಲಯದ ಕಟ್ಟಡದ ನಿರ್ಮಾಣ ಮತ್ತು ಇತರೆ ಯಂತ್ರ ಸಾಮಗ್ರಿಗಳನ್ನು ಖರೀದಿಸಲು ವಿನಿಯೋಗಿಸಿದ್ದೇವೆ. ಕಳೆದ ವರ್ಷ ನಮ್ಮ ರಾಜ್ಯ ಸರ್ಕಾರದ ಹಣದಿಂದ 999 ವೈರ್‌ಲೆಸ್ ಸೆಟ್ಟುಗಳನ್ನು 17 ಜೀಪುಗಳು, 8 ವ್ಯಾನುಗಳು, 47 ಮೋಟಾರು ಸೈಕಲ್ಲುಗಳು, 2 ಕಾರುಗಳು, 7 ಬಸ್ಸುಗಳನ್ನು ಕೊಳ್ಳಲು ಒಂದು ಕೋಟಿ ರೂಪಾಯಿಗಳ ಮೇಲೆ ಹಣವನ್ನು ಖರ್ಚು ಮಾಡಿದ್ದೇವೆ. ಈ ವರ್ಷ ಅದೇ ರೀತಿಯಲ್ಲಿ ನಾವು ಇಲಾಖೆಯನ್ನು ಸಜ್ಜುಗೊಳಿಸಲು ಬೇಕಾದ ಹಣವನ್ನು ಅವರಿಂದ ಹೊಸದಾಗಿ ಕೇಳಿದ್ದೇವೆ. ನಾವು ನಮ್ಮ ಹಣವನ್ನು ಒದಗಿಸಿ ಕೊಳ್ಳುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಪೊಲೀಸ್ ಸಿಬ್ಬಂದಿ ಹಾಗೂ ಕಚೇರಿಗಳ ಹೆಚ್ಚಳ ಮತ್ತು ಸ್ಥಾಪನೆಯ ಬಗ್ಗೆ ಕಳಕಳಿಯನ್ನು ಅನೇಕ ಸದಸ್ಯರು ವ್ಯಕ್ತಪಡಿಸಿದ್ದಾರೆ. ಅದನ್ನು ಮಾಡಬೇಕೆಂದಿದ್ದೇವೆ. ಆದರೆ ಏಕಕಾಲದಲ್ಲಿ ಎಲ್ಲವನ್ನೂ ಪೂರೈಸಲು ಈಗಿನ ಹಣಕಾಸಿನ ಪರಿಸ್ಥಿತಿಯಲ್ಲಿ ಸಾಧ್ಯವಾಗುವುದಿಲ್ಲ. ಆದರೂ ಕೂಡ, ಈ ವರ್ಷ ನಮಗೆ ಪ್ರಾಪ್ತವಾಗಿರುವ ಹಣದಲ್ಲೇ ಉಳಿತಾಯ ಮಾಡಿ ಕೆಲವಾರು ಕಡೆ ಈ ಕೆಳಕಂಡ ಸಿಬ್ಬಂದಿ ಹೆಚ್ಚಳ ಹಾಗೂ ಕಛೇರಿಗಳನ್ನು ತೆರೆಯುವ ಬಗ್ಗೆ ಸರ್ವಪ್ರಯತ್ನ ಮಾಡುತ್ತೇನೆಂದು ತಿಳಿಸಿದ್ದೇನೆ. ಈ ವರ್ಷ ಈಗಾಗಲೇ ಎರಡು ಠಾಣೆಗಳಿಗೆ ಮಂಜೂರಾತಿ ನೀಡಲಾಗಿದೆ. ಈ ವರ್ಷ ಬೆಂಗಳೂರು ನಗರಕ್ಕೆ ಎರಡು ಠಾಣೆಗಳು ಬೆಂಗಳೂರು ಜಿಲ್ಲೆಯ ಅನೇಕಲ್ಲಿನಲ್ಲಿ ಸರ್ಕಲ್ ಆಫೀಸು, ಚಿತ್ರದುರ್ಗ ಜಿಲ್ಲೆಯ ಹಡದಿಯಲ್ಲಿ ಪೊಲೀಸ್ ಠಾಣೆ, ಧಾರವಾಡ ಜಿಲ್ಲೆಯ ಹುಬ್ಬಳ್ಳಿ ನಗರದ, ಅಶೋಕನಗರ ಬಡಾವಣೆಯಲ್ಲಿ ಪೊಲೀಸ್ ಠಾಣೆ, ಬಿಜಾಪುರ ಜಿಲ್ಲೆಯ ವ್ಯವಸಾಯೋತ್ಪನ್ನ ಮಾರುಕಟ್ಟೆಯಲ್ಲಿ ಪೊಲೀಸ್ ಠಾಣೆ, ಬೀದರ್ ಜಿಲ್ಲೆಯ ಮುಡಬಿಯಲ್ಲಿ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆಯ ದೇವದುರ್ಗದಲ್ಲಿ ಸರ್ಕಲ್ ಆಫೀಸ್, ಮೈಸೂರು ನಗರದಲ್ಲಿ ಜಯಲಕ್ಷ್ಮೀಪುರಂ ಪೊಲೀಸ್ ಠಾಣೆ, ಮೈಸೂರು ಜಿಲ್ಲೆಯ ಚಾಮರಾಜನಗರ ಪೂರ್ವ ವಿಭಾಗ ಠಾಣೆ ಹಾಗೂ ಹನೂರು ಪೊಲೀಸ್ ಠಾಣೆಯಲ್ಲಿ ಸಿಬ್ಬಂದಿಯ ಹೆಚ್ಚಳ, ತಲಕಾಡು, ಬಿಳಿಕೆರೆ ಹೊರ ಠಾಣೆಗಳಿಗೆ ಸಿಬ್ಬಂದಿ ಹೆಚ್ಚಳ ಬಿದರ ಹಳ್ಳಿಯಲ್ಲಿ

ಹೊರಠಾಣೆ, ಮಂಡ್ಯ ಜಿಲ್ಲೆಯ ಮದ್ದೂರಿನಲ್ಲಿ ಸರ್ಕಲ್ ಆಫೀಸ್, ಮಂಡ್ಯ ಪಟ್ಟಣದಲ್ಲಿ ಟ್ರಾಫಿಕ್ ಪೊಲೀಸ್ ಠಾಣೆ, ಹಾಸನ ಜಿಲ್ಲೆಯ ಚನ್ನರಾಯಪಟ್ಟಣದಲ್ಲಿ ಸರ್ಕಲ್ ಆಫೀಸು, ದಕ್ಷಿಣ ಕನ್ನಡ ಜಿಲ್ಲೆಯ ಸೂರತ್‌ಕಲ್ಲಿನಲ್ಲಿ ಪೊಲೀಸ್ ಠಾಣೆ, ವೆನ್‌ಲಾಕ್ ಆಸ್ಪತ್ರೆಯಲ್ಲಿ ಹೊರಠಾಣೆ, ಉತ್ತರಕನ್ನಡ ಜಿಲ್ಲೆಯ ಕಾರವಾರದಲ್ಲಿ ಟ್ರಾಫಿಕ್ ಠಾಣೆ ಮತ್ತು ರಾಮಪುರದಲ್ಲಿ ಪೊಲೀಸ್ ಠಾಣೆ, ಚಿಕ್ಕಮಂಗಳೂರಿನಲ್ಲಿ ಟ್ರಾಫಿಕ್,- ಪೊಲೀಸ್ ಠಾಣೆ, ರೈಲ್ವೆ ವಿಭಾಗದ ವಾಡಿಯಲ್ಲಿ ಡಿ.ಎಸ್.ಪಿ. ಆಫೀಸು, ಬೈಯಪ್ಪನಹಳ್ಳಿಯಲ್ಲಿ ಪೊಲೀಸ್ ಠಾಣೆ, ಸಿ.ಐ.ಡಿ. ವಿಭಾಗದಲ್ಲಿ ತನಿಖೆಗಾಗಿ ಮತ್ತೊಂದು ಘಟಕ, ರಾಜ್ಯದ ನಾನಾ ಭಾಗಗಳಲ್ಲಿ, ಮಹಿಳಾ ವಿಭಾಗದಲ್ಲಿ ಸಿಬ್ಬಂದಿಯ ಹೆಚ್ಚಳ ವಿಧಿ ವಿಜ್ಞಾನ ಪ್ರಯೋಗಾಲಯದಲ್ಲಿ ಫೋಟೋ ವಿಭಾಗಕ್ಕೆ ಸಹಾಯಕ ನಿರ್ದೇಶಕರ ಹುದ್ದೆ, ಬೆರಳೊತ್ತಿನ ಘಟಕದಲ್ಲಿ ಒಬ್ಬ ಡಿ.ಎಸ್.ಐ. 2 ಸಬ್ ಇನ್ಸಪೆಕ್ಟರ್, 2 ಕಾನ್ಸ್ ಸ್ಟೇಬಲ್ಲುಗಳ ಹುದ್ದೆ, ಗುಪ್ತ ವಾರ್ತಾ ಶಾಖೆಯಲ್ಲಿ 5 ಡ್ರೈವರುಗಳ ಹುದ್ದೆ ವೈರ್ ಲೆಸ್ ವಿಭಾಗದಲ್ಲಿ ಒಂದು ಡಿ.ಎಸ್.ಪಿ. ಒಂದು ಇನ್ಸ್ ಪೆಕ್ಟರ್, ಒಂದು ಎ.ಎಸ್.ಐ. ಮೂರು ಎಚ್.ಸಿ, 10 ಕಾನ್‌ಸ್ಟೇಬಲ್ಲುಗಳ ಹುದ್ದೆ, ಎರಡು ಜಿಲ್ಲೆಗಳಲ್ಲಿ ಶ್ವಾನದಳಗಳು ಹಾಗೂ ಮೈಸೂರಿನ ಅರಮನೆಯ ವಾದ್ಯ ಗೋಷ್ಠಿಯ ಇನ್ಸ್ ಪೆಕ್ಟರು ಹುದ್ದೆಯನ್ನು ಡಿ.ಎಸ್.ಪಿ. ಹುದ್ದೆಗೆ ಬಡ್ತಿ ಮಾಡುವುದು ಇವುಗಳ ಬಗ್ಗೆ ಮಂಜೂರಿ ಮಾಡಲು ಪ್ರಯತ್ನಿಸುತ್ತೇನೆ. ಹೀಗೆ ಈ ವರ್ಷದಲ್ಲಿ ಈ ಕಾರ್ಯಕ್ರಮವನ್ನು ಮಾಡುತ್ತೇವೆ. ಒಂದು ಕೋಟಿ ರೂಪಾಯಿ ಅಂದಾಜಿನಲ್ಲಿ ನಮ್ಮ ಇಲಾಖೆಗೆ ಕೊಟ್ಟಿರುವ ಹಣದಲ್ಲಿ ಉಳಿತಾಯಮಾಡಿ ಅವಶ್ಯಕತೆ ಇದ್ದ ಕಡೆ ಕೊಡಬೇಕೆಂದು ಮಾಡಿದ್ದೇವೆ. ಇನ್ನು ಹೆಚ್ಚಿಗೆ ಹಣಕಾಸು ಸಿಕ್ಕಿದರೆ ಹೆಚ್ಚು ವಿಸ್ತರಿಸುವುದಕ್ಕೆ ವ್ಯವಸ್ಥೆ ಮಾಡುತ್ತೇನೆ.

ಅವರು ಬಳಸಿಕೊಂಡಿದ್ದಂಥ ಅಲಂಕಾರಗಳ ವಿಶಿಷ್ಟ ತಂತ್ರ, ಸಾಹಿತ್ಯದ ಪರಿಶುದ್ಧತೆ, ಇವೆಲ್ಲಕ್ಕೂ ಮಿಗಿಲಾಗಿ ಅವರ ಎಲ್ಲ ರಚನೆಗಳಲ್ಲಿ ಸರ್ವ ವ್ಯಾಪ್ತಿಯಾಗಿರುವ ಪದ್ಮನಾಭವನ ಬಗ್ಗೆ ಮನಮಿಡಿಯುವಂಥ ಬಕ್ತಿ, ಇವೆಲ್ಲ ಅವರ ಪ್ರತಿಭೆಯ ವಿಶಿಷ್ಟ ಲಕ್ಷಣಗಳಾಗಿವೆ. ಅವರು ವಾಸ್ತವವಾಗಿ ವಾಗ್ಗೇಯಕಾರರ, ವಾಗ್ಗೇಯಕಾರರಾಗಿದ್ದರು ಮತ್ತು ಆ ಯುಗದ ಮಹಾನ್ ವಾಗೇಯಕಾರರಾದ ತ್ಯಾಗರಾಜ ಮತ್ತು ಸ್ವಾಮಿ ದೀಕ್ಷಿತರು ಮತ್ತು ಶ್ಯಾಮಾ ಶಾಸ್ತ್ರಿಗಳ ನೆಲೆಯಲ್ಲಿಯೇ ಅವರಿಗೆ ಸ್ಥಾನವಿದೆ. ಅವರು ಕವಿ ಹಾಗೂ ಮಹಾನ್ ವಿದ್ವಾಂಸರಾಗಿದ್ದರು ಕೂಡಿ ವಾಗ್ಗೇಯಕಾರರು ಹಾಗೂ ಮೋಹಿನಿಯಾಟದ ಯೋಜಕರೆಂದೇ ಖ್ಯಾತರಾಗಿರುವರು. ಕ್ಷೀಣ ದೆಸೆಯಲ್ಲಿನ ಮೋಹಿನಿಯಾಟಕ್ಕಾಗಿ ಮರು ಹುಟ್ಟನ್ನು ನೀಡಿ ಆ ಕಲೆ ತನ್ನೆಲ್ಲ ವೈವಿಧ್ಯತೆಗಳೊಡನೆ ಮೆರೆಯುವಂತೆ ಮಾಡಿದರು.

ದೇವರು ಯಾರನ್ನು ಪ್ರೀತಿಸುತ್ತಾನೋ ಅವರನ್ನು ತನ್ನೆಡೆಗೆ ಬಹುಬೇಗನೆ ಕರೆದುಕೊಂಡು ಬಿಡುವನು ಎಂದು ಅನೇಕ ವೇಳೆ ಹೇಳಲಾಗುತ್ತದೆ. ಅವರು ವಿಧಿವಶರಾದಾಗ ಅವರಿಗೆ ಕೇವಲ 34 ವರ್ಷವಷ್ಟೇ ಆಗಿತ್ತು. ಆದರೆ ಎಷ್ಟು ಅಲ್ಪಾವಧಿಯಲ್ಲೇ ವಿವಿಧ ಕಾರ್ಯಕ್ಷೇತ್ರಗಳಲ್ಲಿ ಅದೂ ಸಾಕಷ್ಟು ದೂರದೃಷ್ಟಿಯಿಂದ ಗಮನಾರ್ಹವಾದಂಥ ಗಣನೀಯವಾದಂಥ ಸಾಧನೆ ಮಾಡಿದ್ದಾರೆ. ಸ್ವಾತಿ ತಿರುನಾಳರು ಜನತೆಯ ಹೃನ್ಮನಗಳಲ್ಲಿ ಸದಾಕಾಲ ಇದ್ದೇ ಇರುತ್ತಾರೆ.

ಭಾರತೀಯ ಶಾಸ್ತ್ರೀಯ ಸಂಗೀತ ಮತ್ತು ಇತರ ಲಲಿತಕಲೆಗಳ ಮಹಾನ್ ಆದರ್ಶಗಳನ್ನು ಎತ್ತಿ ಹಿಡಿಯುವಲ್ಲಿ ಸತತ ಪ್ರಯತ್ನಕ್ಕಾಗಿ ಸ್ವಾತಿ ತಿರುನಾಳ ಸಂಗೀತ ಸಭೆಯನ್ನು ಅಭಿನಂದಿಸುತ್ತೇನೆ. ಮಹಾರಾಜ ಶ್ರೀ ಸ್ವಾತಿ ತಿರುನಾಳರ 178ನೇ ಜಯಂತೋತ್ಸವಗಳನ್ನು ಉದ್ಘಾಟಿಸಲು ನನಗೆ ತುಂಬಾ ಸಂತೋಷವೆನಿಸುತ್ತದೆ.

ಜೈ ಹಿಂದ್

## ಮಹಾರಾಜ ಶ್ರೀ ಸ್ವಾತಿ ತಿರುನಾಳಂ 178ನೇ ಜಯಂತೋತ್ಸವ *

ಈ ಸಂಜೆ ಮಹಾರಾಜ ಶ್ರೀ ಸ್ವಾತಿ ತಿರುನಾಳರ 178ನೇ ಜಯಂತೋತ್ಸವಗಳನ್ನು ಉದ್ಘಾಟಿಸಲು ನನಗೆ ಅತೀವ ಸಂತೋಷವಾಗಿದೆ. ಈ ಕಾರ್ಯಕ್ರಮದಲ್ಲಿ ಸಹ ಭಾಗಿಯಾಗುವುದು ವಿಶಿಷ್ಟ ಗೌರವವೆಂದು ಭಾವಿಸಿರುತ್ತೇನೆ. ಸ್ವಾತಿ ತಿರುನಾಳರ ಹೆಸರೇ ಕಲಾಪ್ರೇಮಿಗಳ ಮನದಲ್ಲಿ ಗೌರವ ಮೆಚ್ಚುಗೆ ಮತ್ತು ಅತೀವ ಹೆಮ್ಮೆಯ ಭಾವನೆಯನ್ನು ಮೂಡಿಸುತ್ತವೆ. ಆ ವಿಶಿಷ್ಟ ವಿರಳ ವ್ಯಕ್ತಿಯ ಆಕರ್ಷಕ ವ್ಯಕ್ತಿತ್ವ ಅಂಥದಾಗಿದೆ. ಸ್ವಾತಿ ತಿರುನಾಳರದು ಬಹುಮುಖ ವ್ಯಕ್ತಿತ್ವ. ಅವರು ಶ್ರೇಷ್ಠ ಭಾಷಾ ಶಾಸ್ತ್ರಜ್ಞರು. ಪ್ರಕಾಂಡ ಪಂಡಿತರು ಮತ್ತು ವೈವಿಧ್ಯಮಯ ಆಯಾಮಗಳ ಆಡಳಿತಗಾರರಾಗಿದ್ದರಷ್ಟೇ ಅಲ್ಲದೆ (ಮಹಾನ್) ಶೇಷ್ಠ ಕವಿಯೂ ವಾಗ್ಗೆಯ ಕಾರರೂ ಆಗಿದ್ದರು. ಅವರು ವಿಶಿಷ್ಟವಾದ ಪ್ರತಿಭಾವಂತರು; ಅಂಥವರನ್ನು ಕಾಣುವುದು ತುಂಬ ವಿರಳ.

ಅವರು ಮಹಾನ್ ವ್ಯಕ್ತಿಯಾಗಿಯೇ ಜನಿಸಿದರು. ಆಂತರಿಕವಾಗಿದ್ದ ತಮ್ಮ ಸಾಮರ್ಥ್ಯಾದಿಗಳನ್ನು ಉತ್ತಮ ಪಡಿಸಿಕೊಳ್ಳುವ ಮೂಲಕ ಗೌರೀಶಂಕರದ ಔನ್ನತ್ಯಕ್ಕೇರಿದರು. ಪ್ರಕಾಂಡ ಪಂಡಿತರ ತಂಡವೇ ಅವರಿಗೆ ಶಿಕ್ಷಣ ನೀಡಿತು. ದಕ್ಷಿಣ ಭಾರತದಲ್ಲಿ ಲಭ್ಯವಿದ್ದ ಅವರ ಅತ್ಯುತ್ತಮ ಖಾಸಗಿ ಗ್ರಂಥಾಲಯದ ನೆರವು ಪಡೆದುಕೊಂಡರು ತಮ್ಮ ಮಾತೃಭಾಷೆಯ ಜೊತೆಗೆ ಇತರ ಹಲವಾರು ಭಾಷೆಗಳಲ್ಲಿ ಪರಿಣತಿ ಪಡೆದರು.

ರಾಜರಾಗಿ, ಆಡಳಿತಗಾರರಾಗಿ, ಸ್ವಾತಿ ತಿರುನಾಳರ ಸಾಧನೆಗಳನ್ನು ನಾವು ಪರಿಶೀಲಿಸಿದಾಗ ಅವರು ತಮ್ಮ ಕಾಲದವರಿಗಿಂತ ತುಂಬ ಮುಂದಿದ್ದರು ಎಂಬುದು ತಿಳಿದು ಬರುತ್ತದೆ. ಆಂಗ್ಲ ಪ್ರೌಢಶಾಲಯನ್ನು, ಅಲೋಪಥಿ ಆಸ್ಪತ್ರೆಯನ್ನು ಸರಕಾರಿ ಮುದ್ರಣಾಲಯವನ್ನು ಮತ್ತು ಆಬ್ಸರ್ವೇಟರಿಯನ್ನು ಮೊತ್ತ ಮೊದಲಿಗೆ ಸ್ಥಾಪಿಸಿದರು ಅವರೇ ಆಗಿದ್ದಾರೆ. ಆಡಳಿತವನ್ನು ಬಲಪಡಿಸುವಲ್ಲಿ ಕೂಡ ಗಮನಾರ್ಹ ಕ್ರಮಗಳನ್ನು ಕೈಗೊಂಡರು. ಆದರೆ ಸಂಗೀತ ಕ್ಷೇತ್ರದಲ್ಲಿ ಅವರ ಕೊಡುಗೆ ಮತ್ತು ಪ್ರೋತ್ಸಾಹ ನೀಡಿಕೆ ಅನ್ಯಾದೃಶ್ಯವಾಗಿ ನಿಲ್ಲುತ್ತದೆ. ವಾಸ್ತವವಾಗಿ ಈ ಮಹಾರಾಜರ ಆಳ್ವಿಕೆಯ ಕಾಲ ತಿರುವಾಂಕೂರಿನ ಸುವರ್ಣಯುಗವಾಗಿತ್ತು.

ಸ್ವಾತಿ ತಿರುನಾಳರ ಹೆಸರಿನ ಮೋಡಿಯೇ ರಾಜ್ಯದ ಎಲ್ಲ ಕಡೆಗಳಿಂದಲೂ ಮತ್ತು ಹೊರಗಡೆಯಿಂದಲೂ ಈ ಕಾಲದಲ್ಲಿನ ಅತ್ಯುತ್ತಮ ಸಂಗೀತಗಾರರು ಮತ್ತು ಗಾಯಕರನ್ನು ತಿರುವಾಂಕೂರು ಆ ಸ್ಥಾನಕ್ಕೆ ಆಕರ್ಷಿಸಿತ್ತು. ಸ್ವಾತಿ ತಿರುನಾಳರ ಕಾಲದಲ್ಲಿ ತಿರುವಾಂಕೂರು ಎಲಿಜಬೆತ್ ಕಾಲದ ಇಂಗ್ಲೆಂಡಿನಂತೆ ಚಿಲಿಪಿಲಿಗುಟ್ಟುವ ಪಕ್ಷಿಗಳ ನೆಲೆಯಾಗಿತ್ತು. ಸಂಗೀತ ಕ್ಷೇತ್ರದಲ್ಲಿ ಕರ್ನಾಟಕ ಮತ್ತು ಹಿಂದೂಸ್ಥಾನಿ ಸಂಗೀತಗಳ ಸುಮಧುರ ಸಂಶ್ಲೇಷಣೆಗಾಗಿ ಅವರು ಶ್ರಮಿಸಿದರು. ಅವರ ರಚನೆಗಳ ಸಂಖ್ಯೆ ಮುನ್ನೂರಕ್ಕೂ ಸ್ವಲ್ಪ ಹೆಚ್ಚಾಗಿದ್ದರೂ, ಭಾಷೆ ಮತ್ತು ರೂಪ ವೈವಿಧ್ಯರಾಗಗಳ ಆಯ್ಕೆಯಲ್ಲಿ ಅವರು ಪ್ರದರ್ಶಿಸುವಂಥ ಸರ್ವತೋಮುಖ ಸಾಮರ್ಥ್ಯ

* ತಿರುವನಂತಪುರ ದಿನಾಂಕ 27ನೇ ಏಪ್ರಿಲ್, 1991.

ಭಾವನೆಗಳಿಂದ ಮುಕ್ತಗೊಳಿಸೋಣ. ಅವರ ಆತ್ಮ ನಮ್ಮ ಪಾಲಿಗೆ ಧ್ರುವತಾರೆಯಂತಿದೆ. ನವಭಾರತ ನಿರ್ಮಾಣದಲ್ಲಿ ಎದುರಾಗಬಹುದಾದ ಸವಾಲುಗಳನ್ನು ಎದುರಿಸುವಲ್ಲಿ ಈ ತಾರೆ ನಮಗೆ ಬೆಳಕು, ಧೈರ್ಯ ಮತ್ತು ಸ್ಥೈರ್ಯಗಳನ್ನು ನೀಡಿ ಮಾರ್ಗದರ್ಶನ ಮಾಡಲಿ.

ಜೈ ಹಿಂದ್

ಎಂಬುದನ್ನು ಇಂಗ್ಲೆಂಡ್ ಮತ್ತು ಅಮೆರಿಕಾಗಳಲ್ಲಿ ಅವರ ಅಧ್ಯಯನ ಪೂರ್ಣವಾಗಿ ಮನದಟ್ಟು ಮಾಡಿಕೊಟ್ಟಿತ್ತು. ಸಂವಿಧಾನಾತ್ಮಕ ರಕ್ಷಣೆಗಳು ಮಾತ್ರವೇ ಅಂತಿಮವಾಗಿ ಅಸ್ಪೃಶ್ಯರನ್ನು ಮುಕ್ತ ಜೀವನಕ್ಕೆ ದಾರಿ ಮಾಡಿಕೊಡಬಲ್ಲವು ಎಂದು ಅವರು ಬಲವಾಗಿ ನಂಬಿದ್ದರು. ಅವರ ಜೀವಮಾನ ಪೂರ್ತಿ ಸಮುದಾಯದ ಭವಿಷ್ಯ ಅವರ ಮನಸ್ಸಿನಲ್ಲಿ ಬೇರು ಬಿಟ್ಟಿತ್ತು. ಅವರು ತಮ್ಮ ಕೊನೆಯ ದಿನಗಳಲ್ಲಿ ಅಸ್ಪೃಶ್ಯರ ಸ್ಥಿತಿಗತಿಗಳ ಬಗ್ಗೆ ವ್ಯಥೆಪಟ್ಟಿದ್ದರು ಮತ್ತು ಅವರ ಭವಿಷ್ಯದ ಬಗ್ಗೆ ಆತಂಕ ವ್ಯಕ್ತಪಡಿಸಿದ್ದರು. ಗ್ರಾಮಗಳಲ್ಲಿರುವ ನನ್ನ ಸೋದರರ ಸ್ಥಿತಿ ಏನು? ಎಂದು ಕೇಳಿ ಅತ್ತಿದ್ದರು.

ಅವರ ಆದರ್ಶವು ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವವನ್ನು ಆಧರಿಸಿದ ಸಮಾಜವನ್ನು ಸ್ಥಾಪಿಸುವುದಾಗಿತ್ತು. ಅವರು ದೇಶದ ಮತ್ತು ಜನತೆಯ ಭವಿಷ್ಯಗಳನ್ನು ನಿರ್ಧರಿಸುತ್ತ ತಮ್ಮ ಜೀವನದ ಕೊನೆಯವರೆವಿಗೂ ಮಹತ್ತರ ಪಾತ್ರವಹಿಸಿದ್ದರು. (ದಲಿತರ) ನಿಮ್ನ ವರ್ಗಗಳ ಮುಕ್ತಿಗಾಗಿ ಹಾಗೂ ಅವರ ಹಕ್ಕುಗಳ ಸಂರಕ್ಷಣೆಗೆ ಅವರು ಹಿಂಜರಿಯದೆ ಹೋರಾಡಿದರು. ಈ ಹಕ್ಕುಗಳಿಗೆ ಸಂವಿಧಾನಾತ್ಮಕ ಸಿಂಧುತ್ವ ಮತ್ತು ರಕ್ಷಣೆಯನ್ನು ಒದಗಿಸಲು ಕ್ರಮಗಳನ್ನು ಕೈಗೊಂಡರು.

ಅವರು ಪ್ರಾರಂಭಿಸಿದ ಸಾಮಾಜಿಕ ಹೋರಾಟಗಳು ಅಸ್ಪೃಶ್ಯರ ಬಗ್ಗೆ ಅಸಮವಾಗಿ ವರ್ತಿಸಿದ್ದನ್ನು ಪ್ರತಿಭಟಿಸುವಂಥವಾಗಿದ್ದವು. ಎಲ್ಲ ವರ್ಗಗಳಿಗೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಷಯಗಳಲ್ಲಿ ಸಮಾನ ಸ್ಥಾನಮಾನಗಳನ್ನು ಸ್ಥಾಪಿಸುವುದು ಅವರ ಗುರಿಯಾಗಿತ್ತು. ಅವರು ಜೀವನದಲ್ಲಿ ಮೇಲೆ ಬರಲು ಅವಕಾಶ ಕಲ್ಪಿಸುವುದೆಂದು ಅವರು ನಂಬಿದ್ದರು. ಅವರು ಭಾರತಕ್ಕೆ ಒಂದು ಕಾನೂನಿನ ಚೌಕಟ್ಟನ್ನು ಮತ್ತು ಜನತೆಗೆ ತಮ್ಮ ಸ್ವಾತಂತ್ರ್ಯಕ್ಕೆ ಆಧಾರವನ್ನು ಕಲ್ಪಿಸಿದರು. ರಾಜಕಾರಣಿಯಾಗಿ ಅವರ ಪಾತ್ರ ಹಾಗೂ ಅವರ ಬೌದ್ಧಿಕ ಕೊಡುಗೆ-ಇವು ಭಾರತೀಯ ರಾಜಕೀಯ ವಿಕಾಸದ ಅವಿಭಾಜ್ಯ ಅಂಗವಾಗಿದೆ। ಮುಖ್ಯವಾದ ರಾಜಕೀಯ ನಿರ್ಣಯಗಳ ಮೇಲೆ ಅವರು ಪ್ರಬಾವ ಬೀರಿದರು ಮತ್ತು ಸೃಜನಾತ್ಮಕ ಮುತ್ಸದ್ದಿತನ ಅವರ ಗಮನಾರ್ಹ ಸಾಮರ್ಥ್ಯವು ಸಂವಿಧಾನ ರಚನೆಯ ಸಮಯದಲ್ಲಿ ತಾನಾಗಿಯೇ ಪ್ರಕಟಗೊಂಡಿತು. ಸ್ನೇಹಿತರೆ, ಭಾರತದ ಈ ಶ್ರೇಷ್ಠ ಸುಪುತ್ರನ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಅವರಿಗೆ ಗೌರವ ನೀಡೋಣ. ಅಂಬೇಡ್ಕರ್ ಸಮಾಜ ಸುಧಾರಕರ ದಾರ್ಶನಿಕ ಮತ್ತು ಬಹುಶ್ರುತರಾದ ಸಂವಿದಾನ ತಜ್ಞರಾಗಿ, ಅನ್ಯಾಯ, ಅಸಮಾನತೆ ಮತ್ತು ದಬ್ಬಾಳಿಕೆಯ ವಿರುದ್ಧ ಹೋರಾಡಿದರು. ಅವರು ಸಮಾಜದ ಎಲ್ಲ ದಬ್ಬಾಳಿಕೆಯ ಅಂಶಗಳ ವಿರುದ್ಧ ಪ್ರತಿಭಟನೆಯ ಸಂಕೇತವಾಗಿದ್ದರು ಮತ್ತು ಈ ದೇಶದಲ್ಲಿ ಸಾಮಾಜಿಕ ಬದಲಾವಣೆ ಪ್ರಕ್ರಿಯೆಯನ್ನು ತ್ವರಿತಗೊಳಿಸುವುದಕ್ಕೆ ನೆರವಾದವರ ಪೈಕಿ ಒಬ್ಬರಾಗಿದ್ದರು.

ಇತಿಹಾಸದ ಪುಟಗಳಲ್ಲಿ ಅಚ್ಚಳಿಯದ ನೆಲೆ ಮೂಡಿಸಿರುವ ಈ ಮಹಾಪುರುಷನ ಬಗ್ಗೆ ಹೆಮ್ಮೆಪಡಬೇಕಾದುದು ಸಹಜವೇ ಆಗಿದೆ. ನಾವು ಅವರ ಮಾರ್ಗದಲ್ಲಿ ಸಾಗೋಣ; ಭಾರತವನ್ನು ಎಲ್ಲ ರೀತಿಯ ಸಂಕುಚಿತ ಕೋಮು ಭಾವನೆಗಳು, ಬೌದ್ಧಿಕ ಅಲಸಿಕೆ ಹಾಗೂ ಕ್ಷುದ್ರಪ್ರಾಂತೀಯ

## ಡಾ. ಅಂಬೇಡ್ಕರ್ ಶತಮಾನೋತ್ಸವ ಸಮಾರಂಭಗಳು*

ಭಾರತರತ್ನ ಡಾ. ಅಂಬೇಡ್ಕರ್ ಶತಮಾನೋತ್ಸವ ಸಮಾರಂಭಗಳ ಉದ್ಘಾಟನೆಗೆ ಸಂಬಂಧಿಸಿದ ಸಾರ್ವಜನಿಕ ಸಭೆಯಲ್ಲಿ ಈ ಸಂಜೆ ಪಾಲ್ಗೊಳ್ಳಲು ನನಗೆ ಸಂತೋಷವಾಗಿದೆ. ಮಾನವ ಜೀವನದ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಕಾರ್ಯ ಚಟುವಟಿಕೆಗಳಿಂದ ಭಾರತದ ಬೆಳವಣಿಗೆ ಮತ್ತು ಪ್ರಗತಿಗೆ ಕೊಡುಗೆ ನೀಡಿರುವಂಥ ನಾಯಕರನೇಕರು ಇಲ್ಲಿ ಆಗಿಹೋಗಿರುವುದು ನಾಡಿನ ಪುಣ್ಯ ವಿಶೇಷವೇ ಸರಿ. ಆ ಪೈಕಿ ಡಾ. ಅಂಬೇಡ್ಕರ್‌ರವರಿಗೆ ವಿಶಿಷ್ಟ ಸ್ಥಾನ ಲಭಿಸುತ್ತದೆ.

"ಕೆಲವರು ಮಹಾಪುರುಷರಾಗಿಯೇ ಜನಿಸುತ್ತಾರೆ, ಮತ್ತೆ ಕೆಲವರು ಮಹತ್ತರವನ್ನು ಗಳಿಸಿಕೊಳ್ಳುತ್ತಾರೆ, ಇನ್ನೂ ಕೆಲವರಿಗೆ ಮಹಾಪುರುಷ ಸ್ಥಾನವನ್ನು ನೀಡಲಾಗುತ್ತದೆ" ಎಂದು ಹೇಳುವುದುಂಟು. ಇವುಗಳ ಪೈಕಿ ಡಾ. ಅಂಬೇಡ್ಕರ್‌ರವರು ಎರಡನೆಯ ವರ್ಗಕ್ಕೆ ಸೇರುವ ಬಗ್ಗೆ ಸಂದೇಹವೇ ಇಲ್ಲವಾದರೂ ಅವರಲ್ಲಿ ಜನ್ಮಜಾತವಾಗಿದ್ದಂಥ ಕೆಲವು ಉತ್ತಮ ಗುಣಗಳಿದ್ದು, ಇವು ಅವರ ವ್ಯಕ್ತಿತ್ವಕ್ಕೆ ವಿಶೇಷ ಮೆರುಗನ್ನು ನೀಡಿದುವು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಎಲ್ಲ ಕಷ್ಟ ಸಂಕಷ್ಟಗಳನ್ನು ಎದುರಿಸಿ, ತೀವ್ರತರವಾದ ಶಕ್ತಿಗಳ ವಿರುದ್ಧ ಹೋರಾಡುತ್ತ ದೀನದಲಿತರಿಗಾಗಿ ಹೋರಾಡಿದ ಅವರು ಬಡವರ ಹಾಗೂ ತುಳಿತಕ್ಕೊಳಗಾದವರ ಹನ್ನನಗಳಲ್ಲಿ ವಿಶೇಷ ಸ್ಥಾನ ಪಡೆಯುವಲ್ಲಿ ಸಫಲರಾದರು. ಸುಪ್ರಸಿದ್ಧ ವಿದ್ವಾಂಸ ವಿಖ್ಯಾತ ಶಿಕ್ಷಣತಜ್ಞ ನುರಿತ ಮುತ್ಸದ್ಧಿ ಸಂವಿಧಾನತಜ್ಞ ಹಾಗೂ ಸಮರ್ಥ ಆಡಳಿತಗಾರ ಈ ಎಲ್ಲಾ ಗುಣಗಳು ಅವರಲ್ಲಿ ಸಂಮಿಳಿತಗೊಂಡಿದ್ದವು.

ಅವರು ಅಸ್ಪೃಶ್ಯರಾಗಿ ಜನಿಸಿದುದು ಮಾತ್ರವೇ ಅವರ 'ಅನರ್ಹತೆ' ಯಾಗಿದ್ದಿರಬಹುದು. ಅವರ ಬೌದ್ಧಿಕ ಸಾಂಧನೆಗಳಿದ್ದಾಗ್ಯೂ ಸಮಾಜದ ಉನ್ನತಸ್ತರಗಳ ಮಾನಸಿಕವಾಗಿ ಯೋಚನಾಶಕ್ತಿ ಕುಂದಿರುವಂಥ ಜನರ ಪಾಲಿಗೆ ಅವರು ಅಸ್ಪೃಶ್ಯರಾಗಿಯೇ ಉಳಿದರು.

ಪ್ರಾರಂಭದಲ್ಲಿ ಡಾ. ಅಂಬೇಡ್ಕರ್‌ರವರು ಅಸ್ಪೃಶ್ಯತೆಯ ಎಲ್ಲ ಅಪಮಾನಗಳನ್ನು ಎದುರಿಸಬೇಕಾಯಿತು. ಅಂಬೇಡ್ಕರ್‌ರವರು ಅಸ್ಪೃಶ್ಯತೆಯ ವಿರುದ್ಧ ಹೋರಾಟವನ್ನು ಹೆಚ್ಚಿನ ಕೆಚ್ಚು ಮತ್ತು ಬಲಗಳೊಡನೆ ಮುಂದುವರಿಸಿದರು. ನಿಮ್ನ ವರ್ಗದವರು ಎದುರಿಸುತ್ತಿದ್ದ ಅಸ್ಪೃಶ್ಯತೆ ಮತ್ತು ಅಸಮಾನತೆಗಳ ನಿವಾರಣೆಯು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಭಾರತದಲ್ಲಿ ಉಂಟಾದ ಎಲ್ಲ ಸಾಮಾಜಿಕ, ಧಾರ್ಮಿಕ ಚಳುವಳಿಕೆಗಳ ಮುಖ್ಯ ಅಂಶವಾಗಿತ್ತು. ಆಳ್ವಿಕೆಗಾರರ ಮನೋವೃತ್ತಿಯು ವಿರುದ್ಧವಾದುದಾಗಿರದಿದ್ದರೂ ಅದು ಅಸ್ಪೃಶ್ಯರ ಪರವಾದುದಾಗಿರಲಿಲ್ಲ. ಸರ್ಕಾರ ಮೇಲ್ವರ್ಗದವರ ವಿರೋಧ ಕಟ್ಟಿಕೊಳ್ಳದಷ್ಟು ಎಚ್ಚರವಾಗಿತ್ತು. ಯಾವುದೇ ದೇಶದಲ್ಲಿ ವ್ಯಕ್ತಿಯ ಜೀವನವನ್ನು ರೂಪಿಸುವುದು ಅವನ ಸಾಮರ್ಥ್ಯವೇ ಹೊರತು ಜನ್ಮವಲ್ಲ ಎಂಬುದನ್ನು ಅಂಬೇಡ್ಕರ್‌ರವರು ತಮ್ಮ ಉದಾಹರಣೆಯಿಂದಲೇ ಬೋಧಿಸಿದರು. ಅಸ್ಪೃಶ್ಯರನ್ನು ಸಾಮಾಜಿಕ ಮತ್ತು ರಾಜಕೀಯ ದಬ್ಬಾಳಿಕೆಯಿಂದ ಸಾಮಾಜಿಕ ವ್ಯವಸ್ಥೆ ಎಂದಿಗೂ ಮುಕ್ತಗೊಳಿಸುವುದಿಲ್ಲ

* ಉದ್ಯೋಗ ಮಂಡಲ, ಅಲುವಾ ದಿನಾಂಕ 6ನೇ ಏಪ್ರಿಲ್, 1991.

ಟಿ.ವಿ. ಮತ್ತು ಇತರ ಸಮೂಹ ಮಾಧ್ಯಮಗಳ ಧಾಳಿಯಿಂದಾಗಿ ವಾಚನಾಭ್ಯಾಸದಲ್ಲಿ ತೀವ್ರತರವಾದ ಅನಾಸಕ್ತಿಯುಂಟಾಗಿದೆ ಎಂದು ಯಾರಾದರೂ ಆಲೋಚಿಸುವುದುಂಟು. ವಾಸ್ತವ ಬೋಧೆಯನ್ನು ಅದರಲ್ಲಿಯೂ ವಿಶೇಷವಾಗಿ ಸುಶೀಕ್ಷಿತ ವರ್ಗಕ್ಕೆ-ಒದಗಿಸುವಲ್ಲಿ ಪುಸ್ತಕಗಳ ಸ್ಥಾನವನ್ನು ಟಿ.ವಿ. ಮೀರಿಸಲಾರದು ಎಂದು ಹೇಳುವ ಅಗತ್ಯವೇನೂ ಇಲ್ಲ. ದುಃಖದುಮ್ಮಾನ ಕ್ಲೇಶಗಳ ಕಾಲದಲ್ಲಿ ಸದ್ಗಂಥವು ವಾಸ್ತವವಾದ ಸಂಗಾತಿಯಾಗುತ್ತದೆ; ಅದು ವಾಸ್ತವವಾಗಿ ಮಿತ್ರ, ಮಾರ್ಗದರ್ಶಿ ಹಾಗೂ ತತ್ತ್ವಜ್ಞನಂತೆ ನೆರವಾಗುತ್ತವೆ.

ಗ್ರಂಥಾಲಯಗಳನ್ನು ಬಳಸಿಕೊಳ್ಳುವುದರ ಜೊತೆಗೆ ಪುಸ್ತಕಗಳನ್ನು ಖರೀದಿಸುವ ಅಭ್ಯಾಸಕ್ಕೆ ಪ್ರೋತ್ಸಾಹ ನೀಡಬೇಕು. ಪ್ರತಿಯೊಬ್ಬರೂ ತಮ್ಮ ಗಳಿಕೆಯ ಸ್ವಲ್ಪ ಭಾಗವನ್ನಾದರೂ ಪುಸ್ತಕಗಳನ್ನು - ಅದರಲ್ಲಿಯೂ ವಿಶೇಷವಾಗಿ ಮಕ್ಕಳ ಪುಸ್ತಕಗಳನ್ನು - ಖರೀದಿಸಲು ಮೀಸಲಾಗಿಡಬೇಕು ಅನಿವಾರ್ಯವಾಗಿರದಂಥ ಹಲವು ಬಾಬುಗಳಿಗಾಗಿ ನಾವು ಹಣ ಖರ್ಚು ಮಾಡುತ್ತಿರುವುದೂ ಉಂಟು, ಪುಸ್ತಕಗಳ ಖರೀದಿಗಾಗಿ ಹೂಡಿದ ಹಣವನ್ನು ಉಳಿತಾಯದ ಬಾಬ್ತು ಎಂದು ಪರಿಗಣಿಸಬೇಕು ಅದು ಒಂದು ರೀತಿಯಲ್ಲಿ ಯುಕ್ತವಾದ ಹೂಟಿಯೇ ಸರಿ. ಏಕೆಂದರೆ ಹಣ ಕಲ್ಪಿಸಲಾಗದ ಹಲವಾರು ಒಳ್ಳೆಯ ಗುಣಗಳನ್ನು, ಸದ್ಗುಣಗಳನ್ನು ಅದು ನಮ್ಮಲ್ಲಿ ವೃದ್ಧಿಸುತ್ತದೆ.

ತಿರುವನಂತಪುರದ ಜನತೆ ತಮ್ಮ ಸಂಪೂರ್ಣ ಬೆಂಬಲ ಹಾಗೂ ಸಹಕಾರ ನೀಡುವುದರ ಮೂಲಕ ಈ ದ್ವಿತೀಯ ಕೇರಳ ಪುಸ್ತಕ ಮೇಳವು ಸಂಪೂರ್ಣವಾಗಿ ಯಶಸ್ವಿಗೊಳಿಸುತ್ತಾರೆಂದು ಆಶಿಸಿದ್ದೇನೆ. ಪುಸ್ತಕ ಪ್ರೇಮಿಗಳು ತಮಗೆ ಬೇಕಾದಂಥ ಪುಸ್ತಕಗಳನ್ನು ಖರೀದಿಸಲು ವಿಶಿಷ್ಟ ಅವಕಾಶವನ್ನು ಕಲ್ಪಿಸಿದಂಥ ಶಿಕ್ಷಣ ಇಲಾಖೆ ಹಾಗೂ ಪ್ರಕಟಣಾ ಸಂಸ್ಥೆಗಳು, ಇನ್ನಿತರ ಏಜೆನ್ಸಿಗಳನ್ನು ಅಭಿನಂದಿಸುತ್ತೇನೆ ಈ ಮಹಾನ್ ಮೇಳಕ್ಕೆ ಎಲ್ಲ ಯಶಸ್ಸು ಲಭಿಸಲಿ.

ಜೈ ಹಿಂದ್

ಒದಗಿಸುತ್ತದೆ. ಕೇರಳ ರಾಜ್ಯದ ಉದ್ದಗಲಕ್ಕೂ ಗ್ರಂಥಾಲಯಗಳ ಜಾಲವೊಂದನ್ನು ಸ್ಥಾಪಿಸುವುದರ ಮೂಲಕ ಕೇರಳ ಗ್ರಂಥ ಶಾಲಾ ಸಂಘವು ತನ್ನ ಕ್ಷೇತ್ರದಲ್ಲಿ ವಿಶಿಷ್ಟ ಕೊಡುಗೆ ನೀಡಿದೆ ಎಂದು ನನಗೆ ತಿಳಿದಿದೆ. ಈ ಗ್ರಂಥಾಲಯಗಳನ್ನು "ಕಲಿಕೆ ಮತ್ತು ಸಂಸ್ಕೃತಿಗಳ ದೇಗುಲ"ಗಳು ಎಂದೇ ಕರೆಯಬಹುದಾಗಿದೆ.

ಮಾನವನ ಚಟುವಟಿಕೆಯ ವಿವಿಧ ಕ್ಷೇತ್ರಗಳಲ್ಲಿನ ಅಭಿವೃದ್ಧಿಗಳ ಬಗ್ಗೆ ಓದುಗರು ಅರಿತುಕೊಳ್ಳಬೇಕಾದಲ್ಲಿ ಎಲ್ಲ ಶೈಕ್ಷಣಿಕ ಸಂಸ್ಥೆಗಳು, ಸಾರ್ವಜನಿಕ ಗ್ರಂಥಾಲಯಗಳು, ಸಾರ್ವಜನಿಕ ಉದ್ಯಮಗಳು, ತರಬೇತಿ ಸಂಸ್ಥೆಗಳು. ಇವಕ್ಕೆ ಪ್ರತಿ ವರ್ಷ ಹೆಚ್ಚು ಹೆಚ್ಚು ಗ್ರಂಥಗಳು ಅಗತ್ಯ. ಆದರೆ ಪುಸ್ತಕಗಳ ಬೆಲೆ ತುಂಬ ದುಬಾರಿಯಾಗಿಬಿಟ್ಟಿವೆ; ಹಾಗಾಗಿ ಶ್ರೀ ಸಾಮಾನ್ಯನಿಗೆ ಬೇಕಾದ ಪುಸ್ತಕಗಳು ಅವನ ಕೈಗೆಟುಕಲಾಗಿವೆ. ಇದರಿಂದಲೇ ಇರಬೇಕು- ಅಮೂಲ್ಯವಾದ ಕೃತಿಗಳನ್ನು ಜನಸಾಮಾನ್ಯರು ಖರೀದಿಸಲು ಸಹಾಯಕವಾಗುವಂತೆ ಕಂತು ಯೋಜನೆ ಹಾಗೂ ಪ್ರಕಟಣಪೂರ್ಣ ರಿಯಾಯಿತಿಗಳನ್ನು ಪ್ರಸಿದ್ಧ ಪ್ರಕಾಶಕರು ಜಾರಿಗೆ ತಂದಿರುವುದು.

ಅಮೂಲ್ಯವಾದ ಸಾಹಿತ್ಯಿಕ ಮೌಲ್ಯಗಳಿರುವ ಪುಸ್ತಕಗಳು ಅಂತೆಯೇ ಉದಯೋನ್ಮುಖ ಲೇಖಕರ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಕೇರಳದ ಸಾಂಸ್ಕೃತಿಕ ಜೀವನವನ್ನು ಉತ್ತಮಪಡಿಸುವಲ್ಲಿ ನೆರವಾಗಿರುವ ಲೇಖಕರ ಸಹಕಾರಿ ಸಂಘ ನಿಜವಾಗಿಯೂ ಹೆಮ್ಮೆ ಪಡಬಹುದಾಗಿದೆ. ಲೇಖಕರೇ ಒಡೆಯರಾಗಿದ್ದು, ನಿರ್ವಹಿಸಿಕೊಂಡು ಬರುತ್ತಿರುವಂಥ ಅತ್ಯಂತ ಬೃಹತ್ತಾದ ಪ್ರಕಟಣಾ ಸಹಕಾರ ಸಂಘವು- ಆಗ್ನೇಯ ಏಷ್ಯಾದಲ್ಲಿ ಇರುವ ಇಂಥ ಒಂದೇ ಸಂಸ್ಥೆ ಅತ್ಯಂತ ಹೆಚ್ಚಿನ ಶೇಕಡವಾರು ರಾಯಲ್ಟಿ ನೀಡಿ ವಿಶ್ವ ದಾಖಲೆ ಸ್ಥಾಪಿಸಿದೆ. ಸಮಾಜದ ಎಲ್ಲ ಸ್ತರಗಳ ಜನತೆಯ ಅಬಿರುಚಿಗೆ ಅನುಗುಣವಾದ ಕೃತಿಗಳನ್ನು ಒದಗಿಸುತ್ತ ಅನೇಕ "ಗೃಹ ಗ್ರಂಥಾಲಯಗಳ " ಸ್ಥಾಪನೆಗೆ ವಾಚಕರಿಗೆ ನೆರವಾಗಿದೆ.

ನನ್ನ ಶಾಲಾ ದಿನಗಳಲ್ಲಿ ಮಕ್ಕಳ ಪುಸ್ತಕಗಳ ಕೊರತೆ ಎದುರಿಸುತ್ತಿದ್ದೆ. ಆದರೆ ಭಾರತದ ಬಹುಪಾಲು ಎಲ್ಲ ಭಾಷೆಗಳಲ್ಲಿ ಆಕರ್ಷಕ ವಿನ್ಯಾಸದಿಂದ ಕೂಡಿದ ವರ್ಣರಂಜಿತ ಪುಸ್ತಕಗಳು ಈಗ ಕಂಡುಬರುತ್ತಿವೆ. ಇಂಥ ಪುಸ್ತಕಗಳು ಅವರ ಬುದ್ಧಿಶಕ್ತಿ ವಿಕಾಸ ಮತ್ತು ಬೆಳವಣಿಗೆಗೆ ಸಾಕಷ್ಟು ಸಾಮಗ್ರಿ ಒದಗಿಸುತ್ತವೆ. ಅದಕ್ಕಿಂತ ಹೆಚ್ಚಾಗಿ ಅವರ ವ್ಯಕ್ತಿತ್ವವನ್ನು ರೂಪಿಸುತ್ತವೆ. ಮಕ್ಕಳು ಓದಿ ಆನಂದಪಡುವಂತಾಗಲು ಮಕ್ಕಳ ಪುಸ್ತಕಗಳು ಆಕರ್ಷಕವಾಗಿ ಬರುವಂತೆ ವಿಶೇಷಗಮನ ಹರಿಸಬೇಕು.

ಒಂದೇ ಸ್ಥಳದಲ್ಲಿ ತಮಗೆ ಬೇಕಾದ ವಿವಿಧ ಕ್ಷೇತ್ರಗಳ ಪುಸ್ತಕಗಳನ್ನು ಪಡೆಯುವಲ್ಲಿ ಇಂಥ ಪುಸ್ತಕ ಮೇಳಗಳು ಜನತೆಗೆ ಅವಕಾಶಗಳನ್ನು ಕಲ್ಪಿಸುತ್ತದೆ ಎಂಬ ಬಗ್ಗೆ ಸಂದೇಹವಿಲ್ಲ- ಪುಸ್ತಕ ಖರೀದಿ ಪ್ರೋತ್ಸಾಹಿಸಲು ವಿಶೇಷ ಕಮಿಷನ್ ಸಹ ನೀಡಲಾಗುತ್ತದೆ ಎಂಬ ಅಂಶದಿಂದ ನನಗೆ ಸಂತೋಷವುಂಟಾಗಿದೆ.

## ಕೇರಳ ರಾಜ್ಯದ ರಾಜ್ಯಪಾಲ ಹುದ್ದೆ - ಕೇರಳದ ಪುಸ್ತಕ ಮೇಳ ಉದ್ಘಾಟನಾ ಭಾಷಣ*

ಕೇರಳ ಸರಕಾರದ ಶಿಕ್ಷಣ ಇಲಾಖೆ ಪ್ರಾಯೋಜಿಸಿರುವ ದ್ವಿತೀಯ ಕೇರಳ ಪುಸ್ತಕ ಮೇಳವನ್ನು ಉದ್ಘಾಟಿಸಲು ಇಂದು ಸಂಜೆ ಇಲ್ಲಿರುವುದು ನನಗೆ ಸಂತೋಷವಾಗಿದೆ. ಅಂತರ ರಾಷ್ಟ್ರೀಯ ಪ್ರಕಟಣಾ ಸಂಸ್ಥೆಗಳೂ ಸೇರಿದಂತೆ ಎಪ್ಪತ್ತಕ್ಕೂ ಹೆಚ್ಚು ಪ್ರಕಾಶಕರು ಈ ಮೇಳದಲ್ಲಿ ಪಾಲ್ಗೊಳ್ಳುತ್ತಿದ್ದು, ಇನ್ನೂರಕ್ಕೂ ಹೆಚ್ಚು ಪ್ರಕಾಶಕರ ಪ್ರಕಟಣೆಗಳನ್ನು ಪ್ರದರ್ಶಿಸುತ್ತಿರುವುದು ತುಂಬ ಸಂತಸದ ಸಂಗತಿ. ಇಷ್ಟೊಂದು ಸಂಸ್ಥೆಗಳು ವಿವಿಧ ವಿಷಯಗಳನ್ನು ಕುರಿತು ಪ್ರಕಟಿಸಿರುವ ಸಮಾಜದ ಎಲ್ಲ ವರ್ಗಗಳ ಪುಸ್ತಕ ಪ್ರಿಯರ ಮನದಣಿಸಲು ಒಂದೇ ಸ್ಥಳದಲ್ಲಿ ಪ್ರದರ್ಶನಕ್ಕೆ ವ್ಯವಸ್ಥೆಗೊಳಿಸಿರುವುದು ವಿಶಿಷ್ಟವಾಗಿದೆ.

ಈ ರಾಜ್ಯದ ವಿವಿಧ ಭಾಗಗಳಲ್ಲಿ ಸರಕಾರದ ಏಜೆನ್ಸಿಗಳು ಮತ್ತು ಖಾಸಗಿ ಪ್ರಕಾಶಕರು ಆಗಿಂದಾಗ್ಗೆ ಪುಸ್ತಕ ಮೇಳಗಳನ್ನು ವ್ಯವಸ್ಥೆಗೊಳಿಸುತ್ತಿರುವರು ಎಂದು ತಿಳಿದಿರುವೆ. ಸಾಕ್ಷರತಾ ಶೇಕಡವಾರು ಪ್ರಮಾಣದಲ್ಲಿ ಕೇರಳವು ಇತರ ಎಲ್ಲಾ ರಾಜ್ಯಗಳಿಗಿಂತ ತುಂಬ ಮುಂದಿರುವುದರಿಂದ ಇದೇನೂ ಆಶ್ಚರ್ಯದ ವಿಷಯವಲ್ಲ. ಕೇರಳದ ಜನತೆ ತಮ್ಮ ವಾಚನಾಭ್ಯಾಸಕ್ಕೆ ಸುವಿಖ್ಯಾತರಾಗಿರುವರು. ಕೇರಳವು ಶ್ರೀ ಸಾಮಾನ್ಯನಿಗೆ ಕೂಡ ಪ್ರಾತಃ ಕಾಲ ಆರಂಭವಾಗುವುದೇ ಒಂದು ಕೈಯಲ್ಲಿ ಚಹದ ಕಪ್ಪು ಮತ್ತು ಮತ್ತೊಂದು ಕೈಯಲ್ಲಿ ವರ್ತಮಾನ ಪತ್ರಿಕೆಯಿಂದ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಕೂಡ ಶ್ರೀ ಸಾಮಾನ್ಯ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಬಲ್ಲ ಕೇರಳದ ಉತ್ತರ ಭಾಗಗಳಲ್ಲಿ ಬೀಡಿಕಟ್ಟುವ ಕಾರ್ಯ ನಡೆಯುತ್ತಿರುವಾಗಲೇ ಪುಸ್ತಕಗಳು, ನಿಯತಕಾಲಿಕಗಳು ಮತ್ತು ವರ್ತಮಾನ ಪತ್ರಿಕೆಗಳನ್ನು ತಮ್ಮ ಸಹ ಕೆಲಸಗಾರರಿಗೆ ಓದುವ ಸಲುವಾಗಿ ತಮ್ಮ ಕೆಲಸಗಾರರ ಪೈಕಿಯೇ ಒಬ್ಬನನ್ನು ನೇಮಕ ಮಾಡಿಕೊಳ್ಳುತ್ತಿದ್ದರು ಎಂದು ಕೇಳಿದ್ದೇನೆ. ಈ ರಾಜ್ಯದ ಜನತೆಯ ಜ್ಞಾನದಾಹಕ್ಕೆ ಇದು ಸಾಕಷ್ಟು ಪುರಾವೆಯಾಗುತ್ತದೆ. ಜನತೆಯ ಸಾಂಸ್ಕೃತಿಕ ಜೀವನದಲ್ಲಿ ಗ್ರಂಥಾಲಯಗಳು ಪ್ರಮುಖ ಪಾತ್ರವಹಿಸುತ್ತವೆ ಎಂದು ಹೇಳಬೇಕಾದುದೇ ಅಲ್ಲ. ಗ್ರಂಥಗಳು ಜ್ಞಾನದ ಮಾರ್ಗಗಳನ್ನು ತೆರೆಯುತ್ತವೆ, ಅಪಾರ ಜನಸ್ತೋಮಕ್ಕೆ ಮಾಹಿತಿಯನ್ನು ಓದಬೇಕು ಎಂಬುದನ್ನು ಅರಿತಿದ್ದರೆ ಪುಸ್ತಕವಾಚನವು ಒಂದು ರೀತಿಯ ಪ್ರಭಾವ ಪರಿಣಾಮವನ್ನುಂಟು ಮಾಡುತ್ತದೆ. "ವಾಚನದಿಂದ ಮಾನವ ಪೂರ್ಣನಾಗುತ್ತಾನೆ" ಎಂದು ಬೇಕನ್ ಹೇಳಿದ್ದು ಔಚಿತ್ಯಪೂರ್ಣವಾಗಿದೆ. ಕೆಲವು ಗ್ರಂಥಗಳನ್ನು ನೋಡಬೇಕು, ಕೆಲವು ಗ್ರಂಥಗಳನ್ನು ಓದಬೇಕು ಮತ್ತು ಮತ್ತೆ ಕೆಲವು ಗ್ರಂಥಗಳ ಬಗ್ಗೆ ಸತತ ಮನನ ಮಾಡಬೇಕು ಎಂದೂ ಆತ ಹೇಳಿರುವರು. ಮಾನವನ ವ್ಯಕ್ತಿತ್ವದ ವಿಕಾಸದಲ್ಲಿ ಗ್ರಂಥಗಳ ಗಣನೀಯ ಪರಿಣಾಮ ಬೀರುವವು ಎಂಬುದು ಸರ್ವವೇದ್ಯವಾಗಿದೆ. ಓದುವಿಕೆಯಿಂದ ಜ್ಞಾನದಿಗಂತ ವಿಸ್ತಾರಗೊಳ್ಳುತ್ತದೆ ಮತ್ತು ಜನತೆಗೆ ಅದು ಸಾಕಷ್ಟು ಮನೋರಂಜನೆಯನ್ನು

* ಕನಕುನ್ನ ಅರಮನೆ, ತಿರುವನಂತಪುರ, ದಿನಾಂಕ 1ನೇ ಫೆಬ್ರವರಿ, 1991.

ಪ್ರಾಣಿಗಳ ಆಹಾರವಸ್ತುಗಳ ಬೆಲೆ ತುಂಬ ಏರಿದೆ. ಅವುಗಳನ್ನು ಇಳಿಸಲು, ಹಿಂಡಿಗಳ ರಫ್ತುಮಾಡದಂತೆ ತಡೆಯಬೇಕು. ಕೋಳಿಸಾಕಾಣೆ, ಕುರಿಸಾಕಾಣೆ, ಹಾಗೂ ಹಂದಿಸಾಕಾಣೆಗಳಿಗೆ ಉತ್ತೇಜನ ನೀಡಬೇಕು.

ಸಣ್ಣ ರೈತರು ಹಾಗೂ ಜೀತವಿಮುಕ್ತಗೊಂಡ ಕಾರ್ಮಿಕರಿಗೆ, ಪುನರ್ವಸತಿ ನೀಡುವ ಕ್ರಮವಾಗಿ, ಕುರಿಗಳನ್ನು ಸಾಕಲು ತಕ್ಕ ಉತ್ತೇಜನವನ್ನು ನೀಡಬೇಕು. ಈ ವಿಚಾರವನ್ನು ಕುರಿತಂತೆ, ಕರ್ನಾಟಕ ಸರ್ಕಾರ ಕಳುಹಿಸಿದ ಒಂದು ಪ್ರಸ್ತಾಪ, ಈಗಾಗಲೇ ಸರ್ಕಾರದ ಮುಂದಿದೆ.

ಅನೇಕ ರಾಜ್ಯಗಳಲ್ಲಿ ಕೃಷಿ ಕಾರ್ಮಿಕರಿಗೆ ಕನಿಷ್ಟ ಮಜೂರಿ ಶಾಸನ ಇನ್ನೂ ಜಾರಿಗೆ ಬಂದಿಲ್ಲ. ಇದರ ಅನುಷ್ಠಾನವುಂಟಾಗುವಂತೆ ಮಾಡಿ, ಕೃಷಿ ಕಾರ್ಮಿಕರಿಗೆ ತಕ್ಕ ಮಜೂರಿ ದೊರೆಯುವಂತೆ ನೋಡಿಕೊಳ್ಳುವ ಇನ್ಸ್‌ಪೆಕ್ಟರ್‌ಗಳಿಲ್ಲದಿರುವುದೇ ಇದಕ್ಕೆ ಕಾರಣ. ಕೆಲವು ಭಾಗಗಳಲ್ಲಿ, ಜೀತ ಪದ್ಧತಿಯನ್ನು ರದ್ದುಪಡಿಸಿದ ಅನಂತರ ಮತ್ತು ಭೂಮಿತಿ ಶಾಸನಗಳನ್ನು ಜಾರಿಗೆ ತಂದ ಅನಂತರ, ಚಿಕ್ಕ ರೈತರು ಹಾಗೂ ಜೀತ ವಿಮುಕ್ತರಲ್ಲಿ ಅನೇಕರು ಶೋಷಣೆಗೆ ಒಳಗಾಗಿದ್ದಾರೆ. ಅವರಿಗೆ ನೌಕರಿಸಿಗುತ್ತಿಲ್ಲ. ಆದ್ದರಿಂದ, ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗ ಸುಭದ್ರತೆಯ ಯೋಜನೆಯೊಂದನ್ನು ಸರ್ಕಾರ ಪ್ರಾರಂಭಿಸಬೇಕೆಂದು ನಾನು ಬಯಸುತ್ತೇನೆ. ಹೀಗೆ ಮಾಡದೆ ಇದ್ದಲ್ಲಿ ಅವರು ಉಪವಾಸದಿಂದ ಸಾಯುವ ಸಂದರ್ಭವಿದೆ.

## ಸಕ್ಕರೆ ಇಲಾಖೆಯನ್ನು ಕುರಿತು ನೀಡಿದ ವಿವರಣೆಗಳು *

ಶ್ರೀ ಬಿ. ರಾಚಯ್ಯ: ಸಕ್ಕರೆಗೆ ಸಂಬಂಧಿಸಿದಂತೆ ಹೇಳುವುದಾದರೆ, ದಕ್ಷಿಣ ಭಾರತದಲ್ಲಿ ತೆರಿಗೆ ವಿಧಿಸಲಾದ ಸಕ್ಕರೆಯ ಬೆಲೆ 141 ರೂಪಾಯಿ ಆದರೆ ಉತ್ತರ ಭಾರತದಲ್ಲಿ ಈ ಬೆಲೆ 175 ರೂಪಾಯಿ ಬೆಲೆಗಳಲ್ಲಿ ಇಷ್ಟು ಹೆಚ್ಚಿನ ವ್ಯತ್ಯಾಸವಿರಲು ಕಾರಣವಾದರೂ ಏನು? ದಕ್ಷಿಣ ಭಾರತದಲ್ಲಿ ಬೆಳೆಸಲಾಗುವ ಕಬ್ಬುಗಳಲ್ಲಿ ಕಂಡುಬರುವ ಸಕ್ಕರೆಯ ಅಂಶ ತುಂಬ ಹೆಚ್ಚಾಗಿದೆ, ಅಲ್ಲದೆ ಕಬ್ಬಿನ ಬೆಳೆಯಲ್ಲಿ ರೈತರು ಹೆಚ್ಚು ಆಸಕ್ತಿ ತೋರಿಸುತ್ತಿದ್ದಾರೆ ತೆರಿಗೆ ಹಾಕಲಾಗುವ ಸಕ್ಕರೆಯ ಬೆಲೆಗಳಲ್ಲಿನ ಈ ವ್ಯತ್ಯಾಸವನ್ನು ಕೂಡಲೇ ತೊಡೆದುಹಾಕಬೇಕು; ಅಥವಾ ಕನಿಷ್ಠ ಪಕ್ಷ ಈ ವ್ಯತ್ಯಾಸ ಇನ್ನಷ್ಟು ಕಡಿಮೆಯಾಗುವಂತೆ ಮಾಡಬೇಕು. ಏಕೆಂದರೆ ತನ್ನ ಬೆಳೆಗೂ ಸರಿಯಾದ ಬೆಲೆ ಸಿಗುತ್ತದೆ ಎಂಬ ತೃಪ್ತಿ ದಕ್ಷಿಣಭಾರತದ ರೈತನಿಗೂ ಉಂಟಾಗಬೇಕು.

ಅಲ್ಲದೆ, ಹೊಸ ಸಕ್ಕರೆ ಕಾರ್ಖಾನೆಗಳಿಗೆ ಕೆಲವು ರಿಯಾಯಿತಿಗಳನ್ನು ನೀಡಲೂ ಸರ್ಕಾರ ನಿರ್ಧರಿಸಿದೆ; ಸುಂಕ-ತೆರಿಗೆಗಳಿಂದ ಅವುಗಳಿಗೆ ವಿನಾಯಿತಿಯನ್ನು ನೀಡಿದೆ. ಕೊಳ್ಳೆಗಾಲದ ಸಕ್ಕರೆ ಕಾರ್ಖಾನೆ ಇಂಥ ವಿನಾಯಿತಿಗಾಗಿ ಅರ್ಜಿಸಲ್ಲಿಸಿದೆ. ಈ ವಿಷಯದತ್ತ ಗಮನ ಹರಿಸಿ, ಅದಕ್ಕೆ ವಿನಾಯಿತಿ ಸಿಗುವಂತೆ ನೋಡಿಕೊಳ್ಳಲು ನಾನು ಸಚಿವರಲ್ಲಿ ಮನವಿಮಾಡಿಕೊಳ್ಳುತ್ತೇನೆ.

ಸ್ವಾಮಿ, ಗೊಬ್ಬರದ ಬೆಲೆಯನ್ನು ಕೂಡ ತಗ್ಗಿಸಬೇಕು. ಕಾಲಾವಧಿ ಕಡಿಮೆ-ಯಾಗಿರುವುದರಿಂದ, ನಾನು ಹೇಳಬೇಕಾದುದನ್ನು ತುಂಬ ಸಂಕ್ಷಿಪ್ತವಾಗಿ ತಿಳಿಸುತ್ತೇನೆ.

ಅಂತರ್ ರಾಜ್ಯ ಜಲವಿವಾದಗಳನ್ನು ತುಂಬ ಬೇಗನೆ ತೀರ್ಮಾನಿಸಬೇಕು. ಸಕ್ಕರೆಯ ಅಂಶದ ಪ್ರಮಾಣವನ್ನು ಆಧರಿಸಿ ಅದರ ಮೇಲೆ ತೆರಿಗೆ ವಿಧಿಸಬೇಕು. ಅಲ್ಲದೆ ಹೊಸ ಸಕ್ಕರೆ ಕಾರ್ಖಾನೆಗಳಿಗೆ ಉತ್ತೇಜನವನ್ನು ನೀಡಬೇಕು.

ಕೃಷಿ ಉತ್ಪನ್ನಗಳ ಬೆಲೆಯನ್ನು ಹೆಚ್ಚಿಸಿ, ರೈತರಿಗೆ ಹೆಚ್ಚು ಹೆಚ್ಚು ಬೆಳೆಸುವಂತೆ ಉತ್ತೇಜನ ನೀಡಬೇಕು.

ಆಔಕೌದರದ ಗೊಬ್ಬರ ಹಾಗೂ ಅಭಿವೃದ್ಧಿ ಹೊಂದಿದ ವ್ಯವಸಾಯೋಪಕರಣಗಳು ಅವುಗಳನ್ನು ರೈತರಿಗೆ ಒದಗಿಸಬೇಕು. ಗ್ರಾಮೀಣ ಪ್ರದೇಶಗಳ ಕಚ್ಚಾ ರಸ್ತೆಗಳ ಮೇಲೆ ಎತ್ತುಗಳು ಹೆಚ್ಚು ಪ್ರಯಾಸವಿಲ್ಲದೆ ಎಎಣಯಬಲ್ಲಂತಹ ಸುಲಭವಾಗಿ ಸಾಮಾನು ಸರಂಜಾಮುಗಳನ್ನು ಸಾಗಿಸಬಲ್ಲ ರೀತಿಯಲ್ಲಿ, ಗಾಡಿಗಳನ್ನು ಅಭಿವೃದ್ಧಿಗೊಳಿಸಬೇಕು.

ಸ್ವಾಮೀ, ಉತ್ತಮ ಫಸಲು ನೀಡುವ ಕೆಲವು ಬೆಳೆಗಳ ಮಟ್ಟಿಗಾದಗೂ ಬೆಳೆ ವಿಮೆಯ ಸೌಲಭ್ಯವನ್ನು ರೈತರಿಗೆ ಒದಗಿಸಬೇಕು.

---

* ಲೋಕ ಸಭಾ ನಡವಳಿಕೆ ದಿನಾಂಕ 2ನೇ ಜುಲೈ, 1978 ಪುಟ 165-166

ನದಿಗಳ ಹಾಯ್ಗಡಗಳ ಕೆಲಸ ಕಾರ್ಯಗಳನ್ನು ನಾನು ಅವಲೋಕಿಸಿದ್ದೇನೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಒಳನಾಡಿನ ಜಲಮಾರ್ಗಗಳು ಮತ್ತು ಹಾಯ್ಗಡಗಳ ಹೂಳೆತ್ತುವ ಕಾರ್ಯವನ್ನು ಯಾಂತ್ರೀಕರಣಗೊಳಿಸಿದ ಪಕ್ಷದಲ್ಲಿ, ನೌಕಾ ಸಂಚಾರ ಸುಲಭ ಸಾಧ್ಯವಾಗುತ್ತದೆ.

ನಾನು ತಿಳಿಸಿದ ಈ ಕೆಲವು ವಿಷಯಗಳತ್ತ ದೃಷ್ಟಿ ಹರಿಸಬೇಕೆಂದು ನಾನು ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಸಚಿವಾಲಯದ ಅತ್ಯುತ್ತಮ ಕಾರ್ಯನಿರ್ವಹಣೆಗಾಗಿ ಮತ್ತು ಸದಸ್ಯರ ಸಲಹೆ ಸೂಚನೆಗಳನ್ನು ಅನುಷ್ಠಾನಕ್ಕೆ ತರಲು ಅವರು ಕೈಗೊಂಡ ಕಾರ್ಯಕ್ರಮಗಳಿಗಾಗಿ ನಾನು ಅವರನ್ನು ಅಭಿನಂದಿಸುತ್ತೇನೆ.

ಮಾನ್ಯ ಸಚಿವರನ್ನು ಕ್ಯಾಬಿನೆಟ್ ದರ್ಜೆಗೆ ಏರಿಸಬೇಕೆಂದು ನನ್ನ ಆಸೆಯಾಗಿದೆ. ಈ ಸಚಿವಾಲಯವು ಕ್ಯಾಬಿನೆಟ್ ದರ್ಜೆಯ ಸಚಿವರನ್ನೇ ಒಳಗೊಂಡಿದೆ. ಪರಿಶಿಷ್ಟ ಜಾತಿಗಳಿಗೆ ಸಂಬಂಧಿಸಿದ ಪ್ರಶ್ನೆಯನ್ನು ಎತ್ತಿಕೊಂಡಾಗ, ಕ್ಯಾಬಿನೆಟ್‌ನಲ್ಲಿ-ಕ್ಯಾಬಿನೆಟ್ ದರ್ಜೆಯ ಏಕ ಮಾತ್ರ ಪ್ರಾತಿನಿಧ್ಯ ಮಾತ್ರ ಕಂಡು ಬರುತ್ತದೆಯೇ ವಿನಾಃ ಎರಡನೆಯ ವ್ಯಕ್ತಿಯ ಪ್ರಾತಿನಿಧ್ಯ ಕಂಡುಬರುವುದಿಲ್ಲ. ಪ್ರಧಾನಮಂತ್ರಿಗಳು ಈ ವಿಷಯವನ್ನು ಗಮನಿಸಬೇಕೆಂದೂ, ಇಂಥ ಸಮರ್ಥ ಸಚಿವರೊಬ್ಬರನ್ನು ಸೂಕ್ತವಾದ ಸ್ಥಾನಕ್ಕೆ ಏರಿಸಬೇಕೆಂದೂ ನಾನು ಇಚ್ಛಿಸುತ್ತೇನೆ. ಆಗ ಅವರು ಈ ದೇಶದ ಆರ್ಥಿಕ ಅಭಿವೃದ್ಧಿಗೆ ತಮ್ಮ ಕೊಡುಗೆ ನೀಡುವುದು ಸಾಧ್ಯವಾಗಬಹುದು.

ಈ ಕೆಲವು ಸಂಗತಿಗಳೊಂದಿಗೆ, ನಾನು ನನ್ನ ಮಾತನ್ನು ಮುಗಿಸುತ್ತೇನೆ ಹಾಗೂ ಈ ಅವಕಾಶ ನೀಡಿದುದಕ್ಕಾಗಿ ನಿಮಗೆ ವಂದನೆಗಳನ್ನು ಅರ್ಪಿಸುತ್ತೇನೆ.

ನಾರ್ವೆದೇಶದ ಸರ್ಕಾರವು ಈಗಾಗಲೇ ಈ ಬಗೆಗಿನ ಒಂದು ಸಂಭವನೀಯ ವರದಿಯನ್ನು ಸಲ್ಲಿಸಿದೆ. ಈ ಯೋಜನೆಗೆ ಕಾರವಾರವನ್ನೆ ಆಯ್ದುಕೊಳ್ಳುವಂತೆ ನಾನು ಸಚಿವರನ್ನು ಕೋರುತ್ತೇನೆ. ಭಾರತದ ಶಿಪ್ಪಿಂಗ್ ಕಾರ್ಪೊರೇಶನ್, ವಿಶಾಖಪಟ್ಟಣ ಮತ್ತು ಕೊಚ್ಚಿಗಳಲ್ಲಿ ಕೆಲವು ಹಡಗುಗಳನ್ನು ನಿರ್ಮಿಸುತ್ತಿದೆ. ಇದು ಸಾಧ್ಯವಾದ ಪಕ್ಷದಲ್ಲಿ ಮಂಗಳೂರು ರೇವಿನ ಅಭಿವೃದ್ಧಿಯ ಬಗ್ಗೆ ಕೂಡ ಆಲೋಚಿಸಬಹುದು.

ಆದರೆ ಹೂಳೆತ್ತುವುದಕ್ಕೆ ಸಂಬಂಧಪಟ್ಟ ಒಂದು ಸಮಸ್ಯೆಯಿದೆ. ಮಂಗಳೂರು ರೇವು ಪ್ರದೇಶದಲ್ಲಿ ಕಲ್ಲುಗಳು ಕಂಡು ಬಂದಿವೆ. ಇವುಗಳನ್ನು ತೆಗೆಯಲು ಸ್ಫೋಟಕಗಳನ್ನು ಆಮದು ಕೊಳ್ಳಬೇಕಾಗಿದೆ. ಇದು ಸಾಧ್ಯವಾಗದ ಹೊರತು 1980ರಲ್ಲಿ ಕುದುರೆಮುಖದ ಅದುರುಗಳನ್ನು ಸಾಗಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಹೂಳೆತ್ತುವ ಕಾರ್ಯವನ್ನು ಅತ್ಯಂತ ವೇಗದಲ್ಲಿ ಕೈಗೊಳ್ಳಬೇಕೆಂದು ಸಚಿವರಲ್ಲಿ ನಾನು ಮನವಿ ಮಾಡಿಕೊಳ್ಳುತ್ತೇನೆ.

ಈ ಸಚಿವಾಲಯಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳವರೆಗೆ ಸಂಬಂಧಿಸಿದಂತೆ, ಹೇಳುವುದಾದರೆ, ಅವರ ಪ್ರಾತಿನಿಧ್ಯ ಅತ್ಯಲ್ಪವಾಗಿದೆ. 24-9-1975ರಂದು ಒಂದು ಸಭೆಯನ್ನು ಕರೆದ ಸಚಿವರು, ತಮ್ಮ ಸಚಿವಾಲಯದ ಪರಿಣಾಮಕಾರಿ ನಿರ್ವಹಣೆಗೆ ಸಂಬಂಧಿಸಿದ, ಅತ್ಯಂತ ಅನುಕೂಲಕರವೆನಿಸಿದ ಆರು ನಿರ್ಧಾರಗಳನ್ನು ತೆಗೆದುಕೊಂಡರು. ಈ ನಿರ್ಧಾರಗಳನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. ಅಪಘಾತಗಳು ಉಂಟಾಗದಂತೆ ತಡೆಯುವ ಮೋಟರ್ ವೆಹಿಕಲ್ ಆ್ಯಕ್ಟ್, ಸಾಗಣೆವಾಹನಗಳ ವಿತರಣೆಯಲ್ಲಿ ಮೀಸಲಾತಿ ಒದಗಿಸುವುದು, ಬಸ್‌ಗಳನ್ನು ಓಡಿಸಲು ರಾಷ್ಟ್ರೀಯ ಅನುಮತಿ ನೀಡುವುದು ಹಾಗೂ ರಸ್ತೆಗಳ ನಿರ್ಮಾಣ ಇವುಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಕೈಗೊಳ್ಳಲು ಅವರು ಇಂಡಿಯನ್ ರೋಡ್ ಕನ್‌ಸ್ಟ್ರಕ್ಷನ್ ಕಾರ್ಪೊರೇಷನ್ ಒಂದನ್ನು ಪ್ರಾರಂಭಿಸಿದ್ದು, ಅದು ಈಗಾಗಲೆ ರೂ.13 ಕೋಟಿಗಳ ಒಪ್ಪಂದವೊಂದಕ್ಕೆ ಲಿಬಿಯದಲ್ಲಿ ಸಹಿ ಹಾಕಿದೆ. ಇದನ್ನು ರಾಜ್ಯಗಳಿಗೂ ವಿಸ್ತರಿಸಬೇಕೆಂದು ನಾನು ಬಯಸುತ್ತೇನೆ. ದೇಶದೊಳಗಿನ ರಸ್ತೆ ಹಾಗೂ ಸೇತುವೆಗಳ ನಿರ್ಮಾಣಕ್ಕೆ ಗಮನ ಹರಿಸಬೇಕಾಗಿದೆ ಇತರ ಅನಾವಶ್ಯಕ ವೆಚ್ಚಗಳನ್ನು ಮಾಡದೆ, ಈ ಗುರಿ ಸಾಧನೆಗಾಗಿ ನಾವು ಹೆಚ್ಚು ಹೆಚ್ಚು ಹಣವನ್ನು ಬಳಸಬೇಕಾಗಿದೆ; ಕೆಲಸಗಳನ್ನು ಸಾಧ್ಯವಾದಷ್ಟು ಬೇಗ ಪೂರ್ಣ ಗೊಳಿಸಬೇಕು. ಡ್ರೆಡ್ಜಿಂಗ್ ಕಾರ್ಪೊರೇಷನ್ ಕೂಡ ಒಳ್ಳೆಯ ರೀತಿಯಲ್ಲಿ ಕೆಲಸಮಾಡುತ್ತಿದೆ. ಹಾಗೂ ನಿಜವಾಗಿಯೂ ಸುಮಾರ 3/2 ಕೋಟಿ ರೂ.ಗಳಷ್ಟು ಲಾಭವನ್ನು ಈವರೆಗೆ ಸರಿಪಡಿಸಿದೆ.

ಇತರ ಸ್ವಾಯುತ್ತ ಸಂಸ್ಥೆಗಳೂ ಸಚಿವಾಲಯದ ಆಡಳಿತದಡಿ ಇವೆ ಇವೂ ಒಳ್ಳೆಯ ಕೆಲಸ ಮಾಡುತ್ತಿವೆ. ವಿಶಾಖಪಟ್ಟಣ ಮತ್ತು ಕೊಚ್ಚಿಗಳಲ್ಲಿರುವ ಹಿಂದೂಸ್ಥಾನ್ ಷಿಪ್ಪಿಂಗ್ ಕಂಪನಿಗಳು ತಮ್ಮ ಸಂಪೂರ್ಣ ಸಾಮರ್ಥ್ಯದಿಂದ ದುಡಿಯುತ್ತಿವೆ ಹೀಗಾಗಿ ಅತ್ಯಾವಶ್ಯಕವೆನಿಸಿದ ಹಡುಗುಗಳ ನಿರ್ಮಾಣವಾಗುತ್ತಿವೆ. ಈ ಹಡಗುಗಳ ರಿಪೇರಿಗಾಗಿ ಕೂಡ ಅವಕಾಶವಿದೆ. ಇದು ಕೂಡ ಸರಿಯಾದ ನಿರ್ಧಾರ ಕೈಗೊಳ್ಳುವಲ್ಲಿನ, ಒಂದು ಸ್ವಾಗತಾರ್ಹ ಕ್ರಮವಾಗಿದೆ. ಒಳನಾಡಿನ

ರಾಜ್ಯ ಇವೆರಡೂ ವಿಭಾಗಗಳಲ್ಲಿ, ರಸ್ತೆಗಳ ಅಭಿವೃದ್ಧಿಗಾಗಿ ಸುಮಾರು 2,183 ಕೋಟಿ ರೂಪಾಯಿಗಳನ್ನು ಒದಗಿಸುವ ಪ್ರಯತ್ನವನ್ನು ಮಾಡಲಾಯಿತು. ಮುಖ್ಯವಾಗಿ ರಾಷ್ಟ್ರೀಯ ಹೆದ್ದಾರಿಗಳ ಸರಿಯಾದ ನಿರ್ವಹಣೆಯೇ ಸಚಿವಾಲಯದ ಹೊಣೆಯಾಗಿದ್ದರೂ, ರಾಷ್ಟ್ರದ ಸರಕುಸಾಗಾಣಿಕೆ ಸಹಕಾರ ನೀಡುವುದು ಕೂಡ ಅದರ ಹೊಣೆಯಾಗಿದೆ. ರಸ್ತೆಗಳ ಸರಿಯಾದ ನಿರ್ವಹಣೆ ಹಾಗೂ ದೇಶದ ಒಟ್ಟು ಸರಕು ಸಾಗಾಣೆ ಅಭಿವೃದ್ಧಿ ಕಾರ್ಯಗಳಲ್ಲಿ ರಾಜ್ಯ ಸರ್ಕಾರಗಳಿಗೆ ನೆರವು ನೀಡುವುದು ಈ ಸಚಿವಾಲಯದ ಕರ್ತವ್ಯವಾಗಿದೆ.

ಎರಡನೆಯದಾಗಿ, ನಾನೀಗ ಸರಕು ಸಾಗಣೆಯ ವಿಷಯಕ್ಕೆ ಬರುತ್ತೇನೆ. ಈ ದೇಶದಲ್ಲಿನ, ಮುಖ್ಯವಾಗಿ ದೆಹಲಿಯಲ್ಲಿನ, ಸರಕು ಸಾಗಾಣೆ ವ್ಯವಸ್ಥೆಯು ಹಡಗು ಮತ್ತು ಸಾಗಣೆ ಸಚಿವಾಲಯದ ನಿಯಂತ್ರಣದಲ್ಲಿಯೇ ಇದೆ. ಸೆಂಟ್ರಲ್ ಟ್ರಾನ್ಸ್‌ಪೋರ್ಟ್ ಕಾರ್ಪೊರೇಷನ್ ಅನ್ನು ಮುಚ್ಚಲಾಗಿದೆ. ಹಾಗೂ ದೆಹಲಿಯ 12 ಮಾರ್ಗಗಳಲ್ಲಿ ನಿಯಮಿತ ಸೇವಾ ಸರ್ವಿಸ್ ಅನ್ನು ಪ್ರಾರಂಭಿಸಲಾಗಿದೆ. ಇವು ಚೆನ್ನಾಗಿಯೆ ಕಾರ್ಯ ನಿರ್ವಹಿಸುತ್ತಿದೆ. ಇತರ ಮಾರ್ಗಗಳಿಗೂ ಈ ಸೌಲಭ್ಯವನ್ನು ಒದಗಿಸಿಕೊಡಬೇಕೆಂದು ನಾನು ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಸುಮಾರು 2700 ಬಸ್‌ಗಳು ಈಗ ರಸ್ತೆಗಳಲ್ಲಿ ಓಡಾಡುತ್ತಿವೆ. ದೆಹಲಿಗಾಗಿಯೇ ಇನ್ನಷ್ಟು ಬಸ್‌ಗಳ ಅವಶ್ಯಕತೆಯಿದೆ. ರಾಷ್ಟ್ರದ ರಸ್ತೆಗಳಲ್ಲಿ ಸಂಚರಿಸುವ ವಾಹನಗಳ ಒಟ್ಟು ಸಂಖ್ಯೆ, ಸುಮಾರು 24 ಲಕ್ಷ. ಈ ಭಾರೀ ವಾಹನಗಳಲ್ಲದೆ, ಪ್ರಾಣಿಗಳು ಎಳೆಯುವ ವಾಹನಗಳಿಗೂ ಎತ್ತಿನಗಾಡಿಗಳು ಮತ್ತು ಇತರ ಸಾಗಣೆವಾಹನಗಳೂ ಅಧಿಕ ಸಂಖ್ಯೆಯಲ್ಲಿವೆ. ಆದ್ದರಿಂದ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯ ದೃಷ್ಟಿಯಿಂದ, ·ಇದು ಅತ್ಯಂತ ಮುಖ್ಯವಾದ ಒಂದು ವಿಷಯವಾಗಿದೆ.

ಅತ್ಯಂತ ಪ್ರಾಮಾಣಿಕವೆನಿಸಿದ ಪ್ರಸ್ತುತ ಸರ್ಕಾರ, ಈ ವಿಷಯಕ್ಕೆ ಸಂಬಂಧಪಟ್ಟಂತೆ ವೇಗವಾಗಿ ಕೆಲಸ ಮುಂದುವರಿಸುತ್ತಿದೆ. ಜಲ ಸಾಗಣೆಗೆ ಸಂಬಂಧಿಸಿದಂತೆ ಹೇಳುವುದಾದರೆ, ನಮ್ಮಲ್ಲಿ 371 ಹಡಗುಗಳಿವೆ. ಅವುಗಳಲ್ಲಿ 206 ಹೊರದೇಶಗಳಲ್ಲಿ ಹಾಗೂ ಉಳಿದವು ಕರಾವಳಿ ತೀರಗಳಲ್ಲಿ ಸಂಚರಿಸುತ್ತಿವೆ. ನನಗಿಂತ ಮೊದಲು ಮಾತನಾಡಿದ ಸದಸ್ಯರೂ ಹೆಚ್ಚು ಮಾರ್ಗಗಳ ಅವಶ್ಯಕತೆಯ ಬಗ್ಗೆ ಒತ್ತಿ ಹೇಳಿದ್ದಾರೆ ಹಾಗೂ ಅಭಿವೃದ್ಧಿ ನಿರುತ್ಸಾಹಕರವಾಗಿದೆ ಮತ್ತು ಅಭಿವೃದ್ಧಿ ಕಾರ್ಯಗಳು ಲಾಭ ಆಧಾರಿತವಾಗುವಂತೆ ನೋಡಿಕೊಳ್ಳಬೇಕೆಂದು ತಿಳಿಸಿದ್ದಾರೆ.

ರೇವುಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೇಳುವುದಾದರೆ, 1947ಕ್ಕಿಂತ ಹಿಂದೆ, ನಮ್ಮ ದೇಶದಲ್ಲಿ ಐದು ಮುಖ್ಯ ರೇವುಗಳು ಮಾತ್ರ ಇದ್ದವು. 1947ರ ಅನಂತರ, ಇನ್ನೂ ಐದು ರೇವುಗಳನ್ನು ಅಭಿವೃದ್ಧಿಪಡಿಸಿ ರೇವುಗಳ ಸ್ಥಾನಕ್ಕೆ ಏರಿಸಲಾಯಿತು. ಇದಕ್ಕೆ ತಗಲಿದ ವೆಚ್ಚ 410 ಕೋಟಿ ರೂ. ನಾಲ್ಕನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕಾರವಾರದ ರೇವಿನ ಅಭಿವೃದ್ಧಿ ಕಾರ್ಯ ಪೂರ್ಣಗೊಳ್ಳುತ್ತದೆಂದು ನಿರೀಕ್ಷಿಸಲಾಗಿದೆ. ಆದರೆ, ಬರುವ ಕೆಲವು ವರ್ಷಗಳಲ್ಲಿ ಈ ಕಾರ್ಯ ಪ್ರಾರಂಭವಾಗಿ ಮುಂದುವರಿಯುವುದೆಂದು ನನಗನಿಸಿದೆ. ಒಂದು ನೌಕರಿ ಸಂಶೋಧನಾ ವಿನ್ಯಾಸಕೇಂದ್ರವನ್ನು [Marine research design centre] ತೆರೆಯುವ ಪ್ರಸ್ತಾಪವೂ ಇದ್ದು,

11. ವೆಂಕಪ್ಪಗೌಡ ಕೋಣಂದೂರು - ಪರಿವರ್ತನೆಯ ಹರಿಕಾರ ಡಿ. ದೇವರಾಜ ಅರಸು ಸ್ಮಾರಕ ಗ್ರಂಥ ಯಶಸ್ವೀ ಪ್ರಕಾಶನ, ಬೆಂಗಳೂರು-5, 1984.

12. ವೆಂಕಪ್ಪಗೌಡ ಕೋಣಂದೂರು - ಜೀವಂತ ಜ್ವಾಲೆ, ಶಾಂತವೇರಿ ಗೋಪಾಲ ಗೌಡ ಸ್ಮಾರಕ ಗ್ರಂಥ-1994.

13. Dhanajay Keer - Dr. Ambedkar Life and Mission-1954.

14. Dhanajay Keer - Mahatma jyothi bhaphooley-1974.

15. V.D. Mahajan - Leaders of the Nationalist movement

16. Dr. A.M. Rajashekaraiah -Dr. Ambedkar: Politics of Emanicipation 1973.

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ
(ಪ್ರಕಟಣೆ ಕರ್ನಾಟಕ ವಿಧಾನ ಮಂಡಲ ಕಾರ್ಯಾಲಯ-ವಿಧಾನಸೌಧ ಬೆಂಗಳೂರು-1)

1. ಡಾ. ಬಿ.ಆರ್. ಅಂಬೇಡ್ಕರ್
2. ಶ್ರೀ ವಿ.ಕೆ. ಕೃಷ್ಣ ಮೆನನ್
3. ಎಸ್. ನಿಜಲಿಂಗಪ್ಪ
4. ಶ್ರೀ ಬಿ.ಜಿ. ಬಣಕಾರ
5. ಡಾ॥ ರಾಂಮನೋಹರ ಲೋಹಿಯಾ
6. ಶಾಂತವೇರಿ ಗೋಪಾಲಗೌಡ
7. ಡಾ. ಶ್ಯಾಮ್ ಪ್ರಸಾದ್ ಮುಖರ್ಜಿ.
8. ಶ್ರೀ ಶೇಖ್ ಮಹಮದ್ ಅಬ್ದುಲಾ
9. ಕೆ. ಹನುಮಂತಯ್ಯ
10. ಕಡಿದಾಳ್ ಮಂಜಪ್ಪ
11. ವೀರೇಂದ್ರ ಪಾಟೀಲ್
12. ವೈಕುಂಠ ಬಾಳಿಗಾ
13. ಶ್ರೀಮತಿ ಕ.ಎಸ್. ನಾಗರತ್ನಮ್ಮ

ಕರ್ನಾಟಕ ವಿಧಾನ ಸಭೆಯ ನಡವಳಿಗಳು

1. 1952 ರಿಂದ 1970 ಮತ್ತು 1983 ರಿಂದ 1989 ರವರೆಗಿನ ಸಂಪುಟಗಳು ಸಂಶೋಧನಾ ಮತ್ತು ಉಲ್ಲೇಖನಾಶಾಖೆ, ಕರ್ನಾಟಕ ವಿಧಾನ ಮಂಡಲ, ವಿಧಾನಸೌಧ, ಬೆಂಗಳೂರು.
2. ಕರ್ನಾಟಕ ರಾಜ್ಯ ಪತ್ರಗಾರ, ಕರ್ನಾಟಕ ಸರ್ಕಾರ ವಿಧಾನಸೌಧ, ಬೆಂಗಳೂರು.
3. ನಡವಳಿಕೆಗಳ ಶಾಖೆ, ಕರ್ನಾಟಕ ವಿಧಾನ ಮಂಡಲ, ವಿಧಾನಸೌಧ, ಬೆಂಗಳೂರು.

ಮುದ್ರಕರು: ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳು,
ಸಹಾಯಕ ನಿರ್ದೇಶಕರು,ಸಶಾಮು. ತುಮಕೂರು, ಕಾಸೂ. 47-1500 ಪ್ರತಿಗಳು ದಿ: 4-11-2001

## ಗ್ರಂಥ ಸೂಚಿ


1. ಅನಂತ ಕುಲಕರ್ಣಿ - ಅಪ್ರತಿಮ ರಾಜಕಾರಣಿ-ಇಂದಿರಾಗಾಂಧಿ ಸಮಾಜ ಪುಸ್ತಕಾಲಯ ಶಿವಾಜಿ ಬೀದಿ ಧಾರವಾಡ-1985.
2. ವಿ.ಎಂ. ಇನಾಂದಾರ್ - ಅಂಬೇಡ್ಕರ್: ವ್ಯಕ್ತಿ ಮತ್ತು ವಿಚಾರ
3. ಎಸ್.ಆರ್. ಗುಂಜಾಳ - ಉಪರಾಷ್ಟ್ರಪತಿ: ಬಿ.ಡಿ. ಜತ್ತಿಯವರ ಬಾಳು-ಬದುಕು ಗ್ರಂಥಾಲಯ ಪ್ರಕಾಶನ ಧಾರವಾಡ-1976.
4. ವಿ.ಎಚ್. ಗೌಡ - ಸಮಕಾಲೀನ ಸ್ಪಂಧನ, ಸಮನ್ವಯ ಪ್ರಕಾಶನ ಕುವೆಂಪುನಗರ, ಮೈಸೂರು-1990.
5. ಡಾ.ಮ.ನ. ಜವರಯ್ಯ - ಅಂಬೇಡ್ಕರ್ ವಿದ್ಯಾರ್ಥಿ ಜೀವನ ಚರಿತ್ರೆ ಸಿದ್ದಾರ್ಥ ಗ್ರಂಥಮಾಲೆ, ಕುವೆಂಪುನಗರ, ಮೈಸೂರು-1995.
6. ಡಾ.ಮ.ನ. ಜವರಯ್ಯ - ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ ಸಿದ್ದಾರ್ಥ ಗ್ರಂಥ ಮಾಲೆ ಕುವೆಂಪು ನಗರ ಮೈಸೂರು-1995.
7. ದೇ.ಜ.ಗೌ. - ನಿತ್ಯ ಸಚಿವ (ಶ್ರೀ. ಕೆ.ವಿ. ಶಂಕರೇಗೌಡರ ಜೀವನ ಚರಿತ್ರೆ) ದೇಜಗೌಟ್ರಸ್ಟ್ ಜಯಲಕ್ಷ್ಮೀಪುರಂ, ಮೈಸೂರು.
8. ದೇ.ಜ.ಗೌ. - ಕರ್ನಾಟಕದ ರುವಾರಿ (ಶ್ರೀ ನಿಜಲಿಂಗಪ್ಪನವರ ಜೀವನ ಚರಿತ್ರೆ)
9. ಡಾ.ಎಂ. ನಂಜಯ್ಯ ಹೊಂಗನೂರು - ಬಿ. ರಾಚಯ್ಯ ಅವರ ಜೀವನ ಮತ್ತು ರಾಜನೀತಿ ಬಿ.ರಾಚಯ್ಯ ಪ್ರತಿಷ್ಠಾನ, ನಂ.8ನೇ ಮುಖ್ಯ ರಸ್ತೆ, 3ನೇ ಅಡ್ಡರಸ್ತೆ, ಸರಸ್ವತಿ ಪುರಂ, ಮೈಸೂರು.
10. ಬಿ.ಆರ್. ಪ್ರಾಣೇಶ್ ರಾವ್ - ಯಶೋಧರ ದಾಸಪ್ಪ ಮತ್ತು ಎಚ್.ಸಿ. ದಾಸಪ್ಪ ಜೀವನ ಮತ್ತು ಸಾಧನೆ-1988.

## ರಾಷ್ಟ್ರದ ರಾಜಕೀಯ ಪಕ್ಷಗಳಲ್ಲಿ ರಾಚಯ್ಯ

| ಕ್ರ. ಸಂ. | ವರ್ಷ | ಪಕ್ಷಗಳು | ಪಕ್ಷದ ಗುರುತು (ಚಿಹ್ನೆ) | ಚುನಾವಣೆ | ಕ್ಷೇತ್ರ | ಫಲಿತಾಂಶ |
|---|---|---|---|---|---|---|
| 1. | 1952 | P.SP. | -ಗುಡಿಸಲು- | ವಿಧಾನಸಭೆ | -ಯಳಂದೂರು | -ಜಯ |
| 2. | 1957 | ಕಾಂಗ್ರೆಸ್ (I.N.C) | -ನೊಗ ಹೊತ್ತ ಜೊಡೆತ್ತು | ವಿಧಾನಸಭೆ- | ಚಾಮರಾಜನಗರ | -ಜಯ |
| 3. | 1962 | ಕಾಂಗ್ರೆಸ್- | ನೊಗಹೊತ್ತ ಜೊಡೆತ್ತು | - ವಿಧಾನಸಭೆ- | ಸಂತೇಮರಹಳ್ಳಿ | -ಜಯ |
| 4. | 1967 | ಕಾಂಗ್ರೆಸ್- | ನೊಗಹೊತ್ತ- ಜೊಡೆತ್ತು | ವಿಧಾನಸಭೆ- | ಸಂತೇಮರಹಳ್ಳಿ | -ಜಯ |
| 5. | 1974 | ಕಾಂಗ್ರೆಸ್(ಆರ್)- | ಹಸ್ತ - | ರಾಜ್ಯಸಭೆ | -ಕರ್ನಾಟಕ | -ಜಯ |
| 6. | 1977 | ಕಾಂಗ್ರೆಸ್- | ಹಸ್ತ- | ಲೋಕಸಭೆ- | ಚಾಮರಾಜನಗರ- | ಪರಾಜಯ |
| 7. | 1980 | ಕಾಂಗ್ರೆಸ್- (ದೇವರಾಜ ಅರಸ್ ಕಾಂಗ್ರೆಸ್) | ಚರಕ- | ಲೋಕಸಭೆ | -ಚಾಮರಾಜನಗರ- | ಜಯ |
| 8. | 1983 | ಕ್ರಾಂತಿ ರಂಗ- (ಜನತಾ, ಕ್ರಾಂತಿ ರಂಗ) | ನೇಗಿಲುಹೊತ್ತರೈತ- | ವಿಧಾನ ಸಭೆ- | ಸಂತೇಮರಹಳ್ಳಿ | -ಜಯ |
| 9. | 1985 | ಜನತಾಪಕ್ಷ- | ಚಕ್ರದೊಳಗಿನ - ನೇಗಿಲು ಹೊತ್ತರೈತ. | ವಿಧಾನಸಭೆ | -ಸಂತೇಮರಹಳ್ಳಿ | -ಜಯ |

1998 : ಜನವರಿ 3 ಬೆಂಗಳೂರಿನ ರಂಗ ಚೇತನ ಕಲಾವಿದರು ರವೀಂದ್ರ ಕಲಾಕ್ಷೇತ್ರದಲ್ಲಿ ಸನ್ಮಾನಿಸಿ ಬೆಳ್ಳಿ ಕಿರೀಟ ಇಟ್ಟು 'ನಾಡರತ್ನ ಪ್ರಶಸ್ತಿ' ಯನ್ನು ಪ್ರಧಾನ ಮಾಡಿದರು.

1999 : ಫೆಬ್ರವರಿ 3 ರಂದು ಚಾಮರಾಜನಗರದ ಕನ್ನಡ ಯುವ ಮಿತ್ರ ಬಳಗದವರು ಶ್ರೀ ಸಿವರಾತ್ರೀಶ್ವರ ದೇಸೀಕೇಂದ್ರ ಮಹಾಸ್ವಾಮಿಗಳ ಅಮೃತ ಹಸ್ತದಿಂದ ಬೆಳ್ಳಿಕಿರೀಟ ಧಾರಣೆ ಮಾಡಿಸಿ, 'ರಾಜಕೀಯ ಭೀಷ್ಮ' ಎಂಬ ಬಿರುದನ್ನು ನೀಡಿದರು.

1999 : ಫೆಬ್ರವರಿ 28 ರಂದು ಕನಕಪುರದಲ್ಲಿ ನಡೆದ 67ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿತರು.

1999 : ಜೂನ್ 26 ರಂದು ಹೊಂಗನೂರು ಹಿರಿಕೆರೆಯ ಏತ ನೀರಾವರಿಯ ಉದ್ಘಾಟನೆಯ ಬೃಹತ್ ಸಮಾರಂಭದಲ್ಲಿ ಸನ್ಮಾನಿತರು.

1999 : ಆಗಸ್ಟ್ 20 ರಂದು ರಾಜೀವ್ ಗಾಂಧಿ ಸ್ಮರಣಾರ್ಥ ಇಂಟರ್ ನ್ಯಾಷನಲ್ ಇಂಟೆಗ್ರೇಟ್ ಪೀಸ್ ಅಂಡ್ ಫ್ರೆಂಡ್ ಷಿಪ್ ನವರು ಸ್ಥಾಪಿಸಿರುವ "ಭಾರತ ಜ್ಯೋತಿ" ಪ್ರಶಸ್ತಿಯನ್ನು ಸ್ವೀಕರಿಸಿದರು.

2000 : ಫೆಬ್ರವರಿ 14ರ ಸೋಮವಾರ ಬೆಳಗಿನ ಜಾವ 2.45 ರಲ್ಲಿ ನಿಧನರಾದರು.

1983 : ಮಾರ್ಚಿ 16 ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜವಾಬ್ದಾರಿಯನ್ನು ಹೊತ್ತರು.

1985 : ಮಾರ್ಚಿ 8 ರಲ್ಲಿ ಸಂತೇಮರಹಳ್ಳಿ ಮೀಸಲು ಕ್ಷೇತ್ರದಿಂದ ಜನತಾಪಕ್ಷದಿಂದ ಆಯ್ಕೆ, ಹಾಗೂ ಕರ್ನಾಟಕ ರಾಜ್ಯದ ಗೃಹಮಂತ್ರಿಯಾಗಿ ಸೇರ್ಪಡೆ.

1987 : ಏಪ್ರಿಲ್ 27ರಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಯೋಜನೆಯ ಸಚಿವರು.

1988 : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವತಿಯಿಂದ ಭಾರತದ ಪ್ರತಿನಿಧಿಯಾಗಿ ದಕ್ಷಿಣ ಕೋರಿಯಾ, ಇಂಡೋನೇಷಿಯಾ, ಮತ್ತು ಬಾಂಕಾಂಗ್ ರಾಷ್ಟ್ರಗಳಿಗೆ ಭೇಟಿ.

1988 : ಆಗಸ್ಟ್ 16 ರಂದು ಎಸ್.ಆರ್. ಬೊಮ್ಮಾಯಿ ಸರ್ಕಾರದಲ್ಲಿ ಕೃಷಿ ಮತ್ತು ಅರಣ್ಯ ಸಚಿವರು.

1989 : ವಿಧಾನ ಪರಿಷತ್ತಿನ ಸಭಾ ನಾಯಕರು

1989 : ಏಪ್ರಿಲ್ 21, ರಾಜ್ಯ ಜನತಾದಳ ಅಧ್ಯಕ್ಷರಾಗಿ ಆಯ್ಕೆ.

1990 : ಫೆಬ್ರವರಿ 14, ಹಿಮಾಚಲಪ್ರದೇಶದ ರಾಜ್ಯಪಾಲರಾಗಿ ಅಧಿಕಾರ ಸ್ವೀಕಾರ

1990 : ಸೆಪ್ಟೆಂಬರ್ 1, ಚಾಮರಾಜನಗರ ತಾಲ್ಲೂಕಿನ ಸಮಸ್ತ ನಾಗರಿಕರು ರಾಜ್ಯ ಪಾಲರಾಗಿ ಮೊದಲ ಬಾರಿಗೆ ರಾಜ್ಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಸುತ್ತೂರು ಶ್ರೀ ಶಿವರಾತ್ರೀಶ್ವರ ದೇಶಿಕೇಂದ್ರ ಮಹಾಸ್ವಾಮಿಗಳ ದಿವ್ಯ ಸಮ್ಮುಖದಲ್ಲಿ ಸನ್ಮಾನಿತರು.

1990 : ಸೆಪ್ಟೆಂಬರ್ 6 ಬೆಂಗಳೂರು ನಾಗರಿಕ ಸಮಿತಿಯವರಿಂದ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಸನ್ಮಾನಿತರು.

1990 : ನವೆಂಬರ್‌ನಲ್ಲಿ ದೆಹಲಿಯಲ್ಲಿ ರಾಷ್ಟ್ರ ಪತಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಪಾಲರುಗಳ ಸಭೆಯಲ್ಲಿ ಭಾಗವಹಿಸಿದರು.

1990 : ಡಿಸೆಂಬರ್ 21 ರಂದು ಕೇರಳ ರಾಜ್ಯದ ರಾಜ್ಯಪಾಲರಾಗಿ ಅದಿಕಾರ ವಹಿಸಿಕೊಂಡರು.

1995 : ಆಗಸ್ಟ್ 11 ರಂದು ಕೇರಳ ರಾಜ್ಯಪಾಲ ಹುದ್ದೆಯಿಂದ ನಿವೃತ್ತಿ.

1997 : ಫೆಬ್ರವರಿ 12 ರಂದು ಕರ್ನಾಟಕ ಅಭಿವೃದ್ಧಿ ನಿಗಮದವರು ಬೆಂಗಳೂರಿನ ಚೌಡಯ್ಯ ಸ್ಮಾರಕ ಭವನದಲ್ಲಿ ಸನ್ಮಾನಿತರು.

1962 : ಮೂರನೇ ಸಾರ್ವತ್ರಿಕ ವಿಧಾನಸಭೆ ಚುನಾವಣೆಯಲ್ಲಿ ಸಂತೇಮರಳ್ಳಿ ಮೀಸಲು ಕ್ಷೇತ್ರದಿಂದ ಚುನಾಯಿತರು.

1962 : ಮಾರ್ಚಿ 14 ರಂದು ಪ್ರಥಮ ಬಾರಿಗೆ ಎಸ್.ಆರ್. ಕಂಠಿ ಅವರ ಸಂಪುಟ-ದಲ್ಲಿ ಕೃಷಿ, ಸಹಕಾರ ಮತ್ತು ಅರಣ್ಯ ಸಚಿವರು.

1962 : ಜುಲೈ 2 ರಂದು ಎಸ್. ನಿಜಲಿಂಗಪ್ಪನವರ ಸಚಿವ ಸಂಪುಟದಲ್ಲಿ ಮೀನು-ಗಾರಿಕೆ, ಅರಣ್ಯ ಮತ್ತು ರೇಷ್ಮೆ ಸಚಿವರು.

1962 : ಮೈಸೂರು ವಿಭಾಗದ ರಾಷ್ಟ್ರೀಯ ಹಿಂದುಳಿದ ವರ್ಗದ ಅಧ್ಯಕ್ಷರು.

1964 : ಕರ್ನಾಟಕ ಸರ್ಕಾರದಿಂದ ಜಪಾನ್, ಪಾಶ್ಚಾತ್ ದೇಶಗಳಿಗೆ ಭೇಟಿ.

1965 : ಬೆಹಿರೂಚ್ ಮತ್ತು ಲೆಬನಾನ್‌ನಲ್ಲಿ ನಡೆದ 'World sericulture conference' ಗೆ ಭಾರತ ತಂಡದ ನಾಯಕರಾಗಿ ಪ್ರತಿನಿಧಿಸಿದರು. ಇದೇ ಸಮಯದಲ್ಲಿ ಇಟಲಿ, ಸ್ಪೈನ್, ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ, ರಷ್ಯಾ ಇನ್ನಿತರರ ದೇಶಗಳಿಗೆ ಭೇಟಿ.

1967 : ಮಾರ್ಚಿ 14ರಲ್ಲಿ ಸಂತೇಮರ ಹಳ್ಳಿ ಮೀಸಲು ಕ್ಷೇತ್ರದಿಂದ ಆಯ್ಕೆ ಮತ್ತು ಎಸ್. ನಿಜಲಿಂಗಪ್ಪನವರ ಸಂಪುಟದಲ್ಲಿ ಅರಣ್ಯ ಮತ್ತು ಕಂದಾಯ ಸಚಿವರು.

1968 : ಮೇ 30 ರಂದು ವೀರೇಂದ್ರ ಪಾಟೀಲ್ ಗೌರ್ನಮೆಂಟ್‌ನಲ್ಲಿ ಕೃಷಿ, ರೇಷ್ಮೆ ಮತ್ತು ತೋಟಗಾರಿಕೆ ಸಚಿವರು.

1972 : ರಾಜಕೀಯದಿಂದ ಹೊರಗುಳಿದು, ವ್ಯವಸಾಯದಲ್ಲಿ ನಿರತರು.

1974 : ರಾಜ್ಯಸಭಾ ಸದಸ್ಯರಾಗಿ ಆಯ್ಕೆ.

1. ಭಾರತ ಸರ್ಕಾರದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಸಮಿತಿ ಸದಸ್ಯರು
2. ಸರ್ಕಾರಿ ಆಶ್ವಾಸನೆಗಳನ್ನು ಕುರಿತ ಸಮಿತಿಯ ಸದಸ್ಯರು.

1977 : ಚಾಮರಾಜನಗರ ಲೋಕಸಭಾ ಮೀಸಲು ಕ್ಷೇತ್ರದಿಂದ ಚುನಾಯಿತರು.

1979 : ಜುಲೈ 28ರಲ್ಲಿ ಚರಣ್ ಸಿಂಗ್ ಕೇಂದ್ರ ಸರ್ಕಾರದ ಸಚಿವ ಸಂಪುಟದಲ್ಲಿ ಕೈಗಾರಿಕಾಭಿವೃದ್ಧಿ ಸಚಿವರು.

1980 : ಚಾಮರಾಜನಗರ ಮೀಸಲು ಲೋಕ ಸಭಾ ಕ್ಷೇತ್ರದಿಂದ ಪರಾಜಿತರು.

1982 : ಕ್ರಾಂತಿ ರಂಗದ ರಾಜ್ಯಾಧಕ್ಷರು.

1983 : ಜನವರಿ 10 ರಂದು ರಾಮಕೃಷ್ಣ ಹೆಗ್ಡೆಯವರ ಜನತಾ ಸರ್ಕಾರದಲ್ಲಿ ಶಿಕ್ಷಣಾ ಸಚಿವರು.

## ಅವಿಸ್ಮರಣೀಯ ಘಟನೆಗಳ ಬದುಕು

1922 : ಆಗಸ್ಟ್ 10 ರಂದು ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಜಿಲ್ಲೆ, ಆಲೂರು ಗ್ರಾಮದಲ್ಲಿ ಜನನ.

1940 : ಎಸ್.ಎಸ್.ಎಲ್.ಸಿ.ಯಲ್ಲಿ ಅನುತ್ತೀರ್ಣ

1941 : ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣ

1942 : ಸ್ವಾತಂತ್ರ್ಯ ವಿದ್ಯಾರ್ಥಿ ಚಳವಳಿಯಲ್ಲಿ ಸೇರ್ಪಡೆ

1943 : ಇಂಟರ್ ಮೀಡಿಯೇಟ್‌ನಿಂದ ಉತ್ತೀರ್ಣ

1948 : ಬೆಂಗಳೂರು ಸೆಂಟ್ರಲ್ ಕಾಲೇಜಿನಿಂದ ವಿಜ್ಞಾನಪದವಿ.

1950 : ಚಾಮರಾಜನಗರ ಆದಿ ಕರ್ನಾಟಕ ವಿದ್ಯಾರ್ಥಿನಿಲಯದ ಸಂಸ್ಥಾಪಕ ಅಧ್ಯಕ್ಷರು.

1950 : ಮೇ 8ರಂದು ಶ್ರೀಮತಿ ಗೌರಮ್ಮ ಅವರ ಜೊತೆ ವಿವಾಹ.

1952 : ಪ್ರಥಮ ಸಾರ್ವತ್ರಿಕ ವಿಧಾನಸಭಾ ಚುನಾವಣೆಯಲ್ಲಿ ಯಳಂದೂರು ಮೀಸಲು ಕ್ಷೇತ್ರದಿಂದ ಆಯ್ಕೆ.

1953 : ಬೆಂಗಳೂರು ಸರ್ಕಾರಿ ಕಾನೂನು ವಿದ್ಯಾಲಯದಿಂದ ಕಾನೂನು ಪದವಿ (ಬಿ.ಎಲ್)

1. ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯರು.
2. ಸೆಕೆಂಡರಿ ಶಿಕ್ಷಣ ಮಂಡಳಿಯ ಸದಸ್ಯರು.
3. ಡಿ. ಸಂಜೀವಯ್ಯ ಶಿಕ್ಷಣ ಸಂಸ್ಥೆಯ ಅಧ್ಯಕ್ಷರು.

1954 : ಡಾ.ಬಿ.ಆರ್. ಅಂಬೇಡ್ಕರ್ ಅವರು ಬೆಂಗಳೂರಿಗೆ ಭೇಟಿ ನೀಡಿದಾಗ ಅವರ ದರ್ಶನ ಪಡೆದರು ಮತ್ತು ಕೆಂಗಲ್ ಹನುಮಂತಯ್ಯನವರ ನಾಯ-ಕತ್ವದಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆ.

1957 : ಚಾಮರಾಜನಗರ ವಿಧಾನಸಭಾ ಮೀಸಲು ಕ್ಷೇತ್ರದಿಂದ ಚುನಾಯಿತರು.

1. ರಾಜ್ಯ ಸರ್ಕಾರದ ಅಧಿಕೃತಾ ಭಾಷ ಸಮಿತಿಯ ಸದಸ್ಯರು.
2. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ನೀತಿ, ಸಮಿತಿ ಸದಸ್ಯರು.
3. ಕರ್ನಾಟಕ ಭೂಸುಧಾರಣೆ ಸಮಿತಿ ಸದಸ್ಯರು.
4. ಅಂದಾಜು ಸಮಿತಿಗಳ ಸದಸ್ಯರು

ಆಡಳಿತ ಪಕ್ಷ ಸೇರಿ ಸರ್ಕಾರದಲ್ಲಿ ಪ್ರಮುಖ ಪಾತ್ರ ವಹಿಸಿದ್ದರೂ ಚಾಮರಾಜನಗರ ಕ್ಷೇತ್ರದ ವಿರೋಧಿ ಪಕ್ಷಗಳ ಶಾಸಕರಾಗಿದ್ದ ಎಂ.ಸಿ. ಬಸಪ್ಪ ಯು.ಎಂ. ಮಾದಪ್ಪ, ಪುಟ್ಟಸ್ವಾಮಿಯವರ ಬೇಡಿಕೆಗಳನ್ನು ಅವರು ಪಕ್ಷ ಭೇದ ಮರೆತು ತಾಲ್ಲೂಕಿನ ಅಭಿವೃದ್ಧಿಯನ್ನು ನಿಗಾದಲ್ಲಿರಿಸಿಕೊಂಡು ಪಕ್ಷಾತೀತರಾಗಿ ನಿರ್ವಹಿಸಿದ್ದಾರೆ. ಮೊದಲು ತಾಲ್ಲೂಕಿನ ಅಭಿವೃದ್ಧಿ ಅನಂತರ ನಮ್ಮ ಪಕ್ಷ ರಾಜಕಾರಣ ಎನ್ನುವ ರಾಜಕೀಯ ಸಿದ್ಧಾಂತ ರಾಚಯ್ಯನವರದಾಗಿತ್ತು.

ಅವುಗಳೆಲ್ಲವನ್ನು ನಿರ್ಭಯವಾಗಿ ಮಾಡಿಬಿಡಿ ಒಂದು ಎಂಬುದಾಗಿ ಶಿಕ್ಷಣಾಧಿಕಾರಿಗಳಿಗೆ ತಾಕೀತು ಮಾಡಿದರು. ಅದೂ ಅಲ್ಲದೆ ಚಾಮರಾಜನಗರ ಜಿಲ್ಲಾ ಹೋರಾಟ ಸಮಿತಿಗೆ ಚಾಲನೆ ನೀಡಿ ಅವರ ಹೋರಾಟಕ್ಕೆ ಅನೇಕ ಮಾರ್ಗ ಸೂಚನೆಗಳನ್ನು ನೀಡಿದ್ದರು. ಚಾಮರಾಜನಗರ ಜಿಲ್ಲಾ ಕೇಂದ್ರ ರಚಿಸುವ ವಿಷಯ ಕುರಿತು ಚರ್ಚಿಸಲು ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಡೆಯವರನ್ನು ಹತ್ತಾರು ಬಾರಿ ಭೇಟಿಯಾಗಿದ್ದರು. ಈ ಎಲ್ಲಾ ನಿರಂತರ ಪ್ರಯತ್ನದ ಫಲವೇ 1997ರ ಆಗಸ್ಟ್ 15 ರಂದು ಜೆ.ಎಚ್. ಪಟೇಲ್ ಸರ್ಕಾರ ಚಾಮರಾಜನಗರವನ್ನು ಒಂದು ಜಿಲ್ಲಾ ಕೇಂದ್ರವನ್ನಾಗಿ ಘೋಷಿಸಿದ್ದು.

ಈ ಹಿಂದೆ ರಾಚಯ್ಯನವರು ಚಾಮರಾಜನಗರ ಪಟ್ಟಣದ ನೀರಿನ ಸಮಸ್ಯೆಯನ್ನು ಕಂಡು ಅದರ ಪರಿಹಾರಕ್ಕಾಗಿ ಕಾವೇರಿ ನದಿಯ ನೀರನ್ನು ಟಿ. ನರಸೀಪುರದಿಂದ ಕೊಂಡೊಯ್ಯುವ ಸಮಗ್ರ ಯೋಜನೆಯೊಂದನ್ನು ಸಿದ್ದಪಡಿಸಿ ಅದನ್ನೂ ಸರ್ಕಾರಕ್ಕೆ ಸಲ್ಲಿಸಿದರು. ಟಿ. ನರಸೀಪುರದಿಂದ ಚಾಮರಾಜನಗರಕ್ಕೆ ತೆಗೆದುಕೊಂಡು ಹೋಗುವಾಗ ಮಾರ್ಗ ಮಧ್ಯದಲ್ಲಿ ಕಂಡು ಬರುತ್ತಿದ್ದ ಸುಮಾರು ಇಪ್ಪತ್ತು ಹಳ್ಳಿಗಳಿಗೂ ಕುಡಿಯುವ ನೀರಿನ ಪೂರೈಕೆಗೆ ಅವಕಾಶ ಕಲ್ಪಿಸಿದ್ದು ಕೂಡ ರಾಚಯ್ಯನವರ ಮುಂದಾಲೋಚನೆಗೆ ಸಾಕ್ಷಿ. ಆದರೆ ಕಾವೇರಿ ನೀರನ್ನು ಚಾಮರಾಜನಗರಕ್ಕೆ ಕೊಂಡೊಯ್ಯುವ ವಿಚಾರದಲ್ಲಿ ಬಾರಿ ಪ್ರಚಾರ ಪಡೆದುಕೊಂಡವರು ವಾಟಾಳ್ ನಾಗರಾಜ್ ರವರು.

ಒಟ್ಟಿನಲ್ಲಿ ಹೆಚ್ಚು ಕಡಿಮೆ ಚಾಮರಾಜನಗರ ತಾಲ್ಲೂಕಿನ ಎಲ್ಲಾ ಅಭಿವೃದ್ಧಿ ಕಾರ್ಯ ಕ್ರಮಗಳ ಜನಕ ರಾಚಯ್ಯನವರೆಂದರೆ ತಪ್ಪಾಗಲಾಗದು. ವಿಶ್ವಬ್ಯಾಂಕ್‌ನ ಯೋಜನೆಯಡಿ ಬೃಹತ್ ರೇಷ್ಮೆ ಸಂಶೋಧನಾ ಸಂಸ್ಥೆ ತೆರೆದು ತಾಲ್ಲೂಕಿನ ರೇಷ್ಮೆ ಬೆಳೆಯನ್ನು ಉನ್ನತ ಮಟ್ಟಕ್ಕೇರಿಸಿದರು. ಚಾಮರಾಜನಗರದ ಸಾರ್ವಜನಿಕ ಆಸ್ಪತ್ರೆ ಮೊದಲು 50 ಹಾಸಿಗೆಗಳಿಗೆ ಮಾತ್ರ ಸೀಮಿತವಾಗಿತ್ತು. ಆದರೆ ರಾಚಯ್ಯನವರು ಆರೋಗ್ಯ ಸಚಿವರಾದ ಮೇಲೆ ಅದನ್ನು 100 ಹಾಸಿಗೆಗಳಿಗೆ ಏರಿಸಿ, ಆಸ್ಪತ್ರೆಯ ಗುಣಮಟ್ಟವನ್ನು ಹೆಚ್ಚಿಸಿದರು. ಹೊಸದಾಗಿ ಶಸ್ತ್ರ ಚಿಕಿತ್ಸಾ ವಿಬಾಗ, ಹೆರಿಗೆ ವಿಬಾಗ, ತುರ್ತು ಚಿಕಿತ್ಸಾ ವಿಬಾಗ, ಅಪಘಾತ ವಿಭಾಗಗಳ ನೂತನ ಕಟ್ಟಡಗಳನ್ನು ನಿರ್ಮಾಣ ಮಾಡಿ ಅವುಗಳ ಉದ್ಘಾಟನೆಯನ್ನು ಅಂದಿನ ಮುಖ್ಯ ಮಂತ್ರಿ ಎಸ್. ಆರ್. ಬೊಮ್ಮಾಯಿ ಅವರಿಂದ ನೆರವೇರಿಸಿದರು. ಹಾಗೆಯೇ ಅದೇ ಸಂದರ್ಭದಲ್ಲಿ ಮಿನಿ ವಿಧಾನ ಸೌಧದ ಉದ್ಘಾಟನೆಯನ್ನು ಸಹ ಮಾಡಿಸಿದರು. ಹೀಗೆ ಒಂದೇ ಎರಡೇ ನೂರಾರು ಕಾರ್ಯಕ್ರಮಗಳು ತಾಲ್ಲೂಕಿನ ಅಬಿವೃದ್ಧಿಗೋಸ್ಕರ ಅವರ ಕಾಲದಲ್ಲಿ ಜಾರಿಗೊಂಡವು.

ರಾಚಯ್ಯನವರ ರಾಜಕೀಯ ಪ್ರವೇಶಕ್ಕೆ ವೇದಿಕೆಯಾದ ಚಾಮರಾಜನಗರ ತಾಲ್ಲೂಕಿನ ಸರ್ವತೋಮುಖ ಅಭಿವೃದ್ಧಿಗೆ ಅವರು ಶಾಸಕರಾಗಿ, ಸಚಿವರಾಗಿ ಅನನ್ಯ ಕೊಡುಗೆಯನ್ನು ನೀಡಿದ್ದಾರೆ. ಇಡೀ ತಾಲ್ಲೂಕಿನಾದ್ಯಂತ ನಡೆದಿರುವ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ರಾಚಯ್ಯನವರ ಪಾತ್ರ ಎದ್ದು ಕಾಣುತ್ತದೆ. ಅವರು ಸಂತೇಮರಹಳ್ಳಿ ಕ್ಷೇತ್ರದಿಂದ ಚುನಾಯಿತರಾಗಿ,

ಕಾಲೋನಿ, ಇದರ ವಿಸ್ತೀರ್ಣ 200 ಎಕರೆ. ಹುರುಳಿ ನಂಜನಪುರದ ಗ್ರಾಮಸ್ಥರು ಇಲ್ಲಿ ನೆಲೆಸಿದ್ದಾರೆ. 1963ರಲ್ಲಿ ನಿರ್ಮಾಣವಾದ ಹೊಂಗಲವಾಡಿ I ಮತ್ತು ಹೊಂಗಲವಾಡಿ II ಕಾಲೋನಿಗಳು. ಈ ಎರಡು ಕಾಲೋನಿಗಳು ಸುಮಾರು 500 ಎಕರೆ ಭೂವಿಸ್ತೀರ್ಣವನ್ನು ಹೊಂದಿದ್ದು ರಾಮಸಮುದ್ರ ಮತ್ತು ಹುರಳಿನಂಜನಪುರದ ಗ್ರಾಮಸ್ಥರು ಇಲ್ಲಿ ವಾಸವಾಗಿದ್ದಾರೆ. 1972ರಲ್ಲಿ ಅಸ್ತಿತ್ವಕ್ಕೆ ಬಂದ ಕಾಳಿಕಾಂಬ ಕಾಲೋನಿ ವಿಸ್ತೀರ್ಣ 100 ಎಕರೆ, ಹೆಬ್ಬಸೂರಿನ ಹಿಂದುಳಿದ ಜನ ಇಲ್ಲಿ ನೆಲೆಸಿದ್ದಾರೆ. ತಿಮ್ಮೇಗೌಡನ ಪಾಳ್ಯೆ ದಲ್ಲಿ 100 ಎಕರೆಜಮೀನನ್ನು ಇರಸ್ಸಟಿಡಿಗೆ ಸೇರಿದ ಜನರು ಅನುಭೋಗಿಸುತ್ತಿದ್ದಾರೆ. ಕನ್ನೇರಿಕಾಲೋನಿ ಮತ್ತು ಗೋಡೆ ಮಡುವಿನ ದೊಡ್ಡಿಗಳಲ್ಲಿ ಸೋಲಿಗರು ವಾಸಿಸುತ್ತಿದ್ದಾರೆ ಅಲ್ಲದೆ ಹೊಂಗನೂರಿನ ಬೆಲ್ಲವೆತ್ತ ಮತ್ತು ಮುರಟಿಪಾಳ್ಯಗಳಲ್ಲಿ ನೆಲೆಸಿರುವ ಜನರಿಗೂ ಸಹ ಅಲ್ಪಸ್ವಲ್ಪ ಸರ್ಕಾರಿ ಜಮೀನು ದೊರಕಿದೆ. ಹೀಗೆ ರಾಚಯ್ಯನವರು ತಮ್ಮ ದೀರ್ಘಕಾಲದ ರಾಜಕಾರಣ ದುದ್ದಕ್ಕೂ ಕೇವಲ ಚಾಮರಾಜನಗರ ತಾಲ್ಲೂಕಿನೊಂದರಲ್ಲೇ ಅಲ್ಲದೆ ನಾಡಿನ ಇನ್ನಿತರ ಭಾಗಗಳಲ್ಲಿಯೂ ಅವರು ಅನೇಕ ಕಾಲೋನಿಗಳನ್ನು ತೆರೆದು ನಿರಾಶ್ರಿತ ಬಡ ಬಗ್ಗರಿಗೆ ಆಶ್ರಯ ದಾತರಾಗಿದ್ದಾರೆ.

ಆಧ್ಯಾತ್ಮಿಕ ಚಿಂತನೆಗಾಗಿ ವಿಶ್ವ ಪರ್ಯಾಟನೆ ಮಾಡಿ ಕೊನೆಗೆ ಕರ್ನಾಟಕದ ನೆಲದಲ್ಲಿ ವಿಶ್ವ ಶಾಂತಿನಿಕೇತನವನ್ನು ಸ್ಥಾಪಿಸಬೇಕೆಂದು ಬಂದವರು ಮಹಾನ್ ತಪಸ್ವಿಗಳಾದ ಪೂಜ್ಯ ನಿರ್ಮಲಾನಂದ ಸ್ವಾಮೀಜಿಯವರು. ಅವರು ಕರ್ನಾಟಕಕ್ಕೆ ಬಂದು ತಗಡೂರು ರಾಮಚಂದ್ರ ರಾವ್ ರವರನ್ನು ಭೇಟಿಯಾಗಿ, ತಮ್ಮ ತಪಸ್ವಿ ನಾಶ್ರಮಕ್ಕಾಗಿ ದಟ್ಟ ಅರಣ್ಯ ಪ್ರದೇಶ ವೊಂದರಲ್ಲಿ ಸ್ವಲ್ಪ ಜಮೀನನ್ನು ಕೊಡಿಸಿಕೊಡಬೇಕೆಂದು ಮನವಿ ಮಾಡಿಕೊಂಡರು. ಆಗ ತಗಡೂರು ರಾಮಚಂದ್ರ ರಾವ್ ಅವರು ನಿರ್ಮಲಾ ನಂದ ಸ್ವಾಮೀಜಿಯವರನ್ನು ರಾಚಯ್ಯನವರ ಬಳಿ ಕರೆದು ಕೊಂಡು ಬಂದು ಪರಿಚಯಿಸಿದರು. ಆದರೆ ಆ ವೇಳೆಗಾಗಲೇ ರಾಚಯ್ಯನವರು ಕರ್ನಾಟಕ ರಾಜ್ಯದ ಅರಣ್ಯ ಮಂತ್ರಿಗಳಾಗಿದ್ದು, ನಿರ್ಮಲಾನಂದ ಸ್ವಾಮೀಜಿಯವರ ಧ್ಯೇಯೋದ್ದೇಶಗಳೆಲ್ಲವನ್ನು ಹತ್ತಿರದಿಂದ ರಾಮಚಂದ್ರರಾವ್ ಅವರಿಂದ ತಿಳಿದುಕೊಂಡಿದ್ದರು. ಹಾಗಾಗಿ ಅವರಿಗೆ ಬಿಳಿಗಿರಿರಂಗನ ಬೆಟ್ಟದ ತಪ್ಪಲಿನ ಸೋಮ ಅರಸನ ಕೆರೆಯ ಬದಿಯಲ್ಲಿ ಸುಮಾರು ಐದು ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡಿಸಿಕೊಟ್ಟು, ನಿರ್ಮಲಾನಂದ ಸ್ವಾಮೀಜಿಯವರ ತಪೋವನ ನಿರ್ಮಾಣಕ್ಕೆ ಕಾರಣಕರ್ತರಾದರು. ಹೀಗೆ ರಾಚಯ್ಯನವರು ಬಿಳಿಗಿರಿ ರಂಗನ ಬೆಟ್ಟದ ನಿರ್ಜನ ಪ್ರದೇಶದ ಸುಂದರ ಕಾಣದಲ್ಲಿ ಒಬ್ಬ ಆಧ್ಯಾತ್ಮಿಕ ಮಹಾಪುರುಷನ ತತ್ವಾದರ್ಶ ಚಿಂತನೆಗಲ ಪ್ರಚಾರಕ್ಕೆ ಆಶ್ರಮದ ವ್ಯವಸ್ಥೆಯನ್ನು 1964ರಲ್ಲಿ ಮಾಡಿಸಿಕೊಟ್ಟರು.

ಇಂದು ಚಾಮರಾಜನಗರ ತಾಲ್ಲೂಕು ಬಂದು ಜಿಲ್ಲಾ ಕೇಂದ್ರವಾಗಿ ರೂಪುಗೊಂಡಿದೆ. ಅದರ ಹಿಂದೆ ರಾಚಯ್ಯನವರ ಸರ್ವಪ್ರಯತ್ನದ ಶ್ರಮ ಅಡಗಿದೆ ಎಂಬುದು ವಾಸ್ತವ ಸತ್ಯ. ಸರ್ಕಾರದ ಒಳಗಿದ್ದುಕೊಂಡು ಅವರು ಜಿಲ್ಲಾ ನೇಮಕ ಸಮಿತಿ ವರದಿಗಳೆಲ್ಲವನ್ನು ಚಾಮರಾಜನಗರದ ಪರವಾಗಿ ಮಾಡಿಸಿದರು. ರಾಚಯ್ಯನವರು 1985ರಲ್ಲಿ ಶಿಕ್ಷಣ ಸಚಿವರಾಗಿದ್ದಾಗಲೇ ಶೈಕ್ಷಣಿಕವಾಗಿ ಬಂದು ಜಿಲ್ಲೆಗೆ ಏನೇನು ಅನುಕೂಲಗಳಾಗಬೇಕೋ

ಆದರೆ ಅವರ ಸಾರ್ವಜನಿಕ ಜೀವನದ ತುಡಿತ ಅಲ್ಲಿಯವರೆಗೆ ಉಳಿಯಲಿಲ್ಲ. ಕೊನೆಗೂ ಅವರ ಕನಸು ಕನಸಾಗಿಯೇ ಉಳಿದುಕೊಂಡಿತ್ತು. ಆದರೆ ಮಗ ಶಾಸಕ ಎ.ಆರ್. ಕೃಷ್ಣಮೂರ್ತಿಯವರು ರಾಚಯ್ಯನವರು ಬದುಕಿದ್ದಾಗಲೇ ಈ ಯೋಜನೆಯನ್ನು ಕೈಗೆತ್ತಿಕೊಂಡು ತಂದೆಯ ಕನಸನ್ನು ನನಸು ಮಾಡುವ ಭರವಸೆಯನ್ನು ಹುಟ್ಟಿಸಿದ್ದಾರೆ. ಹೀಗೆ ರಾಚಯ್ಯನವರು ತಮ್ಮ ಅಧಿಕಾರದುದ್ದಕ್ಕೂ ಚಾಮರಾಜನಗರ ತಾಲ್ಲೂಕು ಮತ್ತು ಸಂತೇಮರಹಳ್ಳಿ ಕ್ಷೇತ್ರಕ್ಕೆ ಸಾಕಾದಷ್ಟು ನೀರಾವರಿ ಯೋಜನೆಗಳನ್ನು ತಂದು ಅವುಗಳನ್ನು ಅಭಿವೃದ್ಧಿ ಪಡಿಸಲು ಪಟ್ಟಿರುವ ಕಷ್ಟ, ಮಾಡಿರುವ ಹೋರಾಟ ಮತ್ತು ಎದುರಿಸಿರುವ ಸವಾಲುಗಳು ಅಷ್ಟಿಷ್ಟಲ್ಲ. ಅವು ಈ ಕ್ಷೇತ್ರದ ಜನತೆಯ ಕಣ್ಣಲ್ಲಿ ಈಗಲೂ ಕಟ್ಟಿದಂತಿದೆ.

ರಾಚಯ್ಯನವರು ಕರ್ನಾಟಕ ರಾಜ್ಯದ ಅರಣ್ಯ ಮತ್ತು ಕಂದಾಯ ಇಲಾಖೆಗಳೆರಡರ ಜಂಟಿ ಸಚಿವರಾಗಿದ್ದಾಗ, ಗ್ರಾಮೀಣ ಜನರ ಬದುಕಿನ ಬವಣೆಗಳನ್ನು ತೀರ ಹತ್ತಿರದಿಂದ ಕಂಡು ಉಂಡು, ಅವರ ಬದುಕಿಗೊಂದು ಆಸರೆ ನೀಡಲು ಪರಿಪರಿಯಾಗಿ ಯೋಚಿಸಿದರು. ಹಾಗಾಗಿ ಅವರು ಈ ಬಡಜನರ ಜೀವನಕ್ಕೊಂದು ದಾರಿ ತೋರಿಸಲು ಚಿಂತಿಸಿ, ಕೆಲವು ಗ್ರಾಮಗಳ ರೈತ ಮುಖಂಡ ರ ನೇತೃತ್ವದಲ್ಲಿ ಜಾಯಿಂಟ್ ಕೋ ಆಪರೇಟಿವ್ ಸೊಸೈಟಿಗಳನ್ನು ಸ್ಥಾಪಿಸಿದರು. ಈ ಸೊಸೈಟಿಗಳ ಮೂಲಕ ಜಿಲ್ಲಾ ಅರಣ್ಯ ಮತ್ತು ರಾಜ್ಯ ಅರಣ್ಯಕ್ಕೆ ಸೇರಿದ ಸಾವಿರಾರು ಎಕರೆ ಸರ್ಕಾರಿ ಭೂಮಿಯನ್ನು ಕಂದಾಯ ಭೂಮಿಯನ್ನಾಗಿ ಪರಿವರ್ತಿಸಿ, ಅವುಗಳಲ್ಲಿ ಹತ್ತಾರು ಕಾಲೋನಿಗಳನ್ನು ನಿರ್ಮಿಸಿದರು. ಹೀಗೆ ನಿರ್ಮಾಣವಾದ ಕೃಷಿ ಕಾಲೋನಿಗಳನ್ನು ಸಮಾಜದಲ್ಲಿ ಕಡುಬಡತನದಿಂದ ಜೀವನ ಸಾಗಿಸುತ್ತಿದ್ದ ದಲಿತ ಮತ್ತು ಹಿಂದುಳಿದವರ್ಗದ ಜನರಿಗೆ ಹಂಚಿದರು. ಇದರಿಂದಾಗಿ ಸಮಾಜದೊಳಗೆ ವಂಶಪಾರಂಪರೆಯಿಂದಲೂ ಒಂದು ಕುಂಟೆ ಜಮೀನನ್ನು ಹೊಂದದಿದ್ದ ಸಾವಿರಾರು ಕುಟುಂಬಗಳು ಇಂದು ತಲಾ ಮೂರ್ನಾಲ್ಕು ಎಕರೆ ಜಮೀನನ್ನು ಮತ್ತೆ ಒಂದೊಂದು ವಾಸದ ಮನೆಯನ್ನು ರಾಚಯ್ಯನವರು ಜಾರಿಗೆ ತಂದ ವಿಶೇಷ ಯೋಜನೆ ಯಡಿಯಲ್ಲಿ ಪಡೆದುಕೊಂಡು ಅವರು ಈಗ ನೆಮ್ಮದಿಯ ಜೀವನವನ್ನು ನಡೆಸುತ್ತಿದ್ದಾರೆ.

ಚಾಮರಾಜನಗರ ತಾಲೂಕಿನಾದ್ಯಂತ ಅವರ ಕಾಲದಲ್ಲಿ ತಲೆ ಎತ್ತಿದ ಕೆಲವು ಪ್ರಮುಖ ಕಾಲೋನಿಗಳೆಂದರೆ ರಾಮಸಮುದ್ರದ ಬಸವಣ್ಣನವರ ನೇತೃತ್ವದಲ್ಲಿ 1960ರಲ್ಲಿ ಅಸ್ತಿತ್ವಕ್ಕೆ ಬಂದ ಸಿದ್ದಯ್ಯನ ಪುರದ ಕಾಲೋನಿ ಇದರ ವಿಸ್ತೀರ್ಣ ಒಂದು ಸಾವಿರ ಎಕರೆ, ಇದು ಮೈಸೂರು ಮಹಾರಾಜರು ಅಮೃತ ಮಹಲ್ ಆಗಿ ಬಿಟ್ಟಿದ್ದ ಜಮೀನು. ರಾಮಸಮುದ್ರದ ದಲಿತರು ಇಲ್ಲಿ ವಾಸವಾಗಿದ್ದಾರೆ. 1965ರಲ್ಲಿ ಅಸ್ತಿತ್ವಕ್ಕೆ ಬಂದ ಕುಂಬೇಶ್ವರ ಕಾಲೋನಿ ಇದು ಇತ್ತೀಚಗೆ ಬಿ. ರಾಚಯ್ಯ ಕಾಲೋನಿ ಎಂದು ಪುನರ್ನಾಮಕರಣಗೊಂಡಿದೆ. ಇದರ ವಿಸ್ತೀರ್ಣ 500 ಎಕರೆ. ಬಿಸಲವಾಡಿ ಮತ್ತು ಕೋಡಿ ಉಗನೆಗೆ ಸೇರಿದ ಜನ ಇಲ್ಲಿ ನೆಲೆಹೂಡಿದ್ದಾರೆ. 1963ರಲ್ಲಿ ಅಸ್ತಿತ್ವಕ್ಕೆ ಬಂದ ಹೊಂಡರ ಬಾಳು ಕಾಲೋನಿಯ ವಿಸ್ತೀರ್ಣ 150 ಎಕರೆ. ದೊಡ್ಡರಾಯಪೇಟೆ ಮತ್ತು ಸರಗೂರಿನ ಜನ ಇಲ್ಲಿ ವಾಸ್ತವ್ಯ ಹೂಡಿದ್ದಾರೆ. 1965ರಲ್ಲಿ ಅಸ್ತಿತ್ವಕ್ಕೆ ಬಂದ ಮಹದೇಶ್ವರ

ನೀರು ಪೂರೈಸುತ್ತಿದ್ದರೆ, ಚಿಕ್ಕ ಹೊಳೆ ಜಲಾಶಯದ ಸುಮಾರು 1630 ಹೆಕ್ಟೇರ್ ಪ್ರದೇಶಕ್ಕೆ ನೀರಿನ ಪೂರೈಕೆಯಾಗುತ್ತಿದೆ. ಒಟ್ಟಿನಲ್ಲಿ ಈ ಎರಡು ಜಲಾಶಯಗಳಿಂದ ಚಾಮರಾಜನಗರ ತಾಲ್ಲೂಕಿನ ಸುಮಾರು 4210 ಹೆಕ್ಟೇರ್ ಭೂಪ್ರದೇಶ ನೀರಾವರಿ ಪ್ರದೇಶವಾಗಿ ನಿರ್ಮಾಣ ವಾಗಿದೆ. ಮಳೆಗಾಲದಲ್ಲಿ ಚಿಕ್ಕಹೊಳೆ ಜಲಾಶಯದಲ್ಲಿ ನೀರಿನ ಪ್ರಮಾಣ ಹೆಚ್ಚಾಗಿ, ಅದು ಬೇಸಾಯದ ಉಪಯೋಗಕ್ಕೆ ಬಾರದೆ ಪೋಲಾಗುತ್ತಿತ್ತು. ಇದನ್ನು ಕಂಡ ರಾಚಯ್ಯನವರು ಚಿಕ್ಕಹೊಳೆಯಲ್ಲಿ ಹೆಚ್ಚುವರಿಯಾದ ನೀರು ವೇಸ್ಟ್ ಆಗದೆ ಸುವರ್ಣಾವತಿ ಜಲಾಶಯವನ್ನು ತಲುಪುವಂತೆ ಚಿಕ್ಕಹೊಳೆ ಮತ್ತು ಸುವರ್ಣಾವತಿ ಜಲಾಶಯಗಳ ನಡುವೆ ಒಂದು ಸಂಪರ್ಕ ಕಾಲುವೆಯ ವ್ಯವಸ್ಥೆಯನ್ನು ಮಾಡಿದರು. ಇದರಿಂದಾಗಿ ತಾಲ್ಲೂಕಿನ ನೀರಾವರಿ ಬೇಸಾಯ ಉತ್ತಮಗೊಂಡು ಸಾವಿರಾರು ರೈತ ಕುಟುಂಬಗಳು ಇದರ ಸದುಪಯೋಗ ಪಡೆದುಕೊಳ್ಳುತ್ತಿವೆ.

ಒಟ್ಟಿನಲ್ಲಿ ತಾಲ್ಲೂಕಿನಲ್ಲಿ ಸುವರ್ಣಾವತಿ ಮತ್ತು ಚಿಕ್ಕಹೊಳೆ ನೀರಾವರಿ ಯೋಜನೆಗಳಲ್ಲದೆ, ಹೊರಿಗನೂರಿನ ಬೆಲ್ಲವತ್ತ ಡ್ಯಾಂ, ಹಿರಿಕೆರೆ ಏತ ನೀರಾವರಿ ಯೋಜನೆ, ಬಾಗಳಿ ಏತ ನೀರಾವರಿ ಯೋಜನೆ, ಯರಿಯೂರಿನ ಅಡ್ಡಹಳ್ಳ ನಿರ್ಮಾಣ, ಕೊಳ್ಳೇಗಾಲ ತಾಲ್ಲೂಕಿನ ಕಾಮಗೆರೆಬಳಿ ಕಟ್ಟಿರುವ ಗುಂಡಾಲ್ ಯೋಜನೆ ರಾಚಯ್ಯನವರ ಮಹತ್ವಕಾಂಕ್ಷೆಯ ಯೋಜನೆಗಳಲ್ಲಿ ಒಂದು. ಏಕೆಂದರೆ ಕಬಿನಿ ಎರಡನೇ ಹಂತ ಅಸ್ತಿತ್ವಕ್ಕೆ ಬಂದರೆ ಚಾಮರಾಜನಗರ ತಾಲ್ಲೂಕಿನ ಅಧಿಕ ಭಾಗ, ಗುಂಡ್ಲು ಪೇಟೆಯ ಕೆಲವು ಭಾಗ ನೀರಾವರಿ ಪ್ರದೇಶಗಳಾಗಿ ಪರಿವರ್ತನೆ ಯಾಗುತ್ತಿತ್ತು. ಅದಕ್ಕೋಸ್ಕರ ಅವರು ಇದರ ಹೋರಾಟದಲ್ಲಿ ನಾಡಿನಾದ್ಯಂತ ಗಮನ ಸೆಳೆದು ರಾಜ್ಯದ ಘಟಾನುಘಟಿ ಮುಖ್ಯ ಮಂತ್ರಿಗಳಾದ ನಿಜಲಿಂಗಪ್ಪ, ವೀರೇಂದ್ರ ಪಾಟೀಲ್,ದೇವರಾಜ ಅರಸ್ ಮತ್ತು ರಾಮಕೃಷ್ಣ ಹೆಗ್ಡೆಯವರ ಜೊತೆ ಸದನದಲ್ಲಿ ಹಲವಾರು ಸುತ್ತಿನ ಮಾತುಕತೆ ನಡೆಸಿ ಸಂಬಂಧಪಟ್ಟ ರೂಪುರೇಷೆಗಳನ್ನು ವಿವರಿಸಿದ್ದಾರೆ. ಎಚ್.ಡಿ. ದೇವೇಗೌಡರು ರಾಜ್ಯದ ನೀರಾವರಿ ಸಚಿವರಾಗಿದ್ದಾಗಲೂ ಅವರ ಜೊತೆ ಪ್ರತ್ಯೇಕವಾಗಿ ಚರ್ಚಿಸಿ, ದೇವೇಗೌಡರು ಕಬಿನಿ ಎರಡನೇ ಹಂತದ ನೀರಾವರಿಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಸಹಾಯ ಮಾಡದಿದ್ದಾಗ ಅವರ ವಿರುದ್ಧ ಜಗಳ ಕಾದಿರುವ ನಿದರ್ಶನಗಳು ಇವೆ.

ಹೀಗೆ ಕಬಿನಿ ಎರಡನೇ ಹಂತದ ಯೋಜನೆ ಅನೇಕ ಒತ್ತಡದ ನಡುವೆ ಇನ್ನೇನು ಕಾರ್ಯರೂಪಕ್ಕೆ ಬರಬೇಕು ಎನ್ನುವ ಹೊತ್ತಿಗೆ ಮತ್ತೇನಾದರೂ ಅಡಚಣೆಗಳು ಉಂಟಾಗಿ ಅದು ಹಾಗೆಯೇ ಪೂರ್ಣಗೊಳ್ಳದ ಸ್ಥಿತಿಯನ್ನು ತಲುಪಿದೆ. ರಾಚಯ್ಯನವರ ಆತ್ಮ ಈ ಕಬಿನಿ ಎರಡನೇ ಹಂತದ ಯೋಜನೆಯ ಮೇಲೆಯೇ ಇತ್ತು. ಅವರು ಬದುಕಿರುವ ಕೊನೆಯ ದಿನಗಳವರೆಗೂ ಒಂದು ಮಾತನ್ನಾಡುತ್ತಿದ್ದರು. ಅದೇನೆಂದರೆ ಕಬಿನಿ ಎರಡನೇ ಹಂತದ ಯೋಜನೆ ಪೂರ್ಣಗೊಂಡ ಮೇಲೆ, ಈ ಯೋಜನೆಯ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯಲ್ಲಿ ಕಂಡುಬರುವ ಎಲ್ಲಾ ಅಚ್ಚನೆಯ ಹಸಿರ ಬೆಳೆರಾಶಿಯನ್ನು ನನ್ನ ಕಣ್ಣಾರೆ ಕಂಡು, ಅದರ ಮಾರನೇ ದಿನವೇ ಸಾಯುತ್ತೇನೆ. ಆದರೆ ಅದುವರೆಗೂ ನನ್ನ ಪ್ರಾಣದ ಉಸಿರನ್ನು ಈ ಯೋಜನೆಯ ಹಸಿರಿನಲ್ಲೇ ಗಟ್ಟಿಯಾಗಿ ಅಡಗಿಸಿಕೊಂಡಿರುತ್ತೇನೆ". ಎಂಬ ಖಚಿತವಾದ ಸಂಕಲ್ಪಬದ್ಧ ಮಾತುಗಳನ್ನಾಡುತ್ತಿದ್ದರು.

ಪ್ರಾರಂಭದಿಂದಲೂ ನೀರಾವರಿಯಂಥ ಆದ್ಯತಾ ಕ್ಷೇತ್ರಕ್ಕೆ ಹೆಚ್ಚಿನ ಒತ್ತುಕೊಟ್ಟು ಸರ್ಕಾರದ ಗಮನ ಸೆಳೆದರು ಹಾಗೂ ದೇಶದ ಆರ್ಥಿಕ ಸ್ವಾವಲಂಬನೆಗೆ ಗ್ರಾಮೀಣ ಜನರ ಕೊಡುಗೆಯನ್ನು ಸ್ಮರಿಸಿಕೊಂಡರು. ಗ್ರಾಮೀಣ ಜನರ ಕೃಷಿ ಚಟುವಟಿಕೆಗಳಿಗೆ ಬೇಕಾಗಿರುವ ಮೂಲಭೂತ ನೀರಾವರಿ ಸೌಲಭ್ಯಗಳನ್ನು ಒದಗಿಸಿ, ಆ ಮೂಲಕ ಅವರ ಜೀವನ ವಿಧಾನವನ್ನು ಹಸನು ಮಾಡುವ ಸಲುವಾಗಿ ರಾಚಯ್ಯನವರು ತಮ್ಮ ರಾಜಕೀಯ ಜೀವನದ್ದುದಕ್ಕೂ ನೀರಾವರಿ ಪರವಾದ ದನಿ ಎತ್ತಿ ಅನೇಕ ಶಾಶ್ವತ ಯೋಜನೆಗಳನ್ನು ಜಾರಿಗೆ ತಂದಿದ್ದಾರೆ.

1955ರ ಸಂದರ್ಭದಲ್ಲಿ ಮುಖ್ಯ ಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರು ಚಾಮರಾಜನಗರ ತಾಲ್ಲೂಕಿಗೆ ಭೇಟಿ ನೀಡಿದ್ದರು. ಮುಖ್ಯಮಂತ್ರಿಗಳು ಭೇಟಿ ನೀಡಿದ್ದ ಸಂದರ್ಭದಲ್ಲೇ ತಾಲ್ಲೂಕಿನಾದ್ಯಂತ ಭೀಕರ ಬರಗಾಲ ತಲೆದೋರಿ ಜನಸಾಮಾನ್ಯರ ಸ್ಥಿತಿ ತುಂಬಾ ಗಂಭೀರವಾಗಿತ್ತು. ಎಲ್ಲಿ ನೋಡಿದರೂ, ಬೇಸಿಗೆಯ ಬಿಸಿಲು, ಕುಡಿಯಲು ನೀರಿಲ್ಲ ತಿನ್ನಲು ಆಹಾರವಿಲ್ಲ ದುಡಿಯಲು ಕೂಲಿ ಇಲ್ಲ. ಬೇಸಾಯ ಮಾಡಲೆಂದರೆ ಮಳೆಯಿಲ್ಲ ಇಂಥ ಚಿತ್ರಣ ತಾಲ್ಲೂಕಿನ ಸುತ್ತಲೂ ವ್ಯಾಪಿಸಿತ್ತು. ಈ ಸೂಕ್ಷ್ಮಗಳನ್ನು ತಿಳಿದ ರಾಚಯ್ಯನವರು ಇಲ್ಲಿಯ ಸ್ಥಿತಿಗತಿಯನ್ನು ಬಹಳ ವಿವರಣಾತ್ಮಕವಾಗಿ ಅನಾವರಣ ಮಾಡುತ್ತ........ "ನೋಡಿ ಸಾರ್, ಇಲ್ಲಿ ಸುವರ್ಣಾವತಿಗೆ ಉಪನದಿಯಾಗಿ ಚಿಕ್ಕಹೊಳೆ ಹರಿಯುತ್ತಿದೆ. ಇದಕ್ಕೊಂದು ಅಣೆಕಟ್ಟನ್ನು ಕಟ್ಟಿಸಿದರೆ ಈ ಭಾಗದ ಸಾವಿರಾರು ಎಕರೆ ಭೂ ಪ್ರದೇಶಕ್ಕೆ ನೀರನ್ನು ಪೂರೈಸಬಹುದು. ಆದರೆ ಪ್ರಸ್ತುತ ಸ್ಥಿತಿ ದುರ್ಬಲವಾಗಿದ್ದು ತಾಲ್ಲೂಕಿನಾದ್ಯಂತ ಬರಗಾಲದ ಪಿಡುಗು ಘೋರವಾಗಿರುವುದರಿಂದ ಅಣೆಕಟ್ಟನ್ನು ಕಟ್ಟುವುದಕ್ಕೆ ಮೊದಲು ಎಡದಂಡೆ ಮತ್ತು ಬಲದಂಡೆ ನಾಲೆಗಳ ಕಾಮಗಾರಿಯನ್ನು ಪ್ರಾರಂಭಿಸಿದರೆ ಒಳ್ಳೆಯದು. ಏಕೆಂದರೆ ಹೊಟ್ಟೆಗಿಟ್ಟಿಲ್ಲದೆ ಹಸಿವಿನಿಂದ ಬಳಲುತ್ತಿರುವ ಜನರ ಜೀವನವನ್ನು ಈ ಸಂದರ್ಭದಲ್ಲಿ ಸುಧಾರಿಸಿದಂತಾಗುತ್ತಿದೆ. ಅಲ್ಲದೆ ಕಾಲುವೆಗಳ ನಿರ್ಮಾಣವು ಸಹ ಆಗುತ್ತಿದೆ". ಎಂಬ ಬರಪರಿಸ್ಥಿತಿಯ ನಿವಾರಣಾ ಕಾರ್ಯ ಕ್ರಮದ ವಿವರವನ್ನು ಅವರು ಹೇಳಿದರು. ರಾಚಯ್ಯನವರ ಈ ಗ್ರಾಮೀಣ ಪರ ಮನ ದಿಂಗಿತವನ್ನು ಅರ್ಥ ಮಾಡಿಕೊಂಡ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರು ತಮ್ಮ ಪೂರ್ಣಪ್ರಮಾಣದ ಒಪ್ಪಿಗೆಯನ್ನು ಸೂಚಿಸಿದರು. ಇದರಿಂದ ಚಿಕ್ಕಹೊಳೆ, ಜಲಾಶಯದ ಕಾಮಗಾರಿ ಕೆಲಸ ಪ್ರಾರಂಭವಾಗಿ ಬಡಜನರ ಬರಗಾಲದ ಹಸಿವಿನ ನೋವು ಕಡಿಮೆಯಾಯಿತು.

ರಾಚಯ್ಯನವರ ದೂರದೃಷ್ಟಿಯ ಫಲದಿಂದಾಗಿ ತಾಲ್ಲೂಕಿನ ಬೇಸಾಯ ಮತ್ತು ಕುಡಿಯುವ ನೀರಿನ ಪೂರೈಕೆಯ ಉದ್ದೇಶದಿಂದ 1960ರ ದಶಕದಲ್ಲಿ ಅಸ್ತಿತ್ವಕ್ಕೆ ಬಂದ ನೀರಾವರಿ ಕೇಂದ್ರಗಳೆ ಸುವರ್ಣಾವತಿ ಮತ್ತು ಚಿಕ್ಕ ಹೊಳೆ ಜಲಾಶಯ. ಇವು ರಾಚಯ್ಯನವರ ನೀರಾವರಿಯ "ಪ್ರನಾಳ ಶಿಶುಗಳು" ಎಂದರೆ ಅತಿಶಯೋಕ್ತಿಯೇನಲ್ಲ. ಅಂದಿನ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು ನೀಡಿದ ಹಣಕಾಸಿನ ನೆರರಿನಿಂದ ಈ ಎರಡು ಯೋಜನೆಗಳು ಅಸ್ತಿತ್ವಕ್ಕೆ ಬಂದವಾದರೂ, ವೀರೇಂದ್ರ ಪಾಟೀಲರ ಕಾಲದಲ್ಲಿ ಇವು ಪೂರ್ಣಗೊಂಡವು. ಈ ಎರಡು ಜಲಾಶಯಗಳಲ್ಲಿ ಸುವರ್ಣಾವತಿ ದೊಡ್ಡದಾಗಿದ್ದು ಇದು ಸುಮಾರು 2580 ಹೆಕ್ಟೇರ್ ಭೂ ಪ್ರದೇಶದ ಬೇಸಾಯಕ್ಕೆ

ವಿದ್ಯಾರ್ಥಿನಿಲಯದ ಕಟ್ಟಡ ಇಲ್ಲಿ ನಿರ್ಮಾಣರಾದರೆ ಅದು ನೂರಾರು ಜನ ದಲಿತ ವಿದ್ಯಾರ್ಥಿಗಳಿಗೆ ವಿದ್ವತ್ತಿನ ಕೇಂದ್ರವಾಗುತ್ತದೆ. ಆದ್ದರಿಂದ ತಾವು ಈ ಒಂದು ಮಹತ್ಕಾರ್ಯವನ್ನು ಮನಸಾರೆ ಒಪ್ಪಿ ಮಾಡಿಕೊಡಬೇಕೆಂದು ಬಿನ್ನಹ ಮಾಡಿದರು. ಮುಖ್ಯಮಂತ್ರಿಗಳಾದ ಹನುಮಂತಯ್ಯನವರು ರಾಚಯ್ಯನವರ ಕೋರಿಕೆಯನ್ನು ನೆರವೇರಿಸಿದರು. ಅದರಂತೆ ಮುಂದಿನ ವರ್ಷವೇ ಆ ಸ್ಥಳದಲ್ಲಿ ಸಿದ್ಧಾರ್ಥ ವಿದ್ಯಾರ್ಥಿ ನಿಲಯವೊಂದು ನಿರ್ಮಾಣವಾಗಿ ಅದು ದಲಿತ ಮಕ್ಕಳ ಜ್ಞಾನಕೇಂದ್ರವಾಗಿ ತಲೆ ಎತ್ತಿತ್ತು. ಒಟ್ಟಿನಲ್ಲಿ ಶಾಲೆ ಕಾಲೇಜು ಮತ್ತು ವಿದ್ಯಾರ್ಥಿನಿಲಯಗಳನ್ನು ನಿರ್ಮಿಸುವುದರ ಮೂಲಕ ಗ್ರಾಮೀಣ ಪ್ರದೇಶದ ಮಕ್ಕಳ ಶೈಕ್ಷಣಿಕ ಪ್ರಗತಿಗೆ ರಾಚಯ್ಯನವರ ಕೊಡುಗೆ ಅಸದಳ.

ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರು ಅದೇ ವೇಳೆ ಜನರ ವಾಸ್ತವ ಬದುಕನ್ನು ನೇರವಾಗಿ ಪರೀಕ್ಷಿಸುವ ಉದ್ದೇಶದಿಂದ ಕರ್ನಾಟಕದಾದ್ಯಂತ ಪ್ರವಾಸ ಕಾರ್ಯಕೈಗೊಂಡು ಮೈಸೂರಿನ ಎಲ್ಲಾ ತಾಲ್ಲೂಕುಗಳನ್ನು ಭೇಟಿ ಮಾಡಿ ಕೊನೆಗೆ ರಾಚಯ್ಯನವರ ಯಳಂದೂರು ಕ್ಷೇತ್ರಕ್ಕೆ ಆಗಮಿಸಿದರು. ಮುಖ್ಯಮಂತ್ರಿಗಳ ಆಗಮನವನ್ನೆ ಕಾಯುತ್ತಿದ್ದ ರಾಚಯ್ಯನವರು ಅವರನ್ನು ತುಂಬಿದ ಜನ ಸಮೂಹದ ನಡುವೆ ಸಕಲ ಮರ್ಯಾದೆಗಳಿಂದ ಆತ್ಮೀಯವಾಗಿ ಸ್ವಾಗತಿಸಿದರು. ಈ ಸಮಯದಲ್ಲಿ ಶಾಸಕ ರಾಚಯ್ಯನವರು ಮುಖ್ಯಮಂತ್ರಿಗಳಿಗೆ ಯಳಂದೂರಿನ ಕೆಲವು ಪ್ರಮುಖ ಸ್ಥಳಗಳನ್ನು ತೋರಿಸಿ ಅಲ್ಲಿಯ ಅನೇಕ ಸಮಸ್ಯೆಗಳನ್ನು ವಿವರಿಸುತ್ತಿದಂತೆ..... ಯಳಂದೂರಿನ ಮಧ್ಯ ಭಾಗದಲ್ಲಿ ಹರಿದುಹೋಗುತ್ತಿದ್ದ ಸುವರ್ಣಾವತಿ ಹೊಳೆಯನ್ನು ಬಹಳ ಪರಿಶ್ರಮದಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾಯ್ದು ಹೋಗುತ್ತಿದ್ದ ಜನ ಸಮೂಹವನ್ನು ತೋರಿಸಿದರು. ಅಲ್ಲದೇ "ನೋಡಿ ಸರ್, ಈ ಜನರ ಪರಿಸ್ಥಿತಿ ಎಷ್ಟು ಚಿಂತಾಜನಕವಾಗಿದೆ. ಮಳೆಗಾಲದಲ್ಲಂತೂ ಇವರ ಜೀವನ ಶೋಚನೀಯ; ಮದುವೆ ಒಸಗೆಯಂತಹ ಸಂದರ್ಭಗಳಲ್ಲಿ ಹೆಣ್ಣು ಆಕಡೆ, ಗಂಡು ಈ ಕಡೆ ಉಳಿದುಕೊಂಡು ಎಷ್ಟೋ ಮದುವೆಗಳು ನಿಂತು ಹೋಗಿರುವ ನಿದರ್ಶನಗಳು ಇಲ್ಲಿವೆ". ಆದ್ದರಿಂದ ಈ ಎರಡು ಕಡೆಯ ಜನರು ಎಲ್ಲಾ ಕಾಲಗಳಲ್ಲಿಯೂ ಸಲೀಸಾಗಿ ಓಡಾಡಲು ಒಂದು ಸೇತುವೆಯನ್ನು ಕಟ್ಟಿಸಿಕೊಡಿ ಎಂದು ಮುಖ್ಯಮಂತ್ರಿಯವರಲ್ಲಿ ಮನವಿ ಮಾಡಿಕೊಂಡರು. ಅಲ್ಲಿಯ ಜನರ ಪರಿಸ್ಥಿತಿಯನ್ನು ಸ್ವತಃ ತಾವೆ ತಮ್ಮ ಕಣ್ಣಾರೆ ಕಂಡ ಸಹೃದಯಿ ಕೆಂಗಲ್ ಹನುಮಂತಯ್ಯನವರು ತಮ್ಮ ಆಪ್ತ ಕಾರ್ಯದರ್ಶಿಗೆ ಹೇಳಿ ಸ್ಥಳದಲ್ಲೇ ಸೇತುವೇ ಮಂಜುರಾತಿಗೆ ಆದೇಶಿಸಿದರು. ಮಾರನೆಯ ವರ್ಷವೇ ಸೇತುವೆ ನಿರ್ಮಾಣವಾಯಿತು. ಹೀಗೆ ರಾಚಯ್ಯನವರು ತಮ್ಮ ಕ್ಷೇತ್ರದ ಕೆಲಸ ಕಾರ್ಯಗಳನ್ನು ಮಾಡುವಾಗ ಮುಂಜಾಗರೂಕತೆಯ ಜಾಣತನದಿಂದ ತಮ್ಮೆಲ್ಲ ಬುದ್ಧಿವಂತಿಕೆಯನ್ನು ಉಪಯೋಗಿಸಿ, ಅದನ್ನು ಕಾರ್ಯರೂಪಕ್ಕೆ ತರುತ್ತಿದ್ದರು.

ಚಾಮರಾಜನಗರ ತಾಲ್ಲೂಕು ಬೇರೆ ಪ್ರದೇಶಗಳಂತೆಯೇ ಮಳೆಯನ್ನೆ ನಂಬಿ ಬೇಸಾಯ ನಡೆಸುವ ರೈತಾಪಿ ಜನರಿರುವ ಪ್ರದೇಶ, ಅದರಲ್ಲೂ ಮುಖ್ಯವಾಗಿ ರೇಷ್ಮೆ ಕೃಷಿ ಈ ಭಾಗದ ಜೀವನಾಡಿ, ಇಂಥ ಬರಡು ಪ್ರದೇಶದಿಂದ ಚುನಾಯಿತರಾದ ರಾಚಯ್ಯನವರು

ಅದು ಸರ್ಕಾರದ ಅನುಮೋದನೆಗೆ ಹೋಯಿತು. ಅಂತಹ ಸಂದರ್ಭದಲ್ಲಿ ರಾಚಯ್ಯನವರು ಸಂಬಂಧಪಟ್ಟ, ಅಧಿಕಾರಿಗಳ ಜೊತೆ ಚರ್ಚಿಸಿ ಬೇಗ ಮಂಜೂರು ಮಾಡಿಸಿದರು. ಆದರೆ ಮಂಜೂರಾಗಿ ಎರಡು ವರ್ಷಗಳಾಗಿದ್ದರೂ, ಪ್ರೌಢಶಾಲೆ ಪ್ರಾರಂಭವಾಗಿರಲಿಲ್ಲ. ಇದರಿಂದ ಬೇಸರಗೊಂಡ ರಾಚಯ್ಯನವರು ಖುದ್ದಾಗಿ ಬಂದು ಮಾರ್ಗಸೂಚನೆಗಳನ್ನು ಕೊಟ್ಟು ಪ್ರೌಢಶಾಲೆಯನ್ನು ತೆರೆಸಿದರು. ಕೇಂದ್ರ ಸರ್ಕಾರದಿಂದ ಪ್ರತಿಯೊಂದು ಜಿಲ್ಲೆಯಲ್ಲಿಯೂ ಒಂದೊಂದು ನವೋದಯ ಶಾಲೆ ಪ್ರಾರಂಭವಾಗುತ್ತಿತ್ತು. ಇದನ್ನು ಗಮನಿಸಿದ ಇವರು ಬೆಂಗಳೂರಿನಲ್ಲೇ ಇದ್ದು ದೆಹಲಿಯ ತನಕ ಪತ್ರ ವ್ಯವಹಾರ ಮಾಡಿ ಮೈಸೂರು ಜಿಲ್ಲೆಗೆ ಸೇರಬೇಕಾದ "ನವೋದಯ ಶಾಲೆಯನ್ನು" ಚಾಮರಾಜನಗರ ತಾಲ್ಲೂಕಿನ ಹೊಂಡರ ಬಾಳುವಿನಲ್ಲಿ ಸ್ಥಾಪಿಸಲು ಯೋಚಿಸಿದರು. ಅದಕ್ಕಾಗಿ ಬೆಂಗಳೂರಿನಿಂದ ಇಬ್ಬರು ಅಧಿಕಾರಿಗಳನ್ನು ಚಾಮರಾಜನಗರಕ್ಕೆ ಹೋಗಿ, ಕೆ.ಸಿ. ರಂಗಯ್ಯನವರನ್ನು ಭೇಟಿ ಮಾಡಿ ಅವರು ಶಾಲೆಯ ಕಟ್ಟಡಕ್ಕೆ ನಿವೇಶನ ಕೊಡುತ್ತಾರೆಂದು ಕಳುಹಿಸಿದರು. ಆಗ ಕೆ.ಸಿ. ರಂಗಯ್ಯನವರು ರಾಚಯ್ಯನವರ ಆದೇಶದಂತೆ ಹೊಂಡರ ಬಾಳುವಿನಲ್ಲಿ ರೈತರಿಗೆ ಕೊಟ್ಟಿದ್ದ 'ದರ್‌ಖಾಸ್ತ್' ಜಮೀನನ್ನು ತೋರಿಸಿ ಸ್ಥಳ ಪರೀಕ್ಷೆ ಮಾಡಿಸಿದರು. ಮಾರನೆಯ ವರ್ಷದಲ್ಲೇ ಭವ್ಯ ಕಟ್ಟಡಗಳು ಬೆಳಿಗಿರಿರಂಗನ ಬೆಟ್ಟದ ಮಾರ್ಗದಲ್ಲಿ ಪ್ರಕೃತಿ ಸೌಂದರ್ಯದ ಮಡಿಲಲ್ಲಿ ತಲೆಎತ್ತಿದ್ದವು. ಹೀಗೆ ಕೇಂದ್ರ ಸರ್ಕಾರದ ಶಿಕ್ಷಣಸಂಸ್ಥೆಯೊಂದು ಚಾಮರಾಜನಗರ ತಾಲ್ಲೂಕಿನಲ್ಲಿಯೇ ಪ್ರಾರಂಭವಾಗಿ ಅದು ಅಕ್ಕಪಕ್ಕದ ತಾಲ್ಲೂಕಿನ ನೂರಾರು ಜನ ಪ್ರತಿಭಾವಂತ ಮಕ್ಕಳಿಗೆ ಆಶ್ರಯತಾಣವಾದುದು ಹೆಮ್ಮೆಯ ವಿಷಯ.

ಶಾಲೆ ಕಾಲೇಜು ಮತ್ತು ವಿದ್ಯಾರ್ಥಿನಿಲಯಗಳ ಸೌಲಭ್ಯಗಳು ಹೆಚ್ಚಾದಂತೆ ತಾಲ್ಲೂಕಿನ ವಿದ್ಯಾವಂತರ ಸಂಖ್ಯೆ ಅಧಿಕಗೊಂಡಿತ್ತು. ಇವರ ಮುಂದಿನ ವ್ಯಾಸಂಗದ ಬಗ್ಗೆ ಚಿಂತಿಸಿದ ರಾಚಯ್ಯನವರು ಕೇವಲ ಪದವಿ ಕಾಲೇಜುಗಳಿಂದಲೇ ಪ್ರಯೋಜನವಿಲ್ಲ ಅದಕ್ಕಾಗಿ ಒಂದು ತಾಂತ್ರಿಕ ಕಾಲೇಜೊಂದನ್ನು ತೆರೆಯಬೇಕೆಂಬ ಕನಸನ್ನು ಬಹಳ ವರ್ಷಗಳ ಹಿಂದೆಯೇ ಕಂಡಿದ್ದರು. ರಾಮಕೃಷ್ಣಹೆಗ್ಡೆಯವರು ಮುಖ್ಯ ಮಂತ್ರಿಯಾಗಿದ್ದಾಗ, ಅದನ್ನು ಸ್ಪಷ್ಟವಾಗಿ ಅವರಿಗೆ ವಿವರಿಸಿ ಚಾಮರಾಜನಗರದಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜೊಂದನ್ನು ಮಂಜೂರು ಮಾಡಿಸಿದರು. ಇದರಿಂದ ಸಾವಿರಾರು ಜನ ವಿದ್ಯಾರ್ಥಿಗಳು ತಾಂತ್ರಿಕ ಶಿಕ್ಷಣ ಪಡೆದು ತಮ್ಮ ಮುಂದಿನ ಭವಿಷ್ಯವನ್ನು ರೂಪಿಸಿಕೊಳ್ಳುವಲ್ಲಿ ಸಾಧ್ಯವಾಯಿತು.

1954ರ ಸಂದರ್ಭದಲ್ಲಿ ಅಂದಿನ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರು ಮೈಸೂರು ಜಿಲ್ಲೆಯ ಕೆಲವು ತಾಲ್ಲೂಕುಗಳಿಗೆ ವಿಶೇಷ ಭೇಟಿ ನೀಡುವ ಸಲುವಾಗಿ ಮೈಸೂರಿನ ಸರ್ಕಾರಿ ಅತಿಥಿ ಗೃಹದಲ್ಲಿ ಬಂದು ತಂಗಿದ್ದರು. ಅದೇ ಸಂದರ್ಭದಲ್ಲಿ ರಾಚಯ್ಯನವರು ಮಾನ್ಯ ಮುಖ್ಯಮಂತ್ರಿಗಳ ಜೊತೆಗಿದ್ದು ಅವರನ್ನು ಕರೆದುಕೊಂಡು ಬಂದು ಈಗಿನ ಅಶೋಕಪುರಂನ ಸಿದ್ಧಾರ್ಥ ಶಾಲೆಯ ಆವರಣದ ಎತ್ತರವಾದ ಪ್ರದೇಶದಲ್ಲಿ ನಿಂತು ಕೆಲವು ದೂರದ ದೃಶ್ಯಗಳನ್ನು ವೀಕ್ಷಿಸುತ್ತಿದ್ದರು. ಈ ಸಮಯದಲ್ಲಿ ರಾಚಯ್ಯನವರು ಮುಖ್ಯಮಂತ್ರಿಗಳಿಗೆ ದೂರದಲ್ಲಿ ಕಾಣುತ್ತಿದ್ದ ಲಲಿತಮಹಲ್ ಕಟ್ಟಡವನ್ನು ತೋರಿಸಿ; ಆ ಲಲಿತ ಮಹಲ್‌ನಂಥ ಒಂದು ಸುಂದರ

ವರದಕ್ಷಿಣೆ, ಹಿಂಸೆ, ಅತ್ಯಾಚಾರ, ಶೋಷಣೆ, ದೌರ್ಜನ್ಯಗಳನ್ನು ಸಂಪೂರ್ಣವಾಗಿ ಕಿತ್ತೊಗೆಯಬೇಕಾದರೆ ಮೊದಲು ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡಬೇಕೆಂದು ಮನಗಂಡ ರಾಚಯ್ಯನವರು ಸ್ತ್ರೀ ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಟ್ಟರು. ಅದಕ್ಕಾಗಿ ಚಾಮರಾಜನಗರದಲ್ಲಿ ಎರಡು ಎಕರೆ ಹತ್ತು ಗುಂಟೆ ಜಮೀನನ್ನು ಖರೀದಿಗೆ ತೆಗೆದುಕೊಂಡರು. ಅದರಲ್ಲಿ ಒಂದು ಎಕರೆ ಹತ್ತು ಗುಂಟೆ ಪ್ರದೇಶವನ್ನು ಹೆಣ್ಣುಮಕ್ಕಳ ವಿದ್ಯಾರ್ಥಿನಿಲಯದ ಕಟ್ಟಡಕ್ಕೆ ಉಪಯೋಗಿಸಿಕೊಂಡು ಉಳಿದ ಒಂದು ಎಕರೆ ಜಮೀನಿಗೆ ವಿದ್ಯಾರ್ಥಿನಿಲಯದ ಕಟ್ಟಡ ಸೇರಿದಂತೆ ಕಾಂಪೌಂಡು ಹಾಕಿಸಿ, ಸುರಕ್ಷಿತವಾಗಿಡಿಸಿದರು.

ಚಾಮರಾಜನಗರ ಭಾಗದ ವಿದ್ಯಾವಂತಹ ಭವಿಷ್ಯಕ್ಕಾಗಿ ಯಾವುದಾದರೊಂದು ಶಿಕ್ಷಣ ತರಬೇತಿ ಕೇಂದ್ರವನ್ನು ತೆರೆಯಬೇಕೆಂಬುದು ರಾಚಯ್ಯನವರ ದೂರದೃಷ್ಟಿಯಾಗಿತ್ತು. ಸಮಯಕ್ಕೆ ಕಾಯುತ್ತ ಸರ್ಕಾರಕ್ಕೆ ಹತ್ತಾರು ಬಾರಿ ಪತ್ರ ಬರೆದು ಒತ್ತಡ ತಂದಿದ್ದರು. ಆದರೆ ಅದಕ್ಕೆ 1985ರಲ್ಲಿ ಸರ್ಕಾರದ ಅನುಮೋದನೆ ದೊರೆಯಿತು. ಅದು ಇಂದು ಶ್ರೀ ರಾಮ ಚಂದ್ರವಿದ್ಯಾಸಂಸ್ಥೆಯಾಗಿ ಅಸ್ತಿತ್ವಕ್ಕೆ ಬಂದಿದೆ. ಮೊದಲೆರಡು ವರ್ಷಗಳಲ್ಲಿ ಈ ಶಿಕ್ಷಕರ ತರಬೇತಿ ಕೇಂದ್ರವನ್ನು ಬಹಳ ಸಮಸ್ಯೆಗಳೊಂದಿಗೆ ಖಾಸಗಿ ಕೊಠಡಿಯಲ್ಲಿ ನಡೆಸಲಾಗಿತ್ತು. ನಂತರ ಉಳಿದಿದ್ದ ಒಂದು ಎಕರೆ ಇಪ್ಪತ್ತು ಗುಂಟೆ ಆವರಣದಲ್ಲಿ ಯಾವುದೇ ವಿಧವಾದ ಸರ್ಕಾರಿ ಹಣ ಕಾಸಿನ ನೆರವಿಲ್ಲದೆ ಸ್ವಂತ ಕಟ್ಟಡವೊಂದನ್ನು ನಿರ್ಮಾಣ ಮಾಡಿಸಿದರು. ಹೀಗೆ ಈ ಸಂಸ್ಥೆಯಿಂದ ತರಬೇತಿ ಪಡೆದು ಹೊರಬಂದ ಸಾವಿರಾರು ಬಡ ವಿದ್ಯಾರ್ಥಿಗಳು ಇಂದು ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಶ್ರೀರಾಮಚಂದ್ರ ವಿದ್ಯಾಸಂಸ್ಥೆ ಪ್ರಾರಂಭವಾದ ಮಾರನೆಯ ವರ್ಷವೇ ಸಂತೇಮರಹಳ್ಳಿಯಲ್ಲಿ ನಲವತ್ತು ಮಂದಿ ಪ್ರವೇಶ ಪಡೆಯುವ 'ದೈಹಿಕ ಶಿಕ್ಷಣ' ಕಾಲೇಜೊಂದನ್ನು ಮಂಜೂರು ಮಾಡಿಸಿಕೊಟ್ಟರು. ಇದರಿಂದ ವಿದ್ಯಾರ್ಥಿಗಳು ತಮ್ಮ ಜೀವನದಲ್ಲಿ ಶಿಸ್ತು, ಸಂಯಮ, ಸಂಘಟನಾ ಮನೋಭಾವ ಬೆಳೆಸಿಕೊಳ್ಳಲು ಸಹಾಯವಾಯಿತು. ಪದವಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ಅಧಿಕವಾದಂತೆ ಅವರಿಗೆ ಊಟ, ವಸತಿಗಳ ಸಮಸ್ಯೆ ಕಾಣಿಸಿಕೊಂಡಿತು. ಇದನ್ನು ಅರಿತ ಶೀಯುತರು ಅಂದಿನ ಮೈಸೂರು ವಿಶ್ವವಿದ್ಯಾನಿಲಯದ ಉಪ ಕುಲಪತಿಯಾಗಿದ್ದ ಕೆ.ಎಸ್. ಹೆಗ್ಡೆಯವರ ಜೊತೆ ವಿದ್ಯಾರ್ಥಿ ಸಮಸ್ಯೆಗಳ ಬಗ್ಗೆ ಮಾತನಾಡಿ ಇಡೀ ರಾಜ್ಯದಲ್ಲೇ ತಾಲ್ಲೂಕು ಮಟ್ಟದಲ್ಲಿ ಎಲ್ಲೂ ಇಲ್ಲದಂತಹ ವಿಶ್ವವಿದ್ಯಾನಿಲಯದ ಧನ ಸಹಾಯ ಪಡೆಯುವಂತಹ ಒಂದು ವಿದ್ಯಾರ್ಥಿನಿಲಯವನ್ನು ಮೊದಲಬಾರಿಗೆ ಮಂಜೂರು ಮಾಡಿಸಿಕೊಟ್ಟರು. ಇದರಿಂದಾಗಿ ಹೆಚ್ಚು ಮಂದಿ ದಲಿತ ಯುವಕರು ಪದವಿ ಪಡೆದು ಉನ್ನತ ವ್ಯಾಸಂಗಕ್ಕೆ ಹೋಗಲು ಸಾಧ್ಯವಾಯಿತು.

ತಾಲ್ಲೂಕು ಆಜುಬಾಜಿನ ಹಳ್ಳಿಗಳಿಂದ ಚಾಮರಾಜನಗರ ಪಟ್ಟಣಕ್ಕೆ ಬಂದು ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುವವರ ಸಂಖ್ಯೆ ಪ್ರತಿವರ್ಷ ಇಮ್ಮಡಿ ಗೊಳ್ಳುತ್ತ, ಹೋಗುತ್ತಿತ್ತು. ಅದೇ ವೇಳೆಗೆ ಕೆ.ಸಿ. ರಂಗಯ್ಯನವರು ಜಿಲ್ಲಾ ಪರಿಷತ್ ಸದಸ್ಯರಾಗಿದ್ದು ಚಾಮರಾಜನಗರಕ್ಕೆ ಒಂದು ಪ್ರೌಢಶಾಲೆ ಬೇಕೆಂಬ ಬೇಡಿಕೆಯನ್ನು ಮೈಸೂರು ಜಿಲ್ಲಾ ಪರಿಷತ್ ಸದನದ ಮುಂದಿಟ್ಟರು.

ಸಹ ಇರಲಿಲ್ಲ. ಮುಸಲ್ಮಾನ್ ಬೀದಿಯಲ್ಲಿದ್ದ ಈ ವಿದ್ಯಾರ್ಥಿ ನಿಲಯವನ್ನು ಉಪ್ಪಾರ ಬೀದಿಗೆ ವರ್ಗಾಯಿಸಿ, ಎರಡು ವರ್ಷಗಳ ಕಾಲ ಬಾಡಿಗೆ ಮನೆಯಲ್ಲಿಯೇ ನಡೆಸಲಾಗಿತ್ತು. ಇಂಥ ಸಂದರ್ಭದಲ್ಲಿ ರಾಚಯ್ಯನವರು ವಿದ್ಯಾರ್ಥಿಗಳಿಗಾಗುತ್ತಿದ್ದ ಸಮಸ್ಯೆಯನ್ನು ನಿವಾರಿಸುವ ಸಲುವಾಗಿ ಒಂದು ಸ್ವಂತ ಕಟ್ಟಡ ಕಟ್ಟಲು ತೀರ್ಮಾನಿಸಿ ರಾಮಸಮುದ್ರದ (ಏಳು ಮಂದಿ) ದೇವಾಂಗದವರ ಜಮೀನನ್ನು ಖರೀದಿಸಿ ಆಗಿನ ತಹಶೀಲ್ದಾರ್ ವೆಂಕಟಸ್ವಾಮಿಯವರ ನೆರವಿನಿಂದ ಮಂಜೂರು ಮಾಡಿಸಿದರು. ಇದು ತಾಲ್ಲೂಕಿನ ದಲಿತ ಮಕ್ಕಳ ಶಿಕ್ಷಣ ಅಭಿವೃದ್ಧಿಗೆ ನಾಂದಿಯಾಯಿತು.

ವಿದ್ಯಾರ್ಥಿನಿಲಯದ ಕೆಳಹಂತದ ಉದ್ಘಾಟನೆಯನ್ನು ರಾಚಯ್ಯನವರ ಅಧ್ಯಕ್ಷತೆಯಲ್ಲಿ ಅಂದಿನ ಕಂದಾಯ ಸಚಿವರಾಗಿದ್ದ ಕಡಿದಾಳ್ ಮಂಜಪ್ಪನವರ ಅಮೃತ ಹಸ್ತದಿಂದ ಮಾಡಿಸಲಾಯಿತು. ಇದೇ ಸಂದರ್ಭದಲ್ಲಿ ಮೇಲಿನ ಹಂತದ ಕಟ್ಟಡ ಕಟ್ಟಿಸಿಕೊಡಬೇಕೆಂಬ ಬೇಡಿಕೆಯ ಪತ್ರವನ್ನು ಸಲ್ಲಿಸಿದರು. ಸರಳ ಸೌಜನ್ಯ ಮೂರ್ತಿಗಳು, ಮಿತ ಭಾಷಿಗಳು ಹಾಗೂ ಸೇವಾ ಕೈಂಕರ್ಯರು ಆದ ಕಡಿದಾಳ್ ಮಂಜಪ್ಪನವರು ಸ್ಥಳದಲ್ಲೇ ಆದೇಶ ನೀಡಿದರು. ಇವರ ಈ ಸಹಾಯದಿಂದ ಮೇಲಿನ ಹಂತದ ಮಹಡಿಯ ಗೋಡೆಗಳ ನಿರ್ಮಾಣವಾಗಿ ವರ್ಷಗಟ್ಟಲೆ ನಿಂತಿದ್ದರೂ, ಮುಖ್ಯ ಮಂತ್ರಿಯಾಗಿದ್ದ ಬಿ.ಡಿ. ಜತ್ತಿಯವರು ಬೇರೆಯವರ ಸುಳ್ಳು ಮಾತಿಗೆ ಕಟ್ಟುಬಿದ್ದು, ಸೌಲಭ್ಯಗಳನ್ನು ಕಲ್ಪಿಸುವಲ್ಲಿ ತಡಮಾಡಿದರು. ಇದರಿಂದ ಬೇಸರಗೊಂಡ ರಾಚಯ್ಯನವರು ಶಾಸನಸಭೆಯಲ್ಲಿ ಇದರ ಬಗ್ಗೆ ಖಾರವಾಗಿ ಮಾತನಾಡಿ ಮೇಲುಹಂತ ಕಟ್ಟಡದ ಮಂಜೂರಾತಿಗೆ ಕಾರಣರಾದರು. ಅಷ್ಟರಲ್ಲಿ ಮೇಲಿನ ಹಂತಕ್ಕೆ ಹೆಂಚು ಹಾಕಿಸಿಕೊಳ್ಳಲು ಬಂದಿದ್ದ ಸರ್ಕಾರಿ ಆದೇಶಪತ್ರವನ್ನು ಹಿಡಿದು ಕೆ.ಸಿ. ರಂಗಯ್ಯನವರು ಇವರ ಹತ್ತಿರಕ್ಕೆ ಬಂದರು. ಆಗ ರಾಚಯ್ಯನವರು ಒಂದು ಅರ್ಜಿಯನ್ನು ಬರೆದು ಆದೇಶ ಪ್ರತಿಜೊತೆ ಸೇರಿಸಿ, ಆಗಿನ ಲೋಕೋಪಯೋಗಿ ಸಚಿವರಾಗಿದ್ದ ವೀರಣ್ಣ ಗೌಡರಿಗೆ ಕೊಡುವಂತೆ ತಿಳಿಸಿದರು. ಅರ್ಜಿಯನ್ನು ನೋಡಿದ ಸಚಿವರು ಹೆಂಚುಹಾಕುವುದಕ್ಕೆ ಬದಲಾಗಿ, ತಾರ್ಸಿಹಾಕಲು ಒಪ್ಪಿ ತಕ್ಷಣವೇ ತಾರ್ಸಿಕಟ್ಟಡಕ್ಕೆ ಬೇಕಾದ ಸಿಮೆಂಟ್ ಮತ್ತು ಕಬ್ಬಿಣ ಕೊಡುವುದಕ್ಕೆ ಆದೇಶ ನೀಡಿದರು. ಇದರಿಂದಾಗಿ ಮೇಲಿನ ಹಂತವೂ ಸಹ ನಿರ್ಮಾಣವಾಯಿತು. ಹೀಗೆ ಸೌಲಭ್ಯಗಳನ್ನು ಕೊಡುವಂಥ ಸಂದರ್ಭಗಳಲ್ಲಿ ಸರ್ಕಾರದ ಧೋರಣೆಯಲ್ಲಿ ಏನಾದರೂ ಬದಲಾವಣೆಗಳಾದರೆ ಅದನ್ನು ಒಂದು ಸವಾಲಾಗಿ ಸ್ವೀಕರಿಸಿ, ಸತತ ಪ್ರಯತ್ನದಲ್ಲಿ ಕಾರ್ಯ ಪ್ರವೃತ್ತರಾಗುತ್ತಿದ್ದರು.

ಚಾಮರಾಜನಗರ ತಾಲ್ಲೂಕಿನಲ್ಲಿ ವಿದ್ಯಾರ್ಥಿಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಗಣನೀಯವಾಗಿ ಹೆಚ್ಚಾಗುತ್ತಿದ್ದಂತೆ, ಪ್ರೌಢ ಶಿಕ್ಷಣ ಮುಗಿಸಿ ಪದವಿ ಪೂರ್ವ ಶಿಕ್ಷಣ ಬಯಸಿ ಬರುವ ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಾಯಿತು. ಪದವಿಪೂರ್ವ ವಿದ್ಯಾರ್ಥಿಗಳಿಗಾಗಿ ಒಂದು ವಿದ್ಯಾರ್ಥಿನಿಲಯದ ಅವಶ್ಯಕತೆ ಇತ್ತು. ಆಗ ಪ್ರೌಢಶಾಲಾ ಶಿಕ್ಷಣದ ವಿದ್ಯಾರ್ಥಿನಿಲಯದ ಹಿಂಭಾಗದಲ್ಲಿದ್ದ ಜಾಗದಲ್ಲಿಯೇ ವಿದ್ಯಾರ್ಥಿನಿಲಯವನ್ನು ನಿರ್ಮಾಣ ಮಾಡಲು ಸರ್ಕಾರದಿಂದ ಹಣ ಮಂಜೂರು ಮಾಡಿಸಿ, ಭೂ ಸೇನಾ ನಿಗಮದವರಿಗೆ ವಹಿಸಿದರು. ಇದರಿಂದ ಪದವಿಪೂರ್ವ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅನುಕೂಲವಾಯಿತು. ಸಮಾಜದಲ್ಲಿ ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿದ್ದ

1989ರಲ್ಲಿ ಮುಖ್ಯಮಂತ್ರಿ ಸ್ಥಾನಕ್ಕೆ ಲಾಬಿ ನಡೆಯುತ್ತಿದ್ದಾಗ ರಾಚಯ್ಯನವರ ಹೆಸರು ಪ್ರಾಧಾನವಾಗಿತ್ತು. ಬಹುತೇಕವಾಗಿ ಇವರು ಮುಖ್ಯಮಂತ್ರಿಯಾಗುವುದು ಖಚಿತವಾದಾಗ ಹೆಂಡದ ಲಾಬಿ ಕೈಚಳಕ ನಡೆಸಿ, ಆಸ್ಥಾನದಿಂದ ವಂಚಿಸಿದರು. ಈಗಲೂ ಆ ಕೊರಗು ರಾಚಯ್ಯನವರ ಮನದಲ್ಲಿ ಮನೆಮಾಡಿದೆ. ಆದರೆ ಇತ್ತೀಚಿನ ಸ್ಥಿತಿ ಹೇಗಿದೆ ಎಂದರೆ ಹೆಂಡದ ಜೊತೆ ಶಿಕ್ಷಣ ಲಾಬಿಯೂ ಕೈಜೋಡಿಸಿ ತಮಗೆ ಬೇಕಾದವರನ್ನು ಮುಖ್ಯ ಮಂತ್ರಿಯನ್ನಾಗಿ ಮಾಡಿಕೊಳ್ಳುವಂತಹದಾಗಿದೆ.

ಗ್ರಾಮೀಣ ಪ್ರದೇಶಗಳ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕಾಗಿ ಕರ್ನಾಟಕದಾದ್ಯಂತ ಅನೇಕ ಶಾಲಾ ಕಾಲೇಜುಗಳನ್ನು ವಿದ್ಯಾರ್ಥಿನಿಲಯಗಳನ್ನು ಮತ್ತು ವೃತ್ತಿ ಪರ ಶಿಕ್ಷಣ ಸಂಸ್ಥೆಗಳನ್ನು ತೆರೆದು ಒಳ್ಳೆಯ ಶೈಕ್ಷಣಿಕ ವಾತಾವರಣವನ್ನು ನಿರ್ಮಾಣಮಾಡಿದರು. ಇದರಿಂದ ಸಾವಿರಾರು ಜನ ಬಡವಿದ್ಯಾರ್ಥಿಗಳು ವಿದ್ಯಾವಂತರಾಗಿ, ವಿದ್ವತ್ ಪ್ರಪಂಚದ ಮಿನುಗು ತಾರೆಗಳಾಗಿ ಹೊರಬಂದರು. ಚಾಮರಾಜನಗದಲ್ಲಿ ಮೊದಲ ಬಾರಿಗೆ ಆದಿ ಕರ್ನಾಟಕ ಅಭಿವೃದ್ಧಿ ಸಂಘದ ಆಶ್ರಯದಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ತೆರೆಯಾಗಿತ್ತು. ಆದರೆ ಇದಕ್ಕೆ ಒಂದು ಪ್ರತ್ಯೇಕವಾದ ಕಟ್ಟಡ ಇರಲಿಲ್ಲ. ಶಾಲೆ ಮಾತ್ರ ಮುಸ್ಲಿಮ್ ಬೀದಿಯಲ್ಲಿತ್ತು. ಇಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಹೊತ್ತಿಗೆ ಸರಿಯಾದ ಊಟವಿಲ್ಲದೆ ಎಷ್ಟೋ ಬಾರಿ ಕಡ್ಲೇ ಕಾಯಿತಿಂದು ಶಾಲೆಗೆ ಹೋಗುವ ಪರಿಸ್ಥಿತಿ ಇತ್ತು. ಅಷ್ಟರಲ್ಲಿ ಆದಿ ಕರ್ನಾಟಕ ಅಭಿವೃದ್ಧಿ ಸಂಘದ ಆಗಿನ ಅಧ್ಯಕ್ಷರಾಗಿದ್ದ ಆರ್.ಎಂ. ಸಿದ್ದಪ್ಪನವರನ್ನು ಬದಲಾಯಿಸಿ, ಆ ಸ್ಥಾನಕ್ಕೆ ರಾಚಯ್ಯನವರನ್ನು ಆಯ್ಕೆ ಮಾಡಿದರು. ಇದೇ ಸಂದರ್ಭದಲ್ಲಿ ಕೆ.ಸಿ. ರಂಗಯ್ಯನವರು ನಿಲಯ ಪಾಲಕರಾಗಿ ನೇಮಕಗೊಂಡರು. ರಾಚಯ್ಯನವರು ಅಧ್ಯಕ್ಷರಾದ ಮೇಲೆ ವಿದ್ಯಾರ್ಥಿಗಳ, ವಿದ್ಯಾರ್ಥಿವೇತನ ತಿಂಗಳಿಗೆ ಎಂಟು ರೂಪಾಯಿಯಿಂದ ಹನ್ನೆರಡು ರೂಪಾಯಿಗಳಿಗೆ ಹೆಚ್ಚಾಯಿತು. ವಿದ್ಯಾರ್ಥಿಗಳ ಸಂಖ್ಯೆಯನ್ನು ವರ್ಷದಿಂದ ವರ್ಷಕ್ಕೆ 25 ರಿಂದ 50, 50 ರಿಂದ 120, 120 ರಿಂದ 209 ಸಂಖ್ಯೆಗೆ ಹೆಚ್ಚಿಸಿ, ಅನುದಾನ ಕೊಡಿಸಿಕೊಟ್ಟರು. ಈ ರೀತಿ ವಿದ್ಯಾರ್ಥಿ ವೇತನ ಹಂತ ಹಂತವಾಗಿ ಹೆಚ್ಚಾದುದು ಇಡೀ ರಾಜ್ಯದಲ್ಲೇ ಇಲ್ಲಿಯೇ ಮೊದಲು.

ರಾಚಯ್ಯನವರು ಮೊದಲಬಾರಿಗೆ ಸಚಿವರಾಗಿದ್ದಾಗ, ಅವರ ಆಪ್ತ ಕಾರ್ಯದರ್ಶಿ ಚಿಕ್ಕಯ್ಯನಿಗೆ "ಈ ದಿವಸವೇ ಶಿಕ್ಷಣ ಇಲಾಖೆಗೆ ಹೋಗಿ ಸರ್ಕಾರಿ ಆದೇಶದಂತೆ 209 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮಂಜೂರು ಮಾಡಿಸಿ ಕೊಂಡು ಬನ್ನಿ. ಇಲ್ಲದೆ ಇದ್ದರೆ ನೀವು ನನ್ನ ಆಪ್ತ ಕಾರ್ಯದರ್ಶಿ ಹುದ್ದೆಗೆ ಅನಲಾಯಕ್ಕು" ಎಂದು ಗದರಿಸಿದರು. ಚಿಕ್ಕಯ್ಯ ಮರುದಿನವೇ 209 ವಿದ್ಯಾರ್ಥಿಗಳಿಗೆ ಒಬ್ಬರಿಗೆ 120 ರೂಪಾಯಿಗಳಂತೆ ವಿದ್ಯಾರ್ಥಿ ವೇತನ ಮಂಜೂರು ಮಾಡಿಸಿಕೊಂಡು ಬಂದು ಸರ್ಕಾರಿ ಆದೇಶ ಪತ್ರವನ್ನು ಕೆ.ಸಿ. ರಂಗಯ್ಯನವರ ಕೈಯಲ್ಲಿ ತಂದುಕೊಟ್ಟರು. ಹಾಗೆಯೇ ವಿದ್ಯಾರ್ಥಿನಿಲಯ ಗಾರೆಗಚ್ಚುಗಳಿಲ್ಲದೆ ವಿದ್ಯಾರ್ಥಿಗಳು ತಮ್ಮ ಟ್ರಂಕುಗಳನ್ನು ಸೌದೆ ಸೀಳು ಇಟ್ಟು ಅದರ ಮೇಲೆ ಇಡುತ್ತಿದ್ದರು. ಕೆಲವರಿಗೆ ಈ ಟ್ರಂಕುಗಳೂ

ಈ ಪಾನನಿರೋಧದ ನಿರಂತರ ಹೋರಾಟ ಕರ್ನಾಟಕದ ಉದ್ದಗಲಕ್ಕೂ ಹರಡಿದರೂ, ಅದರ ಹೆಚ್ಚಿನ ಪರಿಣಾಮ ಆದದ್ದು ಆಗಿನ ಮೈಸೂರು ಜಿಲ್ಲೆಯ ಚಾಮರಾಜನಗರ, ಯಳಂದೂರು, ನಂಜನಗೂಡು ಕೊಳ್ಳೆಗಾಲ, ಟಿ. ನರಸೀಪುರ ಮತ್ತು ಗುಂಡ್ಲುಪೇಟೆ ತಾಲ್ಲೂಕುಗಳಲ್ಲಿ. ಈ ಭಾಗಗಳಲ್ಲಿಯೂ ಶೀಘ್ರದಲ್ಲಿ ತಡೆಗಟ್ಟುವುದಕ್ಕೆ ಆಗದೆ ಇದ್ದರೂ ಹಂತ, ಹಂತವಾಗಿ, ಅದನ್ನು ಸಂಪೂರ್ಣವಾಗಿ ನಿಷೇಧಿಸಿದರು. ಸ್ವಾತಂತ್ರ್ಯ ಹೋರಾಟದ ಮಹತ್ವ ಸಂದರ್ಭದಲ್ಲಿ ಸ್ವತಃ ನಿಜಲಿಂಗಪ್ಪನವರೇ ಚಿತ್ರದುರ್ಗ ಜಿಲ್ಲೆಯ ತುರುವನೂರಿನಲ್ಲಿ ಈಚಲು ಮರಗಳನ್ನು ಕತ್ತರಿಸಿ ಹೆಂಡದ ಗಡಿಗೆಗಳನ್ನು ಒಡೆದು ಹಾಕುವ ಸಾಮೂಹಿಕ ಸತ್ಯಾಗ್ರಹದಲ್ಲಿ ಮುಂದಾಳುಗಳಾಗಿ ವಿಜೃಂಭಿಸಿದರು. ಆದರೆ ಅವರೇ ಮುಖ್ಯ ಮಂತ್ರಿಗಳಾದಾಗ ಪಾನನಿರೋಧವನ್ನು ರದ್ದುಮಾಡುವ ಕ್ರಮ ಕೈಗೊಂಡಿದ್ದು, ಒಂದು ದೊಡ್ಡ ಐತಿಹಾಸಿಕ ವಿಪರ್ಯಾಸವಾಗಿ ಕಂಡು ಬಂದಿತು. ಇಂತಹದೊಂದು ಕ್ರಾಂತಿಕಾರಕ ಸಾಮಾಜಿಕ ಬದಲಾವಣೆಯ ಬಿಸಿಗಾಳಿ ನಾಡಿನಾದ್ಯಂತ ಬೀಸಿ ರಾಜ್ಯದ ಆಡಳಿತ ವ್ಯವಸ್ಥೆ ಕುಸಿದು ಬಿಕ್ಕಟ್ಟಿನ ವಾತಾವರಣ ನಿರ್ಮಾಣವಾಯಿತು. ಅಲ್ಲದೆ ಸ್ವತಃ ನಿಜಲಿಂಗಪ್ಪನವರ ಅಳಿಯನೊಬ್ಬನು ಕುಡಿತದ ಚಟಕ್ಕೆ ತುತ್ತಾಗಿದ್ದನು. ಇದನ್ನೆಲ್ಲ ಬಹಳ ಹತ್ತಿರದಿಂದ ಗಮನಿಸಿದ ನಿಜಲಿಂಗಪ್ಪನವರು ಕೊನೆಗೆ ಪಾನನಿರೋಧ ಕಾಯಿದೆಯನ್ನು ಜಾರಿಗೆ ತಂದರು. ಹೀಗೆ ರಾಚಯ್ಯನವರ ಸತತ ಪ್ರಯತ್ನದ ಪ್ರತಿಫಲವಾಗಿ ಕೊನೆಗೂ ಪಾನನಿರೋಧ ಕಾಯಿದೆ ಜಾರಿಗೆ ಬಂದಿತ್ತು. ಇದು ಇವರ ಕಾಲದಲ್ಲಾದ ಒಂದು ದೊಡ್ಡ ಸಾಮಾಜಿಕ ಪರಿವರ್ತನೆ. ಇದರಿಂದಾಗಿ ಕುಡಿತಕ್ಕೆ ಖರ್ಚು ಮಾಡುತ್ತಿದ್ದ ಹಣವನ್ನೆಲ್ಲ ಉಳಿತಾಯ ಮಾಡಿ, ಈ ಹಣದಿಂದ ಮನೆ ಕೋಣೆಗಳ ನವೀಕರಣ, ಉತ್ತಮ ಗುಣಮಟ್ಟದ ಮನೆ ಬಳಕೆಯ ವಸ್ತುಗಳನ್ನು ಖರೀದಿಸುವುದಕ್ಕೆ ಮತ್ತು ಮಕ್ಕಳ ವಿದ್ಯಾಭ್ಯಾಸಕ್ಕೆ ವಿನಿಯೋಗಿಸಿಕೊಳ್ಳಲು ಸಹಾಯವಾಯಿತು. ಹಾಗೆಯೇ ಜೀವನದಲ್ಲಿ ಶಿಸ್ತು, ಸಂಯಮಗಳನ್ನು ಕಾಯ್ದುಕೊಂಡು ಸಾಮಾಜಿಕ ಮೌಲ್ಯಗಳನ್ನು ಹೆಚ್ಚಿಸಿಕೊಂಡು, ತಮ್ಮ ಕುಟುಂಬದ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಲು ಸಾಧ್ಯವಾಯಿತು.

ದಲಿತರಲ್ಲಿ ವಂಶ ಪಾರಂಪರೆಯಾಗಿ ಬಂದಿದ್ದ ಈ ಕುಡಿತವನ್ನು ತೊಡೆದು ಹಾಕುವಂಥ ಸಂದರ್ಭದಲ್ಲಿ ತಮಗೆ ಎದುರಾದ ಸಮಸ್ಯೆ ಸವಾಲುಗಳನ್ನೆಲ್ಲ ದಿಟ್ಟತನದಿಂದ ಎದುರಿಸಿ ಮಾಡಿದಂತಹ ಹೋರಾಟ ಅವಿಸ್ಮರಣೀಯ. ಅಂದು ಕುಡಿತ ಚಟಕ್ಕೆ ಬಲಿಯಾಗಿದ್ದ ದಲಿತ ಜನಾಂಗದ ಕಣ್ಣೀರಿನಕರೆಯನ್ನು ಕೇಳುವವರು ಯಾರು ಇರಲಿಲ್ಲ. ಆದರೆ ಎಲ್ಲೋ, ಅಲ್ಲೊಬ್ಬ, ಇಲ್ಲೊಬ್ಬ, ಮೇಲ್ವರ್ಗದ ವ್ಯಕ್ತಿಗಳು ಕುಡಿತದ ವೆಸನಕ್ಕೆ ಬಲಿಯಾಗಿದ್ದರೆ, ಇಡೀ ಮೇಲ್ವರ್ಗದವರ ಸಮುದಾಯವೇ ಹಾಹಾಕಾರ ಪಡುತ್ತಿತ್ತು. ಕೆಳಜಾತಿಯಲ್ಲಿಯೇ ಹುಟ್ಟಿದವರು, ಕುಡಿತದ ಪರಿಣಾಮಗಳನ್ನು ಖಚಿತವಾಗಿ ತಿಳಿಯಬಲ್ಲರು. ಆದ್ದರಿಂದಲೇ ಮಹಾತ್ಮಗಾಂಧೀಜಿಯವರು. 'ನಾನು ಇನ್ನೊಮ್ಮೆ ಜನ್ಮ ಎತ್ತಿ ಬರುವುದಾದರೆ ದಲಿತ ಜನಾಂಗದಲ್ಲಿಯೇ ಹುಟ್ಟಿ ಬರುತ್ತೇನೆ' ಎಂದು ಹೇಳಿದರು. ಒಟ್ಟಿನಲ್ಲಿ ರಾಚಯ್ಯನವರ ಈ ಪಾನನಿರೋಧದ ಹಿನ್ನಲೆಯಲ್ಲಿ ಮಾಡಿದಂತಹ ನಿರಂತರ ಹೋರಾಟದ ಪರಿಣಾಮದಿಂದಾಗಿಯೇ ಕರ್ನಾಟಕದ ಹೆಂಡದ ದೊರೆಗಳ ಲಾಬಿ ಇವರ ರಾಜಕೀಯ ಜೀವನವನ್ನೇ ಏರುಪೇರು ಮಾಡಿತು ಎಂದರೆ ಯಾರು ನಂಬುವುದಿಲ್ಲ.

ಮದ್ಯ ಪಾನೀಯಗಳು, ದೊರೆಯುವಂತೆ ಮಾಡಬೇಕೆಂದು ಪ್ರಸ್ತಾಪ ಮಾಡಲಾರಂಭಿಸಿದರು. ಅವರು ಮುಂದೂಡುತ್ತಿದ್ದ ಕಾರಣಗಳು ಎರಡು: ಮೊದಲನೆಯದಾಗಿ ಕಳ್ಳಭಟ್ಟಿಯನ್ನು ನಿಲ್ಲಿಸುವುದು; ಎರಡನೆಯದಾಗಿ ಸರ್ಕಾರದ ಬೊಕ್ಕಸಕ್ಕೆ ಅಗತ್ಯವಾದ ಹಣವನ್ನು ತೆರಿಗೆ ರೂಪದಲ್ಲಿ ತುಂಬಿಕೊಳ್ಳುವುದು".

ಅಷ್ಟೊತ್ತಿಗಾಗಲೆ ಈ ಪಾನ ನಿರೋಧ ಚಳವಳಿಯ ಬಿಸಿ ನಾಡಿನಾದ್ಯಂತ ಹಬ್ಬಿದ್ದು, ಅನೇಕ ಸಮಾಜ ಸುಧಾರಕರು ಇದರ ಪರವಾಗಿದ್ದರು. ಯಶೋಧರ ದಾಸಪ್ಪನವರಂತಹ ಪ್ರಗತಿಪರ ಚಿಂತಕ ಪಾನನಿರೋಧವನ್ನು ಜಾರಿಗೆ ತರುವಲ್ಲಿ ಬಹಳ ಹಿಂದಿನಿಂದಲೂ ಹೋರಾಟವನ್ನು ಮಾಡಿಕೊಂಡು ಬಂದಿದ್ದರು. ಅಂತಹ ಸಂದರ್ಭದಲ್ಲಿ ರಾಚಯ್ಯ, ಪ್ರಭಾಕರ್, ಮಲ್ಲಿಕಾರ್ಜುನ ಸ್ವಾಮಿ ಮತ್ತು ಬಿ. ಬಸವಯ್ಯನವರು ಇವರ ಬೆಂಬಲಗರಾಗಿ ನಿಂತು ಅವರ ಜೊತೆ ಕೈಜೋಡಿಸಿದರು. ಆದರೆ ನಿಜಲಿಂಗಪ್ಪನವರ ಪರ ಹೆಚ್ಚಿನ ಶಾಸಕ, ಮಂತ್ರಿವರ್ಯರು ಮತ್ತು ಬಂಡವಾಳ ಶಾಹಿಗಳು ಇದ್ದುದರಿಂದ ಇಂತಹ ಕೂಗಾಟಕ್ಕೆ ಅವರು ಬಗ್ಗಲಿಲ್ಲ. ಇದರಿಂದಾಗಿ ನೊಂದುಸಿಡಿದೆದ್ದ ರಾಚಯ್ಯನವರು ತಮ್ಮ ಸಚಿವಸ್ಥಾನಕ್ಕೆ ರಾಜೀನಾಮೆ ನೀಡಿದರು. ಇವರಿಗಿಂತಲೂ ಯಶೋಧರ ದಾಸಪ್ಪನವರು ತಮ್ಮ ಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿ ಹೊರಬಂದು ರಾಚಯ್ಯನವರನ್ನು ಕರೆದು... ನೋಡಪ್ಪ ನಾನು ಬಹಳ ವರ್ಷಗಳಿಂದ ಮಹಾತ್ಮಗಾಂಧಿ ಮತ್ತು ಮೊರಾರ್ಜಿದೇಸಾಯಿ ಎಂಬ ರಾಷ್ಟ್ರ ನಾಯಕರ ಅನುಯಾಯಿಯಾಗಿ ಸೇವೆಸಲ್ಲಿಸಿಕೊಂಡು ಬಂದಿದ್ದೇನೆ. ನಾನು ಈ ಮಂತ್ರಿ ಮಂಡಲದಲ್ಲಿದ್ದುಕೊಂಡು ಏನು ಮಾಡಬೇಕು; ಹಾಗೆ ಮಾಡಿದರೆ ನನ್ನ ಜೀವನ ಇರುವ ತನಕ ನನಗೆ ಅಪಕೀರ್ತಿ ತಪ್ಪಿದ್ದಲ್ಲ; ಆದ್ದರಿಂದ ನಾನು ಈ ಮಂತ್ರಿಪದವಿಗೆ ರಾಜೀನಾಮೆ ಕೊಟ್ಟು ಹೋಗುತ್ತೇನೆ. ನೀನು ಮಾತ್ರ ರಾಜೀನಾಮೆ ಕೊಡಬೇಕು. ನೀನು ಇನ್ನೂ ಚಿಕ್ಕ ವಯಸ್ಸಿನವನು ಈಗತಾನೆ ಅಧಿಕಾರ ಪ್ರಾಪ್ತಿಯಾಗಿದೆ. ರಾಜಕೀಯದಲ್ಲಿ ನಿಮಗೆ ಒಳ್ಳೆಯ ಭವಿಷ್ಯವಿದೆ. ಅಧಿಕಾರದಲ್ಲಿದ್ದುಕೊಂಡು ಹೋರಾಟ ಮಾಡು ದಲಿತರು ಮತ್ತು ಹಿದುಳಿದವರಿಗೆ ನಿನ್ನಿಂದ ಮುಂದೆ ಇನ್ನೂ ಹೆಚ್ಚಿನ ಸೇವೆಯಾಗಬೇಕಾಗಿದೆ. ಹೆಂಡದ ಅಂಗಡಿ ನಿಮ್ಮ ಕೇರಿಗೆ ಬಂದರೆ ನೀನು ರಾಜೀನಾಮೆ ಕೊಡಬಹುದು; ಆದ್ದರಿಂದ ಈಗ ನೀನು ಕೊಟ್ಟಿರುವ ರಾಜೀನಾಮೆಯನ್ನು ಒತ್ತಾಯಿಸಬೇಡ ಎಂದು ಮಾತೃ ಪ್ರೇಮದಿಂದ ಉಪದೇಶ ಮಾಡಿದರು. ಆದರೆ ಅಷ್ಟರಲ್ಲೇ ನಿಜಲಿಂಗಪ್ಪನವರ ಸಚಿವ ಸಂಪುಟದ ಕೆಲವು ಹಿರಿಯ ನಾಯಕರು ರಾಚಯ್ಯನವರನ್ನು ಸಂಪುಟದಲ್ಲಿ ಉಳಿಸಿಕೊಳ್ಳಲು ಇವರ ವಿಧಾನ ಸಭಾಕ್ಷೇತ್ರದ ವ್ಯಾಪ್ತಿಗೆ ಬರುವ ಅಜುಬಾಜಿನ ತಾಲ್ಲೂಕುಗಳಲ್ಲಿ ಸಂಪೂರ್ಣ ಪಾನನಿರೋಧ ಕಾಯಿದೆ ಜಾರಿಗೆ ತರುವ ಒಂದು ನೂತನ ಸೂತ್ರವನ್ನು ಸಿದ್ಧ ಮಾಡಿದರು. ಅದರಂತೆ ಕ್ಷೇತ್ರಾದ್ಯಂತ ಪೂರ್ಣಪಾನನಿಷೇಧ ಜಾರಿಯಲ್ಲಿದ್ದಿತು. ಇದರಿಂದಾಗಿ ರಾಚಯ್ಯನವರು ಮಂತ್ರಿ ಮಂಡಲದಲ್ಲಿ ಉಳಿಯಬೇಕಾಗಿತ್ತು ಆದರೂ ತಮ್ಮ ಹೋರಾಟವನ್ನು ಈ ಪಾನನಿರೋಧ ಕಾಯಿದೆ ಸಂಪೂರ್ಣವಾಗಿ ಜಡಾರಿಗೆ ಬರುವವರೆಗೂ ಮುಂದು ವರೆಸಿಕೊಂಡು ಬಂದರು.

ಈ ಪ್ರತಿಯೊಂದು ಇಲಾಖೆಗಳನ್ನು ಅವರು ಪ್ರವೇಶ ಮಾಡಿದಂತಹ ಸಂದರ್ಭದಲ್ಲಿ ಅದಕ್ಕೆ ಸಂಬಂಧಪಟ್ಟ ನಿಯಮಾವಳಿಗಳನ್ನು ಈ ಹಿಂದೆ ಇಲಾಖೆಗಳಲ್ಲಿ ಜಾರಿಯಲ್ಲಿದ್ದ ಯೋಜನೆಗಳನ್ನು ಅಲ್ಲದೆ ಹೊರರಾಜ್ಯ ಮತ್ತು ರಾಷ್ಟ್ರಗಳಲ್ಲಿ ಇರುವಂತಹ ಕಾನೂನು ಮತ್ತು ಪ್ರಗತಿಗಳ ತಲಸ್ಪರ್ಶಿ ಅಧ್ಯಯನ ಮಾಡಿ ಅನಂತರ ತಮ್ಮ ಆಲೋಚನಾ ಕ್ರಮಕ್ಕೆ ಅನುಗುಣವಾಗಿ ಹೊಸ, ಹೊಸ, ತಂತ್ರ ವಿಧಾನಗಳನ್ನು ಅಳವಡಿಸಿ ಇಲಾಖೆಯನ್ನು ಅಭಿವೃದ್ಧಿಯ ಹಾದಿಯಲ್ಲಿ ಕೊಂಡೊಯ್ಯುತ್ತಿದ್ದರು. ಹೀಗೆ ಇವರು ವಹಿಸಿಕೊಂಡ ಪ್ರತಿಯೊಂದು ಖಾತೆಯಲ್ಲೂ ಅನೇಕ ಜನೋಪಯೋಗಿ ಶಾಶ್ವತ ಯೋಜನೆಗಳನ್ನು ಜಾರಿಗೆ ತಂದು ಅವು ಬೇಗ ಕಾರ್ಯ ರೂಪಕ್ಕೆ ಬರಲು ಶ್ರಮಿಸಿ ಜನ ಸಾಮಾನ್ಯರ ಶ್ಲಾಘನೆಗೆ ಅರ್ಹರಾಗಿದ್ದಾರೆ. ಈ ಹಿಂದೆ ಪ್ರತಿಯೊಂದು ಇಲಾಖೆಗಳನ್ನು ಸಂಕ್ಷಿಪ್ತವಾಗಿ ವಿರೇಚಿಸಿರುವುದರಿಂದ, ಇಲ್ಲಿ ಹೆಚ್ಚಾಗಿ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಗೆ ಸಂಬಂಧಪಟ್ಟ ಕೆಲವು ಸಂಕೀರ್ಣ ಅಭಿವೃದ್ಧಿ ಕಾರ್ಯಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಬಹಳ ಹಿಂದೆ ಮದ್ಯಪಾನ ಸೇವನೆ ಕರ್ನಾಟಕ ರಾಜ್ಯದಾದ್ಯಂತ ಭಯಾನಕವಾಗಿ ವ್ಯಾಪಿಸಿದ್ದು, ಅದು ದಲಿತ ಸಮುದಾಯದ ಬದುಕನ್ನೇ ಸರ್ವನಾಶ ಮಾಡುತ್ತಿತ್ತು. ಅವರು ಬಡತನ ಎಂಬ ಭೂತನಿವಾರಣೆಗಾಗಿ ಮೇಲ್ವರ್ಗದವರ ಮನೆಗಳಲ್ಲಿ ಜೀತ ಮತ್ತು ಕೂಲಿ ಮಾಡಿ ಜೀವನ ಸಾಗಿಸುತ್ತಿದ್ದರೂ, ದಿನ ನಿತ್ಯ ಹೆಂಡ ಸರಾಯಿಗಳನ್ನು ಮತ್ತೇರುವ ತನಕ ಕುಡಿದು ತಮ್ಮ ಅವನತಿಯ ಹಾದಿಯನ್ನು ತಲುಪಿದರು. ಇಂಥ ವ್ಯವಸ್ಥೆಯನ್ನು ಶಾಲೆಯ ದಿನಗಳಿಂದಲೇ ಗಮನಿಸಿದ ರಾಚಯ್ಯನವರು ರಾಜಕೀಯಕ್ಕೆ ಪಾದಾರ್ಪಣೆ ಮಾಡುವ ಮೊದಲ ದಿನಗಳಲ್ಲೇ ಇದರ ವಿರುದ್ಧವಾಗಿ ಚಳವಳಿ ಹೂಡಿ ಹೆಂಡದ ಮರಗಳನ್ನು ಕಡಿದು ಹಾಕಿ, ಹೆಂಡದ ಗುಡಿಸಲುಗಳಿಗೆ ಬೆಂಕಿ ಹಾಕಿಸಿದರು. ಆದರೂ ಈ ಮದ್ಯಪಾನ ಸೇವನೆಯನ್ನು ಸಂಪೂರ್ಣವಾಗಿ ನಿಲ್ಲಿಸಲಾಗಲಿಲ್ಲ. ಅಷ್ಟರಲ್ಲಿ 1952ರ ಹೊತ್ತಿಗೆ ರಾಜಕಾರಣಕ್ಕೆ ಪ್ರವೇಶ ಮಾಡಿ, ಮೊದಲ ಬಾರಿಗೆ ವಿಧಾನಸಭೆಗೆ ಆಯ್ಕೆಯಾದರು. ಇಲ್ಲಿಂದಲೇ ಇವರ ಸಮಾಜ ಸುಧಾರಣೆಯ ಕಳಕಳಿ ಪ್ರಾರಂಭವಾಯಿತು. ಕುಡಿತದ ಚಾಳಿಯಿಂದ ತಮ್ಮ ಬದುಕನ್ನೆ ಹಾಳು ಮಾಡಿಕೊಂಡಿದ್ದ ದಲಿತರ ಉದ್ಧಾರಕ್ಕಾಗಿ ಮತ್ತು ಅವರ ಏಳಿಗೆಗಾಗಿ ಪಾನ ನಿರೋಧವನ್ನು ಜಾರಿಗೆ ತರಬೇಕೆಂಬ ಸದ್ದುದೇಶದಿಂದ ಶಾಸನ ಸಭೆಯಲ್ಲಿ ಸುಮಾರು ನಾಲ್ಕಾರು ಬಾರಿ ಹರಿತವಾದ ಭಾಷಣ ಮಾಡಿದರು. ಆದರೆ ಇದಕ್ಕೆ ಯಾವುದೇ ವಿಧವಾದ ಪರಿಹಾರ ಸಿಗಲಿಲ್ಲ. ಪಾನ ನಿರೋಧ, ಚಳವಳಿ ನಿರಂತರವಾಗಿಯೇ ಸಾಗಿ ಬಂತು; ಈ ನಡುವೆ ಇವರ ನಿಜಲಿಂಗಪ್ಪನವರ ಸಚಿವ ಸಂಪುಟದಲ್ಲಿ ಕ್ಯಾಬಿನೆಟ್ ದರ್ಜೆಯ ಮಂತ್ರಿಯಾಗಿ ಸೇರ್ಪಡೆಯಾಗಿದ್ದು, ಈ ಪಾನ ನಿರೋಧ ಕಾಯಿದೆಯನ್ನು ರಾಜ್ಯಾದಾದ್ಯಂತ ಜಾರಿಗೊಳಿಸಬೇಕೆಂಬ ಉದ್ದೇಶದಿಂದ ನಿಜಲಿಂಗಪ್ಪನವರ ಬಳಿ ಹೋಗಿ ಇದರ ಬಗ್ಗೆ ಸುದೀರ್ಘವಾಗಿ ಚರ್ಚಿಸಿದರು. ಆದರೆ 1965ರ ಹೊತ್ತಿಗೆ ನಿಜಲಿಂಗಪ್ಪನವರ ಮಂತ್ರಿ ಮಂಡಲದ ಕೆಲವು ಬಲಿಷ್ಠ ಸಚಿವರು ರಾಜ್ಯದಲ್ಲಿ ಪಾನನಿರೋಧ ಕಾಯಿದೆಯನ್ನು ರದ್ದು ಗೊಳಿಸಿ ಮಾರುಕಟ್ಟೆಯಲ್ಲಿ ಮುಕ್ತವಾಗಿ ಹೆಂಡ, ಸಾರಾಯಿ, ಮತ್ತಿತರ

## ಕ್ಷೇತ್ರಕ್ಕಾಗಿ ಕೈಗೊಂಡ ಕೆಲವು ಅಭಿವೃದ್ಧಿ ಕಾರ್ಯಗಳು

ಇತಿಹಾಸ ಕಾಲದಿಂದಲೂ ಜನೋಪಕಾರಿ ಕಾರ್ಯಗಳು ನಡೆಯುತ್ತ ಬಂದಿವೆ. ಅಶೋಕ ನಂತಹ ಚಕ್ರವರ್ತಿಗಳು, ರಾಜರುಗಳು, ಜನತಾ ಕಲ್ಯಾಣಕ್ಕೆ ಹೆಚ್ಚಿನ ಆದ್ಯತೆನೀಡಿದರು. ಆದರೆ ಇಂದಿನ ಅಭಿವೃದ್ಧಿ ಕಲ್ಪನೆ ಅದಕ್ಕಿಂತ ಮೂಲಭೂತವಾಗಿ ಭಿನ್ನವಾಗಿದೆ, ರಾಜ ಆಳ್ವಿಕೆಯ ಕಾಲದಲ್ಲಿ ಸಾಮಾನ್ಯವಾಗಿ ರಾಜ ಪರಿವಾರ ಸಾಮಂತರು ಶ್ರೀಮಂತರು ಮತ್ತು ಪ್ರತಿಷ್ಠಿತರಿಗೆ ಅನುಕೂಲಕಲ್ಪಿಸುವುದು ಸರ್ಕಾರದ ಮೊದಲ ಕರ್ತವ್ಯವೆಂಬ ಧೋರಣೆ ಇತ್ತು. ರಾಜಕೀಯವಾಗಿ ಆಗ ಅಂತಹ ಪರಿಸ್ಥಿತಿ ಕೂಡ ಇತ್ತು. ಇಂದು ನಾವು ಪ್ರಜಾಪ್ರಭುತ್ವ ಯುಗಲ್ಲಿದ್ದೇವೆ ಕೆಲವರಿಗಾಗಿ, ಹಲವರ ದುಡಿಮೆ ಎಂಬುದು ಹೋಗಿ ಎಲ್ಲರಿಗಾಗಿ ಪ್ರತಿಯೊಬ್ಬರ ದುಡಿಮೆ ಎಂಬತತ್ತ್ವ ಅಂಗೀಕರಿಸಿದ್ದೇವೆ. ಸಾಧ್ಯವಾದಷ್ಟು ಹೆಚ್ಚು ಜನರು ಅಭಿವೃದ್ಧಿ ಸಾಧಿಸುವುದೇ ಇದರ ಗುರಿ. ಇಂತಹ ವ್ಯಾಪಕ ಅಭಿವೃದ್ಧಿ ಸಾಧನೆಗೆ ಯೋಜನೆಗಳು ಅಗತ್ಯ. ಪ್ರಜಾಪ್ರಭುತ್ವದೇಶವಾಗಲಿ, ಸಮತಾವಾದದ ಕಮ್ಯೂನಿಷ್ಟ್ ದೇಶವಾಗಲಿ, ಸರ್ವಾಧಿಕಾರಿ ದೇಶವಾಗಲಿ, ಯೋಜನೆ ಹಾಕಿಕೊಳ್ಳದೆ ಮುಂದುವರೆಯುವುದು ಅಸಾಧ್ಯವಾಗಿ ಪರಿಣಮಿಸಿದೆ. ಇದಕ್ಕೆ ಈಗಿನ ಕೈಗಾರಿಕಾ ಬೆಳವಣಿಗೆ ವಾಣಿಜ್ಯ ವಿಸ್ತರಣೆ, ವೈವಿಧ್ಯಮಯ ವ್ಯವಸಾಯೋತ್ಪನ್ನಗಳು ಮೊದಲಾದವುಗಳಿಂದ ಸಂಕೀರ್ಣ ಆರ್ಥಿಕ ವ್ಯವಸ್ಥೆ ನಿರ್ಮಾಣಗೊಂಡಿರುವುದೂ ಕಾರಣ. ಸಮತಾವಾದ ಮತ್ತು ಸರ್ವಾಧಿಕಾರ ದೇಶಗಳಲ್ಲಿ ಕಡ್ಡಾಯವಾಗಿ ಅಥವಾ ಒತ್ತಾಯದಿಂದ ನಿರ್ದಿಷ್ಟ ಕಾರ್ಯಗಳನ್ನು ಕೈಗೊಂಡರೆ ಭಾರತದಂತಹ ಪ್ರಜಾ ತಂತ್ರಾತ್ಮಕ ದೇಶದಲ್ಲಿ ಸ್ವಪ್ರೇರಣೆಯಿಂದ ಪರಸ್ಪರ ಸಹಕಾರದಿಂದ ಯೋಜನೆಗಳನ್ನು ಕೈಗೂಡಿಸಲು ನಿರ್ಧರಿಸಲಾಗಿದೆ.

ಒಂದು ರಾಷ್ಟ್ರ ಅಥವಾ ರಾಜ್ಯ ತನ್ನ ಎಲ್ಲ ಕ್ಷೇತ್ರಗಳಲ್ಲಿಯೂ ಸರ್ವತೋಮುಖ ಬೆಳೆವಣಿಗೆಯನ್ನು ಸಾಧಿಸಬೇಕಾದರೆ ಅದು ಅಲ್ಲಿನ ರಾಜಕೀಯ ವ್ಯವಸ್ಥೆ, ಸ್ವಾಭಾವಿಕ ಸಂಪನ್ಮೂಲಗಳು ಮತ್ತು ಮಾನವ ಶಕ್ತಿಗಳು ಸುವ್ಯವಸ್ಥೆಯಲ್ಲಿರಬೇಕಾಗುತ್ತದೆ. ಆಳುವ ಸರ್ಕಾರದ ಹೊಣೆಗಾರಿಕೆಯ ರಾಜಕಾರಣಿಗಳು ಅಧಿಕಾರಿಗಳು ತಮ್ಮ ಆಡಳಿತ ವ್ಯವಸ್ಥೆಯಲ್ಲಿ ಸಮಗ್ರ ಪ್ರಗತಿಶೀಲ ಚಿಂತನೆಯ ನೆಲೆಯಿಂದ ಅಲ್ಲಿ ದೊರೆಯುವಂಥ ಎಲ್ಲ ನೈಸರ್ಗಿಕ ಸಂಪನ್ಮೂಲಗಳನ್ನು ಸದುಪಯೋಗಪಡಿಸಿಕೊಂಡು ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಧಾರ್ಮಿಕ ಮತ್ತು ಆಡಳಿತಾತ್ಮಕ ಕ್ಷೇತ್ರಗಳಲ್ಲಿ ಕೆಲವು ಮೂಲಭೂತ ಸೌಲಭ್ಯಗಳನ್ನು ಜಾರಿಗೊಳಿಸಿ, ಯಶಸ್ವಿಯಾಗಿ ಕಾರ್ಯರೂಪಕ್ಕೆ ಬರಲು ಸತತ ಪ್ರಯತ್ನ ಮಾಡಬೇಕು. ಆಗ ಮಾತ್ರ ದೇಶ ಪ್ರಗತಿಪಥದತ್ತ ಮುನ್ನಡೆಯುತ್ತದೆ. ರಾಜ ಕಾರಣಕ್ಕೂ ಮಹತ್ವ ಬರುತ್ತದೆ.

ರಾಚಯ್ಯನವರು ತಮ್ಮ ದೀರ್ಘಾವದಿಯ ಆಡಳಿತದಲ್ಲಿ ಕೇಂದ್ರ ಸರ್ಕಾರದಿಂದ ಕೈಗಾರಿಕಾಭಿವೃದ್ಧಿ ಖಾತೆಯನ್ನು ಹೊಂದಿದ್ದರೆ, ರಾಜ್ಯ ಸರ್ಕಾರದಿಂದ ಅರಣ್ಯ ಮೀನುಗಾರಿಕೆ, ರೇಷ್ಮೆ ಕೃಷಿ, ತೋಟಗಾರಿಕೆ, ಸಹಕಾರ, ಕಂದಾಯ, ಶಿಕ್ಷಣ, ಗೃಹ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಆರೋಗ್ಯ ಮತ್ತು ಕುಟುಂಬಕಲ್ಯಾಣ ಇಲಾಖೆಗಳನ್ನು ವಹಿಸಿಕೊಂಡಿದ್ದರು.

ಬಿ. ರಾಚಯ್ಯನವರು ಕೇವಲ ಒಬ್ಬ ವ್ಯಕ್ತಿಯಲ್ಲ, ಅವರು ಒಂದು ರಾಜಕೀಯ ಶಕ್ತಿಯಾಗಿದ್ದರು. ಅವರ ಮನಸ್ಸಿನ ಅಂತರಾಳದಲ್ಲಿ ಏನಿದೆ ಎಂದು ಯಾರಿಗೂ ಅರ್ಥವಾಗುತ್ತಿರಲಿಲ್ಲ ಅಂತಹ ರಾಜಕೀಯ ಕೌಟಿಲ್ಯ ಅವರಲ್ಲಿ ಇತ್ತು. ಗಾಂಬೀರ್ಯ ರಾಜಕಾರಣಿಯಾಗಿದ್ದ ಅವರು ಎಂದೂ ಅಧಿಕಾರಕ್ಕಾಗಿ ಆಸೆ ಪಟ್ಟವರಲ್ಲಿ ಅದನ್ನು ಹುಡುಕುವ ಪ್ರಯತ್ನವನ್ನು ಮಾಡಲಿಲ್ಲ. ಆದರೆ ಅಧಿಕಾರಗಳೇ ಅವರ ಮನೆಬಾಗಿಲನ್ನು ತಟ್ಟಿದರು. ಕರ್ನಾಟಕ ರಾಜಕಾರಣದ ವರ್ಚಸನ್ನು ಈ ದೇಶದ ಉದ್ದಗಲಕ್ಕೂ ಹೆಚ್ಚಿಸಿದಂತಹ ವ್ಯಕ್ತಿತ್ವ ರಾಚಯ್ಯನವ್ರದಾಗಿತ್ತು.

ವೇದಾಂತ ಹೆಮ್ಮಿಗ್ರೆ
ಮಾಜಿ ಶಾಸಕರು.

ಬಿ. ರಾಚಯ್ಯ ಅವರು ಇಂದು ನಮಗೆ ಹಲವಾರು ಕಾರಣಗಲಿಂದ ವಿಶಿಷ್ಟವಾಗಿದ್ದಾರೆ ಮತ್ತು ಪ್ರಮುಖರಾಗಿದ್ದಾರೆ. ಸಾಮಾಜಿಕ ಕಳಕಳಿಯುಳ್ಳ ಒಬ್ಬ ವ್ಯಕ್ತಿ ಅಧಿಕಾರಕ್ಕೆ ಬಂದಾಗ ಆತ ಏನು ಮಾಡುತ್ತಾನೆ ಮತ್ತು ಸಾಮಾನ್ಯ ಜನರ ಜೊತೆ ಯಾವ ರೀತಿ ವರ್ತಿಸುತ್ತಾನೆ ಎನ್ನುವುದಕ್ಕೆ ದಿ.ಬಿ. ರಾಚಯ್ಯನವರು ಮಾದರಿಯಾಗಿದ್ದಾರೆ. ತತ್ತ್ವನಿಷ್ಟ ಆಡಳಿತಕ್ಕೆ ಹೆಸರುವಾಸಿಯಾದ ಅವರು ಯಾವುದೇ ಒಂದು ಸ್ಥಾನಕ್ಕೆ ಹೋದರೂ ಶೋಷಿತರ ಪರವಾದ ನಿಲುವನ್ನು ತೆಗೆದುಕೊಂಡು ಅದನ್ನು ಪ್ರಾಮಾಣಿಕವಾಗಿ ಅನುಷ್ಠಾನಗೊಳಿಸುತ್ತಿದ್ದರು. ಅವರು ಸದನದಲ್ಲಿ ವರ್ಚಸ್ಸಿನ ವ್ಯಕ್ತಿಯಾಗಿ ತಮ್ಮದ್ದೆಯಾದ ಹಾಸ್ಯಪ್ರಜ್ಞೆಯಿಂದ ಪ್ರತಿಯೊಂದನ್ನು ಸೂಕ್ಷ್ಮವಾಗಿ ಗಮನಿಸಿ ಒಂದು ಸ್ಥಿತಿ ಪ್ರಜ್ಞೆಯಿಂದ ಸಮಸ್ಯೆಯನ್ನು ಅರ್ಥಮಾಡಿಕೊಂಡು ನಿಧಾನವಾಗಿ ಉತ್ತರ ಕೊಡುತ್ತಿದ್ದರು. ರಾಚಯ್ಯ ಅವರು ಕೇರಳ ರಾಜ್ಯದ ರಾಜ್ಯ ಪಾಲರಾಗಿದ್ದಾಗ ಅವರ ಬಳಿ ಯಾವುದೇ ಒಂದು ಕಡತ ಬಂದರೂ ಕೆಲವು ಸಲ ಅಧನ್ನು ನೋಡಿ ರುಜು ಮಾಡಿದೆ ವಾಪಸ್ ಕಳುಹಿಸುತ್ತಿದ್ದರಂತೆ. ಆಗ ಸಂಬಂಧಪಟ್ಟ ಮಂತ್ರಿ ಮತ್ತು ಇಲಾಖಾಧಿಕಾರಿಗಳು ಕಡತಕ್ಕೆ ರುಜುವಾಗಿಲ್ಲ ಎಂದು ಕೇಳಿದರೆ, ಅದಕ್ಕೆ ಅವರು ನಿಮ್ಮ ಕಾರ್ಯಸಾಧನೆಯ ಫೈಲಿನಲ್ಲಿ ಯಾರಾದರೊಬ್ಬ ಶೋಷಿತ ಅಥವಾ ಹಿಂದುಳಿದ ವರ್ಗದವರ ಹೆಸರನ್ನು ಸೇರಿಸಿಕೊಂಡು ಬನ್ನಿ ಆಗ ರುಜು ಮಾಡುತ್ತೇನೆಂದು ಬಹಳ ನಯವಾಗಿ, ಮೃದುವಾಗಿ ಹೇಳುತ್ತಿದ್ದರಂತೆ, ಅಂದರೆ ಬಡಬಗ್ಗರ, ದೀನದುರ್ಬಲರಿಗೆ ಮತ್ತು ಹಿಂದುಳಿದವರಿಗೆ ಕೆಲಸ ಮಾಡುವಾಗ ಅವರು ಹೇಗೆ ಇನ್ನೊಬ್ಬರಿಗೆ ನೋವಾಗದ ರೀತಿಯಲ್ಲಿ ಹಾಗೂ ಅವರಿಗೆ ಅನುಮಾನ ಬಾರದ ರೀತಿಯಲ್ಲಿ ಜಾಣ್ಮೆಯಿಂದ ಮೌನವಾಗಿ ಕೆಲಸ ಮಾಡುತ್ತಿದ್ದರು ಎಂಬುದನ್ನು ಇದು ಸ್ಪಷ್ಟ ಪಡಿಸುತ್ತದೆ.

ಡಾ. ಸಿದ್ದಲಿಂಗಯ್ಯ
ಕವಿ ಮತ್ತು ವಿಧಾನ ಪರಿಷತ್ತಿನ ಸದಸ್ಯರು.

ರಾಚಯ್ಯ ಅವರು ಜೀವನದಲ್ಲಿ ಯಾವುದೇ ಪೂರ್ವಾ ಗ್ರಹ ಪೀಡಿತವಲ್ಲದ ಅಜಾತಶತ್ರು. ಅವರು ಈ ನಾಡಿನ ಸಮಗ್ರ ಚಿಂತನೆಗಾಗಿ ಐವತ್ತು ವರ್ಷಗಳ ಕಾಲ ನಿರಂತರವಾಗಿ ಹೋರಾಟ ನಡೆಸಿದಂಥ ಧೀಮಂತ ವ್ಯಕ್ತಿ. ಕರ್ನಾಟಕ ರಾಜ್ಯದಲ್ಲಿ ಆದರ್ಶವಾಗಿದ್ದ ಇಬ್ಬರು ರಾಜಕಾರಣಿಗಳ ಹೆಸರನ್ನು ಶಾಶ್ವತವಾಗಿ ಸುವರ್ಣಾಕ್ಷರಘಳಲ್ಲಿ ಬರೆದಿಡಬೇಕು. ಅವರುಗಳೆಂದರೆ ಶ್ರೀಮತಿ ಯಶೋಧರ ದಾಸಪ್ಪ ಮತ್ತು ಶ್ರೀಮಾನ್ ಬಿ. ರಾಚಯ್ಯ ಈ ಇಬ್ಬರು ಸಮಾಜವಾದಿ ಚಿಂತಕರು ಕರ್ನಾಟಕದಲ್ಲಿ ಪಾನನಿರೋಧವನ್ನು ಜಾರಿಗೆ ತರುವಲ್ಲಿ ತೀವ್ರತರವಾದ ಹೋರಾಟ ನಡೆಸಿ ಜಯಗಲಿಸಿದರು. ಗಾಂಧೀಜಿಯವರ ತತ್ತ್ವದರ್ಶಗಳನ್ನು ಪರಿಪೂರ್ಣವಾಗಿ ಅರ್ಥಮಾಡಿಕೊಂಡು ಅದನ್ನು ಈ ನಾಡಿನುದ್ದಕ್ಕೂ ಹರಡಿದ ಶ್ರೇಷ್ಠ ರಾಜಕಾರಣಿಗಳು. ಹೀಗೆ ರಾಚಯ್ಯನವರು ಕರ್ನಾಟಕದ ನೆಲದಲ್ಲಿ ಅಧರಲ್ಲೂ ಗಂಡು ಮೆಟ್ಟಿದ ಚಾಮರಾಜನಗರ ತಾಲ್ಲೂಕಿನಲ್ಲಿ ಹುಟ್ಟಿರುವುದು ನಮಗೆ ಗೌರವ ಬಂದಂತಾಗಿದೆ.

ವಾಟಾಳ್ ನಾಗರಾಜ್
ಮಾಜಿ ಶಾಸಕರು

ಸದನದಲ್ಲಿ ಪ್ರಸ್ತಾಪ ಮಾಡುತ್ತೇನೆಂದು ಹೇಳಿ ರಾಚಯ್ಯನವರ ಬಳಿ ಹೋಗಿ ಕೇಳಿಕೊಂಡಿದ್ದೆ. ಅದರಂತೆ ಅವರು ಒಂದು ದಿನ ಸದನದಲ್ಲಿ ನನ್ನನ್ನು ಕರೆದು "ಲೀಲಮ್ಮ ನೀನು ಹೇಳಿದ ಮಹಿಳಾ ಮೀಸಲಾತಿಯ 33 ಬಗ್ಗೆ ಈಗ ಪ್ರಸ್ತಾಪ ಮಾಡು ಅದಕ್ಕೆ ಕಾಲಾವಕಾಶವಿದೆ" ಎಂದು ಹೇಳಿದರು. ಇಂದು ನಾವೆಲ್ಲರೂ ಈ 33 ಮಹಿಳಾ ಮೀಸಲಾತಿಯನ್ನು ನಾನು 'ಮೂ' ಮಾಡಿಸಿದೆ, ತಾವು 'ಮೂ' ಮಾಡಿಸಿದ್ದೇರೆಂದು ಹೇಳಿಕೊಳ್ಳುತ್ತಿದ್ದೇವೆ. ಆದರೆ ಇಡೀ ಕರ್ನಾಟಕದಲ್ಲಿ ಈ 33 ಮಹಿಳಾ ಮೀಸಲಾತಿಯನ್ನು ಮೊಟ್ಟಮೊದಲ ಬಾರಿಗೆ ಸದನದಲ್ಲಿ 'ಮೂ' ಮಾಡಿಸಿದಂತಹ ವ್ಯಕ್ತಿ ಶ್ರೀಮಾನ್ ಬಿ. ರಾಚಯ್ಯನವರು, ಅವರ ಮನೆ ನನಗೆ ಯಾವಾಗಲೂ ನನ್ನ ಬಂಧುಗಳ ಮನೆ ಇದ್ದ ಹಾಗೆ ಇತ್ತು. ಅಷ್ಟು ಪ್ರೀತಿ ವಿಶ್ವಾಸದಿಂದ ಅವರ ಕುಟುಂಬದವರು ನನ್ನನ್ನು ಕಾಣುತ್ತಿದ್ದರು. ನಾನು ಯಾವಾಗ ಎಷ್ಟೋತ್ತಿಗೊದರೂ ಸರಿ, ಅವರು ತಮ್ಮ ಶ್ರೀಮತಿಯವರನ್ನು ಕರೆದು ಆ ಲೀಲಾವತಿ ಹೆಣ್ಣು ಮಗಳ ಬಂದಿದ್ದಾಳೆ ಅವಳನ್ನು ಒಳಗೆ ಕರೆದು ತಾಂಬೂಲ ಕೊಟ್ಟು ಕಳುಹಿಸು ಎಂದು ಹೇಳುತ್ತಿದ್ದರು. ಒಟ್ಟಾರೆ ರಾಚಯ್ಯನವರು ತಮ್ಮ ರಾಜಕೀಯ ಜೀವನದುದ್ದಕ್ಕೂ ನಮ್ಮಂಥ ಎಷ್ಟೋ ಜನ ಯುವಕ, ಯುವತಿಯರನ್ನು ಬೆಳೆಸಿದ್ದಾರೆ. ಅವರ ತತ್ವನಿಷ್ಠ ಆಡಲಿತವೇ ಇಂದು ನಮಗೆ ದಾರಿದೀಪವಾಗಿದೆ.

ಶ್ರೀಮತಿ ಲೀಲಾವತಿ ದೇವಿ ಆರ್ ಪ್ರಸಾದ್
ಮಾಜಿ ಸಚಿವರು.

ರಾಚಯ್ಯನವರು ಶೋಷಣೆಗೊಳಗಾದ ಸಮಾಜದಲ್ಲಿ ಹುಟ್ಟಿದರೂ ಕೂಡ ಬಸವಣ್ಣನವರ ಆದರ್ಶಗಳನ್ನು ಪಾಲಿಸಿಕೊಂಡು ತಮ್ಮ ಅಧಿಕಾರದುದ್ದಕ್ಕೂ ನುಡಿದಂತೆ ನಡೆದ ಸಮಾಜವಾದಿಗಳು. ಈ ದೇಶದ ರಾಜಕಾರಣದಲ್ಲಿ ಸಮರ್ಥ ಆಡಳಿತವನ್ನು ಮಾಡಿ ತೋರಿಸಿದಂತಹ ಕೆಲವೇ ಕೆಲವು ಹಿರಿಯ ರಾಜಕಾರಣಿಗಳಲ್ಲಿ ರಾಚಯ್ಯನವರು ಒಬ್ಬರು. ರಾಚಯ್ಯನವರ ಧರ್ಮಪತ್ನಿ ಶ್ರೀಮತಿ ಗೌರಮ್ಮನವರು ಅವರ ರಾಜಕಾರಣದ ಯಶಸ್ಸಿನ ಹಿಂದಿರುವ ಶಕ್ತಿ.

ಎಸ್.ಎಸ್. ಪಾಟೀಲ್
ವಿಧಾನ ಸಭಾ ಸದಸ್ಯರು

ರಾಚಯ್ಯನವರು ನಮ್ಮ ಜಿಲ್ಲೆಯ ಹಿರಿಯ ತಲೆಮಾರಿನ ಅತ್ಯಂತ ಪ್ರತಿಷ್ಠಿತ ಗೌರವಾನ್ವಿತ ನಾಯಕರು. ಅವರು ತಮ್ಮ ಸಾರ್ವಜನಿಕ ಜೀವನದಲ್ಲಿ ಎಲ್ಲಾ, ಜಾತಿ, ಕೋಮಿನವರ ಒಲವು ಪಡೆದಿದ್ದರು. ಇಂಥ ದೀಮಂತ ನಾಯಕನ ಆಡಳಿತದ ನೈಪುಣ್ಯತೆ ಬಾರತಾದ್ಯಂತ ಮನ್ನಣೆಗಳಿಸಿತು. ರಾಜಕಾರಣದಲ್ಲಿ ಎಲ್ಲಾ ಅರ್ಹತೆಗಳನ್ನು ಹೊಂದಿದ್ದ ರಾಚಯ್ಯನವರು ಈ ರಾಜ್ಯದ ಮುಖ್ಯ ಮಂತ್ರಿಯಾಗಬೇಕಾಗಿತ್ತು. ಆದರೆ ಸಮಾಜದಲ್ಲಿ ಭೂತವಾಗಿರುವ ಜಾತಿ ವ್ಯವಸ್ಥೆಯಿಂದ ಅದು ಕೈತಪ್ಪಿತ್ತು. ಇದು ದುರ್ದೈವದ ಸಂಗತಿ. ಅವರು ರಾಜಕೀಯದಲ್ಲಿ ಮಾಡಿಹೋಗಿರುವ ಕೆಲಸ ಕಾರ್ಯಗಳನ್ನು ಮತ್ತು ಅವರು ಹೊಂದಿದ್ದ ಸೈದ್ಧಾಂತಿಕ ನಿಲುವುಗಳನ್ನು ನಾನು ಈಗಲೂ ಮನಃ ಪೂರ್ವಕವಾಗಿ ಮೆಚ್ಚಿಕೊಂಡಿದ್ದೇನೆ.

ಟಿ.ಎನ್. ನರಸಿಂಹಮೂರ್ತಿ.
ಹಣಕಾಸು ಆಯೋಗದ ಅಧ್ಯಕ್ಷರು.

ಗಾಂಧಿಯುಗದ ಕೊನೆಯ ಕೊಂಡಿಯಾಗಿದ್ದ ರಕಾಚಯ್ಯನವರು ತಮ್ಮ ಅಧಿಕಾರವನ್ನು ತುಂಬಾ ಗಂಭೀರವಾದ ನೆಲೆಯಲ್ಲಿ ನಡೆಸಿಕೊಂಡು ಬಂದರು. ಒಂದು ಉಸಿರುಗಟ್ಟುವಂಥ ವಾತಾವರಣದಲ್ಲಿ, ಅದರಲ್ಲೂ ತೀರ ಗ್ರಾಮೀಣ ಪ್ರದೇಶದ ಹಿನ್ನೆಲೆಯಿಂದ ಬಂದ ಅವರು ಈ ನಾಡಿದ ರಾಜ್ಯಪಾಲರಾಗುವವರೆಗೂ ಹೋದರು. ರಾಚಯ್ಯನವರು ಬೆಳೆದು ಬಂದ ಈ ದಾರಿಯನ್ನು ನಾವು ನೋಡಿದಾಗ ಮನುಷ್ಯನಾದವರು ಎಷ್ಟೇ ಅನ್ಯಾಯಕ್ಕೆ, ತುಳಿತಕ್ಕೆ ಒಳಗಾದರೂ ಕೂಡ ಅವನು ತನ್ನ ಸ್ವಪ್ರಯತ್ನದ ಮೂಲಕ ಮೇಲೆ ಬಂದೇ ಬರುತ್ತಾನೆ ಎನ್ನುವಂತಹದು ಅರ್ಥವಾಗುತ್ತದೆ. ಹೀಗಾಗಿ ಅವರು ತಮ್ಮ ಆಳವಾದ ಅನುಭವ ಮತ್ತು ಕಷ್ಟ ನಷ್ಟಗಳ ನೆಲೆಯಲ್ಲಿ ಇಡೀ ಸಮಾಜವನ್ನೇ ಒಂದು ಸಮಾನತೆ ಮತ್ತು ಸಮೃದ್ಧತೆಯ ಕಡೆ ತೆಗೆದುಕೊಂಡು ಹೋಗಬೇಕೆನ್ನುವ ಜೀವನದರ್ಶನದ ರಾಜಕಾರಣದ ಬದ್ಧತೆಯನ್ನು ಹೊಂದಿದ್ದ ಶ್ರೇಷ್ಠ ರಾಜಕಾರಣಿಗಳು.

ಎಂ. ಪಿ. ಪ್ರಕಾಶ್
ಸದಸ್ಯರು, ವಿಧಾನ ಪರಿಷತ್ತು

ರಾಚಯ್ಯ ಅವರು ಕರ್ನಾಟಕ ಕಂಡ ಒಬ್ಬ ಅಪರೂಪದ ರಾಜಕಾರಣಿ. ಸಮಕಾಲೀನ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಅರಿತುಕೊಂಡು ಸಮರ್ಥ ಆಡಳಿತ ನಡೆಸಿದಂತಹ ಬುದ್ಧಿಜೀವಿಗಳು, ಸುಮಾರು ಅರ್ಧ ಶತಮಾನದ ಕಾಲ ರಾಜಕಾರಣದಲ್ಲಿದ್ದ ಅವರು ತಮ್ಮ ಆಡಳಿತದುದ್ದಕ್ಕೂ ಶೋಷಿತರ ಪರವಾದ ದನಿಯಾಗಿದ್ದರು.

ಬಿ. ಸೋಮಶೇಖರ್
ವಿಧಾನಸಭಾ ಸದಸ್ಯರು

ಕರ್ನಾಟಕ ರಾಜ್ಯದ ಸಮಗ್ರ ಅಭಿವೃದ್ಧಿಗಾಗಿ ದುಡಿದ ಮಹಾನ್ ವ್ಯಕ್ತಿ ಬಿ. ರಾಚಯ್ಯನವರು ವಿಶೇಷ ವ್ಯಕ್ತಿತ್ವವುಳ್ಳ ರಾಜಕಾರಣಿಯಾಗಿದ್ದರು. ರಾಜಕಾರಣದಲ್ಲಿ ಅಜಾತಶತ್ರುಗಳಾಗಿದ್ದ ಅವರಿಗೆ ಬದುಕಿನುದ್ದಕ್ಕೂ ಒಂದು ಕಪ್ಪು ಚುಕ್ಕೆ ಇರಲಿಲ್ಲ ಇಂಥ ವಿಭಿನ್ನ ಗುಣಗಳನ್ನು ಹೊಂದಿದ್ದ ರಾಚಯ್ಯನವರಿಗೆ ಈ ದೇಶ ಮರಣೋತ್ತರ "ಭಾರತರತ್ನ ಪ್ರಶಸ್ತಿ" ನೀಡಿ ಗೌರವಿಸಿ ಅವರ ಮಾದರಿ ಆಡಳಿತವನ್ನು ಸ್ಮರಿಸಿಕೊಳ್ಳಬೇಕು. ನಾನು ಇಂದು ಏನಾದರೂ ರಾಜಕೀಯದಲ್ಲಿ ಎತ್ತರದ ಮೆಟ್ಟಿಲುಗಳನ್ನು ಏರಿದ್ದೇನೆಂದರೆ ಅದು ರಾಚಯ್ಯನವರಿಂದಾದರು.

ಪಿ.ಜಿ.ಆರ್. ಸಿಂಧ್ಯಾ
ವಿಧಾನ ಸಭಾ ಸದಸ್ಯರು

ರಾಜಕಾರಣದಲ್ಲಿ ಸ್ಫಟಿಕದಂತೆ ಇದ್ದವರೆಂದರೆ ಶ್ರೀಮಾನ್ ಬಿ. ರಾಚಯ್ಯನವರು. ಅವರು ಜನತಾದಳದ ರಾಜ್ಯ ಘಟಕದ ಅಧ್ಯಕ್ಷರಾಗಿದ್ದಾಗ ನಾನು ಮಹಿಳಾ ವಿಭಾಗದ ಅಧ್ಯಕ್ಷಕೆಯಾಗಿದ್ದೆ. ಅಂದು ಕರ್ನಾಟಕದಲ್ಲಿ ಜನತಾದಳ ಸರ್ಕಾರ ಅಧಿಕಾರದಲ್ಲಿ ಇತ್ತು. ಈ ಒಂದು ಸಂದರ್ಭದಲ್ಲಿ ನಾನು ಮೊದಲ ಬಾರಿಗೆ ಮಹಿಳೆಯರಿಗೆ 33 ಮೀಸಲಾತಿ ಕೊಡಬೇಕೆನ್ನುವ ಬೇಡಿಯನ್ನು

ಶೋಷಿತ ವರ್ಗದ ಒಂದು ಸಾಮಾನ್ಯ ಕುಟುಂಬದಿಂದ ಬಂದಂಥವರು ಸುಮಾರು ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ರಾಜಕಾರಣದಲ್ಲಿದ್ದರೆಂದರೆ ಅವರು ಎಷ್ಟು ಜನ ಅಯ್ಕೆರಾಗಿದ್ದರು ಮತ್ತು ಜನಾನುರಾಗಿಗಳಾಗಿದ್ದರು, ಎಂಬುದನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ರಾಜಕಾರಣದಲ್ಲಿ ಬಹಳಷ್ಟು ವರ್ಷಗಳ ಕಾಲ ತಮ್ಮ ವ್ಯಕ್ತಿತ್ವವನ್ನು ಗಟ್ಟಿಯಾಗಿ ಉಳಿಸಿಕೊಂಡಿರಲು ಕಷ್ಟವಾಗುತ್ತದೆ. ಕೆಳವರ್ಗದಿಂದ ಬಂದ ರಾಚಯ್ಯನವರು ರಾಜಕಾರಣದಲ್ಲಿ ತಮಗೆ ಸಿಕ್ಕಿದಂತಹ ಅವಕಾಶವನ್ನು ಸದುಪಯೋಗಪಡಿಸಿಕೊಂಡು ಕರ್ನಾಟಕದಲ್ಲಿ ಜನಪರ ಆಂದೋಲನವನ್ನು ಹುಟ್ಟುಹಾಕಿದರು. ಅವರು ಸರ್ಕಾರದೊಳಗಿದ್ದುಕೊಂಡು ತಮ್ಮ ಪ್ರಕಾರ ಬುದ್ದಿವಂತಿಕೆಯಿಂದ ಶೇಷಿತ ಮತ್ತು ಹಿಂದುಳಿದ ವರ್ಗಗಳ ಪರವಾದ ದನಿ ಎತ್ತಿ, ಅವರಿಗೆ ಸಿಕ್ಕಬೇಕಾದ ಅವಕಾಶವನ್ನು ನ್ಯಾಯ ಸಮ್ಮತ್ರವಾಗಿ ದೊರಕಿಸಿಕೊಡುವಲ್ಲಿ ಮೌನ ಹೋರಾಟ ಮಾಡಿದಂತಹ ಒಬ್ಬ ಧೀಮಂತನಾಯಕರು. ರಾಜಕಾರಣದಲ್ಲಿ ನಾನು ಎತ್ತುಂದಕ್ಕೇರಲು, ಮೊದಲ ಬಾರಿಗೆ ಕನ್ನಡ ಕಾವಲು ಸಮಿತಿ ಅಧ್ಯಕ್ಷನಾಗಲು ಮತ್ತು ಅನಂತರದಲ್ಲಿ ಪಶುಸಂಗೋಪನೆ ಸಚಿವನಾಗಿ ಅಧಿಕಾರಕ್ಕೆ ಬರಲು ಅವರೇ ಪ್ರಮುಖ ಕಾರಣಕರ್ತರು.

ಸಿದ್ದರಾಮಯ್ಯ
ಮಾಜಿ ಉಪ ಮುಖ್ಯಮಂತ್ರಿಗಳು

ರಾಜಕಾರಣದಲ್ಲಿ ಅತ್ಯಂತ ಪರಿಶುದ್ದವಾದ ವ್ಯಕ್ತಿ ಎಂದರೆ. ಬಿ. ರಾಚಯ್ಯನವರು. ಅವರು ಯಾವಾಗಲೂ ಮೌಲ್ಯದ ಕಡೆ, ಮೌಲ್ಯಾಧಾಂತ ಆಡಳಿತದ ಕಡೆ ಹೆಚ್ಚು ಗಮನ ಕೊಡುತ್ತಿದ್ದರು. ನಾನು ಸುಮಾರು ನಲವತ್ತು ವರ್ಷಗಳ ಕಾಲದಿಂದಲೂ ಅವರ ಮಾದರಿ ಆಡಳಿತವನ್ನು ಬಹಳ ಹತ್ತಿರದಿಂದ ಕಂಡಿದ್ದೇನೆ. ಕರ್ನಾಟಕದಲ್ಲಿ ಮೊದಲ ಕಾಂಗ್ರೆಸೇತರ ಜನತಾ ಸರ್ಕಾರದ ಶಿಕ್ಷಣ ಸಚಿವರಾಗಿ ಅವರು ಮಾಡಿರುವ ಸಾಧನೆ ಚರಿತ್ರಾರ್ಹ. ಶಿಕ್ಷಣದ ಮಟ್ಟವನ್ನು ಪ್ರತಿಹಳ್ಳಿ, ಹಳ್ಳಿಗೂ ತಲುಪಿಸುವ ನಿಟ್ಟಿನಲ್ಲಿ ಮಾದರಿ ಶಿಕ್ಷಣ ಮಸೂದೆಯೊಂದನ್ನು ಜಾರಿಗೆ ತಂದರು. ಈ ಹಿನ್ನೆಲೆಯಲ್ಲಿ ಅವರು ದಲಿತ ಮತ್ತು ದುರ್ಬಲ ವರ್ಗದ ಮಕ್ಕಳು ಹೆಚ್ಚು ಅಕ್ಷರಸ್ಥರಾಗಿ ಮುಂದೊಂದು ದಿನ ಅವರು ಸುಸಂಸ್ಕೃತ ಸ್ವಾವಲಂಬಿಗಳಾಗಿ ಪ್ರಗತಿ ಹೊಂದುತ್ತಾರೆ ಎಂಬ ಮಹದಾಸೆಯನ್ನು ಇಟ್ಟಿಕೊಂಡಿದ್ದರು. ವೈಯಕ್ತಿಕ ನೆಲೆಯಲ್ಲಿ ನನಗೆ ತುಂಬಾ ಆತ್ಮೀಯರು. ರಾಚಯ್ಯನವರು ಮೊದಲಬಾರಿಗೆ ರಾಜ್ಯಪಾಲರಾಗಿ ಆಯ್ಕೆಯಾದಾಗ ನನಗೆ ಅತೀವ ಸಂತೋಷವಾಯಿತು. ಅದೇ ರೀತಿ ಮುಂದೊಂದು ದಿನ ಈ ದೇಶದ ಉಪರಾಷ್ಟ್ರಪತಿ ಮತ್ತು ಅನಂತರ ರಾಷ್ಟ್ರಪತಿಗಳಾಗುತ್ತಾರೆ ಎಂಬ ಕನಸನ್ನು ಕಂಡಿದ್ದೆ. ಆದರೆ ಅವರ ಆರೋಗ್ಯ ಅದಕ್ಕೆ ಅಡ್ಡಿ ಬಂದಿತು. ಬಹಳ ವರ್ಷಗಳ ಕಾಲದಿಂದ ಅವರು ಅನಾರೋಗ್ಯದಿಂದ ನರಳುತ್ತಿದ್ದರೂ ಕೂಡ ರಾಜ್ಯಪಾಲರಾಗಿ ಇಡೀ ದೇಶವೇ ಮೆಚ್ಚುವಂಥ ಸ್ವಚ್ಛ ಆಡಳಿತ ನಡೆಸಿದರು ಇದರಿಂದ ಕರ್ನಾಟಕಕ್ಕೆ- ಗೌರವ ಬಂದಿತು.

ವಿ.ಎಸ್. ಕೃಷ್ಣ ಅಯ್ಯರ್
ಮಾಜಿ ಸಚಿವರು.

ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳನ್ನು ಮಾಡಿಕೊಟ್ಟರು. ಇದು ರಾಚಯ್ಯನವರ ಸಮಚಿತ್ತತೆಗೆ ಕೇವಲ ಒಂದು ಉದಾಹರಣೆ.

ಎಂ. ಮಲ್ಲಿಕಾರ್ಜುನ ಖರ್ಗೆ
ಗೃಹ ಸಚಿವರು.

ಬಿ. ರಾಚಯ್ಯ ಅವರು ಕರ್ನಾಟಕ ರಾಜ್ಯದ ಅತ್ಯಂತ ದಕ್ಷ ಮತ್ತು ಪ್ರಾಮಾಣಿಕ ರಾಜಕಾರಣಿಗಳು, ರಾಜಕೀಯ ರಂಗದಲ್ಲಿ ಸರಳತೆ, ಸಾರ್ವಜನಿಕೆ ಮತ್ತು ನಿರಂತರತೆಯನ್ನು ಸದಾಕಾಲ ಕಾಪಾಡಿಕೊಂಡು ಬಂದ ವಿರಳ ರಾಜಕಾರಣಿಗಳಲ್ಲಿ ಒಬ್ಬರು. ಆದ್ದರಿಂದಲೇ ಅವರು ರಾಜಕಾರಣದಲ್ಲಿ ಅಷ್ಟು ಎತ್ತರಕ್ಕೆ ಬೆಳೆದಿದ್ದು.

ವಿ. ಶ್ರೀನಿವಾಸ ಪ್ರಸಾದ್
ಕೇಂದ್ರ ಸಚಿವರು.

ಕರ್ನಾಟಕ ರಾಜಕೀಯ ಕ್ಷೇತ್ರದಲ್ಲಿ ಎದ್ದು ಕಾಣುವ ಎರಡು ಪ್ರಮುಖ ಹೆಸರುಗಳೆಂದರೆ, ಡಿ. ದೇವರಾಜ ಅರಸ್ ಮತ್ತು ಬಿ. ರಾಚಯ್ಯನವರು. ಒಬ್ಬರು ಹಿಂದುಳಿದವರು. ಇನ್ನೊಬ್ಬರು ದಲಿತರು. ಕರ್ನಾಟಕವನ್ನು ಕಟ್ಟುವಲ್ಲಿ ಈ ಇಬ್ಬರು ನಾಯಕರ ಪಾತ್ರ ಹಿರಿದಾದುದು, ಹಳ್ಳಿಯ ಬದುಕನ್ನೇ ಉಂಡಇವರು ಹಳ್ಳಿಯ ಜನರಿಗಾಗಿ ತಮ್ಮ ಅಧಿಕಾರ ಅವಧಿಯಲ್ಲಿ ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ಜಾರಿಗೆ ತಂದು ಕೀರ್ತಿವಂತರಾಗಿದ್ದಾರೆ. 1983ರ ನಂತರ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸೇತರ ಸರ್ಕಾರಗಳ ಎಲ್ಲ ಮುಖ್ಯಮಂತ್ರಿಗಳು ರಾಚಯ್ಯನವರನ್ನು ಸ್ಮರಿಸಿಕೊಳ್ಳಬೇಕು ಕರ್ನಾಟಕದಲ್ಲಿ ಕಾಂಗ್ರೆಸ್ಸಿಗೆ ಪರ್ಯಾಯವಾಗಿ ಪಕ್ಷವನ್ನು ಕಟ್ಟಲು ಇವರು, ಮಾಡಿದ ಸಂಘಟನೆ ವಹಿಸಿದ ಪಾತ್ರ. ತೆಗೆದುಕೊಳ್ಳುತ್ತಿದ್ದ ನಿರ್ಧಾರಗಳು ಬಹಳ ಕ್ರಾಂತಿಕಾರಕ ಹಾಗೂ ಅರ್ಥಪೂರ್ಣವಾಗಿದ್ದವು. ಅಂದು ಅವರು ಪಕ್ಷಕ್ಕೆ ಹಾಕಿದಂತಹ ಭದ್ರಬುನಾದಿಯ ಫಲವೇ ಇಂದು ಜನತಾದಳ ಕರ್ನಾಟಕದಲ್ಲಿ ಉಸಿರಾಡುತ್ತಿರುವುದು.

ಪಿ.ಬಿ. ಚಂದ್ರೇಗೌಡ
ಕಾನೂನು ಸಚಿವರು.

ರಾಜಕಾಯದಲ್ಲಿ ಒಳ್ಳೆಯ ಹೆಸರು ಮಾಡಿದರೆ ಎಷ್ಟೇ ಕುಳಿತಕೊಳ್ಳನಾಗಿದ್ದರೂ ಕೂಡ ಮೇಲೆ ಬಂದೇ ಬರುತ್ತಾರೆ, ಎಂಬುದಕ್ಕೆ ರಾಚಯ್ಯನವರೇ ಸಾಕ್ಷಿ. ಅವರು ತಮ್ಮ ಸ್ವಶಕ್ತಿಯಿಂದ ಅಧಿಕಾರದ ಗದ್ದುಕೆ ಏರಿದರೇ ಹೊರತು ಯಾರಬೆಂಬಲದಿಂದಲೂ ಅಲ್ಲ, ಹಾಗೂ ಅವಕಾಶವಾದಿ ರಾಜಕಾರಣದಿಂದಲೂ ಅಲ್ಲ. ಹಾಗಾಗಿಯೇ ಅವರು ಅವಕಾಶವಾದಿ ರಾಜಕಾರಣಕ್ಕೆ ತಮ್ಮ ಸಿದ್ಧಾಂತವನ್ನು ಬದಲಾಯಿಸಿಕೊಳ್ಳಲಿಲ್ಲ. ಒಟ್ಟಾರೆ ಹೇಳುವುದಾದರೆ ರಾಚಯ್ಯನವರು ಒಬ್ಬ ಸೆಕ್ಯೂಲರ್ ಪರ್ಸನ್.

ಅಜೀಜ್ ಸೇಠ್
ವಿಧಾನ ಸಭಾ ಸದಸ್ಯರು.

ರಾಷ್ಟ್ರಮಟ್ಟದಲ್ಲಿ ಸೇವೆ ಮಾಡತಕ್ಕಂಥ ಕಾಲದಲ್ಲಿ ಬಹುಶಃ ಎಲ್ಲರ ಗಮನವನ್ನು ಸೆಳೆಯುವ ರೀತಿಯಲ್ಲಿ ಕೆಲಸ ಮಾಡಿದ್ದಾರೆ.

ಕೆ. ಹೆಚ್. ಶ್ರೀನಿವಾಸ್
(ವಿರೋಧ ಪಕ್ಷದ ನಾಯಕರು, ವಿಧಾನ ಪರಿಷತ್ತು)

ತುಂಬಾ ಸೂಕ್ಷ್ಮ ಗ್ರಹಿಕೆಯ ಒಳ್ಳೆಯ ಆಡಳಿತದ ಕಲ್ಪನೆ ಹೊಂದಿದ್ದ ಅಪರೂಪದ ಮೌಲಿಕ ವ್ಯಕ್ತಿ ಬಿ. ರಾಚಯ್ಯ, ಅವರು ಯಾವುದೇ ಸರ್ಕಾರದಲ್ಲಿದ್ದರೂ ಕೂಡ ಎಲ್ಲ ವರ್ಗದ ಮತ್ತು ಎಲ್ಲ ಪಕ್ಷದ ಜನರಿಗೂ ಗೌರವ ಕೊಡುತ್ತಿದ್ದರು. ಅಂಥ ವಿಶಾಲವಾದ ಹೃದಯ ಶ್ರೀಮಂತಿಕೆ ಅವರಲ್ಲಿ ಇತ್ತು.

ಬಿ.ಡಿ. ಜತ್ತಿ
ಭಾರತದ ಮಾಜಿ ಉಪ ರಾಷ್ಟ್ರಪತಿಗಳು

ರಾಚಯ್ಯ ಅವರು ಸರಳ ಸ್ವಭಾವದ ನೇರ ನಡೆನುಡಿ ರಾಜಕಾರಣಿಗಳು, ನನ್ನ ಅವರ ಸಂಬಂಧ ಸುಮಾರು 1945 ರಿಂದಲೂ ಇತ್ತು. ವ್ಯಾಸಂಗದ ದಿನಗಳಲ್ಲೆ ಅವರಿಗೆ ಉತ್ತಮ ನಾಯಕತ್ವದ ಗುಣ ಎದ್ದು ಕಾಣುತ್ತಿತ್ತು. ಇಂದಿನ ರಾಜಕಾರಣದಲ್ಲಿ ಸಾಸಿವೆಯಷ್ಟು ಕೆಲಸಮಾಡಿ ಬೆಟ್ಟದಷ್ಟು ಪ್ರಚಾರ ಬಯಸುತ್ತಾರೆ. ಆದರೆ ರಾಚಯ್ಯ ಅವರು ತಮ್ಮ ಅವಧಿಯಲ್ಲಿ ಬೆಟ್ಟದಷ್ಟು ಕೆಲಸ ಮಾಡಿ ಏನೇನು ಪ್ರಚಾರ ಬಯಸದ ನಿರಾಡಂಬರು. ಕರ್ನಾಟಕ ರಾಜಕಾರಣದಲ್ಲಿ ಅವರು ವಹಿಸಿಕೊಂಡ ಪ್ರತಿಯೊಂದು ಖಾತೆಗೂ ಒಂದು ರೀತಿಯ ವಿಶಿಷ್ಟವಾದ ಮೆರಗು ಬಂದಂತಾಗಿದೆ. ರಾಚಯ್ಯನವರಿಂದ ಖಾತೆಗಳಿಗೆ ಮೆರಗು ಬಂದವೇ ಹೊರತು, ಅವರು ವಹಿಸಿಕೊಂಡ ಖಾತೆಗಳಿಂದ ಅವರಿಗೆ ಮೆರಗು ಬರಲಿಲ್ಲ.

ಕೆ.ಎಚ್. ರಂಗನಾಥ್
ಅರಣ್ಯ ಸಚಿವರು.

ರಾಚಯ್ಯ ಅವರು ರಾಜಕಾರಣದ ಧೀರ್ಘ ಅವಧಿಯಲ್ಲಿ ಎಲ್ಲಿಯೂ ಹೆಸರು ಕೆಡಿಸಿಕೊಳ್ಳದೆ ಶುದ್ಧ ಹಸ್ತರಾಗಿ ಜನಸೇವೆಮಾಡಿಕೊಂಡು ಬಂದ ದಲಿತವರ್ಗದ ಒಬ್ಬ ಸಮರ್ಥ ನಾಯಕರು. ಅವರು ರಾಜ್ಯಸರ್ಕಾರದಲ್ಲಿ, ಸಚಿವರಾಗಿದ್ದಾಗ ನಾನು ಅವರ ಜೊತೆ ಜಗಳ ಮಾಡಿದ್ದೆ, ಆದರೂ ಅವರು ಕೊಪಿಸಿಕೊಳ್ಳದೆ ನನಗೆ ಹಿತವಚನ ಹೇಳಿದರು. ನಾನು ವಿರೋಧ ಪಕ್ಷದ ಶಾಸಕನಾಗಿದ್ದಾಗ ನನ್ನ ಕ್ಷೇತ್ರದ ಅಭಿವೃದ್ಧಿ ಕಾರ್ಯಕ್ಕೆ ಸಂಬಂಧಿಸಿದಂತೆ ಅವರಿಗೆ ದೂರವಾಣಿ ಮಾಡಿ 'ಏನ್ರಿ ನಮ್ಮ ಫೈಲ್ ಗಳನ್ನೆಲ್ಲಾ ದಿಂಬು ಮಾಡಿಕೊಂಡು ಕುಂತಿದ್ದೀರಾ ಎಂದು ಖಾರವಾಗಿ ಪ್ರಶ್ನಿಸಿದ್ದೆ.' ಆ ಮಾತಿನಿಂದ ಕೋಪಗೊಳ್ಳದ ರಾಚಯ್ಯನವರು 'ಏನಪ್ಪ ನೀನಿನ್ನೂ ರಾಜಕೀಯವಾಗಿ ಬೆಳೆಯಬೇಕಾದವನು ಇಷ್ಟು ಉಗ್ರರಾಗಿ ಆವೇಶ ಭರಿತನಾದರೆ ಹೇಗೆ? ತಾಳ್ಮೆ ಕಲಿತು ಕೊಳ್ಳಬೇಕೆಂದು ಬುದ್ಧಿ ಹೇಳಿದರು' ಅನಂತರ ಅವರು ನನ್ನ ಕ್ಷೇತ್ರಕ್ಕೆ

## ಗಣ್ಯರ ದೃಷ್ಟಿಯಲ್ಲಿ ಬಿ- ರಾಚಯ್ಯ

### (ದಿನಾಂಕ 15-3-2000 ರಂದು, ರಾಜ್ಯದ ಉಭಯ ಸದನಗಳಲ್ಲಿ ಬಿ. ರಾಚಯ್ಯನವರ ಬಗ್ಗೆ ವ್ಯಕ್ತಪಡಿಸಿದ ಶ್ರದ್ಧಾಂಜಲಿಯ ಭಾಗ)

ಶ್ರೀ ರಾಚಯ್ಯನವರು ನಾವು ಕಂಡಂಥ ಒಬ್ಬ ಸೌಜನ್ಯಶೀಲ ನಾಯಕರು. ಶ್ರೀ ಬಿಯ ರಾಚಯ್ಯನವರು ಸಮಾಜವಾದಿ ಪಕ್ಷದಲ್ಲಿ ತಮ್ಮ ಗುರುಡನ್ನು ಮತ್ತು ಬೆಲೆಯನ್ನು ಕಂಡುಕೊಂಡಂಥವರು. ಅವರು ಸಮಾಜವಾದಿ ಚಿಂತನೆ, ಅನಂತರ ಕಾಂಗ್ರೇಸ್ ಸಂಸ್ಥೆಯ ಜೊತೆಯಲ್ಲಿ ನಿಕಟವಾದ ಸಂಪರ್ಕವನ್ನು ಪಡೆದುಕೊಂಡು ನಮ್ಮಂಥವರಿಗೆ ಸ್ಫರ್ತಿಯನ್ನು ತಂದುಕೊಟ್ಟಂಥ ಒಬ್ಬ ವಿಶಿಷ್ಟವಾದ ನಾಯಕರು. ಯಾವ ಟೀಕೆ ಟಿಪ್ಪಣಿಗಳ ಹಿಂದೆಯೂ ಕೂಡ ಅದಕ್ಕೆ ಯಾವುದೇ ತರಹದ ವ್ಯಕ್ತಿತ್ವದ ಲೇಪ ಶ್ರೀ ರಾಚಯ್ಯನವರು ಹಾಕುತ್ತಿರಲಿಲ್ಲ. ಇವತ್ತು ಅಷ್ಟು ಇಷ್ಟು ನಮ್ಮಲ್ಲಿ ಸೌಜನ್ಯಶೀಲತೆ, ಉಂಟಾಗಿದ್ದರೆ ನಾವು ರಾಚಯ್ಯನವರಂಥ ನಾಯಕರನ್ನು ನೋಡಿ ಕಲಿತುಕೊಂಡಿದ್ದು. ನಾವು ಕಳೆದ ಮೂವತ್ತೇಳು ವರ್ಷಗಳಿಂದ ಅವರನ್ನು ನೋಡುತ್ತಾ ಬಂದಿದ್ದೇನೆ. ಅವವ ಭಾಷಣಗಳನ್ನು ಕೇಳಿದ್ದೇನೆ, ಅವರು ಒಬ್ಬ ಗಾಂಧಿವಾದಿ. ಅವರಿಗೆ ರಾಷ್ಟ್ರೀಯತೆಯ ಬಗ್ಗೆ ಉಜ್ವಲ ಅಭಿಮಾನ ಇತ್ತು ಗಾಂಧಿಯ ಬಗ್ಗೆ ವಿಶೇಷವಾದ ಒಲವು ಇತ್ತು.

ಶ್ರೀ ಎಸ್. ಎಂ. ಕೃಷ್ಣ
(ಮುಖ್ಯ ಮಂತ್ರಿಗಳು)

ಶ್ರೀ ಬಿ. ರಾಚಯ್ಯನವರು ದಲಿತರ ಬಗ್ಗೆ ಮತ್ತು ಹಿಂದುಳಿದ ವರ್ಗದವರ ಬಗ್ಗೆ ಬಹಳಷ್ಟು ಕಾಳಜಿಯನ್ನು ಇಟ್ಟುಕೊಂಡಂತಹ ವ್ಯಕ್ತಿಯಾಗಿದ್ದರು. ತಮಗೆ ಕೊಟ್ಟಂತಹ ಯಾವುದೇ ಒಂದು ಜವಾಬ್ದಾರಿಯನ್ನು ಅತ್ಯಂತ ಸರಳವಾಗಿ ಮತ್ತು ಪ್ರಾಮಾಣಿಕವಾದಂತಹ, ನಿಷ್ಠೆಯಿಂದ ಮಾಡಿದಂತಹ ವ್ಯಕ್ತಿಯಾಗಿದ್ದರು.

ಶ್ರೀ ಜಗದೀಶ್ ಶೆಟ್ಟರ್
(ವಿಧಾನ ಸಭಾ ವಿರೋಧ ಪಕ್ಷದ ನಾಯಕರು)

ನಮ್ಮ ಕರ್ನಾಟಕದಲ್ಲಿ ವಿಶೇಷ ಸೇವೆಯನ್ನು ಸಲ್ಲಿಸಿರತಕ್ಕಂಥ ಸನ್ಮಾನ್ಯ ಬಿ.ರಾಚಯ್ಯನವರು ಸಜ್ಜನಿಕೆ, ಸೌಜನ್ಯ ಅವರ ದೊಡ್ಡತನ ಬಹುಷಃ ನಾನು ಹೋಲಿಕೆ ಮಾಡುವುದಾದರೆ ಶಂಕರ್ ದಯಾಳ್ ಶರ್ಮ ಅವರಿಗಿಂತ ಏನು ಕಡಿಮೆ ಇರಲಿಲ್ಲ. ಆ ಎರಡೂ ವ್ಯಕ್ತಿಗಳಲ್ಲಿ ದೊಡ್ಡ ಸಜ್ಜನಿಕೆ ಕಂಡುಬರುತ್ತಿತ್ತು. ಅವರು ಯಾವುದೇ ಪಕ್ಷದವರಾಗಲಿ ಅವರನ್ನು ನೋಡುವಾಗ ಅವರು ಆ ಪಕ್ಷದವರು, ಈ ಪಕ್ಷದವರು ಎಂದು ಅನಿಸುತ್ತಾ ಇರಲಿಲ್ಲ. ಅಷ್ಟೊಂದು ಶ್ರೇಷ್ಠ ಸೇವಕರಾಗಿ, ಆಡಳಿತಗಾರರಾಗಿ ಕೆಲಸ ಮಾಡಿದವರು. ನಮ್ಮ ರಾಜ್ಯ ಅಭಿವೃದ್ಧಿ ಪಥವನ್ನು ತಾಳುವುದಕ್ಕೆ ಅವರು ವಿಶೇಷವಾಗಿರತಕ್ಕಂಥ ಸೇವೆಯನ್ನು ಸಲ್ಲಿಸಿದ್ದಾರೆ. ಅವರು ರಾಜ್ಯಪಾಲರಾಗಿ

ಏನನ್ನಾದರೂ ಕಾಣಿಕೆ ನೀಡುವಂಥ ವಿಶಿಷ್ಟ ತಜ್ಞತೆ ಹಾಗೂ ಇವೆಲ್ಲಕ್ಕಿಂತ ಹೆಚ್ಚಾಗಿ ರಾಷ್ಟ್ರೀಯವಾದದ ವಿಶಿಷ್ಟ ಪ್ರಜ್ಞೆ-ಇವು ರಾಷ್ಟ್ರವನ್ನು ಪ್ರಗತಿ ಮತ್ತು ಅಭ್ಯುದಯದತ್ತ ಕೊಂಡೊಯ್ಯುತ್ತವಲ್ಲಿ ದೇಶದ ಇತರ ಭಾಗಗಳು ಜನತೆಗೆ ಕೇರಳ ಸ್ಫೂರ್ತಿ ನೀಡುತ್ತಿರಲಿ.

ಜೈ ಹಿಂದ್

## ಬೀಳ್ಕೊಡುಗೆ ಸಂದರ್ಭದಲ್ಲಿ ಕೇರಳ ಜನತೆಗೆ ರಾಚಯ್ಯನವರ ಕೃತಜ್ಞತೆ *

ಈ ರಾಜ್ಯದಲ್ಲಿ ನನ್ನ ಅಧಿಕಾರ ಪರಿತ್ಯಜಿಸುವ ಮುನ್ನ ನನ್ನ ಬಗ್ಗೆ ಅಪಾರವಾದ ಪ್ರೀತಿ, ವಾತ್ಸಲ್ಯಗಳನ್ನು ತೋರಿಸುವ ರಾಜ್ಯದ ಅಸಂಖ್ಯಾತ ಸ್ತ್ರೀ, ಪುರುಷರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ನಾನು ಸಚಿವರಾಗಿ ಕರ್ನಾಟಕದಲ್ಲಿ ಸುದೀರ್ಘವಾದ ಸೇವೆ ಸಲ್ಲಿಸಿದ್ದೇನೆ. ಸ್ವಲ್ಪ ಸಮಯ ಕೇಂದ್ರದಲ್ಲಿ ಸಚಿವನಾಗಿ ಹಾಗೂ ಕೆಲವು ತಿಂಗಳ ಕಾಲ ಹಿಮಾಚಲ ಪ್ರದೇಶದಲ್ಲಿ ರಾಜ್ಯಪಾಲನಾಗಿಯೂ ಸೇವೆ ಸಲ್ಲಿಸಿದೆ. ಎಲ್ಲಾ ಕಡೆಯೂ ಜನರು ನನ್ನ ಬಗ್ಗೆ ಸೌಹಾರ್ದದಿಂದಲೇ ಇದ್ದರು. ಆದರೆ, ನನ್ನ ಬಗ್ಗೆ ಈ ರಾಜ್ಯದ ಜನತೆ ಪ್ರಕಟಿಸಿದ ವಾತ್ಸಲ್ಯ ಹಾಗೂ ತೋರಿದ ಗೌರವಗಳು ವಿಶೇಷವಾದುವಾಗಿದ್ದು, ಅವಿಸ್ಮರಣೀಯವಾಗಿವೆ.

ನಾನು ಮತ್ತು ನನ್ನ ಮಡದಿ ಇಲ್ಲಿದ್ದ ಕಾಲದ ಸಿಹಿ ನೆನಪುಗಳ ಬಗ್ಗೆ ಅವರಿಗೆಲ್ಲ ಕೃತಜ್ಞತೆ ಹೇಳಲು ಮಾತುಗಳೇ ಬರುವುದಿಲ್ಲ, ಹೃದಯ ತುಂಬಿ ಬಂದಾಗ ಮಾತು ಹೊರಡುವುದಿಲ್ಲ ಎಂದು ಹೇಳುವುದುಂಟು, ಅದೇ ಪರಿಸ್ಥಿತಿಯಲ್ಲಿ ಇಂದು ನಾವು ಇದ್ದೇವೆ. ಈ ಸುಂದರವಾದ ರಾಜ್ಯದ ಬುದ್ಧಿ ಜನರ ಪ್ರೀತಿ ವಾತ್ಸಲ್ಯಗಳಿಂದ ನಾನು ಮೂಕನಾಗಿ ಬಿಟ್ಟಿದ್ದೇನೆ. ನನಗೆ ಆನಂದವುಂಟು ಮಾಡಿದ ಅಂಶವೆಂದರೆ, ನನ್ನ ಪ್ರಾಮಾಣಿಕತೆಯ ಬಗ್ಗೆ ಯಾರು ಎಂದಿಗೂ ಸಂದೇಹ ಪಡದಿದ್ದುದು ಮತ್ತು ನಾನು ಯಾವುದೇ ಕೆಲಸ ಮಾಡಿದ್ದರೂ ಅದು ರಾಜ್ಯದ ವ್ಯಾಪಕ ಹಿತಾಸಕ್ತಿಗಳಿಂದಷ್ಟೇ ಎಂಬ ಅಂಶವನ್ನು ಮನಗಂಡುದಾಗಿದೆ.ಹೆಚ್ಚಿನ ಜನರು ಇತರರ ಬಗ್ಗೆ ಶಂಕೆ ಪಡುವಂಥಾ ಇಂದಿನ ಪರಿಸ್ಥಿತಿಯಲ್ಲಿ, ಇಲ್ಲಿ ನಡೆದಂಥದ್ದು ತುಂಬಾ ವೈರುದ್ಧ್ಯದ ಅಂಶವಾಗಿತ್ತು. ಇದಕ್ಕೆ ಕಾರಣ ಹೊರಗಿನವರ ಬಗ್ಗೆ ಪರಿಗಣನೆ ಹಾಗೂ ಸಾಂಸ್ಕೃತಿಕ ಸಂಶ್ಲೇಷಣೆಯಿಂದ ವಿಕಾಸಗೊಂಡಂಥ ಮಹಾನ್ ಸಂಸ್ಕೃತಿಯಿಂದ ಮೂಡಿದ ಹೃತ್ಪೂರ್ವಕ ಮನೋಭಾವವೂ ಆಗಿದ್ದಿರಬಹುದು ಕಾರಣವೇನೇ ಇರಲಿ ಇಂಥ ವಿಶಿಷ್ಟ ಅನುಭವ ಲಭಿಸುವುದು ವಿರಳವೇ ಆಗಿರುತ್ತದೆ.

ಈ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಈ.ಕೆ. ನಯನಾರ್, ಶ್ರೀ ಕೆ. ಕರುಣಾಕರನ್ ಮತ್ತು ಶ್ರೀ ಎ.ಕೆ. ಆಂಟೋನಿಯವರ ಸಂಪೂರ್ಣ ನೆರವು, ಸಹಕಾರಗಳನ್ನು ಮರೆಯಲಾರೆ ನನ್ನ ಅವರ ಸಂಬಂಧಗಳು ಸುಮಧುರವಾಗಿದ್ದವು.

ಕೇರಳದ ಜನತೆ ಭವ್ಯ ಹಾಗೂ ಉಜ್ವಲ ಭವಿಷ್ಯವನ್ನು ಮತ್ತೊಮ್ಮೆ ಹಾರೈಸುತ್ತೇನೆ. ದಕ್ಷಿಣದ ಈ ಸಣ್ಣ ರಾಜ್ಯ ಅನೇಕ ಸಮಸ್ಯೆಗಳು ಹಾಗೂ ಸಂಕಷ್ಟಗಳನ್ನು ಎದುರಿಸುತ್ತಿದೆ. ಸಮಸ್ಯೆಗಳು ಇರಲೇಬೇಕು; ಆದರೆ ಅವು ನಮ್ಮನ್ನು ಧೈರ್ಯಗೆಡಿಸಬಾರದು. ಎಲ್ಲ ಸವಾಲುಗಳನ್ನು ಎದುರಿಸುತ್ತ, ಕಷ್ಟಗಳನ್ನು ಪರಿಹರಿಸಿಕೊಳ್ಳುತ್ತಾ ಮಾನವ ಪ್ರಯತ್ನದ ಪ್ರತಿಯೊಂದು ಕ್ಷೇತ್ರಕ್ಕೂ

---

* ತಿರುವನಂತಪುರಂ ದಿನಾಂಕ 11ನೇ ನವೆಂಬರ್, 1955

ಅಪವಿತ್ರವಾದುದಾಗಿತ್ತು. ದೇವಾಲಯಗಳ ಪ್ರತಿಷ್ಠಾಪನೆಗೆ ಎಜವರ ಹಕ್ಕಿನ ಬಗ್ಗೆ ಉಚ್ಚ ಬ್ರಾಹ್ಮಣರು ಪ್ರಶ್ನಿಸಿದಾಗ ಅವರು ತಾವು 'ಎಜವ ಶಿವನನ್ನು' ಪ್ರತಿಷ್ಠಾಪಿಸುತ್ತಿರುವುದೇ ವಿನಾ 'ಬ್ರಾಹ್ಮಣ ಶಿವ' ನನ್ನಲ್ಲ ಎಂಬ ಪ್ರಸಿದ್ಧ ಉತ್ತರ ನೀಡಿದರು. ಸಾಮಾನ್ಯ ವ್ಯಕ್ತಿಯ ಆಧ್ಯಾತ್ಮಿಕ ಹಂಬಲ ಹಾರೈಕೆಗಳನ್ನು ತೃಪ್ತಿಪಡಿಸಲು ದೇವಾಲಯಗಳು ಅಗತ್ಯ ಎಂದು ಅವರು ಭಾವಿಸಿದ್ದರು; ಹಾಗಾಗಿ ಕೇರಳದ ಅನೇಕ ಭಾಗಗಳಲ್ಲಿ ದೇವಾಲಯಗಳನ್ನು ಸ್ಥಾಪಿಸಿದರು. ತಮ್ಮ ಸಮುದಾಯದ ಜನರಿಗಷ್ಟೇ ಅಲ್ಲದೆ ಪುಲರು ಹಾಗೂ ಇನ್ನಿತರ ಕೆಳ ವರ್ಗದವರಿಗೆ ದೇವಾಲಯ ಪ್ರವೇಶಾವಕಾಶ ಕಲ್ಪಿಸಿದರು. ವಾಸ್ತವವಾಗಿ ಇದು ಮೌನವಾದ ರಕ್ತರಹಿತ ಕ್ರಾಂತಿಯ ಆರಂಭವಾಗಿದ್ದು, ಇದು ಮುಂದೆ ಮಹಾನ್ ಸಾಮಾಜಿಕ ಪರಿವರ್ತನೆಗೆ ಎಡೆಮಾಡಿಕೊಟ್ಟಿತು.

ಮಾನವ ಜನಾಂಗದ ಮೂಲಭೂತ ಏಕತೆಯನ್ನು ಸಾರ್ವತ್ರಿಕ ತತ್ತ್ವಕವಾಗಿ ಕಂಡುಕೊಂಡು, ಪ್ರತಿಯೊಬ್ಬ ವ್ಯಕ್ತಿಯ ಸುಖದಲ್ಲಿ ಇಡೀ ಸಮುದಾಯದ ಸುಖ ಸೇರುವುದು ಎಂದು ಜನತೆಗೆ ಬೋಧಿಸುವುದರಿಂದ ಅಸಮಾನತೆಯ ಇಡೀ ಮೂಲವನ್ನೇ ನಿರ್ಮೂಲ ಮಾಡುವುದು ಶ್ರೀ ನಾರಾಯಣ ಗುರುಗಳ ಗುರಿಯಾಗಿತ್ತು. ಅವರು ಮಾನವನಿಗೆ ಒಂದೇ ಜಾತಿ, ಒಂದೇ ಧರ್ಮ ಮತ್ತು ಒಬ್ಬನೇ ದೇವರು ಎಂಬ ತಮ್ಮ ಪ್ರಸಿದ್ಧ ಸೂಕ್ತಿಯನ್ನು ಉಚ್ಚರಿಸಿದಾಗ, ಅವರು ಕೇವಲ ಕಾವ್ಯಾತ್ಮಕ ಮನೋಭಾವವನ್ನಷ್ಟೇ ಉಚ್ಚರಿಸದೆ ಸರ್ವರಲ್ಲಿಯೂ ಪ್ರಕಾಶಗೊಳ್ಳುವ ಒಬ್ಬನ ವಾಸ್ತವತೆಯ ಅಂಶವನ್ನು ಕಾಣುತ್ತಿದ್ದರು. ಅವರ ಸಂದೇಶ ಮತ್ತು ಸಲಹೆ ಸೂಚನೆ ಹೇಗಿತ್ತೆಂದರೆ ಅಧು ವಿವಿಧ ಧರ್ಮಗಳು ಸಹಜೀವನ ನಡೆಸುತ್ತ, ವಿವಿಧ ಧರ್ಮಾನುಯಾಯಿಗಳು ಮೈತ್ರಿ ಮತ್ತು ಭ್ರಾತೃತ್ವದಿಂದ ಇರಲು ನೆರವಾಗುವಂತಿತ್ತು. ಇದೇ ಅವರ ಸಂದೇಹದ ಮಹತ್ತ್ವ ಧರ್ಮ ಯಾವುದೇ ಇರಲಿ, ವ್ಯಕ್ತಿ ಒಳ್ಳೆಯವನಾದರೆ ಅಷ್ಟೇ ಸಾಕು.

ಶ್ರೀ ನಾರಾಯಣ ಗುರುಗಳು ದರ್ಶನ ಪ್ರೀತಿ ಅನುಕಂಪಪೂರಿತವಾಗಿದ್ದು, ದ್ವೇಷ ಲವಲೇಶವೂ ಅದರಲ್ಲಿಲ್ಲ. ಮಾನವ ಜನಾಂಗವು ಒಂದು ಕುಟುಂಬ ಮತ್ತು ರಾಷ್ಟ್ರೀಯ ಪರಂಪರೆಗಳು ಇಡೀ ಮಾನವ ಜನಾಂಗದ ಪರಂಪರೆಗಳು ಎಂದು ಭಾವಿಸುವಷ್ಟು ಪ್ರೌಢರಾಗುವವರೆಗೂ, ಗುರುಗಳ ಬೋಧನೆಗಳು ಸುಸಂಗತವಾಗಿಯೇ ಉಳಿಯುತ್ತವೆ.

ಮಿತ್ರರೆ, ಶ್ರೀ ನಾರಾಯಣ ಗುರುಗಳ ಮಹಾನ್ ಕೊಡುಗೆಗಳ ಬಗ್ಗೆ ನಾನು ಸುದೀರ್ಘವಾಗಿ ಚರ್ಚಿಸುವುದಿಲ್ಲ. ಅವರು ಕಾಲ ಪ್ರವಾಹದಲ್ಲಿ ಅಚ್ಚಳಿಯಾದ ಹೆಜ್ಜೆ ಗುರುತುಗಳನ್ನು ಮೂಡಿಸಿರುವವರು; ಅರುವಿಪ್ಪುರಂನ ದೇವಾಲಯದ ಗೋಡೆಯ ಮೇಲೆ ಕೇರಳ ಸುಂದರವಾಗಿ ಅವರು ಬರೆದಿರುವುದನ್ನು ನಾವು ನೆನಪಿಸಿಕೊಳ್ಳೋಣ. 'ದ್ವೇಷ ಅಥವಾ ಜಾತಿ ಭೇಧವಿಲ್ಲದೆ ಭ್ರಾತೃತ್ವದಿಂದ ಎಲ್ಲರೂ ಇರುವ ವಿನೂತನ ಮಾದರಿಯ ಸ್ಥಳವಿದು' ಆದರ್ಶವು ಒಂದು ವಾಸ್ತವವಾಗುವಂತೆ ಮಾಡುವ ಸಲುವಾಗಿ ಇಡೀ ದೇಶವನ್ನು ಅಂಥ ಆನಂದಮಯ ತಾಣವನ್ನಾಗಿ ಮಾಡಲು ನಾವೆಲ್ಲ ಶ್ರಮಿಸೋಣ.

ಜೈ ಹಿಂದ್

## ಶ್ರೀ ನಾರಾಯಣ ಗುರು ಪ್ರತಿಮೆ ಅನಾವರಣ *

ಸಂತರು, ದ್ರಷ್ಟಾರರು ಹಾಗೂ ದಾರ್ಶನಿಕರಾಗಿದ್ದ ಶ್ರೀ ನಾರಾಯಣ ಗುರು ಅವರ ಪ್ರತಿಮೆಯನ್ನು ಇಂದು ಅನಾವರಣಗೊಳಿಸುವುದು ಹೆಮ್ಮೆಯ ವಿಷಯವೆಂದು ಭಾವಿಸುತ್ತೇನೆ. ಆಧ್ಯಾತ್ಮಿಕತೆ ಹಾಗೂ ಶ್ರೀಮಂತ ಸಾಂಸ್ಕೃತಿಕ ಪರಂಪರೆಯ ಸುದೀರ್ಘ ಇತಿಹಾಸವಿರುವ ಭಾರತ ಅನೇಕ ಸಂತರು, ದಾರ್ಶನಿಕರು ಮತ್ತು ಸಮಾಜ ಸುಧಾರಕರನ್ನು ನೀಡಿದೆ. ಅಂಥವರ ಪೈಕಿ ಶ್ರೀ ನಾರಾಯಣ ಗುರು ಅವರಿಗೆ ವಿಶಿಷ್ಟ ಸ್ಥಾನವಿದೆ. ಅವರು ಸಂತ ಸುಧಾರಕರು; ಅವರಿಗೆ ಆ ಪರಿಹಾರ್ಯವಾದವು ಎಂದು ಪರಿಗಣಿಸಲಾಗಿದ್ದ, ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರವಾಗಿ ಮಾನವ ಜನಾಂಗದ ಮೂಲಭೂತ ಏಕತೆಯನ್ನು ಮನಗಂಡು, ಅದನ್ನು ಕಾರ್ಯರೂಪಕ್ಕೆ ತಂದಂಥ ಮಹಾನುಭಾವರು. ಅವರ ಆಧ್ಯಾತ್ಮಿಕ ಶಕ್ತಿಯನ್ನು ನಮ್ಮ ಸಾಮಾಜಿಕ ಜೀವನದ ಕಾಯಕರೂಪದ ವಲಯಕ್ಕೆ ಅನ್ವಯಿಸಿದುದರಿಂದ ಮಾನವ ನಿರ್ಮಿತ ಮೇಲ್ಪದರ ಅಡ್ಡಿ ಆತಡೆಗಳಿಂದ ಹಲವಾರು ಶತಮಾನಗಳ ಕಾಲ ಪ್ರತ್ಯೇಕಿತರಾಗಿದ್ದ ಜನರನ್ನು ಒಂದುಗೂಡಿಸಿತು. ಶ್ರೀ ನಾರಾಯಣ ಗುರು ಸಂಪೂರ್ಣವಾಗಿ ಹೊಸ ತತ್ತ್ವ ಶಾಸ್ತ್ರ ನೀಡಿದರು. ಅದರ ಪ್ರಭಾವವನ್ನು ಇಂದಿನ ನಮ್ಮ ಸಮಾಜದ ಪ್ರತಿಯೊಂದು ಆರೋಗ್ಯಕರವಾದ ಪ್ರವೃತ್ತಿ ಮತ್ತು ಅಭಿವೃದ್ಧಿಯ ಹಿನ್ನೆಲೆಯಲ್ಲಿ ನಾವು ಗಮನಿಸಬಹುದಾಗಿದೆ. ಅದರ ಪ್ರಭಾವವನ್ನು ಕೇರಳದಲ್ಲಿ ಹಾಗೂ ಬಹುಮಟ್ಟಿಗೆ ರಾಷ್ಟ್ರದಲ್ಲಿನ ರಾಜಕೀಯ ಸಾಮಾಜಿಕ, ಆಧ್ಯಾತ್ಮಿಕ ಅಥವಾ ಆರ್ಥಿಕವಾದ ಯಾವುದೇ ಚಳುವಳಿಯಲ್ಲಿ ಗಮನಿಸಬಹುದಾಗಿದೆ.

ಶ್ರೀ ನಾರಾಯಣ ಗುರು ಅವರು ಇತಿಹಾಸದ ಪಥವನ್ನು ದಿಟ್ಟವಾಗಿ ಎದುರಿಸಿದರು; ಭಾರತದ ಧಾರ್ಮಿಕ ಶಿಷ್ಟಾಚಾರದ ಬುನಾದಿಯನ್ನೇ ಅಲುಗಾಡಿಸಿಬಿಟ್ಟರು. ಪ್ರಪಂಚದ ಇತರ ಭಾಗಗಳಲ್ಲಿ ಎಲ್ಲಿಯೂ ಕಂಡು ಬಾರದಿದ್ದ ಸಾಮಾಜಿಕ ಅಸಮಾನತೆಯ ಅತ್ಯಂತ ಹೀನಾಯಕರ ಪದ್ಧತಿಯನ್ನು ಭಾರತ ಅನುಸರಿಸುತ್ತಿದ್ದಿತು. ಅವರ ಸತತ ಪ್ರಯತ್ನ ಹಾಗೂ ಕ್ರಿಯಾಶೀಲ ನಾಯಕತ್ವದಿಂದಾಗಿ (ಸಮಾಜದಿಂದ ಬಹಿಷ್ಕೃತರಾಗಿದ್ದ ಲಕ್ಷಾಂತರ ಮಂದಿ) ತಮ್ಮ ಸಾಮಾಜಿಕ ವ್ಯಕ್ತಿತ್ವವನ್ನು ಕಂಡುಕೊಳ್ಳುವಂತಾಯಿತು. ಅವರು ಜಾತಿ ಪದ್ಧತಿಯ, ಸಂಪೂರ್ಣ ನಾಶಕ್ಕಾಗಿಯಲ್ಲದಿದ್ದರೂ, ಜಾತಿ ಪದ್ಧತಿಯ ಕಟ್ಟು ಪಾಡುಗಳ ಕಾಠಿಣ್ಯವನ್ನು ತಗ್ಗಿಸಲು ತೀವ್ರವಾಗಿ ಚಳವಳಿ ನಡೆಸಿದರು. ಸ್ವಾಮಿ ವಿವೇಕಾನಂದರು ಕೇರಳವನ್ನು 'ಹುಚ್ಚರ ಆಸ್ಪತ್ರೆ' ಎಂದು ವಿವರಿಸಿದುದನ್ನು ನೆನಪಿಸಿಕೊಂಡರೆ ಆ ದಿನಗಳಲ್ಲಿ ಕೇರಳದಲ್ಲಿದ್ದ ಪರಿಸ್ಥಿತಿಯನ್ನು ನಾವು ಚೆನ್ನಾಗಿ ಕಲ್ಪಿಸಿಕೊಳ್ಳಬಹುದಾಗುತ್ತದೆ. ಕೆಟ್ಟ ಪದ್ಧತಿಗಳ ವಿರುದ್ಧ ಅವರ ಸ್ಫೂರ್ತಿ ಮತ್ತು ಮಾರ್ಗದರ್ಶನಗಳಿಂದ ಪ್ರಾರಂಭಿಸಲಾದ ಹೋರಾಟ ಕೇರಳದಲ್ಲಿ ಪ್ರಚಂಡ ಬಿರುಗಾಳಿಯನ್ನೆಬ್ಬಿಸಿತು. ಅರುವಿಪ್ಪುರಂನಲ್ಲಿ ದೇವಸ್ಥಾನದ ಪ್ರತಿಷ್ಠಾ ಕಾರ್ಯವೇ ಜಾತಿ ಪದ್ಧತಿಗೆ ಪ್ರಬಲವಾದ ಸವಾಲಾಯಿತು. ಆ ಕಾಲದಲ್ಲಿ ಪ್ರಚಲಿತವಿದ್ದ ಸಾಮಾಜಿಕ ಪದ್ಧತಿಯ ಪ್ರಕಾರ ದೇವಸ್ಥಾನಗಳ ಪ್ರತಿಷ್ಠಾ ಕಾರ್ಯವು ಬ್ರಾಹ್ಮಣರ ವಿಶೇಷ ಅಧಿಕಾರವಾಗಿತ್ತು. ಕೆಳ ಜಾತಿಯ ವ್ಯಕ್ತಿಯೊಬ್ಬನಿಂದ ಈ ಕಾರ್ಯಾಚರಣೆಯು ಯಾರೂ ಕಲ್ಪಿಸಿಕೊಳ್ಳಲಾರದಂಥ

* ಕಾಯಂ ಕುಲಂ, ಮೇನಂವಲ್ಲಿ ದಿನಾಂಕ 13ನೇ ನವೆಂಬರ್, 1991

ಮಕ್ಕಳಿಗಾಗಿ ರಾಷ್ಟ್ರೀಯ ವಿಜ್ಞಾನ ವಸ್ತು ಪ್ರದರ್ಶನ ವಿಜ್ಞಾನದಲ್ಲಿ ನಮ್ಮ ಭವಿಷ್ಯದ ಜನಾಂಗಕ್ಕಾಗಿ ಆಸಕ್ತಿಯನ್ನು ಮೂಡಿಸುತ್ತದೆ ಮತ್ತು ಅವರಲ್ಲಿ ಸೃಜನ ಶೀಲತೆಯನ್ನು ಅಭಿವೃದ್ಧಿ ಪಡಿಸುತ್ತದೆ ಎಂಬ ಭರವಸೆ ನನಗೆ ಇದೆ. ವಿವಿಧ ವೈಜ್ಞಾನಿಕ ಹಾಗೂ ತಂತ್ರಜ್ಞಾನಾತ್ಮಕವಾದ ಉತ್ತಮೀಕರಣಗಳು ಹಾಗೂ ನಾವಿನ್ಯೀ ಕರಣಗಳತ್ತ ಪ್ರಯತ್ನಿಸಲು ಕೂಡ ಅವರಿಗೆ ಪ್ರೇರಣೆ ನೀಡುತ್ತದೆ ಎಂಬುದು ನನ್ನ ಅನಿಸಿಕೆಯಾಗಿದೆ ಒಟ್ಟಿನಲ್ಲಿ, ಈ ವಸ್ತು ಪ್ರದರ್ಶನದ ಮೂಲ ಧ್ಯೇಯೋದ್ದೇಶಗಳು ಸಮಾಜಕ್ಕೆ ವಿಜ್ಞಾನದ ಸಮಂಜಸತೆ ಹಾಗೂ ಭವಿಷ್ಯದ ವಿಜ್ಞಾನಿಗಳಾಗಿ ಅವರ ಹೊಣೆಗಾರಿಕೆಯ ಬಗ್ಗೆ ಮಕ್ಕಳಲ್ಲಿ ಅರಿವು ಮೂಡಿಸುವುದಾಗಿದೆ. ಇದರಲ್ಲಿ ಸಮಸ್ಯೆಯನ್ನು ಪರಿಹರಿಸುವಂಥ ಮಾರ್ಗವನ್ನು ಪ್ರೋತ್ಸಾಹಿಸುವುದು, ಸೂಕ್ತತಂತ್ರಜ್ಞಾನವನ್ನು-ಅದರಲ್ಲಿಯೂ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಿಗಾಗಿ ತಂತ್ರಜ್ಞಾನವನ್ನು-ಅಭಿವೃದ್ಧಿಪಡಿಸುವುದು, ದೈನಂದಿನ ಜೀವನ ಪರಿಸ್ಥಿತಿಗಳಿಗೆ ಸಂಬಂಧಿಸಿದ, ವೈಜ್ಞಾನಿಕ ಭಾವನೆಗಳನ್ನು ಸಮೀಕರಿಸುವುದು ಇದರಲ್ಲಿ ಅಡಗಿದೆ. ಈ ವಸ್ತುಪ್ರದರ್ಶನ ಜನತೆಯಲ್ಲಿ ವಿಜ್ಞಾನವನ್ನು ಜನಪ್ರಿಯಗೊಳಿಸುವುದು ಹಾಗೂ ರಾಷ್ಟ್ರದ ಸಾಮಾಜಿಕ ಸಮಾಜ-ಆರ್ಥಿಕ ಬೆಳವಣಿಗೆಯಲ್ಲಿ ವಿಜ್ಞಾನದ ಪಾತ್ರದ ಬಗ್ಗೆ ಅರಿವನ್ನು ಮಾಡಿಸುವಲ್ಲಿ ಕೂಡ ನೆರವಾಗಬಹುದು.

ಭಾರತದಲ್ಲಿ ಇಂದು ಏನಾಗುತ್ತಿದೆ ಎಂದರೆ ನಮ್ಮ ಯುವ ವಿಜ್ಞಾನಿಗಳಿಗೆ ತರಬೇತಿ ನೀಡಲು ಅಪಾರಹಣವನ್ನು ಖರ್ಚುಮಾಡುತ್ತಿರುವುದೇ ಆಗಿದೆ. ವಾಸ್ತವವಾಗಿ ದೇಶದ ಪ್ರಗತಿ, ಅಭ್ಯುದಯಗಳಿಗಾಗಿ ಮಾಡಲು ಅವರಿಗೆ ಸಾಕಷ್ಟು ಕೆಲಸವೂ ಇದೆ. ಆದರೆ ಸಮೃದ್ಧ ರಾಷ್ಟ್ರಗಳು ನೀಡುವಂಥ ವೃತ್ತಿ ಪರ ಮುನ್ನಡೆ ಹಾಗೂ ಭೌತಿಕ ಸುಧಾರಣೆಗಳಿಂದಾಗಿ ಅವರು ಇತರ ರಾಷ್ಟ್ರಗಳಿಗೆ ವಲಸೆಹೋಗುವ ಪ್ರವೃತ್ತಿ ಕಂಡುಬರುತ್ತಿದೆ. ಇದರ ಒಟ್ಟಿನ ಪರಿಣಾಮ ಎಂದರೆ ಅಪಾರ ವೆಚ್ಚ ಮಾಡಿ ಶಿಕ್ಷಣ ನೀಡಿ, ತರಬೇತಿ ನೀಡಿದ ವಿಜ್ಞಾನಿಗಳು ನಮ್ಮ ಪಾಲಿಗೆ ಇಲ್ಲದವರಾಗುವುದಾಗಿದೆ. ಅದೇ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಕಡಿಮೆ ವೆಚ್ಚದಲ್ಲಿ ಚೆನ್ನಾಗಿ ತರಬೇತಿ ಪಡೆದವರನ್ನು ಪಡೆದು ಕೊಳ್ಳುವುದಾಗಿದೆ. ಈ ಪರಿಸ್ಥಿತಿಯನ್ನು ಬದಲಾಯಿಸಲು ನಾವು ಏನಾದರೂ ಮಾಡಬೇಕಾಗಿದೆ. ನಮ್ಮ ಯುವ ಜನಾಂಗವನ್ನು 21ನೇ ಶತಮಾನದ ಯೋಗ್ಯ ಪ್ರಜೆಗಳಾಗಿ ತರಬೇತುಗೊಳಿಸಲು ಇದು ಸಕಾಲವಾಗಿದೆ. ಮುಂದುವರಿದ ಇತರ ದೇಶಗಳಲ್ಲಿ ಆಗುತ್ತಿರುವ ತೀವ್ರವಾದ ವೈಜ್ಞಾನಿಕ ಪ್ರಗತಿಯ ಜೊತೆಗೆ ನಾವು ಸಾಗಬೇಕಾಗಿದೆ. ನಮ್ಮ ದೇಶ ವೈಜ್ಞಾನಿಕವಾಗಿ ಪ್ರಗತಿ ಹೊಂದಿದ, ಆರ್ಥಿಕವಾಗಿ ಮುನ್ನಡೆದ ಮತ್ತು ಅಂತರರಾಷ್ಟ್ರೀಯವಾಗಿ ಗೌರವ ಪ್ರತಿಷ್ಠೆಗಳು ಪಡೆಯುವಂತೆ ಮಾಡಬೇಕಾದರೆ ಪ್ರಾಮಾಣಿಕತೆ, ನಿಷ್ಠೆ, ಚಲದಿಂದ ಕೂಡಿದ ಪ್ರಯತ್ನ ಮಾಡಬೇಕು. ಇಂಥ ಸುವ್ಯವಸ್ಥಿತ, ಸುಸಂಘಟಿತ ವಸ್ತು ಪ್ರದರ್ಶನಗಳು ಈ ಧ್ಯೇಯ ಸಾಧನೆಗೆ ವಿದ್ಯಾರ್ಥಿಗಳಲ್ಲಿ ಅರಿವು, ಧೈರ್ಯ, ಹಾಗೂ ಭರವಸೆಗಳನ್ನು ಮೂಡಿಸುವುದೆಂದು ನನಗೆ ಖಚಿತರಾಗಿದೆ. ಪಂಡಿತ್ ಜವಾಹರಲಾಲ್ ನೆಹರು ಅವರ ಕನಸುಗಳು ನನಸಾಗುವುದೆಂದು ಆಶಿಸೋಣ ಹಾಗೂ ಅದಕ್ಕಾಗಿ ಪ್ರಾರ್ಥಿಸೋಣ.

ಜೈ ಹಿಂದ್

## ಜವಾಹರಲಾಲ ನೆಹರು ರಾಷ್ಟ್ರೀಯ ವಿಜ್ಞಾನ ವಸ್ತು ಪ್ರದರ್ಶನ ಉದ್ಘಾಟನೆ*

ಆಧುನಿಕ ಭಾರತದ ಶಿಲ್ಪಿ ಪಂಡಿತ್ ಜವಾಹರಲಾಲ್ ನೆಹರುರವರ ಜನ್ಮ ದಿನಾಚರಣೆಯನ್ನು ಆಚರಿಸುವ ಸಲುವಾಗಿ ವ್ಯವಸ್ಥೆಗೊಳಿಸಲಾಗಿರುವ ವಿಜ್ಞಾನ ವಸ್ತು ಪ್ರದರ್ಶನದಲ್ಲಿ ಪಾಲ್ಗೊಳ್ಳುವುದು ನನಗೆ ಹೆಮ್ಮೆಯ ಸಂಗತಿಯಾಗಿದೆ. ಈ ಹಸಿವು ಮತ್ತು ಬಡತನದ ಸಮಸ್ಯೆ, ಅನೈರ್ಮಲ್ಯ ಮತ್ತು ಅನಕ್ಷರತೆಯ ಸಮಸ್ಯೆ, ಮೂಢ ನಂಬಿಕೆಗಳು ಹಾಗೂ ಮೃತವಾದ (ಹೊರೆಯಾದ) ಪದ್ಧತಿ ಪರಂಪರೆ ಸಮಸ್ಯೆ, ವಿಪುಲ ಸಂಪನ್ಮೂಲಗಳು ವ್ಯರ್ಥವಾಗುತ್ತಿರುವ ಸಮಸ್ಯೆ, ಹಸಿವಿನಿಂದ ನರುಳುತ್ತಿರುವ ನಿವಾಸಿಗಳಿರುವ ಶ್ರೀಮಂತ ರಾಷ್ಟ್ರದ ಸಮಸ್ಯೆಯನ್ನು ವಿಜ್ಞಾನ ಮಾತ್ರವೇ ಪರಿಹರಿಸಬಲ್ಲದು. ವಿಜ್ಞಾನ ಮತ್ತು ವೈಜ್ಞಾನಿಕ ಮನೋಭಾವ ಹಾಗೂ ವಿಧಾನಗಳು ಮಾತ್ರವೇ ಇಂದಿನ ಜೀವನಕ್ಕೆ ಬುನಾದಿಯಾಗಬಲ್ಲುವು ಮತ್ತು ವಿಜ್ಞಾನದಲ್ಲಿ ಒಂದು ಕಡೆ ಸತ್ಯಾನ್ವೇಷಣೆ ಮತ್ತೊಂದು ಕಡೆ ಮಾನವ ಜನಾಂಗದ ಪುರೋವೃದ್ಧಿ ಅಡಗಿದೆ". ಎಂಬುದು ಪಂಡಿತ್‌ಜಿ ಅವರ ಅಭಿಪ್ರಾಯವಾಗಿತ್ತು.

ದೇಶವು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ವಿಜ್ಞಾನ ಹಾಗೂ ವೈಜ್ಞಾನಿಕ ಕ್ರಮದಲ್ಲಿ ಅವರಿಗಿದ್ದ ಸ್ಪಷ್ಟ ನಿಲುವನ್ನು ಪಂಡಿತ್ ಜೀಯವರ ಈ ದಿಟ್ಟವಾದ ಹೇಳಿಕೆ ಪ್ರಕಟಪಡಿಸುತ್ತವೆ. ವಿಜ್ಞಾನದ ಪ್ರಮುಖ ಉದ್ದೇಶಗಳ ಪೈಕಿ ಒಂದು ಮಾನವ ಜನಾಂಗದ ಅನುಕೂಲಕ್ಕಾಗಿ ಅತಿಕಡಿಮೆಯಿಂದ ಹೆಚ್ಚಿನದನ್ನು ಪಡೆಯಲು ಕನಿಷ್ಟ ಶಕ್ತಿ ಮತ್ತು ಪದಾರ್ಥಗಳನ್ನು ಬಳಸುವಂಥ ಮತ್ತು ಜೀವನ ಕ್ರಮಗಳನ್ನು ನೀಡುವಂಥ ತಂತ್ರ ಜ್ಞಾನಗಳನ್ನು ಅಭಿವೃದ್ಧಿ ಪಡಿಸುವುದಾಗಿರುತ್ತದೆ. ಭಾರತದಲ್ಲಿನ ನಾವು ಸ್ವಾತಂತ್ರಗಳಿಸಿದಾಗಿನಿಂದಲೂ ಮಹಾನ್ ದ್ರಷ್ಟಾರರಾಗಿದ್ದ ಈ ಧ್ಯೇಯೋದ್ದೇಶಗಳ ಸಾಧನೆಗಾಗಿ ಶ್ರಮಿಸುತ್ತಲೇ ಇದ್ದೇವೆ. ನಮ್ಮ ಗುರಿಗಳನ್ನು ತಲುಪುವಲ್ಲಿ ತೀವ್ರ ಪ್ರಗತಿ ಸಾಧಿಸಿದ್ದೇವೆ. ಆದರೆ ಅಭಿವೃದ್ಧಿ ಹೊಂದಿದ ದೇಶಗಳ ಹೆಔಲೆಣೆಯಾಗಿ ನಿಲ್ಲಬೇಕಾದಲ್ಲಿ ಕ್ರಮಿಸಬೇಕಾದ ದೂರ ಇನ್ನೂ ಬಹಳವಿದೆ.

ಇಪ್ಪತ್ತನೆಯ ಶತಮಾನ ವೈಜ್ಞಾನಿಕ ಮುನ್ನಡೆಯ ಯುಗವಾಗಿದೆ. ಪಂಡಿತ್‌ಜೀಯವರು ಅಭಿಪ್ರಾಯಪಟ್ಟಿರುವಂತೆ "ವಿಜ್ಞಾನ ಮತ್ತು ತಂತ್ರಜ್ಞಾನ ಮಾನವ ಜನಾಂಗವನ್ನು ಅದರ ಅನೇಕ ಹೊರೆಗಳಿಂದ ಮುಕ್ತ ಗೊಳಿಸಿವೆ ಮತ್ತು ಅವು ನಮಗೆ ಹೊಸನೋಟ ಮತ್ತು ಮಹಾನ್ ಶಕ್ತಿಯನ್ನು ನೀಡಿವೆ. ನಮ್ಮ ಎಲ್ಲ ಕಾರ್ಯಗಳನ್ನು ಬುದ್ಧಿಶಕ್ತಿ ನಿಯಂತ್ರಿಸಿದಲ್ಲಿ ಈ ಶಕ್ತಿಯನ್ನು ಸಕಲರ ಕಲ್ಯಾಣಕ್ಕಾಗಿ ಬಳಸಿಕೊಳ್ಳಬಹುದು. ಮಹಾನ್ ಪ್ರಗತಿಗಳು ಮತ್ತು ಸಾಧನೆಗಳು ಇನ್ನೇನು ತನಗೆ ದಕ್ಕೂವುದೋ ಎನಿಸುವಷ್ಟುರಲ್ಲಿ ಪ್ರಪಂಚವು ಹುಚ್ಚುತನದ್ದೋ ಮೂರ್ಖತನದ್ದೋ ಆದಲ್ಲಿ ಅದು ತನ್ನನ್ನು ತಾನೇ ನಾಶಮಾಡಿಕೊಳ್ಳಬಲ್ಲುದು." ಹಾಗಾಗಿ ನಾವು ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ತಂತ್ರ ಜ್ಞಾನಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಯುಕ್ತವಾದ ಪ್ರವೃತ್ತಿಯನ್ನು ಬೆಳೆಸಬೇಕು ಎಂದರೆ ನಮ್ಮ ಕ್ರಮಕ್ಕೆ ಹಾಗೂ ವೈಜ್ಞಾನಿಕ ಮುನ್ನಡೆ ಪ್ರಗತಿಯನ್ನಾಧರಿಸಿ ಕಾರ್ಯಕ್ರಮಗಳ ಅನುಷ್ಠಾನಕ್ಕೆ ನೈತಿಕ ಆಧಾರವಿರಬೇಕು.

---

* ಕೊಚ್ಚಿ, ದಿನಾಂಕ 7ನೇ ನವೆಂಬರ್, 1991.

ಕೇರಳದ ಭೇಟಿ ಹೆಚ್ಚು ಆನಂದದಾಯಕವಾಗಿರಲು ವಾರಾಂತ್ಯಗಳು ಹೆಚ್ಚು ಸಂತೋಷದಾಯಕ ವಾಗಿರುವಂತೆಯೂ ಮಾಡಲು ಈ ಕಾರ್ಯಕ್ರಮಗಳನ್ನು ಪ್ರವಾಸೋದ್ಯಮ ಇಲಾಖೆಯು ಹಬ್ಬಗಳ, ಉತ್ಸವಗಳ ಸಮಯಕ್ಕೆ ಹೊಂದಿಕೊಳ್ಳುವಂತೆ ಯೋಜಿಸಿದೆ ಎಂದು ತಿಳಿಸಲಾಗಿದೆ. ಅಕ್ಟೋಬರ್‌ನಿಂದ ಮಾರ್ಚ್‌ವರೆಗೆ ಆರು ತಿಂಗಳಿಗೂ ಹೆಚ್ಚಿನ ಕಾಲ ವ್ಯಾಪಿಸುವ ಸುದೀರ್ಘ ಉತ್ಸವ ಕಾಲವಾಗಿದ್ದು ಪ್ರಾಯಃ ಭಾರತದಲ್ಲಿ ಇದೇ ಅತ್ಯಂತ ದೀರ್ಘಾವದಿಯಾಗಿದೆ. ನಮ್ಮ ದೇಶದ ವಿಪುಲ, ಸಮೃದ್ಧ, ಶ್ರೀಮಂತವಾದ ನೃತ್ಯ ಸಂಪ್ರದಾಯಗಳು ನಮ್ಮ ಭವ್ಯ ಪರಂಪರೆಯಾಗಿದೆ. ಇದು ನಮ್ಮ ಉಜ್ವಲವಾದ ಪ್ರಾಚೀನ ಪರಂಪರೆಯನ್ನು ನೆನಪಿಗೆ ತರುತ್ತದೆ. ಸೌಂದರ್ಯಾತ್ಮಕ ಮೌಲ್ಯಗಳನ್ನು ಸಮಾಜ ಪೋಷಿಸಿಕೊಂಡು, ಪರಿಪಾಲಿಸಿಕೊಂಡು ಬಂದುದೇ ಆ ಭವ್ಯ ಪರಂಪರೆಯ ಮುಖ್ಯಾಂಶ ಈ ನೃತ್ಯೋತ್ಸವವು ಭಾರತದ ಶಾಸ್ತ್ರೀಯ ನೃತ್ಯಗಳನ್ನು ವಿದೇಶಿ ಹಾಗೂ ಸ್ವದೇಶಿ ಪ್ರವಾಸಿಗರಿಗೆ ಪರಿಚಯಿಸುತ್ತದೆ; ಇವು ಈ ನಗರದ ಸಾಂಸ್ಕೃತಿಕ ಜೀವನಕ್ಕೆ ಆಕರ್ಷಣೆಯನ್ನು ವೈವಿಧ್ಯವನ್ನು ತರುತ್ತದೆ. ಈ ನೃತ್ಯೋತ್ಸವದಲ್ಲಿ ದೇಶದ ಎಲ್ಲೆಡೆಗಳಿಂದ ಆಗಮಿಸಿರುವ ನೃತ್ಯವಿಶಾರದರು ಭಾಗವಹಿಸುತ್ತಿರುವುದರಿಂದ ಇದು ದೇಶದಲ್ಲಿಯೇ ಅತ್ಯುತ್ತಮವಾಗಿರುವುದೆಂದು ನನ್ನ ಅನಿಸಿಕೆಯಾಗಿದೆ.

ಭಾರತದ ಎಲ್ಲೆಡೆಗಳಿಂದ ಎಲ್ಲ ಬಗೆಯ ನೃತ್ಯ ವಿಶಾರದರನ್ನು ಕೇರಳಕ್ಕೆ ಕರೆತಂದಿರುವುದಕ್ಕಾಗಿ ಪ್ರವಾಸೋದ್ಯಮ ಇಲಾಖೆಯನ್ನು ಅಭಿನಂದಿಸುತ್ತೇನೆ. ರಾಜ್ಯಕ್ಕೆ ಪ್ರವಾಸಿಗರನ್ನು ಆಕರ್ಷಿಸುವ ಅವರ ಪ್ರಯತ್ನಕ್ಕೆ ಎಲ್ಲ ಯಶಸ್ಸು ಕೋರುತ್ತೇನೆ. ಈ ನಿಶಾಗಂಧಿ ನೃತ್ಯೋತ್ಸವವನ್ನು ಉದ್ಘಾಟಿಸಲು ನನಗೆ ತುಂಬಾ ಸಂತೋಷ ಉಂಟುಮಾಡಿದೆ.

ಜೈ ಹಿಂದ್

## ನಿಶಾಗಂಧಿ ನೃತ್ಯೋತ್ಸವದ ಉದ್ಘಾಟನೆ *

ಪ್ರವಾಸೋದ್ಯಮ ಇಲಾಖೆಯು ಪ್ರವಾಸೋದ್ಯಮವನ್ನು ಪ್ರೋತ್ಸಾಹಿಸುವ ಪ್ರಾಮಾಣಿಕ ಪ್ರಯತ್ನದ ಭಾಗವಾಗಿ ವ್ಯವಸ್ಥೆಗೊಳಿಸಿರುವ ನಿಶಾಗಂಧಿ ನೃತ್ಯೋತ್ಸವದಲ್ಲಿ ಪಾಲ್ಗೊಳ್ಳಲು ನನಗೆ ತುಂಬಾ ಸಂತೋಷವಾಗಿದೆ.

ಮೊಘಲ್ ಸಾಮ್ರಾಟನೊಬ್ಬ ಕಾಶ್ಮೀರಕ್ಕೆ ಭೇಟಿ ನೀಡಿದಾಗ 'ಧರೆಯ ಮೇಲೊಂದು ಸ್ವರ್ಗವಿರುವುದಾದರೆ ಇದೇ ಅದು, ಇದೇ ಅದು' ಎಂದು ಉದ್ಗರಿಸಿದ ಎನ್ನಲಾಗುತ್ತದೆ. ಆ ಸಾಮ್ರಾಟ ಅಂಥ ಅಭಿಪ್ರಾಯ ವ್ಯಕ್ತಪಡಿಸಿದಾಗ ಆತ ದಕ್ಷಿಣ ಬಾರತಕ್ಕೆ ಅದರಲ್ಲಿಯೂ ವಿಶೇಷವಾಗಿ ಕೇರಳಕ್ಕೆ ಭೇಟಿ ನೀಡಿರಲಿಲ್ಲ ಎಂದು ನನಗನಿಸುತ್ತದೆ. ನಯನ ಮನೋಹರವಾದ, ಅತ್ಯಾಕರ್ಷಕವಾದ, ನೈಸರ್ಗಿಕ ಸೌಂದರ್ಯ ಭರಿತ ರಾಜ್ಯವು ಕೇರಳ ಎಂದು ಹೇಳಬೇಕಾದ ಅಗತ್ಯವೇ ಇಲ್ಲ. ಆದರೆ ವಾಸ್ತವದ ಅಂಶವೆಂದರೆ ಈ ರಾಜ್ಯದ ಪ್ರವಾಸೋದ್ಯಮದ ಸಾಮರ್ಥ್ಯವನ್ನು ರಾಜ್ಯದ ಹಾಗೂ ದೇಶದ ಲಾಭ, ಅನುಕೂಲಗಳಿಗಾಗಿ ಸಂಪೂರ್ಣವಾಗಿ ಬಳಸಿಕೊಂಡಿಲ್ಲ.

ಪ್ರವಾಸೋದ್ಯಮದ ಪರಿಕಲ್ಪನೆಯು ನಮಗೆ ಹೊಸದೇನೂ ಅಲ್ಲ. ನಮ್ಮ ಪ್ರಾಚೀನ ರಾಜರು ಪ್ರವಾಸೋದ್ಯಮವನ್ನು ತಮ್ಮದೇ ಆದ ರೀತಿಯಲ್ಲಿ ಪೋಷಿಸುತ್ತಿದ್ದರು. ಐತಿಹಾಸಿಕವಾಗಿ ನಮ್ಮ ರಾಜ್ಯವು ಆದರ ಆತ್ಮೀಯತೆಗಳಿಗೆ ಸುವಿಖ್ಯಾತವಾದ ನಾಡಾಗಿದೆ. ಪ್ರಾಚೀನ ಕಾಲದಿಂದಲೂ ಭಾರತೀಯರು ತಮ್ಮ ಗ್ರಾಮ, ನಗರ ಊರುಗಳಿಗೆ ಭೇಟಿ ನೀಡುತ್ತಿದ್ದವರನ್ನು ಆತ್ಮೀಯವಾಗಿ, ಸೌಹಾರ್ದದಿಂದ ನೋಡಿಕೊಳ್ಳುತ್ತಿದ್ದರು.

ಇತಿಹಾಸದ ಆರಂಭದ ಕಾಲದಿಂದಲೂ ಕೇರಳಿಯರು, ವಿಶ್ವದ ರಾಜಧಾನಿಗಳಿಗೆ ರಾಜಾಸ್ಥಾನಗಳಿಗೆ ಬೇಟಿ ನೀಡುತ್ತಿರುವುದು ಕಂಡುಬಂದಿದೆ. ಕೇರಳದ ಸಂಬಾರ ಪದಾರ್ಥಗಳು ಮತ್ತು ಸುಂದರ ತಾಣಗಳು, ದೃಶ್ಯಗಳು, ಯೆಹೊದಿಗಳು, ರೋಮನ್ನರು, ಅರಬ್ಬರು, ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರನ್ನು ಆಕರ್ಷಿಸಿದ್ದವು ಮತ್ತು ಚೀನಿಯರನ್ನು ಕೂಡ ಭಾರತದ ನೈರುತ್ಯ ಕರಾವಳಿಯ ಪುಟ್ಟ ಬೆಳ್ಳಿ ನಾಡಗೆ ಆಕರ್ಷಿಸಿತ್ತು. ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಲು ಸಾಕಷ್ಟು ಸಾಧ್ಯತೆಗಳು ಹಾಗೂ ಅವಕಾಶಗಳು ಇದ್ದರೂ ಈಚಿನವರೆಗೆ ಹೇಳಿಕೊಳ್ಳಬಹುದಾದಂಥ ಯಾವುದೇ ಮಹತ್ವದ ಪ್ರಯತ್ನಗಳು ನಡೆದಿಲ್ಲ. ಆದಾಗ್ಯೂ, ರಾಜ್ಯದ ಪ್ರವಾಸೋದ್ಯಮ ಇಲಾಖೆಯು ಕೇರಳವನ್ನು ವಿದೇಶಿ ಪ್ರವಾಸಿಗರಿಗೆ ಹಾಗೂ ದೇಶದ ಪ್ರವಾಸಿಗಳಿಗೆ ಕೂಡ ಆಕರ್ಷಣೀಯ ಕೇಂದ್ರವನ್ನಾಗಿ ಮಾಡಲು ಪ್ರಾಮಾಣಿಕ ಪ್ರಯತ್ನಗಳನ್ನು ಕೈಗೊಳ್ಳುತ್ತಿದೆ ಎಂಬುದು ನನಗೆ ಸಂತೋಷ ಉಂಟು ಮಾಡಿದೆ.

ಪ್ರವಾಸಿಗರನ್ನು ವೈವಿಧ್ಯಮಯವಾದ ಆಕರ್ಷಣೆಗಳ ಈ ನಾಡಿಗೆ ಆಕರ್ಷಿಸುವ ಸಲುವಾಗಿ ಹಮ್ಮಿಕೊಂಡಿರುವ ಹಲವು ಕಾರ್ಯಕ್ರಮಗಳ ಪೈಕಿ ನಿಶಾಗಂಧಿ ನೃತ್ಯೋತ್ಸವ ಕೂಡ ಒಂದಾಗಿದೆ.

---

* ಕನಕುನ್ನ ಅರಮನೆ, ತಿರುವನಂತಪುರ, ದಿನಾಂಕ 19ನೇ ಅಕ್ಟೋಬರ್, 1991.

ಈ ಮಹಾಕವಿಯ ನೆನಪಿನಲ್ಲಿ ಇಂಥ ಕಾರ್ಯಕ್ರಮ ವ್ಯವಸ್ಥೆಗೊಳಿಸಿದ ಚರ್ಚಾವೇದಿಕೆಯ ಪದಾಧಿಕಾರಿಗಳಿಗೆ ನನ್ನ ವಂದನೆಗಳು ಸಲ್ಲುತ್ತವೆ. ಕೇರಳದ ಜನತೆ ಹಾಗೂ ಸಾಹಿತ್ಯಿಕ ಜಗತ್ತು ಅತ್ಯಂತ ಗೌರವ ಸ್ಥಾನ ನೀಡಿರುವಂಥ ಮಹಾಕವಿ ವಲ್ಲತ್ತೋಳ್ ರ 144ನೇ ಜನ್ಮದಿನೋತ್ಸವದಲ್ಲಿ ಪಾಲ್ಗೊಳ್ಳಲು ನನಗೆ ಅವಕಾಶ ಕಲ್ಪಿಸಿಕೊಟ್ಟಿರುವುದಕ್ಕಾಗಿ ಅವರಿಗೆ ವಂದಿಸುತ್ತೇನೆ. ವಲ್ಲತ್ತೋಳ್ ತಮ್ಮ ಕವನಗಳ/ ಕವಿತೆಗಳ ಸರಳತೆ ಸೌಂದರ್ಯ ಮತ್ತು ಉದಾತ್ತತೆಗಳ ಮೂಲಕ ಹಲವಾರು ಪೀಳಿಗೆಗಳ ಹೃನ್ಮನಗಳಲ್ಲಿ ಎಂದೆಂದಿಗೂ ಚಿರಸ್ಥಾಯಿಯಾದ ಸ್ಥಾನ ಪಡೆದೇ ಇರುತ್ತಾರೆ.

ಜೈ ಹಿಂದ್

ಕಾರ್ಯಕ್ರಮಗಳು ಕುರಿತ ಕವನಗಳನ್ನು ಬರೆದರು. ಗಾಂಧೀಜಿ, ತಿಲಕ್ ಮತ್ತು ಗೋಖಲೆಯವರುಗಳಿಂದ ಸ್ಫೂರ್ತಿಪಡೆದರು. ಅವರೆಲ್ಲರ ಬಗ್ಗೆ ತುಂಬ ಗೌರವ ತಳೆದಿದ್ದರು.

ವಲ್ಲತ್ತೋಳ್‌ರವರು ಮಲೆಯಾಳಂ ಸಾಹಿತ್ಯದ ಮಹತ್ವ ಹಾಗೂ ಮಹಾನ್ ಪರಂಪರೆ ಬಗ್ಗೆ ಆಸಕ್ತರಾಗಿದ್ದ ಕರೆಯಷ್ಟೇ ಆಗಿರಲಿಲ್ಲ. ಅವರು ಕಥಕ್ಕಳಿಯ ಪುನರುಜ್ಜೀವನಕ್ಕೆ ತೀವ್ರ ಆಸ್ಥೆಯಿಂದ ದುಡಿದರು. ಕವಿಗಳಲ್ಲಿ ಕಲಾಕಾರರಾಗಿದ್ದ ಅವರನ್ನು ಕಥಕ್ಕಳಿ ಮತ್ತು ಮೋಹಿನಿಯಾಟ್ಟವರ್‌ನ ಆಧುನಿಕ ಪ್ರತಿಪಾದಕರು ಎಂದು ಪರಿಗಣಿಸಲಾಗಿದೆ. ಕೇರಳದ ಕಲಾ ಪ್ರಕಾರಗಳನ್ನು ಪ್ರೋತ್ಸಾಹಿಸಲು ಅವರು ಕೇರಳ ಕಲಾ ಮಂಡಲಂ ಅನ್ನು ಸ್ಥಾಪಿಸಿದರು ಮತ್ತು ಪ್ರಪಂಚದ ಎಲ್ಲ ಕಡೆಗಳಲ್ಲಿ ಪರ್ಯಟನ ಮಾಡಿದರು ವಲ್ಲತ್ತೋಳ ಸಂಪೂರ್ಣವಾಗಿ ಕವಿಯೂ, ಕಲಾಕಾರರೂ ಆಗಿದ್ದರು. ಅವರು ಉಪಾಧ್ಯಾಯರಾಗಲೀ ಬೋಧಕರಾಗಲೀ ಆಗಿರಲಿಲ್ಲ. ಜೀವನದ ಎಲ್ಲ ಮುಖಗಳ ಬಗ್ಗೆ ಅವರಿಗೆ ಪ್ರೀತಿಯಿತ್ತು. ಅವರಿಗೆ ಜೀವನದ ಬಗ್ಗೆ ಹುರುಪು ಉತ್ಸಾಹಗಳಿತ್ತು. ಜೀವನ ತಮಗೆ ಏನನ್ನು ನೀಡುವುದೋ ಅದನ್ನು ಅಂಗೀಕರಿಸುವಂಥ ಪ್ರವೃತ್ತಿಯೂ ಇತ್ತು. ಜೀವನದ ಬಗ್ಗೆ ಮತ್ತು ತಾವು ಇದ್ದ ಪ್ರಪಂಚದ ಬಗ್ಗೆ ತೀವ್ರ ಪ್ರೇಮ ಆಸಕ್ತಿಗಳಿದ್ದರೂ ಅವರು ಸೌಂದರ್ಯರಾಧಕರಾಗಿದ್ದರು. ಒಂದೊಮ್ಮೆ ದೇವರು ಒಂದು ಕೈಯಲ್ಲಿ ಸೌಂದರ್ಯವನ್ನು ಮತ್ತೊಂದು ಕೈಯಲ್ಲಿ ನೀತಿಯನ್ನು ಹಿಡಿದು ನನಗೆ ಪ್ರತ್ಯಕ್ಷನಾಗಿ ಯಾವುದು ಬೇಕು ಎಂದು ಕೇಳಿದರೆ ನಾನು ನೀತಿಗಿಂತ ಸೌಂದರ್ಯವನ್ನೇ ಖಂಡಿತ ಕೇಳುವುದು ಎಂದು ಒಮ್ಮೆ ಆತ ಹೇಳಿದುಂಟು.

ವಲ್ಲತ್ತೋಳ್‌ರ ರಾಷ್ಟ್ರೀಯತಾವಾದವು ವಾಸ್ತವಿಕವಾಗಿ ಸರ್ವವ್ಯಾಪಿಯಾದ ಅಂತರರಾಷ್ಟ್ರೀಯತಾವಾದವೇ ಆಗಿತ್ತು. ಈ ರಾಷ್ಟ್ರೀಯತಾವಾದದಿಂದಾಗಿ ಅವರು ಸಾಮಾಜಿಕ ಅಸಮಾನತೆ ಹಾಗೂ ರಾಜಕೀಯ ಬಂಧನದ ವಿರುದ್ಧ ತಮ್ಮ ಬಲವಾದ ಧ್ವನಿ ಎತ್ತಿದರು. ಅವರಿಗೆ ವಿಶಾಲ ದೃಷ್ಟಿಕೋನವೂ, ಸರ್ವಸಮದರ್ಶಿತವೂ ಇದ್ದಿತು. ವಾಸ್ತವವಾಗಿ ಈ ಶತಮಾನದ ಪೂರ್ವಾರ್ಧ ಅವರ ಕಾವ್ಯಗಳ ಸ್ಫೂರ್ತಿ ಮತ್ತು ಸೃಜನಶೀಲ ಚಟುವಟಿಕೆಗಳಿಂದಲೇ ತುಂಬಿಕೊಂಡಿದೆ.

ಸ್ನೇಹಿತರೆ, ಕವಿ, ದೇಶಭಕ್ತ ಮತ್ತು ಕೇರಳದ ಕಲೆಗಳ ಪ್ರೋತ್ಸಾಹಕಾರರಾಗಿ ಅವರ ಗುಣಸಾಧನೆಗಳ ವಿಶ್ಲೇಷಣೆ ಮಾಡುತ್ತ ನನ್ನ ಭಾಷಣವನ್ನು ಲಂಭಿಸುವುದಿಲ್ಲ. ನನಗಿಂತ ಈ ಅಂಶಗಳ ಬಗ್ಗೆ ನಿಮಗೇ ಹೆಚ್ಚು ತಿಳಿದಿದೆ. ಅವರ ಭಾಷಾಂತರಿಕ ಕೃತಿಗಳನ್ನು ಓದುವುದರಿಂದ ಮಾತ್ರವೇ ಅವರ ಕೃತಿಗಳನ್ನು ಓದಿ, ಅರ್ಥ ಮಾಡಿಕೊಳ್ಳುವ ಅವಕಾಶ ನನ್ನದಾಗಿದೆ, ಆದರೆ ಸುಂದರವಾದ ಕವನಗಳು ಅನುವಾದಗೊಂಡಾಗ ಅವುಗಳ ಮಾಧುರ್ಯ, ಲಾಲಿತ್ಯ ಧ್ವನಿಗಳು ನಷ್ಟಗೊಳ್ಳುತ್ತವೆ. ಮಾಯವಾಗುತ್ತವೆ. ಆದರೆ ಇದೇನೂ ಅವರ ಕೃತಿಗಳ ಗುಣಮಟ್ಟ ಖ್ಯಾತಿ ಮತ್ತು ಮಹತ್ವದ ಮೇಲೆ ಪರಿಣಾಮ ಬೀರುವುದಿಲ್ಲ ಅವು ಮಲೆಯಾಳಂ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ.

## ಮಹಾಕವಿ ವಲ್ಲತ್ತೋಳ್‌ರವರ 144ನೇ ಜನ್ಮದಿನೋತ್ಸವ ಉದ್ಘಾಟನಾ ಕಾರ್ಯಕ್ರಮ *

ಮಲೆಯಾಳಂನ (ಮಹಾನ್) ಶ್ರೇಷ್ಠ ಕವಿಗಳ ಪೈಕಿ ಒಬ್ಬರಾದ ವಲ್ಲತ್ತೋಳ್ ನಾರಾಯಣ ಮೆನನ್‌ರವರ 144ನೇ ಜನ್ಮದಿನೋತ್ಸವ ಕಾರ್ಯಕ್ರಮ ಉದ್ಘಾಟಿಸುವುದು ನನ್ನ ಕರ್ತವ್ಯವೂ, ನನಗೆ ಹೆಮ್ಮೆಯ ವಿಷಯವೂ ಆಗಿದೆ.

ನನಗೆ ಮಲೆಯಾಳಂ ಭಾಷೆ ಬಾರದಿರುವುದರಿಂದ ಈ ಮಹಾನ್ ಕವಿ, ಕವನಗಳ ಮಾಧುರ್ಯವನ್ನಾಗಲೀ, ಸೊಗಸನ್ನಾಗಲೀ ಅರ್ಥಮಾಡಿ ಕೊಂಡು, ಮೆಚ್ಚುವುದು ಸಾಧ್ಯವಿಲ್ಲ ಎಂದು ಪ್ರಾರಂಭದಲ್ಲಿಯೇ ಒಪ್ಪಿಕೊಂಡು ಬಿಡುತ್ತೇನೆ. ಆದರೆ ಮಲೆಯಾಳಂ ಸಾಹಿತ್ಯಕ್ಕೆ ಅವರ ಕೊಡುಗೆ ಮತ್ತು ಕಥಕ್ಕಳಿ ಹಾಗೂ ಮೋಹಿನಿಯಾಟ್ಟಂನ ಪುನರುಜ್ಜೀವನ ಕಾರ್ಯದಲ್ಲಿ ಅವರ ಅವಿರತ ಸಾಧನೆಗಳನ್ನು ಅರಿತುಕೊಳ್ಳುವುದಕ್ಕೆ ಸಾಕಷ್ಟು ಅವಕಾಶಗಳು ಲಭಿಸಿದೆ.

ಕುಮಾರನ್, ಆಶಾನ್, ಉಳ್ಳೂರ್ ಮತ್ತು ವಲ್ಲತ್ತೋಳ್ ಇವರನ್ನು ಮಲೆಯಾಳ ಸಾಹಿತ್ಯದ ತ್ರಿಮೂರ್ತಿಗಳು ಎನ್ನುತ್ತಾರೆ. ಇವರಲ್ಲಿ ಪ್ರತಿಯೊಬ್ಬರೂ ವಿಶಿಷ್ಟರಾಗಿದ್ದವರು. ಅವರು ಹತ್ತು ವರ್ಷ ವಯಸ್ಸಾದಾಗಲೀ ಕವನಗಳನ್ನು ಬರೆಯಲು ಆರಂಭಿಸಿದರು. ಹರಿಹರೆಯದಲ್ಲಿಯೇ ಕಾವ್ಯ ಕ್ಷೇತ್ರದಲ್ಲಿ ವಿಶಿಷ್ಟಕವಿ ಎಂದು ಹೆಸರುಗಳಿಸಬಲ್ಲವರಾಗಿದ್ದರು. ಅವರದು ಬಹುಮುಖ ವ್ಯಕ್ತಿತ್ವ; ಪ್ರತಿಭಾನ್ವಿತ ಕವಿ, ಮಹಾನ್ ದೇಶಪ್ರೇಮಿ, ಸಮರ್ಥ ಸಂಪಾದಕ ಮತ್ತು ಸಮರ್ಥ ಭಾಷಾಂತರಕಾರ-ಈ ಎಲ್ಲಾ ಅಂಶಗಳು ಅವರಲ್ಲಿ ಮನೆ ಮಾಡಿದ್ದವು.

ಹೋರಾಟದ ನಂತರ ಸ್ವಾತಂತ್ರ್ಯಗಳಿಸಿದ ಪ್ರತಿಯೊಂದು ದೇಶದಲ್ಲಿಯೂ ಅಡಿಯಾಳುಗಳಾಗಿದ್ದವರ ಹೃನ್ಮನಗಳಿಗೆ ತಮ್ಮ ಕಾವ್ಯದ ಸೆಲೆ ಸ್ಫೂರ್ತಿಗಳಿಂದ ಪ್ರೇರೇಪಿಸಿ ಸ್ವಾತಂತ್ರ್ಯ ಚಳುವಳಿಗೆ ಸ್ಫೂರ್ತಿ ನೀಡಿದಂಥ ಕವಿಗಳು ಇದ್ದೇ ಇದ್ದಾರೆ. ಕ್ರಿಯಾಶೀಲ ವ್ಯಕ್ತಿಗಳು ಹೋರಾಟಗಳಲ್ಲಿ ನೇರವಾಗಿ ಇಳಿದರೆ ಚಿಂತನೆ ಶೀಲರು ಇವರಿಗೆ ಸ್ಫೂರ್ತಿದಾಯಕರಾಗಿದ್ದರು. ಈ ಮಾತು ನಮ್ಮ ದೇಶಕ್ಕೂ ಅನ್ವಯಿಸುತ್ತದೆ. ನಮ್ಮ ಮಹಾನ್ ಕವಿಗಳು ಸ್ವಾತಂತ್ರ್ಯ ಚಳುವಳಿಗೆ ತಮ್ಮ ಕೊಡುಗೆ ನೀಡಿದ್ದಾರೆ ಮತ್ತು ಸ್ವಾತಂತ್ರ್ಯ ಹೋರಾಟಗಾರರಲ್ಲಿ ಧ್ಯೇಯೋತ್ಸಾಹ ಭರವಸೆಗಳನ್ನು ತುಂಬಿದ್ದಾರೆ. ಅವರ ಪೈಕಿ ವಲ್ಲತ್ತೋಳ್ ಕೂಡ ಒಬ್ಬರು. ಅವರ ಕವಿತೆಗಳು ಕೇರಳದಲ್ಲಿ ರಾಷ್ಟ್ರೀಯ ಚಳುವಳಿಗೆ ಸ್ಫೂರ್ತಿ ನೀಡಿದುವು ಭಾರತದ ಸ್ವಾತಂತ್ರ್ಯಕ್ಕಾಗಿ ಎಲ್ಲ ಬಗೆಯ ಸಾಮಾಜಿಕ ಹಾಗೂ ಆರ್ಥಿಕ ಕೆಡಕುಗಳಿಂದ ಸ್ವಾತಂತ್ರ್ಯಕ್ಕಾಗಿ ಹೋರಾಡುವಂತೆ ಪ್ರೇರೇಪಿಸಿದರು. ಸ್ವಾತಂತ್ರ್ಯದ ಬಯಕೆಯ ಅವರ ಜನ್ಮ ಜಾತ ಗುಣ ಹಾಗೂ ಭಾರತದ ಇತಿಹಾಸದ ಬಗ್ಗೆ ಅವರ ನಿಜವಾದ ಹೆಮ್ಮೆ- ಇವು ಅವರನ್ನು ರಾಷ್ಟ್ರೀಯತಾವಾದಿಯನ್ನಾಗಿ ಮಾಡಿದುವು. ಅವರು ಮಹಾತ್ಮಾಗಾಂಧಿಯವರ ಅನುಯಾಯಿಯಾದರು; ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡರು. ಚರಕ-ಖಾದಿ, ಬಡತನ, ನಿರ್ಮೂಲನೆ ರಾಷ್ಟ್ರೀಯ

* ವಿ.ಜೆ.ಟಿ. ಸಭಾಂಗಣ, ತಿರುವನಂತಪುರ, ದಿನಾಂಕ 16ನೇ ಅಕ್ಟೋಬರ್, 1991

ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವುದು ಸಂತೋಷದ ವಿಷಯವಾಗಿದೆ. ಗಾಂಧೀತತ್ತ್ವದ ಜ್ಯೋತಿ ಬೆಳಗಿಸುತ್ತ ಬಡವರು ಮತ್ತು ದೀನ ದಲಿತರ ಪಾಲಿಗೆ ದಾರಿತೋರುವ ಅವರ ಕಾರ್ಯ ಪ್ರಯತ್ನಗಳಿಗೆ ಸಕಲ ಯಶಸ್ಸುಗಳನ್ನು ಕೋರುತ್ತೇನೆ.

ಜೈ ಹಿಂದ್

ಭಾರತೀಯ ಸಂಸ್ಕೃತಿ ಮತ್ತು ನಾಗರೀಕತೆಯ ಬಗ್ಗೆ ಅವರ ಹೆಮ್ಮೆಯನ್ನು ವೃದ್ಧಿಪಡಿಸುವುದು ಮತ್ತು ಭಾರತೀಯ ಮೌಲ್ಯಗಳನ್ನು ಅಚಲವಾಗಿ ನಂಬಿರುವಂಥ ಜನಾಂಗವಾಗಿ ರೂಪಿಸುವುದು ಇವನ್ನು ಅವರು ಮಾಡಬಯಸಿದರು.

ತಾವು ಏನನ್ನು ಉಪದೇಶಿಸಿದರೋ, ಬೋಧಿಸಿದರೋ ಅದರಂತೆ ಅವರು ನಡೆಯುತ್ತಿದ್ದರು. ಇದು ಅವರ ಶೀಲದ ಅತ್ಯಂತ ಮುಖ್ಯ ಅಂಶವಾಗಿತ್ತು. ಭೋಧನೆ ಮತ್ತು ಆಚರಣೆ-ಇವೆರಡರ ನಡುವೆ ಹೆಚ್ಚುತ್ತಿರುವ ಅಂತರ-ಇದೇ ಅನಾದಿಕಾಲದಿಂದ ಮಾನವ ಜನಾಂಗ ಎದುರಿಸುತ್ತಿರುವ ತೀವ್ರ ಸಮಸ್ಯೆಯಾಗಿದೆ. ಸರಳ ಜೀವನ ಮತ್ತು ಉದಾತ್ತ ಚಿಂತನೆ ಇದಕ್ಕೆ ಅವರ ಸ್ವಂತ (ಖಾಸಗಿ, ವೈಯಕ್ತಿಕ), ಜೀವನ ಅತ್ಯಂತ ಉಜ್ವಲವಾದ ಮಾದರಿಯಾಗಿದೆ. ಅವರೊಬ್ಬ ಆದರ್ಶವಾದಿ-ಕ್ರಿಯಾಶೀಲ ಆದರ್ಶವಾದಿ, ಯಾವ ಆದರ್ಶಗಳು ಕಾರ್ಯಾನುಷ್ಠಾನಗೊಳ್ಳಲಾರವೋ ಅವುಗಳಿಂದ ಪ್ರಯೋಜನವಿಲ್ಲವೆಂಬ ನಂಬಿಕೆ ಅವರದು. ಇದನ್ನೇ ನಾವು ಮುಖ್ಯವಾಗಿ ಅವರಿಂದ ಕಲಿಯಬೇಕಾದುದಾಗಿದೆ. ಅವರು ಹಾಕಿಕೊಟ್ಟ ಮಾಧರಿಯನ್ನು ನಾವು ಪಾಲಿಸುತ್ತಿದ್ದೇವೆಯೇ ಎಂಬುದನ್ನು ರಾಷ್ಟ್ರೀಯ ಅಭಿವೃದ್ಧಿಯ ವಿವಿಧ ವಲಯ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳಾಗಿವೆ ಎಂಬುದರ ಬಗ್ಗೆ ಸಂದೇಹವೇನೂ ಇಲ್ಲ. ನಮ್ಮ ಸಾಧನೆಗಳ ಬಗ್ಗೆ ಸರಿಯಾಗಿ ಅರಿಯದಿರುವುದೂ ತಪ್ಪಾಗುತ್ತದೆ. ಹಸಿವು, ಬಡತನ ಮತ್ತು ನಿರುದ್ಯೋಗ ನಮ್ಮ ಈ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗಿಲ್ಲ ಎಂಬ ವಾಸ್ತವಾಂಶ ಇದ್ದೇ ಇದೆ ಈ ಸಮಸ್ಯೆಗಳನ್ನು ಪರಿಹರಿಸಲು ನಮ್ಮ ಅಂತಿಮ ಪ್ರಗತಿಯು ನಮ್ಮ ಮಾರ್ಗಗಳ ಪರಿಶುದ್ಧತೆಗೆ ಅನುಗುಣವಾಗಿಯೇ ಇರುತ್ತದೆ ಎಂಬುದು ಅವರಿಗೆ ಮನದಟ್ಟಾಗಿತ್ತು.

ಹಿಂಸೆ ಮತ್ತು ಉಗ್ರಮಿತ್ವದಿಂದ ಛಿದ್ರಛಿದ್ರವಾಗಿರುವ ಪ್ರಪಂಚದಲ್ಲಿ ಇಂದು ನಾವು ಇದ್ದೇವೆ. ಭಾರತದಲ್ಲಿ ಕೂಡ ಉಗ್ರಗಾಮಿ ಚಳುವಳಿಗಳು ದೇಶದ ಏಕತೆ ಮತ್ತು ಅಖಂಡತೆಗೆ ಅಪಾಯ ಒಡ್ಡುತ್ತಿವೆ. ಪ್ರಪಂಚದಲ್ಲೆಲ್ಲ ಹಿಂಸಾಚಾರದಿಂದ ಸೃಷ್ಟಿಯಾಗಿರುವ ಸಮಸ್ಯೆಗಳಿಗೆಲ್ಲ ಪರಿಹಾರವು ಗಾಂಧೀಜಿಯವರ ತತ್ವಗಳಲ್ಲಿರುತ್ತದೆ. ಶಾಂತಿ ಮತ್ತು ಅಹಿಂಸೆಯ ಧ್ಯೇಯ ಸಾಧನೆಗೆ ನಿರಂತರವಾಗಿ ಶ್ರಮಿಸೋಣ. ದೇಶದ ಪ್ರಗತಿ ಮತ್ತು ಅಭ್ಯುದಯಗಳನ್ನುಂಟು ಮಾಡದಂಥ ಗುರಿಗಳ ಸಾಧನೆಗಾಗಿ ಅವಿಶ್ರಾಂತ ಸತತ ದುಡಿಯುವೆವು ಎಂದು ಇಲ್ಲಿ ಪಣತೊಡೋಣ.

ರಾಷ್ಟ್ರಪಿತರ ಜನ್ಮದಿನಾಚರಣೆಯ ಈ ಶುಭ ಸಂದರ್ಭದಲ್ಲಿ ಪಾಲ್ಗೊಳ್ಳಲು ಅವಕಾಶ ಮಾಡಿಕೊಟ್ಟ ಗಾಂಧೀ ಸ್ಮಾರಕ ನಿಧಿಯವರಿಗೆ ವಂದಿಸುತ್ತೇನೆ. ಕಳೆದ ನಾಲ್ಕು ದಶಕಗಳೆಂದಲೂ ಗಾಂಧೀ ಸ್ಮಾರಕ ನಿಧಿಯು ಗಾಂಧೀಜಿಯವರಿಗೆ ತತ್ತ್ವಗಳಿಗನುಸಾರವಾಗಿ ಬಡವರ, ಸಾಮಾಜಿಕವಾಗಿ ಹಿಂದುಳಿದವರು ಮತ್ತು ಇತರ ದುರ್ಬಲ ವರ್ಗಗಳವರ ಅಭಿವೃದ್ಧಿ

## ಗಾಂಧೀ ಜಯಂತಿ ಆಚರಣೆ *

ಈ ಸಂಜೆ ಗಾಂಧೀ ಜಯಂತಿ ಸಮಾರಂಭಗಳನ್ನು ಉದ್ಘಾಟಿಸುವುದು ನನಗೆ ಸಂದಿರುವ ಗೌರವವೂ ಕರ್ತವ್ಯವೂ ಆಗಿದೆ.

ಪ್ರಪಂಚದ ಕೋಟ್ಯಾಂತರ ಜನ ಈ ಮಹಾಪುರುಷನನ್ನು ಸಂತೋಷದಿಂದ ಸ್ಮರಿಸುತ್ತಾರೆ. ಮುಂದಿನ ಪೀಳಿಗೆಗಳಿಗೂ ಸ್ಫೂರ್ತಿ ಹಾಗೂ ಮಾರ್ಗದರ್ಶನ ಮೂಲವಾಗಿಯೇ ಆತ ಇರುತ್ತಾರೆ. ದೈವದಲ್ಲಿ ಅಚಲವಾದ ಶ್ರದ್ಧೆ, ನಿಷ್ಠೆ, ಸತ್ಯ ಮತ್ತು ಅಹಿಂಸೆಯ ಬಗ್ಗೆ ಸದಾಕಾಲ ನಂಬಿಕೆ, ಸಂಪೂರ್ಣವಾದ ನಿರ್ಭಯತ್ವ, ಮಾನವರ (ಜನತೆಗೆ) ಬಗ್ಗೆ ಅಪಾರ ಪ್ರೀತಿ- ಈ ಎಲ್ಲಾ ಗುಣಗಳಿಂದ ಆತ ಪ್ರಪಂಚದ ಕೋಟ್ಯಾಂತರ ಜನರಿಗೆ ಮಾರ್ಗದರ್ಶಕ, ತತ್ವಜ್ಞಾನಿ ಹಾಗೂ ನೇತಾರರಾದರು.

ಭಾರತದಲ್ಲಿ ಈ ಮಹಾನ್ ಪುರುಷನ ಸಾಧನೆ ಅಪಾರ. ಅವರು ಮಾನವ ಜನಾಂಗಕ್ಕೆ ಸದಾಕಾಲ ಮಾರ್ಗದರ್ಶಕರಾಗಿರುವರು. ಅವರು ನಮಗೆ ಸ್ವಾತಂತ್ರ್ಯ ಮತ್ತು ಆತ್ಮಗೌರವವನ್ನು ದೊರಕಿಸಿಕೊಟ್ಟರು; ಭಾರತದ ಜನತೆಯನ್ನು ನಿದ್ದೆಯಿಂದ ಜಾಗ್ರತಗೊಳಿಸಿದರು. ಬಡವರ ಹಾಗೂ ದೀನದಲಿತರ ಹೋರಾಟಕ್ಕೆ ಬೆಂಬಲರಾಗಿ ನಿಂತು ಯಾವುದೇ ರೀತಿಯ ದಬ್ಬಾಳಿಕೆ ಮತ್ತು ಶೋಷಣೆಗಳ ವಿರುದ್ಧ ಹೋರಾಟ, ಸತ್ಯ ಮತ್ತು ಅಹಿಂಸೆಗಳು ಅವರ ಅಸ್ತ್ರಗಳಾಗಿದ್ದವು.

ಅವರ ಯಶಸ್ವಿ ರಹಸ್ಯ ಸತ್ಯ ಮತ್ತು ಅಹಿಂಸೆಗಳ ಬಗ್ಗೆ ಅವರ ವಿಶೇಷವಾದ ಆದ್ಯತೆಯೇ ಆಗಿತ್ತು. ಸೇವೆ ಮತ್ತು ಅಹಿಂಸೆಗಳ ಬಗ್ಗೆ ಅವರ ವಿಶೇಷವಾದ ಆದ್ಯತೆಯೇ ಆಗಿತ್ತು. ಸೇವೆ ಮತ್ತು ತ್ಯಾಗದ ಜೀವನಕ್ಕೆ ಅವರ ಬದ್ಧತೆಯ ವಿಶಿಷ್ಟವಾದುದು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕೂಡ ತಾತ್ಕಾಲಿಕ ಲಾಭಗಳನ್ನು ಪಡೆಯಲು ತಮ್ಮ ತತ್ವನಿಷ್ಠೆಯೊಡನೆ ರಾಜಿ ಮಾಡಿಕೊಳ್ಳಲು ಇಲ್ಲ.

ಸ್ವಾತಂತ್ರ್ಯಗಳಿಸಲು ಅವರು ಯಾವುದೇ ತ್ಯಾಗಕ್ಕೆ ಕೂಡ ಸಿದ್ದರಾಗಿದ್ದರೂ ಈ ಮೂಲಭೂತ ಆದರ್ಶಗಳನ್ನು ತ್ಯಾಗ ಮಾಡಲು ಸಿದ್ಧರಿರಲಿಲ್ಲ. ಗುರಿಯು ಮಾರ್ಗಗಳನ್ನು ಸಮರ್ಥಿಸುತ್ತವೆ ಎಂಬುದನ್ನು ಗಾಂಧೀಜಿ ನಂಬುತ್ತಿರಲಿಲ್ಲ. ಅವರ ದೃಷ್ಟಿಯಲ್ಲಿ ಮಾರ್ಗಗಳು ಗುರಿಯಷ್ಟೇ ಮುಖ್ಯವಾದವು. ತತ್‌ಕ್ಷಣದ ಪರಿಣಾಮಗಳ ಬಗ್ಗೆ ಎಂದಿಗೂ ಚಿಂತಿಸದೆ ಅವರು ತಮ್ಮ ಆದರ್ಶಗಳನ್ನು ಪರಿಪಾಲಿಸುತ್ತಿದ್ದರು.

ರಾಜಕಾರಣಿಯಾಗಿ ಗಾಂಧೀಜಿಯವರ ಧ್ಯೇಯ ಬ್ರಿಟಿಷರ ಆಳ್ವಿಕೆಯಿಂದ ಭಾರತವನ್ನು ಮುಕ್ತಗೊಳಿಸುವುದೇ ಆಗಿತ್ತು. ವಿದೇಶಿ ಪ್ರಾಬಲ್ಯದಿಂದ ಭಾರತೀಯರು ಸ್ಥೈರ್ಯ ಗುಂದಿರುವುದನ್ನು ಅವರು ಮನಗಂಡರು. ಭಾರತೀಯರ ನೈತಿಕ ಮಟ್ಟವನ್ನು ಉತ್ತಮ ಪಡಿಸಲು ಆತ್ಮಗೌರವ ಮತ್ತು ಆತ್ಮಸ್ಥೈರ್ಯವನ್ನು ಉತ್ತಮಪಡಿಸುವುದು, ಕೀಳರಿಮೆಯ ಕಳಂಕವನ್ನು ನಿವಾರಿಸುವುದು,

* ತಿರುವನಂತಪುರ, ದಿನಾಂಕ 2ನೇ ಅಕ್ಟೋಬರ್, 1991

ಯಾವುದೇ ಧರ್ಮ ಸಂಘರ್ಷ ಅಥವಾ ವೈಷಮ್ಯವನ್ನು ಬೋಧಿಸುವುದಿಲ್ಲ. ಧರ್ಮ ಧರ್ಮಗಳ ನಡುವೆ ಸಂಘರ್ಷ ಮಾನವ ನಿರ್ಮಿತವಾದವು. ನೈಜ ಧರ್ಮದ ತತ್ವಗಳ ವಾಸ್ತವ ಧ್ಯೇಯೋದ್ದೇಶವನ್ನು ಅರಿಯಲು ಜನರು ವಿಫಲರಾಗುವುದೇ ಹಾಗಾಗುವುದಕ್ಕೆ ಕಾರಣವಾಗುತ್ತದೆ. ಮಹಾನ್ ಧರ್ಮಗಳು ಮಾನವ ಜನಾಂಗದ ಅಭಿವೃದ್ಧಿ ಮತ್ತು ಪ್ರಗತಿಗೆ ಕಾರಣೀಭೂತವಾಗುತ್ತವೆ. ನಮ್ಮ ಶ್ರೇಷ್ಠ ಪ್ರವಾದಿಗಳ, ಗುರುಗಳ ಬೋಧನೆ, ಉಪದೇಶಗಳನ್ನು ಪ್ರಸಾರ ಮಾಡುವುದು ಅಗತ್ಯ. ನಮಗೆ ಇಂಥ ಸಂದರ್ಭಗಳಲ್ಲಿ ಆ ಬೋಧನೆ ಉಪದೇಶಗಳನ್ನು ಸಾಮೂಹಿಕವಾಗಿ ನೆನಪು ಮಾಡಿ ಕೊಳ್ಳುವ ಸದಾವಕಾಶ ಲಭಿಸುತ್ತದೆ. ಒಂದು ರೀತಿಯ ನೈತಿಕ ಬಿಕ್ಕಟ್ಟನ್ನು ಎದುರಿಸುತ್ತಿರುವ ಪುಸ್ತಕ ಪ್ರಪಂಚದ ಪ್ರಸಂಗದಲ್ಲಿ ನಮ್ಮ ಮಾನಸಿಕ ಹಾಗೂ ಆಧ್ಯಾತ್ಮಿಕ ಸಮತೋಲನವನ್ನು ನಿಯಂತ್ರಿಸುವುದು ಇದನ್ನು ಧಾರ್ಮಿಕ ತತ್ವ ನೀಡುತ್ತದೆ, ಇದು ಅತ್ಯಂತ ಅಗತ್ಯವಾಗಿರುತ್ತದೆ.

ಕೇರಳದ ಜನತೆ ಎಲ್ಲ ಧರ್ಮಗಳ ಚಿಂತನೆಯ ಮೂಲಭೂತ ಏಕತೆಯನ್ನು ಸಂಪೂರ್ಣವಾಗಿ ಮನಗಂಡಿದೆ ಎಂಬುದನ್ನು ಗಮನಿಸಿದಾಗ ನನಗೆ ಸಂತೋಷವಾಗುತ್ತದೆ. ಮುಸಲ್ಮಾನರು, ಕ್ರೈಸ್ತರು ಮತ್ತು ಹಿಂದೂಗಳು ಏಕತೆ ಮತ್ತು ಭ್ರಾತೃತ್ವದಿಂದ ಇರುವುದು ಕಂಡುಬರುತ್ತದೆ. ಹಿಂದೂ ದೇವಾಲಯಗಳ ಜೊತೆ ಜೊತೆಯಲ್ಲಿಯೇ, ಚರ್ಚುಗಳು ಮತ್ತು ಮಸೀದಿಗಳಿರುವಂಥ ಉದಾತ್ತವಾದ ದೃಶ್ಯ ನಮಗೆ ಗೋಚರವಾಗುತ್ತದೆ. ಶತ ಶತಮಾನಗಳಿಂದ ಅದೇ ರೀತಿ ಇದೆ. ಭಾರತಕ್ಕೆ ಬಂದ ಯಹೂದಿಗಳು, ಕ್ರಿಶ್ಚಿಯನ್ನರು ಮತ್ತು ಮುಸಲ್ಮಾನರು ಮೊದಲು ಕೇರಳಕ್ಕೆ ಬಂದರು. ಕೇರಳವು ಕೋಮು ಸಾಮರಸ್ಯಕ್ಕೆ ಅತ್ಯುತ್ತಮ ಮಾದರಿಯಾಗಿ ಉಳಿದುಕೊಂಡು ಬಂದಿರುವ ಬಗ್ಗೆ ಹೆಮ್ಮೆ ಪಡಬಹುದಾಗಿದೆ. ಇದು ಕಾಲನ ಪರೀಕ್ಷೆಯ ಸವಾಲನ್ನು ಎದುರಿಸಿ ನಿಂತಿದೆ. ಪ್ರವಾದಮಹಮ್ಮದರ ಜಯಂತಿಯಂದು ಈ ಮಹಾನ್ ಪರಂಪರೆಯನ್ನು ಪಾಲಿಸಿಕೊಂಡು ಬರುವ ಬಗ್ಗೆ ಪ್ರಮಾಣ ಮಾಡೋಣ ನಾವು ಏಕತೆ, ಶಾಂತಿ ಹಾಗೂ ಪ್ರಗತಿಗಾಗಿ ಕಾರ್ಯಪ್ರವೃತ್ತರಾಗೋಣ ಮತ್ತು ಮಹಾನ್ ಪ್ರವಾದಿಗಳು ಪ್ರತಿಪಾದಿಸಿದ ತತ್ವಗಳು ನೈಜ ಸತ್ವವನ್ನು ಅಳವಡಿಸಿಕೊಂಡು ಎಲ್ಲ ರೀತಿಯ ಶೋಷಣೆಗಳನ್ನು ಕೊನೆಗಾಣಿಸವತ್ತ ಕಾರ್ಯಪ್ರವೃತ್ತರಾಗೋಣ.

ಧಾರ್ಮಿಕ ಏಕತೆ ಮತ್ತು ಕೋಮು ಸಾಮರಸ್ಯವನ್ನು ಪರಿಪಾಲಿಸಿಕೊಂಡು ಬರುವ ಅಗತ್ಯವನ್ನು ಜನತೆಗೆ ಮನದಟ್ಟು ಮಾಡಿಕೊಡಲು ಇಂಥ ಕಾರ್ಯಕ್ರಮವನ್ನು ಸಂಘಟಿಸಿದ ಕೇರಳ ಮುಸ್ಲಿಂ ಜಮಾತ್ ಮಂಡಳಿಗೆ ನನ್ನ ಅಭಿನಂದನೆಗಳು.

ಮಿಲಾದಿ ಷರೀಫ್ ಆಚರಣೆಗಳಲ್ಲಿ ಪಾಲ್ಗೊಳ್ಳಲು ಅವಕಾಶ ನೀಡಿದುದಕ್ಕಾಗಿ ನನ್ನ ವಂದನೆಗಳು.

ಜೈ ಹಿಂದ್

## ಸಾರ್ವಜನಿಕ ಸಭೆಯ ಉದ್ಘಾಟನೆ *

ಪ್ರವಾದಿ ಮಹಮ್ಮದರ 1465ನೇ ಜಯಂತೋತ್ಸವದಲ್ಲಿ ಪಾಲ್ಗೊಳ್ಳುವುದು ನನ್ನ ಆದ್ಯ ಕರ್ತವ್ಯ ಮತ್ತು ಸಂತೋಷದ ವಿಷಯವಾಗಿದೆ. ಕೋಮು ಸೌಹಾರ್ದವನ್ನು ಸಂವರ್ಧನೆಗೊಳಿಸುವ ಉದ್ದೇಶದಿಂದ ಈ ಸಾರ್ವಜನಿಕ ಸಭೆಯನ್ನು ಏರ್ಪಡಿಸಲಾಗಿದೆ ಮತ್ತು ಈ ಶುಭ ಸಮಾರಂಭದಲ್ಲಿ ಮಾತನಾಡಲು ವಿವಿಧ ಧರ್ಮಾನುಯಾಯಿಗಳನ್ನು ಆಹ್ವಾನಿಸಲಾಗಿದೆ ಎಂದು ತಿಳಿದು ನನಗೆ ಅತೀವ ಸಂತೋಷವಾಗಿದೆ.

ಮಾನವ ಜನಾಂಗಕ್ಕೆ ಧರ್ಮಪಥ ತೋರಲು ಕಾಲದಿಂದ ಕಾಲಕ್ಕೆ ಪ್ರವಾದಿಗಳು, ಪವಿತ್ರ ಪುರುಷರು ಮತ್ತು ಶ್ರೇಷ್ಠ ಉಪದೇಶಕರ ಅವಶ್ಯಕತೆ ಇರುವಂತೇ ತೋರುತ್ತದೆ. ಮಾರ್ಗದರ್ಶನ ಮತ್ತು ಆಧ್ಯಾತ್ಮಿಕ ಮುನ್ನಡೆ ಅಗತ್ಯವಿರುವಂಥ ಕಾಲದಲ್ಲಿ ಮಹಾನ್ ಧರ್ಮ ಬೋಧಕರು ಜನಿಸುತ್ತಾರೆ.

ಮಹಾನ್ ಪ್ರವಾದಿಗಳು ಅಥವಾ ಗುರುಗಳು ಪ್ರತ್ಯೇಕತೆ ಅಥವಾ ಸಂಕುಚಿತ ದೃಷ್ಟಿಕೋನವನ್ನು ಎಂದಿಗೂ ಬೋಧಿಸಿಲ್ಲ. ಶಾಂತಿ, ಸೌಹಾರ್ದ, ಪ್ರೀತಿ ವಾತ್ಸಲ್ಯಗಳನ್ನು ಆಧರಿಸಿ ಸ್ಥಾಪನೆಗೊಂಡ ಇಸ್ಲಾಂ ಮೂಲಭೂತವಾಗಿ ವಿಶ್ವಧರ್ಮವಾಗಿದೆ. ಇತರ ಶ್ರೇಷ್ಠ ಧರ್ಮಗಳಂತೆ ಇಸ್ಲಾಂ ಸಾರ್ವತ್ರಿಕ, ಸರ್ವ ವ್ಯಾಪಕ ದೇವರ ಅಸ್ಥಿತ್ವದಲ್ಲಿ ನಂಬಿಕೆಯನ್ನು ಪ್ರಚಾರ ಮಾಡಿದೆ. ಎಲ್ಲ ಶ್ರೇಷ್ಠ ಧರ್ಮಗಳ ಮೂಲಭೂತ ತತ್ವಗಳೂ ಒಂದೇ ಆಗಿವೆ. ಎಲ್ಲ ಮಹಾನ್ ಪ್ರವಾದಿಗಳ ಬೋಧನೆಯ ತಿರುಳು ದೇವರಲ್ಲಿ ನಂಬಿಕೆ ಮತ್ತು ಮಾನವ ಪ್ರೀತಿಯೇ ಆಗಿರುತ್ತದೆ.

ಪ್ರವಾದಿ ಮಹಮ್ಮದರ ಬೋಧನೆಯ ವಿಶೇಷ ಅಂಶವೆಂದರೆ ಸಾಮಾಜಿಕ ಸಮಾನತೆಯನ್ನು ಮತ್ತು ಉದಾತ್ತ ಚಿಂತನ ಸರಳ ಜೀವನವನ್ನು ಬೋದಿಸಿದುದೇ ಆಗಿದೆ. ಇಂದು ನಾವು ಆರ್ಥಿಕ ಮತ್ತು ಸಾಮಾಜಿಕ ಸಮಾನತೆ ಹಾಗೂ ಪ್ರಜಾಪ್ರಭುತ್ವದ ಬಗ್ಗೆ ಚಿಂತಿಸುವುದು ಅಸಾಧಾರಣವೇನೂ ಅಲ್ಲ. 1400 ವರ್ಷಗಳ ಹಿಂದೆಯೇ ಇಸ್ಲಾಂನ ಮೂಲತತ್ವಗಳು ಅವಾಗಿದ್ದವು ಎಂಬುದನ್ನು ನಾವು ಮರೆಯಕೂಡದು. ರಾಜ ಮತ್ತು ಆಳು-ಇವರ ನಡುವೆ ಇಸ್ಲಾಂ ಯಾವುದೇ ವ್ಯತ್ಯಾಸ ತೋರಿಸಲಿಲ್ಲ. ಸಮಾನತೆ ಮತ್ತು ಸೌಭ್ರಾತ್ರತ್ವದ ಮಹಾನ್ ತತ್ವಗಳು ಪ್ರವಾದಿ ಮಹಮ್ಮದ್ದರ ಬೋಧನೆಗಳಲ್ಲಿ ಸೇರಿವೆ. ಕಾಯಕ, ಗೌರವ, ಹಿಂಸೆಯನ್ನು ಖಂಡಿಸುವುದು, ಇತರ ಧರ್ಮ ಅನುಯಾಯಿಗಳ ಬಗ್ಗೆ ಪ್ರೀತಿ, ಗೌರವ-ಇವು ಮಹಾನ್ ಪ್ರವಾದಿ ಮಹಮ್ಮದರು ಉಪದೇಶಿಸಿದ ಶ್ರೇಷ್ಠ ತತ್ವಗಳಲ್ಲಿ ಸೇರಿದೆ.

ಮಾನವ ಜನಾಂಗದ ಪರಮಗುರಿ ಆನಂದ ಸಾಧನೆಯೇ ಆಗಿರುತ್ತದೆ. ಸಂತೋಷ, ಆನಂದಗಳೆಂಬುದು ಕೇವಲ ಭೌತಿಕ ಸಾಧನಗಳನ್ನು ಪಡೆಯುವುದರಷ್ಟರಲ್ಲಿಯೇ ಅಡಗಿದೆ. ಆಧುನಿಕ ಮಾನವನಿಗೆ ತನ್ನ ಬೌದ್ಧಿಕ ಹಾಗೂ ತಾಂತ್ರಿಕ ಪ್ರಗತಿಯುಂಟಾಗಿದ್ದರೂ, ಆಧ್ಯಾತ್ಮಿಕ ಉನ್ನತಿಯ ವಾಸ್ತವ ಅಗತ್ಯವನ್ನು ಇಂದಿಗೂ ಬಯಸುತ್ತಿರುವವನು. ಮಾನವ ಯಾವುದೇ ಪರಿಸರದಲ್ಲಿ ಇರಲಿ ಒಳ್ಳೆಯ ಜೀವನವನ್ನು ಸಂವರ್ದಿಸಿದ ಧರ್ಮವು ಪರಿಣಾಮಕಾರಿಯಾಗುತ್ತದೆ.

---

* ಗಾಂಧಿ ಪಾರ್ಕ್ ಮೈದಾನ ದಿನಾಂಕ 21ನೇ ಸೆಪ್ಟೆಂಬರ್, 1991.

ಒಕ್ಕೂಟದ ತಜಿಕಿಸ್ಥಾನಗಳಲ್ಲಿ ಭೂಕಂಪವಾದಾಗ ಭಾರತೀಯ ರೆಡ್‌ಕ್ರಾಸ್ ಗಣನೀಯ ಸೇವೆ ಸಲ್ಲಿಸಿತು.

ಈಚೆಗೆ, ನಮ್ಮ ನೆರೆಯ ದೇಶ ಬಾಂಗ್ಲಾ ದೇಶಕ್ಕೆ ವಿಚಿತ್ರ ಚಂಡಮಾರುತ ಅಪ್ಪಳಿಸಿ, ಅಲ್ಲಿನ ಮಿಲಿಯಗಟ್ಟಲೆ ನಿವಾಸಿಗಳಿಗೆ ಹಾನಿಉಂಟುಮಾಡಿ ವಿನಾಶಕಾರಿಯಾಯಿತು. ಆ ಸಂದರ್ಭದಲ್ಲಿ ಬಾರತದ ರೆಡ್‌ಕ್ರಾಸ್ ಸಜ್ಜಾಗಿ, ಅಲ್ಲಿನ ಹತಭಾಗ್ಯರಿಗಾಗಿ, ಸಂಪನ್ಮೂಲಗಳನ್ನು ಒಟ್ಟುಗೂಡಿಸಲು ತೀರ್ಮಾನಿಸಿತು. ಇಂಥ ವಿಕೋಪಗಳಲ್ಲಿ ಅಗತ್ಯವಿರುವವರಿಗೆ ನೆರವು ನೀಡುವಲ್ಲಿ ಸ್ವಯಂ ಸೇವಾ ಸಂಘಟನೆಗಳು ಸುಸಂಘಟಿತ ಪ್ರಯತ್ನಗಳ ಮೂಲಕ ಮಹತ್ವದ ಪರಿಣಾಮಕಾರಿ ಪಾತ್ರವಹಿಸಬಲ್ಲವು.

ಕೇರಳದ ರೆಡ್‌ಕ್ರಾಸ್ ಘಟಕ ಇತ್ತೀಚಿನದು ಎಂದು ನನಗೆ ತಿಳಿದು ಬಂದಿತು ಸ್ವಲ್ಪ ಕಾಲದ ವಿರಾಮದ ನಂತರ ಕೇರಳ ಘಟಕ ಉತ್ಸಾಹ ಚೈತನ್ಯಗಳಿಂದ ಕಾರ್ಯಾರಂಭ ಮಾಡಿರುವುದು ಕೇಳಿ ನನಗೆ ಸಂತೋಷವಾಗಿದೆ. ಪುಳಿಯುರ್ ವಿಲಿಂಗ್ ಜಮ್ ಮತ್ತು ಚೆಟ್ಲಾನು ಮೊದಲಾದ ಪ್ರದೇಶಗಳಲ್ಲಿ ಸಮುದ್ರ ಕೊರೆತವುಂಟಾದಾಗ ಗಮನಾರ್ಹ ಸೇವೆಯನ್ನು ರೆಡ್‌ಕ್ರಾಸ್ ಸಲ್ಲಿಸಿರುವುದು ಸತ್ಕಾರ್ಹವಾಗಿದೆ. ಪೆರುಮನ್ ರೈಲು ಅಪಘಾತ ಮತ್ತು ಇಡುಕ್ಕಿ ಹಾಗೂ ಕುಮಿಲಿಗಳಲ್ಲಿ ಪ್ರಕೃತಿ ವಿಕೋಪಗಳ ಸಮಯದಲ್ಲಿ ರೆಡ್‌ಕ್ರಾಸ್ ಸೇವೆ ಉಲ್ಲೇಖಾರ್ಹವಾದುದಾಗಿದೆ. ಪ್ರಥಮ ಚಿಕಿತ್ಸೆ, ಗೃಹ ಶುಶ್ರೂಷೆ ಚಟುವಟಿಕೆಗಳನ್ನು ವಿಸ್ತರಿಸುತ್ತಿರುವುದನ್ನು ಕೇಳಿ ನನಗೆ ಸಂತೋಷವಾಗಿದೆ. ರಕ್ತದಾನ, ನೇತ್ರದಾನಗಳ ಬಗ್ಗೆಯೂ ಅದು ಪ್ರಚಾರ ಮಾಡುತ್ತದೆ.

ಈ ಸಂಘದ ಮಹಾನ್ ಪರಂಪರೆಯನ್ನು ಮುಂದುವರೆಸುವಲ್ಲಿ ರೆಡ್‌ಕ್ರಾಸ್‌ನ ಕೇರಳ ಘಟಕದ ಪ್ರಶಂಸಾರ್ಹ ಪ್ರಯತ್ನಗಳಿಗಾಗಿ ನಾನು ಅದನ್ನು ಅಭಿನಂದಿಸುತ್ತೇನೆ. ಅದು ಸೇವಾ ಮನೋಭಾವ, ಶ್ರದ್ಧೆ, ನಿಷ್ಠೆ, ಉತ್ಸಾಹಗಳಿಂದ ಕಾರ್ಯ ಮುಂದುವರಿಸುವುದೆಂದು ಆಶಿಸುತ್ತೇನೆ. ಕರುಣೆ ಮತ್ತು ಅಂತರಾಷ್ಟ್ರೀಯತೆಯ ಅಂಶದ ಮೇಲೆ ಈ ಚಳವಳಿ ಆಧರಿಸಿದೆ ಎಂಬುದು ನಿಮಗೆಲ್ಲ ತಿಳಿದಿದೆ. ಈ ಉತ್ಸಾಹ, ಚೈತನ್ಯಗಳು ಪ್ರಪಂಚದ ಎಲ್ಲೆಡೆ ವ್ಯಾಪಿಸಿದಲ್ಲಿ ಇಂದು ಅಪರಿಹಾರ್ಯವಾಗಿರುವ ಅನೇಕ ಸಮಸ್ಯೆಗಳನ್ನು ಸುಲಭವಾಗಿ ಪರಿಹರಿಸಬಹುದು. ಮಾನವ ಜನಾಂಗದ ಸೇವೆಯಲ್ಲಿ ಇದರ ಅತ್ಯುತ್ತಮ ಪ್ರಯೋಜನ ಪಡೆಯಲು ನಾವೆಲ್ಲ ಶ್ರಮಿಸೋಣ.

ಜೈ ಹಿಂದ್

## ಪ್ರವಾದಿ ಮಹಮ್ಮದರ 1465ನೇ ಜನ್ಮ ದಿನೋತ್ಸವಕ್ಕೆ ಸಂಬಂಧಿಸಿದ

ವಿಶ್ವ ರೆಡ್‌ಕ್ರಾಸ್ ದಿನೋತ್ಸವವನ್ನು ಈ ಸಂಜೆ ಉದ್ಘಾಟಿಸಲು ನನಗೆ ಅತೀವ ಸಂತಸವಾಗಿದೆ.

ಮಾನವ ಮೂಲಭೂತವಾಗಿ ಸ್ವಾರ್ಥಿ ಎಂಬುದು ಸರ್ವಮಾನ್ಯವಾದ ಅಂಶವೇ ಆಗಿದೆ. ಅವನು ವಿಧಿಯ ಕ್ರೌರ್ಯಕ್ಕೆ ಸಿಲುಕಿದ ಹತಭಾಗ್ಯರು, ದುರ್ಭಾಗ್ಯದ ಬಗ್ಗೆ ಅನುಕಂಪ ಪ್ರಕಟಿಸುವ, ವ್ಯಕ್ತಪಡಿಸುವ ವಿರಳಕ್ಷಣಗಳೂ ಇವೆ. ವೈಯಕ್ತಿಕವಾಗಿ ಅವನು ದಯಾಶೀಲನೂ, ಇತರರ ಬಗ್ಗೆ ದಾಕ್ಷಿಣ್ಯಪರನೂ ಆಗುವ ಪ್ರವೃತ್ತ ತಳೆದಿರುವನು. ಕಾಲಚಕ್ರ ಉರುಳಿದಂತೆ ಮಾನವ ವರ್ತನೆಯು ಗಣನೀಯವಾಗಿ ಸುಧಾರಿಸಿದೆ. ಆದರೆ ಅದೇ ಸಾಮೂಹಿಕ ಪ್ರವೃತ್ತಿಯಲ್ಲಿನ ಇನ್ನೂ ಆಗಬೇಕಾದುದು ತುಂಬ ಇದೆ. ಕಷ್ಟ ತೊಂದರೆಗಳಲ್ಲಿರುವ ನೆರೆಹೊರೆಯವರಿಗೆ ನೆರವು ನೀಡಲು ವ್ಯಕ್ತಿ ಸಾಕಷ್ಟು ಪ್ರಯತ್ನಿಸುವನು. ಆದರೆ ಅಂತರಾಷ್ಟ್ರೀಯ ಪ್ರಮಾಣದಲ್ಲಿ ನೆರವಿನ ಪರಿಕಲ್ಪನೆಯು ಈಚಿನದಾಗಿದೆ ಮತ್ತು ಅದು ಇನ್ನೂ ಅಭಿವೃದ್ಧಿಗೊಳ್ಳಬೇಕಾಗಿದೆ.

ರೆಡ್‌ಕ್ರಾಸ್ ಮಾನವನ ಮನಸ್ಸಿನ ಅತ್ಯುತ್ತಮ ಉತ್ಕಾಂಕ್ಷೆಗಳ ಪ್ರತೀಕವಾಗಿದೆ. ಅದು ಮಾನವ ಜನಾಂಗದ ಶಾಂತಿ ಮತ್ತು ಸೌಹಾರ್ದತೆಗೆ ಇರುವ ಅತ್ಯಂತ ಚಳುವಳಿಗಳ ಪೈಕಿ ಒಂದಾಗಿದೆ. ಅನುಕಂಪ ಮತ್ತು ಅಂತರಾಷ್ಟ್ರೀಯತೆಯ ತತ್ವದ ಮೇಲೆ ಈ ಚಳುವಳಿ ಆಧಾರಿತವಾಗಿದೆ. ಅದು ಮೊದಲಿಗೆ ಯುದ್ಧದ ಗಾಯಾಳುಗಳು ಮತ್ತು ರೋಗಗ್ರಸ್ತರ ಪಾಲನೆ ಹಾಗೂ ಅವರ ಸಂರಕ್ಷಣೆಯ ಉದ್ದೇಶದಿಂದ ರೂಪುಗೊಂಡ ಅಂತಾರಾಷ್ಟ್ರೀಯ ಸಂಸ್ಥೆಯಾಗಿತ್ತು. ಅನಂತರದಲ್ಲಿ ರೆಡ್‌ಕ್ರಾಸ್ ತನ್ನ ಚಟವಟಿಕೆಗಳನ್ನು ಯುದ್ಧ ಹಾಗೂ ಶಾಂತಿ ಕಾಲಗಳೆರಡರಲ್ಲೂ ಮಾನವನ ನರಳುವಿಕೆಯನ್ನು ತಡೆಗಟ್ಟುವ ಮತ್ತು ಉಪಶಮನ ಗೊಳಿಸುವುದಕ್ಕೆ ವಿಸ್ತರಿಸಿತು.

ರೆಡ್‌ಕ್ರಾಸ್ ಅಂತರಾಷ್ಟ್ರೀಯ ಸಂಘವಾಗಿ ಯುದ್ಧ, ರಾಷ್ಟ್ರೀಯ ವಿಪತ್ತುಗಳು, ಸಾಂಕ್ರಾಮಿಕ ರೋಗಗಳು ಮೊದಲಾದ ಸಂದರ್ಭಗಳಲ್ಲಿ ನೋವು ನರಳಿಕೆಗಳನ್ನು ತಗ್ಗಿಸಲು, ಉಪಶಮನಗೊಳಿಸಲು ಶ್ರಮಿಸುತ್ತದೆ ರೆಡ್‌ಕ್ರಾಸ್‌ನ ಚಟುವಟಿಕೆಗಳು ಜಾತಿ, ಪಂಥ, ವರ್ಣ ಮತ್ತು ಧರ್ಮದ ಗಡಿಗಳನ್ನು ಮೀರಿ ವಿಶ್ವದಾದ್ಯಂತ ಹಬ್ಬಿರುತ್ತದೆ. ಅದು ಸ್ವಾತಂತ್ರ್ಯ ಪ್ರೀತಿ ಮತ್ತು ಸಮಾನತೆಗಳನ್ನು ಪ್ರಸರಿಸುವುದರ ಮೂಲಕ ವಿಶ್ವ ಬ್ರಾತೃತ್ವವನ್ನು ಪ್ರಕಟಿಸುತ್ತದೆ.

ರೆಡ್‌ಕ್ರಾಸ್‌ನ ಜನಕ ಜೇನ್ ಹೆನ್ರಿ ಡ್ಯುನಾಂಟ್‌ನ ಜನ್ಮದಿನ ಮೇ 8 ಎಂಬುದು ತಮಗೆಲ್ಲ ತಿಳಿದಿದೆ. ಈತ ಸ್ವಿಡ್ಜಲ್ಯಾಂಡಿನವನು. ದಾನಶೀಲವರ್ತಕ ಈ ದಿನವನ್ನು ವಿಶ್ವದಾದ್ಯಂತ ಪ್ರಪಂಚದ ರೆಡ್‌ಕ್ರಾಸ್ ದಿನವನ್ನಾಗಿ ಆಚರಿಸಲಾಗುತ್ತಿದೆ. ಭಾರತೀಯ ರೆಡ್ ಕ್ರಾಸ್ ಸೊಸೈಟಿ 1920ರಲ್ಲಿ ಸ್ಥಾಪನೆಗೊಂಡಿತು. ಅದು ತನ್ನ ಅಸ್ತಿತ್ವದ ಈ ಅವಧಿಯಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿರುವುದರಿಂದ ಹೆಮ್ಮೆ ಪಡಬಹುದಾಗಿದೆ. ಭೂಪಾಲದ ಅನಿಲ ದುರಂತದ ಕರಾಳದಿನಗಳಲ್ಲಿ ನತದೃಷ್ಟರಾದ ಹತಭಾಗ್ಯರಾಗಿ ನೆರವಿನ ಹಸ್ತ ನೀಡಿ ಸಾರ್ಥಕ ಸೇವೆಸಲ್ಲಿಸಿತು. ಅರ್ಮೇನಿಯದಲ್ಲಿ ಸೋವಿಯತ್

---

* ತಿರುವನಂತಪುರಂ ದಿನಾಂಕ 8ನೇ ಮೇ, 1991

ಅನೇಕ ಸಲ ತುಂಬ ತಡವಾಗಿಬಿಟ್ಟಿರುತ್ತದೆ. ಮದ್ಯಪಾನದ ಬಗ್ಗೆ ಪ್ರಾಚೀನ ಚೀನೀ ಗಾದೆಯೊಂದು ಹೇಳಿರುವ ಮಾತುಗಳು ಇವು. ಮೊದಲು ಮನುಷ್ಯ ಕುಡಿಯುತ್ತಾನೆ. ಅನಂತರ ಕುಡಿತವು ಮತ್ತನನ್ನಾಗಿಸುತ್ತದೆ. ಅನಂತರ ಕುಡಿತ ಮನುಷ್ಯನನ್ನೆ ಆಪೋಶನ ತೆಗೆದುಕೊಳ್ಳುತ್ತದೆ. ಇದೇ ಮಾತು ಇತರ ಮದ್ದುಗಳ ಬಗ್ಗೆಯೂ ಸತ್ಯ.

ಮದ್ದು ಸೇವನೆ ಅನೇಕ ವೇಳೆ ವ್ಯಕ್ತಿ ದೈನಂದಿನ ಸಮಸ್ಯೆಗಳಿಂದ ಪಲಾಯನ ಮಾಡುವ ಪ್ರಯತ್ನವಾಗಿರುತ್ತದೆ. ಸಮಾಜದಲ್ಲಿರುವ ಹಲವಾರು ಸಾಮಾಜಿಕ, ಮಾನಸಿಕ ಅಂಶಗಳು ಕೂಡ ಮದ್ದು ವ್ಯಸನಕ್ಕೆ ಕಾರಣವಾಗಬಹುದು. ಕುಟುಂಬಗಳು ಒಡೆಯುತ್ತಿರುವುದು, ಅಧಿಕಗೊಳ್ಳುತ್ತಿರುವ ಚಲನಶೀಲತೆ, ತೀವ್ರಗತಿಯ ನಗರೀಕರಣ ಮತ್ತು ಬದಲಾಗುತ್ತಿರುವ ಸಾಮಾಜಿಕ ಮೌಲ್ಯಗಳು ಇವು ಮಾದಕ ದ್ರವ್ಯ ಚಟಕ್ಕೆ ನೆರವಾಗುವ ಅಂಶಗಳಾಗಿವೆ. ಮಾದಕ ದ್ರವ್ಯಗಳ ಚಟವು ಕೈಗಾರೀಕರಣಗೊಂಡ ನಗರ ಪ್ರದೇಶಗಳಿಗೆ ಮಾತ್ರವೇ ಸೀಮಿತವಾಗಿಲ್ಲ ಎಂಬ ಅಂಶವು ಅಭಿವೃದ್ಧಿಶೀಲ ದೇಶಗಳಿಗೆ ಹೆಚ್ಚು ಹೆಚ್ಚು ಮನವರಿಕೆಯಾಗುತ್ತಿದೆ. ಈ ವಿಪತ್ತಿನ ವಿಷ ಬಾಹುಗಳು ಗ್ರಾಮೀಣ ಸಮುದಾಯಗಳ ಜನರಲ್ಲೂ ತೀವ್ರ ಗತಿಯಲ್ಲಿ ವ್ಯಾಪಕವಾಗಿ ವಿಸ್ತರಿಸುತ್ತಿವೆ.

ವಾಸ್ತವವಾಗಿ ಮದ್ದುವ್ಯಸನದ ವಿರೋಧದ ಹೋರಾಟ ತೀವ್ರ ಸ್ವರೂಪದ್ದೇ ಆಗಿರುತ್ತದೆ. ಮಾದಕ ದ್ರವ್ಯ ಚಟವು ಜನರು ಮತ್ತು ಸಮುದಾಯಗಳ ಮೇಲೆ ಪರಿಣಾಮ ಬೀರುವುದರಿಂದ ಅದರ ಸಂಕೀರ್ಣತೆಗಳನ್ನು ಎದುರಿಸುವಲ್ಲಿ ವ್ಯಾಪಕವಾದ ಕಾರ್ಯಕ್ರಮದ ಅಗತ್ಯವಿದೆ. ಮಾದಕ ದ್ರವ್ಯ ಚಟವನ್ನು ತಡೆಗಟ್ಟುವ ಕ್ರಮಗಳ ಜೊತೆಯಲ್ಲಿಯೇ ಮಾದಕ ದ್ರವ್ಯ ಚಟಗಳಿಗೆ ಒಳಗಾಗುವವರನ್ನು ಬೇಗ ಗುರುತಿಸುವುದು. ಅವರಿಗೆ ಚಿಕಿತ್ಸೆ, ಅವರ ಪುನರ್ವಸತಿ ಹಾಗೂ ಮತ್ತು ಅವರನ್ನು ಸಮಾಜದ ಮೂಲಸೋತ್ರಕ್ಕೆ ಸೇರಿಸಿಕೊಳ್ಳುವುದಕ್ಕೂ ಖಚಿತವಾದ ಕ್ರಮಗಳಿರಬೇಕು.

ಜೈ ಹಿಂದ್

## ವಿಶ್ವ ರೆಡ್‌ಕ್ರಾಸ್ ದಿನಾಚರಣೆ *

## "ಮಾದಕ ದ್ರವ್ಯ ಚಟದಲ್ಲಿ ಈ ದಶಕದ ಸವಾಲುಗಳು" *

ಮದ್ಯದಗೀಳು ಮತ್ತು ಮಾದಕ ದ್ರವ್ಯದ ಚಟ-ಇವುಗಳ ವಿರುದ್ಧ ಹೋರಾಟಕ್ಕಾಗಿ ಕಂಕರಿ ತೊಟ್ಟಿರುವಂಥವರೊಡನೆ ಈ ಸಂಜೆ ಇಲ್ಲಿರಲು ನನಗೆ ಸಂತೋಷವುಂಟಾಗಿದೆ, ಮಾದಕ ದ್ರವ್ಯ ಚಟದಲ್ಲಿ ಈ ದಶಕದ ಸವಾಲುಗಳ ಬಗ್ಗೆ ವಿಚಾರಗೋಷ್ಠಿಯನ್ನು ಉದ್ಘಾಟಿಸಿರುವುದು ಗೌರವವೆಂದು ಪರಿಗಣಿಸುತ್ತೇನೆ.

ಈ ಪ್ರಾದೇಶಿಕ ವಿಚಾರಗೋಷ್ಠಿಯನ್ನು ಭಾರತದ ಮದ್ಯ ಮತ್ತು ಮಾದಕ ದ್ರವ್ಯ ಮಾಹಿತಿ ಕೇಂದ್ರದವರು ವ್ಯವಸ್ಥೆಗೊಳಿಸಿರುವುದು ಸಂತೋಷದ ವಿಷಯವಾಗಿದೆ. ಇದು ಶ್ರೀಮತಿ ಲಕ್ಷ್ಮೀ ಎನ್. ಮೆನನ್‌ರವರ ಸಮರ್ಥ ನಾಯಕತ್ವದಲ್ಲಿ ವೃತ್ತಿಪರರ ನಿಷ್ಠಾವಂತ ತಂಡವೊಂದು ನಡೆಸುತ್ತಿದೆ.

ಯುಗ ಯುಗಗಳ ಮಾನವ ಪ್ರಗತಿಯಲ್ಲಿ ಅಸಂಖ್ಯಾತ ಸವಾಲುಗಳನ್ನು ಎದುರಿಸಬೇಕಾಗಿ ಬಂದುದರ ಬಗ್ಗೆ ಸಂದೇಹವೇ ಇಲ್ಲ. ನನ್ನ ದೃಷ್ಟಿಯಲ್ಲಿ, ಮದ್ಯ ಮತ್ತು ಮಾದಕ ದ್ರವ್ಯ ಚಟ ಇವು ಇಂದು ಮಾನವ ಜನಾಂಗಕ್ಕೆ ಭೀಕರ ಸವಾಲುಗಳಾಗಿವೆ. ನಾರ್ಕೋಟಿಕ್ ಡ್ರಗ್ಸ್ ಬಗ್ಗೆ ವಿಶ್ವಸಂಸ್ಥೆಯ ಆಯೋಗವು ಮಾದಕ ದ್ರವ್ಯಚಟದ ಹೆಚ್ಚುತ್ತಿರುವ ಅಪಾಯವು "ಈಗ ಯಾವುದೇ ದೇಶ ಈ ಉಪದ್ರವದಿಂದ ಮುಕ್ತವಾಗಿದೆ" ಎಂದು. ಸೂಕ್ತವಾಗಿಯೇ ಸೂಚಿಸಿದೆ. ಇದು ಸಾಮಾಜಿಕ ಆರ್ಥಿಕ ಅಭಿವೃದ್ಧಿಗೆ ತೊಡಕುಂಟು ಮಾಡುವಂಥ ಗಂಭೀರವಾದ ಆರೋಗ್ಯದ ಹಾಗೂ ಸಾಮಾಜಿಕ ಸಮಸ್ಯೆಯಷ್ಟೇ ಆಗಿರದೆ ರಾಷ್ಟ್ರೀಯ ಸುರಕ್ಷತೆ ಹಾಗೂ ರಾಷ್ಟ್ರಗಳು ಚೇತರಿಸಿಕೊಳ್ಳುವುದರ ಸಮಸ್ಯೆಯೂ ಆಗಿದೆ ಮಾದಕ ದ್ರವ್ಯಚಟವು ಒಂದು ಕಡೆ ವ್ಯಕ್ತಿಗಳು ಹಾಗೂ ಅವರ ಕುಟುಂಬಗಳಿಗೆ ತೀವ್ರ ಅಪಾಯವುಂಟುಮಾಡುವುದಾದರೆ, ಮತ್ತೊಂದು ಕಡೆ ರಾಷ್ಟ್ರಗಳ ಸಂರಚನಾ ಜಾಲಗಳಿಗೂ ಹಾನಿಯುಂಟು ಮಾಡುತ್ತದೆ. ಮಾದಕ ದ್ರವ್ಯಗಳ ದುರ್ಬಳಕೆ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯನ್ನು ಕುಂಠಿತ ಗೊಳಿಸುವುದು ಮಾತ್ರವಲ್ಲದೆ ಅಪರಾಧ ಹಿಂಸಾಚಾರ ಹಾಗೂ ಭ್ರಷ್ಟಾಚಾರ ಹಬ್ಬಲು ಕೂಡ ಕಾರಣವಾಗುತ್ತವೆ. ಸಾರ್ಕ್ ದೇಶಗಳು ಮಾದಕದ್ರವ್ಯ ಚಟ ಹಾಗೂ ಕಳ್ಳ ಸಾಗಾಣಿಯನ್ನು ಆದ್ಯತಾ ಸಮಸ್ಯೆಯೆಂದು ಪರಿಗಣಿಸಿರುವುದು ಈ ಸಮಸ್ಯೆಯ ತೀವ್ರತೆ ಮತ್ತು ಪ್ರಭಾವ ಪರಿಣಾಮ ವ್ಯಾಪ್ತಿಗಳು ಎಷ್ಟು ಎಂಬುದರ ಪರಿಗಣನೆಯಾಗಿದೆ.

ಮಾದಕ ದ್ರವ್ಯ ಚಟದ ಅತ್ಯಂತ ದುರದೃಷ್ಟಕರ ಅಂಶವೆಂದರೆ ಅದಕ್ಕೆ ಬಲಿಯಾಗುವವರ ಪೈಕಿ ಹೆಚ್ಚಿನವರು ಯುವಕರಾಗಿರುವುದು. ಯುವ ಜನಾಂಗಕ್ಕೆ ಅತ್ಯಂತ ಸಹಜವಾದ ಕುತೂಹಲ ಹಾಗೂ ಹೊಸಹೊಸದಾಗಿ ಹಾತೊರೆಯುವಿಕೆಗಳಿಂದ ಯುವ ಜನತೆ ಬಹು ಬೇಗನೆ ಇದಕ್ಕೆ ಬಲಿಯಾಗಿ ಬಿಡುತ್ತಾರೆ. ಈ ಮಾದಕ ದ್ರವ್ಯ ಚಟದ ಪರಿಣಾಮಗಳನ್ನು ಮನಗಾಣುವ ವೇಳೆಗೆ

---

* ಸಾರ್ಕ್ ದೇಶಗಳ ಪ್ರತಿನಿಧಿಗಳ ವಿಚಾರಗೋಷ್ಠಿ ಉದ್ಘಾಟನೆ ದಿನಾಂಕ 2ನೇ ಏಪ್ರಿಲ್, 1991

ಅವರು ಬಳಸಿಕೊಂಡಿದ್ದಂಥ ಆಲಂಕಾರಗಳ ವಿಶಿಷ್ಟ ತಂತ್ರ, ಸಾಹಿತ್ಯದ ಪರಿಶುದ್ಧತೆ, ಇವೆಲ್ಲಕ್ಕೂ ಮಿಗಿಲಾಗಿ ಅವರ ಎಲ್ಲ ರಚನೆಗಳಲ್ಲಿ ಸರ್ವ ವ್ಯಾಪ್ತಿಯಾಗಿರುವ ಪದ್ಮನಾಭವನ ಬಗ್ಗ ಮನಮಿಡಿಯುವಂಥ ಬಕ್ತಿ, ಇವೆಲ್ಲ ಅವರ ಪ್ರತಿಭೆಯ ವಿಶಿಷ್ಟ ಲಕ್ಷಣಗಳಾಗಿವೆ. ಅವರು ವಾಸ್ತವವಾಗಿ ವಾಗ್ಗೇಯಕಾರರ, ವಾಗ್ಗೇಯಕಾರರಾಗಿದ್ದರು ಮತ್ತು ಆ ಯುಗದ ಮಹಾನ್ ವಾಗೇಯಕಾರರಾದ ತ್ಯಾಗರಾಜ ಮತ್ತು ಸ್ವಾಮಿ ದೀಕ್ಷಿತರು ಮತ್ತು ಶ್ಯಾಮಾ ಶಾಸ್ತ್ರಿಗಳ ನೆಲೆಯಲ್ಲಿಯೇ ಅವರಿಗೆ ಸ್ಥಾನವಿದೆ. ಅವರು ಕವಿ ಹಾಗೂ ಮಹಾನ್ ವಿದ್ವಾಂಸರಾಗಿದ್ದರು ಕೂಡಿ ವಾಗ್ಗೇಯಕಾರರು ಹಾಗೂ ಮೋಹಿನಿಯಾಟದ ಯೋಜಕರೆಂದೇ ಖ್ಯಾತರಾಗಿರುವರು. ಕ್ಷೀಣ ದೆಸೆಯಲ್ಲಿನ ಮೋಹಿನಿಯಾಟಕ್ಕಾಗಿ ಮರು ಹುಟ್ಟನ್ನು ನೀಡಿ ಆ ಕಲೆ ತನ್ನೆಲ್ಲ ವೈವಿಧ್ಯತೆಗಳೊಡನೆ ಮೆರೆಯುವಂತೆ ಮಾಡಿದರು.

ದೇವರು ಯಾರನ್ನು ಪ್ರೀತಿಸುತ್ತಾನೋ ಅವರನ್ನು ತನ್ನೆಡೆಗೆ ಬಹುಬೇಗನೆ ಕರೆದುಕೊಂಡು ಬಿಡುವನು ಎಂದು ಅನೇಕ ವೇಳೆ ಹೇಳಲಾಗುತ್ತದೆ. ಅವರು ವಿಧಿವಶರಾದಾಗ ಅವರಿಗೆ ಕೇವಲ 34 ವರ್ಷವಷ್ಟೇ ಆಗಿತ್ತು. ಆದರೆ ಎಷ್ಟು ಅಲ್ಪಾವಧಿಯಲ್ಲೇ ವಿವಿಧ ಕಾರ್ಯಕ್ಷೇತ್ರಗಳಲ್ಲಿ ಅದೂ ಸಾಕಷ್ಟು ದೂರದೃಷ್ಟಿಯಿಂದ ಗಮನಾರ್ಹವಾದಂಥ ಗಣನೀಯವಾದಂಥ ಸಾಧನೆ ಮಾಡಿದ್ದಾರೆ. ಸ್ವಾತಿ ತಿರುನಾಳರು ಜನತೆಯ ಹೃನ್ಮನಗಳಲ್ಲಿ ಸದಾಕಾಲ ಇದ್ದೇ ಇರುತ್ತಾರೆ.

ಭಾರತೀಯ ಶಾಸ್ತ್ರೀಯ ಸಂಗೀತ ಮತ್ತು ಇತರ ಲಲಿತಕಲೆಗಳ ಮಹಾನ್ ಆದರ್ಶಗಳನ್ನು ಎತ್ತಿ ಹಿಡಿಯುವಲ್ಲಿ ಸತತ ಪ್ರಯತ್ನಕ್ಕಾಗಿ ಸ್ವಾತಿ ತಿರುನಾಳ ಸಂಗೀತ ಸಭೆಯನ್ನು ಅಭಿನಂದಿಸುತ್ತೇನೆ. ಮಹಾರಾಜ ಶ್ರೀ ಸ್ವಾತಿ ತಿರುನಾಳರ 178ನೇ ಜಯಂತೋತ್ಸವಗಳನ್ನು ಉದ್ಘಾಟಿಸಲು ನನಗೆ ತುಂಬಾ ಸಂತೋಷವೆನಿಸುತ್ತದೆ.

ಜೈ ಹಿಂದ್

## ಮಹಾರಾಜ ಶ್ರೀ ಸ್ವಾತಿ ತಿರುನಾಳಂ 178ನೇ ಜಯಂತೋತ್ಸವ *

ಈ ಸಂಜೆ ಮಹಾರಾಜ ಶ್ರೀ ಸ್ವಾತಿ ತಿರುನಾಳರ 178ನೇ ಜಯಂತೋತ್ಸವಗಳನ್ನು ಉದ್ಘಾಟಿಸಲು ನನಗೆ ಅತೀವ ಸಂತೋಷವಾಗಿದೆ. ಈ ಕಾರ್ಯಕ್ರಮದಲ್ಲಿ ಸಹ ಭಾಗಿಯಾಗುವುದು ವಿಶಿಷ್ಟ ಗೌರವವೆಂದು ಭಾವಿಸಿರುತ್ತೇನೆ. ಸ್ವಾತಿ ತಿರುನಾಳರ ಹೆಸರೇ ಕಲಾಪ್ರೇಮಿಗಳ ಮನದಲ್ಲಿ ಗೌರವ ಮೆಚ್ಚುಗೆ ಮತ್ತು ಅತೀವ ಹೆಮ್ಮೆಯ ಭಾವನೆಯನ್ನು ಮೂಡಿಸುತ್ತವೆ. ಆ ವಿಶಿಷ್ಟ ವಿರಳ ವ್ಯಕ್ತಿಯ ಆಕರ್ಷಕ ವ್ಯಕ್ತಿತ್ವ ಅಂಥದಾಗಿದೆ. ಸ್ವಾತಿ ತಿರುನಾಳರದು ಬಹುಮುಖ ವ್ಯಕ್ತಿತ್ವ. ಅವರು ಶ್ರೇಷ್ಠ ಭಾಷಾ ಶಾಸ್ತ್ರಜ್ಞರು. ಪ್ರಕಾಂಡ ಪಂಡಿತರು ಮತ್ತು ವೈವಿಧ್ಯಮಯ ಆಯಾಮಗಳ ಆಡಳಿತಗಾರರಾಗಿದ್ದರಷ್ಟೇ ಅಲ್ಲದೆ (ಮಹಾನ್) ಶ್ರೇಷ್ಠ ಕವಿಯೂ ವಾಗ್ಗೆಯ ಕಾರರೂ ಆಗಿದ್ದರು. ಅವರು ವಿಶಿಷ್ಟವಾದ ಪ್ರತಿಭಾವಂತರು; ಅಂಥವರನ್ನು ಕಾಣುವುದು ತುಂಬ ವಿರಳ.

ಅವರು ಮಹಾನ್ ವ್ಯಕ್ತಿಯಾಗಿಯೇ ಜನಿಸಿದರು. ಆಂತರಿಕವಾಗಿದ್ದ ತಮ್ಮ ಸಾಮರ್ಥ್ಯಾದಿಗಳನ್ನು ಉತ್ತಮ ಪಡಿಸಿಕೊಳ್ಳುವ ಮೂಲಕ ಗೌರೀಶಂಕರದ ಔನ್ನತ್ಯಕ್ಕೇರಿದರು. ಪ್ರಕಾಂಡ ಪಂಡಿತರ ತಂಡವೇ ಅವರಿಗೆ ಶಿಕ್ಷಣ ನೀಡಿತು. ದಕ್ಷಿಣ ಭಾರತದಲ್ಲಿ ಲಭ್ಯವಿದ್ದ ಅವರ ಅತ್ಯುತ್ತಮ ಖಾಸಗಿ ಗ್ರಂಥಾಲಯದ ನೆರವು ಪಡೆದುಕೊಂಡರು ತಮ್ಮ ಮಾತೃಭಾಷೆಯ ಜೊತೆಗೆ ಇತರ ಹಲವಾರು ಭಾಷೆಗಳಲ್ಲಿ ಪರಿಣತಿ ಪಡೆದರು.

ರಾಜರಾಗಿ, ಆಡಳಿತಗಾರರಾಗಿ, ಸ್ವಾತಿ ತಿರುನಾಳರ ಸಾಧನೆಗಳನ್ನು ನಾವು ಪರಿಶೀಲಿಸಿದಾಗ ಅವರು ತಮ್ಮ ಕಾಲದವರಿಗಿಂತ ತುಂಬ ಮುಂದಿದ್ದರು ಎಂಬುದು ತಿಳಿದು ಬರುತ್ತದೆ. ಆಂಗ್ಲ ಪ್ರೌಢಶಾಲಯನ್ನು, ಅಲೋಪಥಿ ಆಸ್ಪತ್ರೆಯನ್ನು ಸರಕಾರಿ ಮುದ್ರಣಾಲಯವನ್ನು ಮತ್ತು ಅಬ್ಸರ್ವೇಟರಿಯನ್ನು ಮೊತ್ತ ಮೊದಲಿಗೆ ಸ್ಥಾಪಿಸಿದರು ಅವರೇ ಆಗಿದ್ದಾರೆ. ಆಡಳಿತವನ್ನು ಬಲಪಡಿಸುವಲ್ಲಿ ಕೂಡ ಗಮನಾರ್ಹ ಕ್ರಮಗಳನ್ನು ಕೈಗೊಂಡರು. ಆದರೆ ಸಂಗೀತ ಕ್ಷೇತ್ರದಲ್ಲಿ ಅವರ ಕೊಡುಗೆ ಮತ್ತು ಪ್ರೋತ್ಸಾಹ ನೀಡಿಕೆ ಅನ್ಯಾದೃಶ್ಯವಾಗಿ ನಿಲ್ಲುತ್ತದೆ. ವಾಸ್ತವವಾಗಿ ಈ ಮಹಾರಾಜರ ಆಳ್ವಿಕೆಯ ಕಾಲ ತಿರುವಾಂಕೂರಿನ ಸುವರ್ಣಯುಗವಾಗಿತ್ತು.

ಸ್ವಾತಿ ತಿರುನಾಳರ ಹೆಸರಿನ ಮೋಡಿಯೇ ರಾಜ್ಯದ ಎಲ್ಲ ಕಡೆಗಳಿಂದಲೂ ಮತ್ತು ಹೊರಗಡೆಯಿಂದಲೂ ಈ ಕಾಲದಲ್ಲಿನ ಅತ್ಯುತ್ತಮ ಸಂಗೀತಗಾರರು ಮತ್ತು ಗಾಯಕರನ್ನು ತಿರುವಾಂಕೂರು ಆ ಸ್ಥಾನಕ್ಕೆ ಆಕರ್ಷಿಸಿತ್ತು. ಸ್ವಾತಿ ತಿರುನಾಳರ ಕಾಲದಲ್ಲಿ ತಿರುವಾಂಕೂರು ಎಲಿಜಬೆತ್ ಕಾಲದ ಇಂಗ್ಲೆಂಡಿನಂತೆ ಚಿಲಿಪಿಲಿಗುಟ್ಟುವ ಪಕ್ಷಿಗಳ ನೆಲೆಯಾಗಿತ್ತು. ಸಂಗೀತ ಕ್ಷೇತ್ರದಲ್ಲಿ ಕರ್ನಾಟಕ ಮತ್ತು ಹಿಂದೂಸ್ಥಾನಿ ಸಂಗೀತಗಳ ಸುಮಧುರ ಸಂಶ್ಲೇಷಣೆಗಾಗಿ ಅವರು ಶ್ರಮಿಸಿದರು. ಅವರ ರಚನೆಗಳ ಸಂಖ್ಯೆ ಮುನ್ನೂರಕ್ಕೂ ಸ್ವಲ್ಪ ಹೆಚ್ಚಾಗಿದ್ದರೂ, ಭಾಷೆ ಮತ್ತು ರೂಪ ವೈವಿಧ್ಯರಾಗಗಳ ಆಯ್ಕೆಯಲ್ಲಿ ಅವರು ಪ್ರದರ್ಶಿಸುವಂಥ ಸರ್ವತೋಮುಖ ಸಾಮರ್ಥ್ಯ

---

* ತಿರುವನಂತಪುರ ದಿನಾಂಕ 27ನೇ ಏಪ್ರಿಲ್, 1991.

ಭಾವನೆಗಳಿಂದ ಮುಕ್ತಗೊಳಿಸೋಣ. ಅವರ ಆತ್ಮ ನಮ್ಮ ಪಾಲಿಗೆ ಧ್ರುವತಾರೆಯಂತಿದೆ. ನವಭಾರತ ನಿರ್ಮಾಣದಲ್ಲಿ ಎದುರಾಗಬಹುದಾದ ಸವಾಲುಗಳನ್ನು ಎದುರಿಸುವಲ್ಲಿ ಈ ತಾರೆ ನಮಗೆ ಬೆಳಕು, ಧೈರ್ಯ ಮತ್ತು ಸ್ಥೈರ್ಯಗಳನ್ನು ನೀಡಿ ಮಾರ್ಗದರ್ಶನ ಮಾಡಲಿ.

ಜೈ ಹಿಂದ್

ಎಂಬುದನ್ನು ಇಂಗ್ಲೆಂಡ್ ಮತ್ತು ಅಮೇರಿಕಾಗಳಲ್ಲಿ ಅವರ ಅಧ್ಯಯನ ಪೂರ್ಣವಾಗಿ ಮನದಟ್ಟು ಮಾಡಿಕೊಟ್ಟಿತ್ತು. ಸಂವಿಧಾನಾತ್ಮಕ ರಕ್ಷಣೆಗಳು ಮಾತ್ರವೇ ಅಂತಿಮವಾಗಿ ಅಸ್ಪೃಶ್ಯರನ್ನು ಮುಕ್ತ ಜೀವನಕ್ಕೆ ದಾರಿ ಮಾಡಿಕೊಡಬಲ್ಲವು ಎಂದು ಅವರು ಬಲವಾಗಿ ನಂಬಿದ್ದರು. ಅವರ ಜೀವಮಾನ ಪೂರ್ತಿ ಸಮುದಾಯದ ಭವಿಷ್ಯ ಅವರ ಮನಸ್ಸಿನಲ್ಲಿ ಬೇರು ಬಿಟ್ಟಿತ್ತು. ಅವರು ತಮ್ಮ ಕೊನೆಯ ದಿನಗಳಲ್ಲಿ ಅಸ್ಪೃಶ್ಯರ ಸ್ಥಿತಿಗತಿಗಳ ಬಗ್ಗೆ ವ್ಯಥೆಪಟ್ಟಿದ್ದರು ಮತ್ತು ಅವರ ಭವಿಷ್ಯದ ಬಗ್ಗೆ ಆತಂಕ ವ್ಯಕ್ತಪಡಿಸಿದ್ದರು. ಗ್ರಾಮಗಳಲ್ಲಿರುವ ನನ್ನ ಸೋದರರ ಸ್ಥಿತಿ ಏನು? ಎಂದು ಕೇಳಿ ಅತ್ತಿದ್ದರು.

ಅವರ ಆದರ್ಶವು ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವವನ್ನು ಆಧರಿಸಿದ ಸಮಾಜವನ್ನು ಸ್ಥಾಪಿಸುವುದಾಗಿತ್ತು. ಅವರು ದೇಶದ ಮತ್ತು ಜನತೆಯ ಭವಿಷ್ಯಗಳನ್ನು ನಿರ್ಧರಿಸುತ್ತ ತಮ್ಮ ಜೀವನದ ಕೊನೆಯವರೆವಿಗೂ ಮಹತ್ತರ ಪಾತ್ರವಹಿಸಿದ್ದರು. (ದಲಿತರ) ನಿಮ್ನ ವರ್ಗಗಳ ಮುಕ್ತಿಗಾಗಿ ಹಾಗೂ ಅವರ ಹಕ್ಕುಗಳ ಸಂರಕ್ಷಣೆಗೆ ಅವರು ಹಿಂಜರಿಯದೆ ಹೋರಾಡಿದರು. ಈ ಹಕ್ಕುಗಳಿಗೆ ಸಂವಿಧಾನಾತ್ಮಕ ಸಿಂಧುತ್ವ ಮತ್ತು ರಕ್ಷಣೆಯನ್ನು ಒದಗಿಸಲು ಕ್ರಮಗಳನ್ನು ಕೈಗೊಂಡರು.

ಅವರು ಪ್ರಾರಂಭಿಸಿದ ಸಾಮಾಜಿಕ ಹೋರಾಟಗಳು ಅಸ್ಪೃಶ್ಯರ ಬಗ್ಗೆ ಅಸಮವಾಗಿ ವರ್ತಿಸಿದ್ದನ್ನು ಪ್ರತಿಭಟಿಸುವಂಥವಾಗಿದ್ದವು. ಎಲ್ಲ ವರ್ಗಗಳಿಗೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಷಯಗಳಲ್ಲಿ ಸಮಾನ ಸ್ಥಾನಮಾನಗಳನ್ನು ಸ್ಥಾಪಿಸುವುದು ಅವರ ಗುರಿಯಾಗಿತ್ತು. ಅವರು ಜೀವನದಲ್ಲಿ ಮೇಲೆ ಬರಲು ಅವಕಾಶ ಕಲ್ಪಿಸುವುದೆಂದು ಅವರು ನಂಬಿದ್ದರು. ಅವರು ಭಾರತಕ್ಕೆ ಒಂದು ಕಾನೂನಿನ ಚೌಕಟ್ಟನ್ನು ಮತ್ತು ಜನತೆಗೆ ತಮ್ಮ ಸ್ವಾತಂತ್ರ್ಯಕ್ಕೆ ಆಧಾರವನ್ನು ಕಲ್ಪಿಸಿದರು. ರಾಜಕಾರಣಿಯಾಗಿ ಅವರ ಪಾತ್ರ ಹಾಗೂ ಅವರ ಬೌದ್ಧಿಕ ಕೊಡುಗೆ-ಇವು ಭಾರತೀಯ ರಾಜಕೀಯ ವಿಕಾಸದ ಅವಿಭಾಜ್ಯ ಅಂಗವಾಗಿದೆ। ಮುಖ್ಯವಾದ ರಾಜಕೀಯ ನಿರ್ಣಯಗಳ ಮೇಲೆ ಅವರು ಪ್ರಭಾವ ಬೀರಿದರು ಮತ್ತು ಸೃಜನಾತ್ಮಕ ಮುತ್ಸದ್ದಿತನ ಅವರ ಗಮನಾರ್ಹ ಸಾಮರ್ಥ್ಯವು ಸಂವಿಧಾನ ರಚನೆಯ ಸಮಯದಲ್ಲಿ ತಾನಾಗಿಯೇ ಪ್ರಕಟಗೊಂಡಿತು. ಸ್ನೇಹಿತರೆ, ಭಾರತದ ಈ ಶ್ರೇಷ್ಠ ಸುಪುತ್ರನ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಅವರಿಗೆ ಗೌರವ ನೀಡೋಣ. ಅಂಬೇಡ್ಕರ್ ಸಮಾಜ ಸುಧಾರಕರ ದಾರ್ಶನಿಕ ಮತ್ತು ಬಹುಶ್ರುತರಾದ ಸಂವಿದಾನ ತಜ್ಞರಾಗಿ, ಅನ್ಯಾಯ, ಅಸಮಾನತೆ ಮತ್ತು ದಬ್ಬಾಳಿಕೆಯ ವಿರುದ್ಧ ಹೋರಾಡಿದರು. ಅವರು ಸಮಾಜದ ಎಲ್ಲ ದಬ್ಬಾಳಿಕೆಯ ಅಂಶಗಳ ವಿರುದ್ಧ ಪ್ರತಿಭಟನೆಯ ಸಂಕೇತವಾಗಿದ್ದರು ಮತ್ತು ಈ ದೇಶದಲ್ಲಿ ಸಾಮಾಜಿಕ ಬದಲಾವಣೆ ಪ್ರಕ್ರಿಯೆಯನ್ನು ತ್ವರಿತಗೊಳಿಸುವುದಕ್ಕೆ ನೆರವಾದವರ ಪೈಕಿ ಒಬ್ಬರಾಗಿದ್ದರು.

ಇತಿಹಾಸದ ಪುಟಗಳಲ್ಲಿ ಅಚ್ಚಳಿಯದ ನೆಲೆ ಮೂಡಿಸಿರುವ ಈ ಮಹಾಪುರುಷನ ಬಗ್ಗೆ ಹೆಮ್ಮೆ ಪಡಬೇಕಾದುದು ಸಹಜವೇ ಆಗಿದೆ. ನಾವು ಅವರ ಮಾರ್ಗದಲ್ಲಿ ಸಾಗೋಣ; ಭಾರತವನ್ನು ಎಲ್ಲ ರೀತಿಯ ಸಂಕುಚಿತ ಕೋಮು ಭಾವನೆಗಳು, ಬೌದ್ಧಿಕ ಅಲಸಿಕೆ ಹಾಗೂ ಕ್ಷುದ್ರಪ್ರಾಂತೀಯ

## ಡಾ. ಅಂಬೇಡ್ಕರ್ ಶತಮಾನೋತ್ಸವ ಸಮಾರಂಭಗಳು*

ಭಾರತರತ್ನ ಡಾ. ಅಂಬೇಡ್ಕರ್ ಶತಮಾನೋತ್ಸವ ಸಮಾರಂಭಗಳ ಉದ್ಘಾಟನೆಗೆ ಸಂಬಂಧಿಸಿದ ಸಾರ್ವಜನಿಕ ಸಭೆಯಲ್ಲಿ ಈ ಸಂಜೆ ಪಾಲ್ಗೊಳ್ಳಲು ನನಗೆ ಸಂತೋಷವಾಗಿದೆ. ಮಾನವ ಜೀವನದ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಕಾರ್ಯ ಚಟುವಟಿಕೆಗಳಿಂದ ಭಾರತದ ಬೆಳವಣಿಗೆ ಮತ್ತು ಪ್ರಗತಿಗೆ ಕೊಡುಗೆ ನೀಡಿರುವಂಥ ನಾಯಕರನೇಕರು ಇಲ್ಲಿ ಆಗಿಹೋಗಿರುವುದು ನಾಡಿನ ಪುಣ್ಯ ವಿಶೇಷವೇ ಸರಿ. ಆ ಪೈಕಿ ಡಾ. ಅಂಬೇಡ್ಕರ್‌ರವರಿಗೆ ವಿಶಿಷ್ಟ ಸ್ಥಾನ ಲಭಿಸುತ್ತದೆ.

"ಕೆಲವರು ಮಹಾಪುರುಷರಾಗಿಯೇ ಜನಿಸುತ್ತಾರೆ, ಮತ್ತೆ ಕೆಲವರು ಮಹತ್ತರವನ್ನು ಗಳಿಸಿಕೊಳ್ಳುತ್ತಾರೆ, ಇನ್ನೂ ಕೆಲವರಿಗೆ ಮಹಾಪುರುಷ ಸ್ಥಾನವನ್ನು ನೀಡಲಾಗುತ್ತದೆ" ಎಂದು ಹೇಳುವುದುಂಟು. ಇವುಗಳ ಪೈಕಿ ಡಾ. ಅಂಬೇಡ್ಕರ್‌ರವರು ಎರಡನೆಯ ವರ್ಗಕ್ಕೆ ಸೇರುವ ಬಗ್ಗೆ ಸಂದೇಹವೇ ಇಲ್ಲವಾದರೂ ಅವರಲ್ಲಿ ಜನ್ಮಜಾತವಾಗಿದ್ದಂಥ ಕೆಲವು ಉತ್ತಮ ಗುಣಗಳಿದ್ದು, ಇವು ಅವರ ವ್ಯಕ್ತಿತ್ವಕ್ಕೆ ವಿಶೇಷ ಮೆರುಗನ್ನು ನೀಡಿದುವು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಎಲ್ಲ ಕಷ್ಟ ಸಂಕಷ್ಟಗಳನ್ನು ಎದುರಿಸಿ, ತೀವ್ರತರವಾದ ಶಕ್ತಿಗಳ ವಿರುದ್ಧ ಹೋರಾಡುತ್ತ ದೀನದಲಿತರಿಗಾಗಿ ಹೋರಾಡಿದ ಅವರು ಬಡವರ ಹಾಗೂ ತುಳಿತಕ್ಕೊಳಗಾದವರ ಹೃನ್ಮನಗಳಲ್ಲಿ ವಿಶೇಷ ಸ್ಥಾನ ಪಡೆಯುವಲ್ಲಿ ಸಫಲರಾದರು. ಸುಪ್ರಸಿದ್ಧ ವಿದ್ವಾಂಸ ವಿಖ್ಯಾತ ಶಿಕ್ಷಣತಜ್ಞ, ನುರಿತ ಮುತ್ಸದ್ದಿ ಸಂವಿಧಾನತಜ್ಞ ಹಾಗೂ ಸಮರ್ಥ ಆಡಳಿತಗಾರ ಈ ಎಲ್ಲಾ ಗುಣಗಳು ಅವರಲ್ಲಿ ಸಂಮಿಳಿತಗೊಂಡಿದ್ದವು.

ಅವರು ಅಸ್ಪೃಶ್ಯರಾಗಿ ಜನಿಸಿದುದು ಮಾತ್ರವೇ ಅವರ 'ಅನರ್ಹತೆ' ಯಾಗಿದ್ದಿರಬಹುದು. ಅವರ ಬೌದ್ಧಿಕ ಸಾಧನೆಗಳಿದ್ದಾಗ್ಯೂ ಸಮಾಜದ ಉನ್ನತಸ್ತರಗಳ ಮಾನಸಿಕವಾಗಿ ಯೋಚನಾಶಕ್ತಿ ಕುಂದಿರುವಂಥ ಜನರ ಪಾಲಿಗೆ ಅವರು ಅಸ್ಪೃಶ್ಯರಾಗಿಯೇ ಉಳಿದರು.

ಪ್ರಾರಂಭದಲ್ಲಿ ಡಾ. ಅಂಬೇಡ್ಕರ್‌ರವರು ಅಸ್ಪೃಶ್ಯತೆಯ ಎಲ್ಲ ಅಪಮಾನಗಳನ್ನು ಎದುರಿಸಬೇಕಾಯಿತು. ಅಂಬೇಡ್ಕರ್‌ರವರು ಅಸ್ಪೃಶ್ಯತೆಯ ವಿರುದ್ಧ ಹೋರಾಟವನ್ನು ಹೆಚ್ಚಿನ ಕೆಚ್ಚು ಮತ್ತು ಬಲಗಳೊಡನೆ ಮುಂದುವರಿಸಿದರು. ನಿಮ್ನ ವರ್ಗದವರು ಎದುರಿಸುತ್ತಿದ್ದ ಅಸ್ಪೃಶ್ಯತೆ ಮತ್ತು ಅಸಮಾನತೆಗಳ ನಿವಾರಣೆಯು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಭಾರತದಲ್ಲಿ ಉಂಟಾದ ಎಲ್ಲ ಸಾಮಾಜಿಕ, ಧಾರ್ಮಿಕ ಚಳುವಳಿಗಳ ಮುಖ್ಯ ಅಂಶವಾಗಿತ್ತು. ಆಳ್ವಿಕೆಗಾರರ ಮನೋವೃತ್ತಿಯು ವಿರುದ್ಧವಾದುದಾಗಿದ್ದರೂ ಅದು ಅಸ್ಪೃಶ್ಯರ ಪರವಾದುದಾಗಿರಲಿಲ್ಲ. ಸರ್ಕಾರ ಮೇಲ್ವರ್ಗದವರ ವಿರೋಧ ಕಟ್ಟಿಕೊಳ್ಳದಷ್ಟು ಎಚ್ಚರವಾಗಿತ್ತು. ಯಾವುದೇ ದೇಶದಲ್ಲಿ ವ್ಯಕ್ತಿಯ ಜೀವನವನ್ನು ರೂಪಿಸುವುದು ಅವನ ಸಾಮರ್ಥ್ಯವೇ ಹೊರತು ಜನ್ಮವಲ್ಲ ಎಂಬುದನ್ನು ಅಂಬೇಡ್ಕರ್‌ರವರು ತಮ್ಮ ಉದಾಹರಣೆಯಿಂದಲೇ ಬೋಧಿಸಿದರು. ಅಸ್ಪೃಶ್ಯರನ್ನು ಸಾಮಾಜಿಕ ಮತ್ತು ರಾಜಕೀಯ ದಬ್ಬಾಳಿಕೆಯಿಂದ ಸಾಮಾಜಿಕ ವ್ಯವಸ್ಥೆ ಎಂದಿಗೂ ಮುಕ್ತಗೊಳಿಸುವುದಿಲ್ಲ

* ಉದ್ಯೋಗ ಮಂಡಲ, ಬೆಂಗಳೂರು ದಿನಾಂಕ ೬ನೇ ಏಪ್ರಿಲ್, 1991.

ಟಿ.ವಿ. ಮತ್ತು ಇತರ ಸಮೂಹ ಮಾಧ್ಯಮಗಳ ಧಾಳಿಯಿಂದಾಗಿ ವಾಚನಾಭ್ಯಾಸದಲ್ಲಿ ತೀವ್ರತರವಾದ ಅನಾಸಕ್ತಿಯುಂಟಾಗಿದೆ ಎಂದು ಯಾರಾದರೂ ಆಲೋಚಿಸುವುದುಂಟು. ವಾಸ್ತವ ಬೋಧೆಯನ್ನು ಅದರಲ್ಲಿಯೂ ವಿಶೇಷವಾಗಿ ಸುಶೀಕ್ಷಿತ ವರ್ಗಕ್ಕೆ-ಒದಗಿಸುವಲ್ಲಿ ಪುಸ್ತಕಗಳ ಸ್ಥಾನವನ್ನು ಟಿ.ವಿ. ಮೀರಿಸಲಾರದು ಎಂದು ಹೇಳುವ ಅಗತ್ಯವೇನೂ ಇಲ್ಲ. ದುಃಖದುಮ್ಮಾನ ಕ್ಲೇಶಗಳ ಕಾಲದಲ್ಲಿ ಸದ್ಗ್ರಂಥವು ವಾಸ್ತವವಾದ ಸಂಗಾತಿಯಾಗುತ್ತದೆ; ಅದು ವಾಸ್ತವವಾಗಿ ಮಿತ್ರ, ಮಾರ್ಗದರ್ಶಿ ಹಾಗೂ ತತ್ತ್ವಜ್ಞನಂತೆ ನೆರವಾಗುತ್ತವೆ.

ಗ್ರಂಥಾಲಯಗಳನ್ನು ಬಳಸಿಕೊಳ್ಳುವುದರ ಜೊತೆಗೆ ಪುಸ್ತಕಗಳನ್ನು ಖರೀದಿಸುವ ಅಭ್ಯಾಸಕ್ಕೆ ಪ್ರೋತ್ಸಾಹ ನೀಡಬೇಕು. ಪ್ರತಿಯೊಬ್ಬರೂ ತಮ್ಮ ಗಳಿಕೆಯ ಸ್ವಲ್ಪ ಭಾಗವನ್ನಾದರೂ ಪುಸ್ತಕಗಳನ್ನು - ಅದರಲ್ಲಿಯೂ ವಿಶೇಷವಾಗಿ ಮಕ್ಕಳ ಪುಸ್ತಕಗಳನ್ನು - ಖರೀದಿಸಲು ಮೀಸಲಾಗಿಡಬೇಕು ಅನಿವಾರ್ಯವಾಗಿರದಂಥ ಹಲವು ಬಾಬುಗಳಿಗಾಗಿ ನಾವು ಹಣ ಖರ್ಚು ಮಾಡುತ್ತಿರುವುದೂ ಉಂಟು, ಪುಸ್ತಕಗಳ ಖರೀದಿಗಾಗಿ ಹೂಡಿದ ಹಣವನ್ನು ಉಳಿತಾಯದ ಬಾಬ್ತು ಎಂದು ಪರಿಗಣಿಸಬೇಕು ಅದು ಒಂದು ರೀತಿಯಲ್ಲಿ ಯುಕ್ತವಾದ ಹೂಟಿಯೇ ಸರಿ. ಏಕೆಂದರೆ ಹಣ ಕಲ್ಪಿಸಲಾಗದ ಹಲವಾರು ಒಳ್ಳೆಯ ಗುಣಗಳನ್ನು, ಸದ್ಗುಣಗಳನ್ನು ಅದು ನಮ್ಮಲ್ಲಿ ವೃದ್ಧಿಸುತ್ತದೆ.

ತಿರುವನಂತಪುರದ ಜನತೆ ತಮ್ಮ ಸಂಪೂರ್ಣ ಬೆಂಬಲ ಹಾಗೂ ಸಹಕಾರ ನೀಡುವುದರ ಮೂಲಕ ಈ ದ್ವಿತೀಯ ಕೇರಳ ಪುಸ್ತಕ ಮೇಳವು ಸಂಪೂರ್ಣವಾಗಿ ಯಶಸ್ವಿಗೊಳಿಸುತ್ತಾರೆಂದು ಆಶಿಸಿದ್ದೇನೆ. ಪುಸ್ತಕ ಪ್ರೇಮಿಗಳು ತಮಗೆ ಬೇಕಾದಂಥ ಪುಸ್ತಕಗಳನ್ನು ಖರೀದಿಸಲು ವಿಶಿಷ್ಟ ಅವಕಾಶವನ್ನು ಕಲ್ಪಿಸಿದಂಥ ಶಿಕ್ಷಣ ಇಲಾಖೆ ಹಾಗೂ ಪ್ರಕಟಣಾ ಸಂಸ್ಥೆಗಳು, ಇನ್ನಿತರ ಏಜೆನ್ಸಿಗಳನ್ನು ಅಭಿನಂದಿಸುತ್ತೇನೆ ಈ ಮಹಾನ್ ಮೇಳಕ್ಕೆ ಎಲ್ಲ ಯಶಸ್ಸು ಲಭಿಸಲಿ.

ಜೈ ಹಿಂದ್

ಒದಗಿಸುತ್ತದೆ. ಕೇರಳ ರಾಜ್ಯದ ಉದ್ದಗಲಕ್ಕೂ ಗ್ರಂಥಾಲಯಗಳ ಜಾಲವೊಂದನ್ನು ಸ್ಥಾಪಿಸುವುದರ ಮೂಲಕ ಕೇರಳ ಗ್ರಂಥ ಶಾಲಾ ಸಂಘವು ತನ್ನ ಕ್ಷೇತ್ರದಲ್ಲಿ ವಿಶಿಷ್ಟ ಕೊಡುಗೆ ನೀಡಿದೆ ಎಂದು ನನಗೆ ತಿಳಿದಿದೆ. ಈ ಗ್ರಂಥಾಲಯಗಳನ್ನು "ಕಲಿಕೆ ಮತ್ತು ಸಂಸ್ಕೃತಿಗಳ ದೇಗುಲ"ಗಳು ಎಂದೇ ಕರೆಯಬಹುದಾಗಿದೆ.

ಮಾನವನ ಚಟುವಟಿಕೆಯ ವಿವಿಧ ಕ್ಷೇತ್ರಗಳಲ್ಲಿನ ಅಭಿವೃದ್ಧಿಗಳ ಬಗ್ಗೆ ಓದುಗರು ಅರಿತುಕೊಳ್ಳಬೇಕಾದಲ್ಲಿ ಎಲ್ಲ ಶೈಕ್ಷಣಿಕ ಸಂಸ್ಥೆಗಳು, ಸಾರ್ವಜನಿಕ ಗ್ರಂಥಾಲಯಗಳು, ಸಾರ್ವಜನಿಕ ಉದ್ಯಮಗಳು, ತರಬೇತಿ ಸಂಸ್ಥೆಗಳು. ಇವಕ್ಕೆ ಪ್ರತಿ ವರ್ಷ ಹೆಚ್ಚು ಹೆಚ್ಚು ಗ್ರಂಥಗಳು ಅಗತ್ಯ. ಆದರೆ ಪುಸ್ತಕಗಳ ಬೆಲೆ ತುಂಬ ದುಬಾರಿಯಾಗಿಬಿಟ್ಟಿವೆ; ಹಾಗಾಗಿ ಶ್ರೀ ಸಾಮಾನ್ಯನಿಗೆ ಬೇಕಾದ ಪುಸ್ತಕಗಳು ಅವನ ಕೈಗೆಟುಕಲಾಗಿವೆ. ಇದರಿಂದಲೇ ಇರಬೇಕು- ಅಮೂಲ್ಯವಾದ ಕೃತಿಗಳನ್ನು ಜನಸಾಮಾನ್ಯರು ಖರೀದಿಸಲು ಸಹಾಯಕವಾಗುವಂತೆ ಕಂತು ಯೋಜನೆ ಹಾಗೂ ಪ್ರಕಟಣಪೂರ್ಣ ರಿಯಾಯಿತಿಗಳನ್ನು ಪ್ರಸಿದ್ಧ ಪ್ರಕಾಶಕರು ಜಾರಿಗೆ ತಂದಿರುವುದು.

ಅಮೂಲ್ಯವಾದ ಸಾಹಿತ್ಯಿಕ ಮೌಲ್ಯಗಳಿರುವ ಪುಸ್ತಕಗಳು ಅಂತೆಯೇ ಉದಯೋನ್ಮುಖ ಲೇಖಕರ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಕೇರಳದ ಸಾಂಸ್ಕೃತಿಕ ಜೀವನವನ್ನು ಉತ್ತಮಪಡಿಸುವಲ್ಲಿ ನೆರವಾಗಿರುವ ಲೇಖಕರ ಸಹಕಾರಿ ಸಂಘ ನಿಜವಾಗಿಯೂ ಹೆಮ್ಮೆ ಪಡಬಹುದಾಗಿದೆ. ಲೇಖಕರೇ ಒಡೆಯರಾಗಿದ್ದು, ನಿರ್ವಹಿಸಿಕೊಂಡು ಬರುತ್ತಿರುವಂಥ ಅತ್ಯಂತ ಬೃಹತ್ತಾದ ಪ್ರಕಟಣಾ ಸಹಕಾರ ಸಂಘವು- ಆಗ್ನೇಯ ಏಷ್ಯಾದಲ್ಲಿ ಇರುವ ಇಂಥ ಒಂದೇ ಸಂಸ್ಥೆ ಅತ್ಯಂತ ಹೆಚ್ಚಿನ ಶೇಕಡವಾರು ರಾಯಲ್ಟಿ ನೀಡಿ ವಿಶ್ವ ದಾಖಲೆ ಸ್ಥಾಪಿಸಿದೆ. ಸಮಾಜದ ಎಲ್ಲ ಸ್ತರಗಳ ಜನತೆಯ ಅಬಿರುಚಿಗೆ ಅನುಗುಣವಾದ ಕೃತಿಗಳನ್ನು ಒದಗಿಸುತ್ತ ಅನೇಕ "ಗೃಹ ಗ್ರಂಥಾಲಯಗಳ " ಸ್ಥಾಪನೆಗೆ ವಾಚಕರಿಗೆ ನೆರವಾಗಿದೆ.

ನನ್ನ ಶಾಲಾ ದಿನಗಳಲ್ಲಿ ಮಕ್ಕಳ ಪುಸ್ತಕಗಳ ಕೊರತೆ ಎದುರಿಸುತ್ತಿದ್ದೆ. ಆದರೆ ಭಾರತದ ಬಹುಪಾಲು ಎಲ್ಲ ಭಾಷೆಗಳಲ್ಲಿ ಆಕರ್ಷಕ ವಿನ್ಯಾಸದಿಂದ ಕೂಡಿದ ವರ್ಣರಂಜಿತ ಪುಸ್ತಕಗಳು ಈಗ ಕಂಡುಬರುತ್ತಿವೆ. ಇಂಥ ಪುಸ್ತಕಗಳು ಅವರ ಬುದ್ಧಿಶಕ್ತಿ ವಿಕಾಸ ಮತ್ತು ಬೆಳವಣಿಗೆಗೆ ಸಾಕಷ್ಟು ಸಾಮಗ್ರಿ ಒದಗಿಸುತ್ತವೆ. ಅದಕ್ಕಿಂತ ಹೆಚ್ಚಾಗಿ ಅವರ ವ್ಯಕ್ತಿತ್ವವನ್ನು ರೂಪಿಸುತ್ತವೆ. ಮಕ್ಕಳು ಓದಿ ಆನಂದಪಡುವಂತಾಗಲು ಮಕ್ಕಳ ಪುಸ್ತಕಗಳು ಆಕರ್ಷಕವಾಗಿ ಬರುವಂತೆ ವಿಶೇಷಗಮನ ಹರಿಸಬೇಕು.

ಒಂದೇ ಸ್ಥಳದಲ್ಲಿ ತಮಗೆ ಬೇಕಾದ ವಿವಿಧ ಕ್ಷೇತ್ರಗಳ ಪುಸ್ತಕಗಳನ್ನು ಪಡೆಯುವಲ್ಲಿ ಇಂಥ ಪುಸ್ತಕ ಮೇಳಗಳು ಜನತೆಗೆ ಅವಕಾಶಗಳನ್ನು ಕಲ್ಪಿಸುತ್ತದೆ ಎಂಬ ಬಗ್ಗೆ ಸಂದೇಹವಿಲ್ಲ- ಪುಸ್ತಕ ಖರೀದಿ ಪ್ರೋತ್ಸಾಹಿಸಲು ವಿಶೇಷ ಕಮಿಷನ್ ಸಹ ನೀಡಲಾಗುತ್ತದೆ ಎಂಬ ಅಂಶದಿಂದ ನನಗೆ ಸಂತೋಷವುಂಟಾಗಿದೆ.

## ಕೇರಳ ರಾಜ್ಯದ ರಾಜ್ಯಪಾಲ ಹುದ್ದೆ – ಕೇರಳದ ಪುಸ್ತಕ ಮೇಳ ಉದ್ಘಾಟನಾ ಭಾಷಣ*

ಕೇರಳ ಸರಕಾರದ ಶಿಕ್ಷಣ ಇಲಾಖೆ ಪ್ರಾಯೋಜಿಸಿರುವ ದ್ವಿತೀಯ ಕೇರಳ ಪುಸ್ತಕ ಮೇಳವನ್ನು ಉದ್ಘಾಟಿಸಲು ಇಂದು ಸಂಜೆ ಇಲ್ಲಿರುವುದು ನನಗೆ ಸಂತೋಷವಾಗಿದೆ. ಅಂತರ ರಾಷ್ಟ್ರೀಯ ಪ್ರಕಟಣಾ ಸಂಸ್ಥೆಗಳೂ ಸೇರಿದಂತೆ ಎಪ್ಪತ್ತಕ್ಕೂ ಹೆಚ್ಚು ಪ್ರಕಾಶಕರು ಈ ಮೇಳದಲ್ಲಿ ಪಾಲ್ಗೊಳ್ಳುತ್ತಿದ್ದು, ಇನ್ನೂರಕ್ಕೂ ಹೆಚ್ಚು ಪ್ರಕಾಶಕರ ಪ್ರಕಟಣೆಗಳನ್ನು ಪ್ರದರ್ಶಿಸುತ್ತಿರುವುದು ತುಂಬ ಸಂತಸದ ಸಂಗತಿ. ಇಷ್ಟೊಂದು ಸಂಸ್ಥೆಗಳು ವಿವಿಧ ವಿಷಯಗಳನ್ನು ಕುರಿತು ಪ್ರಕಟಿಸಿರುವ ಸಮಾಜದ ಎಲ್ಲ ವರ್ಗಗಳ ಪುಸ್ತಕ ಪ್ರಿಯರ ಮನದಣಿಸಲು ಒಂದೇ ಸ್ಥಳದಲ್ಲಿ ಪ್ರದರ್ಶನಕ್ಕೆ ವ್ಯವಸ್ಥೆಗೊಳಿಸಿರುವುದು ವಿಶಿಷ್ಟವಾಗಿದೆ.

ಈ ರಾಜ್ಯದ ವಿವಿಧ ಭಾಗಗಳಲ್ಲಿ ಸರಕಾರದ ಏಜೆನ್ಸಿಗಳು ಮತ್ತು ಖಾಸಗಿ ಪ್ರಕಾಶಕರು ಆಗಿಂದಾಗ್ಗೆ ಪುಸ್ತಕ ಮೇಳಗಳನ್ನು ವ್ಯವಸ್ಥೆಗೊಳಿಸುತ್ತಿರುವರು ಎಂದು ತಿಳಿದಿರುವೆ. ಸಾಕ್ಷರತಾ ಶೇಕಡವಾರು ಪ್ರಮಾಣದಲ್ಲಿ ಕೇರಳವು ಇತರ ಎಲ್ಲಾ ರಾಜ್ಯಗಳಿಗಿಂತ ತುಂಬ ಮುಂದಿರುವುದರಿಂದ ಇದೇನೂ ಆಶ್ಚರ್ಯದ ವಿಷಯುವಲ್ಲ. ಕೇರಳದ ಜನತೆ ತಮ್ಮ ವಾಚನಾಭ್ಯಾಸಕ್ಕೆ ಸುವಿಖ್ಯಾತರಾಗಿರುವರು. ಕೇರಳದ ಶ್ರೀ ಸಾಮಾನ್ಯನಿಗೆ ಕೂಡ ಪ್ರಾತಃ ಕಾಲ ಆರಂಭವಾಗುವುದೇ ಒಂದು ಕೈಯಲ್ಲಿ ಚಹದ ಕಪ್ಪು ಮತ್ತು ಮತ್ತೊಂದು ಕೈಯಲ್ಲಿ ವರ್ತಮಾನ ಪತ್ರಿಕೆಯಿಂದ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಕೂಡ ಶ್ರೀ ಸಾಮಾನ್ಯ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಬಲ್ಲ ಕೇರಳದ ಉತ್ತರ ಭಾಗಗಳಲ್ಲಿ ಬೀಡಿಕಟ್ಟುವ ಕಾರ್ಯ ನಡೆಯುತ್ತಿರುವಾಗಲೇ ಪುಸ್ತಕಗಳು, ನಿಯತಕಾಲಿಕಗಳು ಮತ್ತು ವರ್ತಮಾನ ಪತ್ರಿಕೆಗಳನ್ನು ತಮ್ಮ ಸಹ ಕೆಲಸಗಾರರಿಗೆ ಓದುವ ಸಲುವಾಗಿ ತಮ್ಮ ಕೆಲಸಗಾರರ ಪೈಕಿಯೇ ಒಬ್ಬನನ್ನು ನೇಮಕ ಮಾಡಿಕೊಳ್ಳುತ್ತಿದ್ದರು ಎಂದು ಕೇಳಿದ್ದೇನೆ. ಈ ರಾಜ್ಯದ ಜನತೆಯ ಜ್ಞಾನದಾಹಕ್ಕೆ ಇದು ಸಾಕಷ್ಟು ಪುರಾವೆಯಾಗುತ್ತದೆ. ಜನತೆಯ ಸಾಂಸ್ಕೃತಿಕ ಜೀವನದಲ್ಲಿ ಗ್ರಂಥಾಲಯಗಳು ಪ್ರಮುಖ ಪಾತ್ರವಹಿಸುತ್ತವೆ ಎಂದು ಹೇಳಬೇಕಾದುದೇ ಅಲ್ಲ. ಗ್ರಂಥಗಳು ಜ್ಞಾನದ ಮಾರ್ಗಗಳನ್ನು ತೆರೆಯುತ್ತವೆ, ಅಪಾರ ಜನಸ್ತೋಮಕ್ಕೆ ಮಾಹಿತಿಯನ್ನು ಓದಬೇಕು ಎಂಬುದನ್ನು ಅರಿತಿದ್ದರೆ ಪುಸ್ತಕವಾಚನವು ಒಂದು ರೀತಿಯ ಪ್ರಭಾವ ಪರಿಣಾಮವನ್ನುಂಟು ಮಾಡುತ್ತದೆ. "ವಾಚನದಿಂದ ಮಾನವ ಪೂರ್ಣನಾಗುತ್ತಾನೆ" ಎಂದು ಬೇಕನ್ ಹೇಳಿದ್ದು ಔಚಿತ್ಯಪೂರ್ಣವಾಗಿದೆ. ಕೆಲವು ಗ್ರಂಥಗಳನ್ನು ನೋಡಬೇಕು, ಕೆಲವು ಗ್ರಂಥಗಳನ್ನು ಓದಬೇಕು ಮತ್ತು ಮತ್ತೆ ಕೆಲವು ಗ್ರಂಥಗಳ ಬಗ್ಗೆ ಸತತ ಮನನ ಮಾಡಬೇಕು ಎಂದೂ ಆತ ಹೇಳಿರುವರು. ಮಾನವನ ವ್ಯಕ್ತಿತ್ವದ ವಿಕಾಸದಲ್ಲಿ ಗ್ರಂಥಗಳ ಗಣನೀಯ ಪರಿಣಾಮ ಬೀರುವವು ಎಂಬುದು ಸರ್ವವೇದ್ಯವಾಗಿದೆ. ಓದುವಿಕೆಯಿಂದ ಜ್ಞಾನದಿಗಂತ ವಿಸ್ತಾರಗೊಳ್ಳುತ್ತದೆ ಮತ್ತು ಜನತೆಗೆ ಅದು ಸಾಕಷ್ಟು ಮನೊರಂಜನೆಯನ್ನು

* ಕನಕುನ್ನ ಅರಮನೆ, ತಿರುವನಂತಪುರ, ದಿನಾಂಕ 1ನೇ ಫೆಬ್ರವರಿ, 1991.

ಪ್ರಾಣಿಗಳ ಆಹಾರವಸ್ತುಗಳ ಬೆಲೆ ತುಂಬ ಏರಿದೆ. ಅವುಗಳನ್ನು ಇಳಿಸಲು, ಹಿಂಡಿಗಳ ರಫ್ತುಮಾಡದಂತೆ ತಡೆಯಬೇಕು. ಕೋಳಿಸಾಕಾಣಿ, ಕುರಿಸಾಕಾಣಿ, ಹಾಗೂ ಹಂದಿಸಾಕಾಣಿಗಳಿಗೆ ಉತ್ತೇಜನ ನೀಡಬೇಕು.

ಸಣ್ಣ ರೈತರು ಹಾಗೂ ಜೀತವಿಮುಕ್ತಗೊಂಡ ಕಾರ್ಮಿಕರಿಗೆ, ಪುನರ್ವಸತಿ ನೀಡುವ ಕ್ರಮವಾಗಿ, ಕುರಿಗಳನ್ನು ಸಾಕಲು ತಕ್ಕ ಉತ್ತೇಜನವನ್ನು ನೀಡಬೇಕು. ಈ ವಿಚಾರವನ್ನು ಕುರಿತಂತೆ, ಕರ್ನಾಟಕ ಸರ್ಕಾರ ಕಳುಹಿಸಿದ ಒಂದು ಪ್ರಸ್ತಾಪ, ಈಗಾಗಲೇ ಸರ್ಕಾರದ ಮುಂದಿದೆ.

ಅನೇಕ ರಾಜ್ಯಗಳಲ್ಲಿ ಕೃಷಿ ಕಾರ್ಮಿಕರಿಗೆ ಕನಿಷ್ಠ ಮಜೂರಿ ಶಾಸನ ಇನ್ನೂ ಜಾರಿಗೆ ಬಂದಿಲ್ಲ. ಇದರ ಅನುಷ್ಠಾನವುಂಟಾಗುವಂತೆ ಮಾಡಿ, ಕೃಷಿ ಕಾರ್ಮಿಕರಿಗೆ ತಕ್ಕ ಮಜೂರಿ ದೊರೆಯುವಂತೆ ನೋಡಿಕೊಳ್ಳುವ ಇನ್ಸ್‌ಪೆಕ್ಟರ್‌ಗಳಿಲ್ಲದಿರುವುದೇ ಇದಕ್ಕೆ ಕಾರಣ. ಕೆಲವು ಭಾಗಗಳಲ್ಲಿ, ಜೀತ ಪದ್ಧತಿಯನ್ನು ರದ್ದುಪಡಿಸಿದ ಅನಂತರ ಮತ್ತು ಭೂಮಿತಿ ಶಾಸನಗಳನ್ನು ಜಾರಿಗೆ ತಂದ ಅನಂತರ, ಚಿಕ್ಕ ರೈತರು ಹಾಗೂ ಜೀತ ವಿಮುಕ್ತರಲ್ಲಿ ಅನೇಕರು ಶೋಷಣೆಗೆ ಒಳಗಾಗಿದ್ದಾರೆ. ಅವರಿಗೆ ನೌಕರಿಸಿಗುತ್ತಿಲ್ಲ. ಆದ್ದರಿಂದ, ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗ ಸುಭದ್ರತೆಯ ಯೋಜನೆಯೊಂದನ್ನು ಸರ್ಕಾರ ಪ್ರಾರಂಭಿಸಬೇಕೆಂದು ನಾನು ಬಯಸುತ್ತೇನೆ. ಹೀಗೆ ಮಾಡದೆ ಇದ್ದಲ್ಲಿ ಅವರು ಉಪವಾಸದಿಂದ ಸಾಯುವ ಸಂದರ್ಭವಿದೆ.

## ಸಕ್ಕರೆ ಇಲಾಖೆಯನ್ನು ಕುರಿತು ನೀಡಿದ ವಿವರಣೆಗಳು *

ಶ್ರೀ ಬಿ. ರಾಚಯ್ಯ: ಸಕ್ಕರೆಗೆ ಸಂಬಂಧಿಸಿದಂತೆ ಹೇಳುವುದಾದರೆ, ದಕ್ಷಿಣ ಭಾರತದಲ್ಲಿ ತೆರಿಗೆ ವಿಧಿಸಲಾದ ಸಕ್ಕರೆಯ ಬೆಲೆ 141 ರೂಪಾಯಿ ಆದರೆ ಉತ್ತರ ಭಾರತದಲ್ಲಿ ಈ ಬೆಲೆ 175 ರೂಪಾಯಿ ಬೆಲೆಗಳಲ್ಲಿ ಇಷ್ಟು ಹೆಚ್ಚಿನ ವ್ಯತ್ಯಾಸವಿರಲು ಕಾರಣವಾದರೂ ಏನು? ದಕ್ಷಿಣ ಭಾರತದಲ್ಲಿ ಬೆಳೆಸಲಾಗುವ ಕಬ್ಬುಗಳಲ್ಲಿ ಕಂಡುಬರುವ ಸಕ್ಕರೆಯ ಅಂಶ ತುಂಬ ಹೆಚ್ಚಾಗಿದೆ, ಅಲ್ಲದೆ ಕಬ್ಬಿನ ಬೆಳೆಯಲ್ಲಿ ರೈತರು ಹೆಚ್ಚು ಆಸಕ್ತಿ ತೋರಿಸುತ್ತಿದ್ದಾರೆ ತೆರಿಗೆ ಹಾಕಲಾಗುವ ಸಕ್ಕರೆಯ ಬೆಲೆಗಳಲ್ಲಿನ ಈ ವ್ಯತ್ಯಾಸವನ್ನು ಕೂಡಲೇ ತೊಡೆದುಹಾಕಬೇಕು; ಅಥವಾ ಕನಿಷ್ಠ ಪಕ್ಷ ಈ ವ್ಯತ್ಯಾಸ ಇನ್ನಷ್ಟು ಕಡಿಮೆಯಾಗುವಂತೆ ಮಾಡಬೇಕು. ಏಕೆಂದರೆ ತನ್ನ ಬೆಳೆಗೂ ಸರಿಯಾದ ಬೆಲೆ ಸಿಗುತ್ತದೆ ಎಂಬ ತೃಪ್ತಿ ದಕ್ಷಿಣಭಾರತದ ರೈತನಿಗೂ ಉಂಟಾಗಬೇಕು.

ಅಲ್ಲದೆ, ಹೊಸ ಸಕ್ಕರೆ ಕಾರ್ಖಾನೆಗಳಿಗೆ ಕೆಲವು ರಿಯಾಯಿತಿಗಳನ್ನು ನೀಡಲೂ ಸರ್ಕಾರ ನಿರ್ಧರಿಸಿದೆ; ಸುಂಕ-ತೆರಿಗೆಗಳಿಂದ ಅವುಗಳಿಗೆ ವಿನಾಯಿತಿಯನ್ನು ನೀಡಿದೆ. ಕೊಳ್ಳೆಗಾಲದ ಸಕ್ಕರೆ ಕಾರ್ಖಾನೆ ಇಂಥ ವಿನಾಯಿತಿಗಾಗಿ ಅರ್ಜಿಸಲ್ಲಿಸಿದೆ. ಈ ವಿಷಯದತ್ತ ಗಮನ ಹರಿಸಿ, ಅದಕ್ಕೆ ವಿನಾಯಿತಿ ಸಿಗುವಂತೆ ನೋಡಿಕೊಳ್ಳಲು ನಾನು ಸಚಿವರಲ್ಲಿ ಮನವಿಮಾಡಿಕೊಳ್ಳುತ್ತೇನೆ.

ಸ್ವಾಮಿ, ಗೊಬ್ಬರದ ಬೆಲೆಯನ್ನು ಕೂಡ ತಗ್ಗಿಸಬೇಕು. ಕಾಲಾವಧಿ ಕಡಿಮೆ-ಯಾಗಿರುವುದರಿಂದ, ನಾನು ಹೇಳಬೇಕಾದುದನ್ನು ತುಂಬ ಸಂಕ್ಷಿಪ್ತವಾಗಿ ತಿಳಿಸುತ್ತೇನೆ.

ಅಂತರ್ ರಾಜ್ಯ ಜಲವಿವಾದಗಳನ್ನು ತುಂಬ ಬೇಗನೆ ತೀರ್ಮಾನಿಸಬೇಕು. ಸಕ್ಕರೆಯ ಅಂಶದ ಪ್ರಮಾಣವನ್ನು ಆಧರಿಸಿ ಅದರ ಮೇಲೆ ತೆರಿಗೆ ವಿಧಿಸಬೇಕು. ಅಲ್ಲದೆ ಹೊಸ ಸಕ್ಕರೆ ಕಾರ್ಖಾನೆಗಳಿಗೆ ಉತ್ತೇಜನವನ್ನು ನೀಡಬೇಕು.

ಕೃಷಿ ಉತ್ಪನ್ನಗಳ ಬೆಲೆಯನ್ನು ಹೆಚ್ಚಿಸಿ, ರೈತರಿಗೆ ಹೆಚ್ಚು ಹೆಚ್ಚು ಬೆಳೆಸುವಂತೆ ಉತ್ತೇಜನ ನೀಡಬೇಕು.

ಅಗ್ಗದರದ ಗೊಬ್ಬರ ಹಾಗೂ ಅಭಿವೃದ್ಧಿ ಹೊಂದಿದ ವ್ಯವಸಾಯೋಪಕರಣಗಳು ಅವುಗಳನ್ನು ರೈತರಿಗೆ ಒದಗಿಸಬೇಕು. ಗ್ರಾಮೀಣ ಪ್ರದೇಶಗಳ ಕಚ್ಚಾ ರಸ್ತೆಗಳ ಮೇಲೆ ಎತ್ತುಗಳು ಹೆಚ್ಚು ಪ್ರಯಾಸವಿಲ್ಲದೆ ಎಳೆಯಬಲ್ಲಂತಹ ಸುಲಭವಾಗಿ ಸಾಮಾನು ಸರಂಜಾಮುಗಳನ್ನು ಸಾಗಿಸಬಲ್ಲ ರೀತಿಯಲ್ಲಿ, ಗಾಡಿಗಳನ್ನು ಅಭಿವೃದ್ಧಿಗೊಳಿಸಬೇಕು.

ಸ್ವಾಮೀ, ಉತ್ತಮ ಫಸಲು ನೀಡುವ ಕೆಲವು ಬೆಳೆಗಳ ಮಟ್ಟಿಗಾದರೂ ಬೆಳೆ ವಿಮೆಯ ಸೌಲಭ್ಯವನ್ನು ರೈತರಿಗೆ ಒದಗಿಸಬೇಕು.

---

* ಲೋಕ ಸಭಾ ನಡವಳಿಕೆ ದಿನಾಂಕ 28ನೇ ಜುಲೈ, 1978 ಪುಟ 165-166

ನದಿಗಳ ಹಾಯ್ಗಡಗಳ ಕೆಲಸ ಕಾರ್ಯಗಳನ್ನು ನಾನು ಅವಲೋಕಿಸಿದ್ದೇನೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಒಳನಾಡಿನ ಜಲಮಾರ್ಗಗಳು ಮತ್ತು ಹಾಯ್ಗಡಗಳ ಹೂಳೆತ್ತುವ ಕಾರ್ಯವನ್ನು ಯಾಂತ್ರೀಕರಣಗೊಳಿಸಿದ ಪಕ್ಷದಲ್ಲಿ, ನೌಕಾ ಸಂಚಾರ ಸುಲಭ ಸಾಧ್ಯವಾಗುತ್ತದೆ.

ನಾನು ತಿಳಿಸಿದ ಈ ಕೆಲವು ವಿಷಯಗಳತ್ತ ದೃಷ್ಟಿ ಹರಿಸಬೇಕೆಂದು ನಾನು ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಸಚಿವಾಲಯದ ಅತ್ಯುತ್ತಮ ಕಾರ್ಯನಿರ್ವಹಣೆಗಾಗಿ ಮತ್ತು ಸದಸ್ಯರ ಸಲಹೆ ಸೂಚನೆಗಳನ್ನು ಅನುಷ್ಠಾನಕ್ಕೆ ತರಲು ಅವರು ಕೈಗೊಂಡ ಕಾರ್ಯಕ್ರಮಗಳಿಗಾಗಿ ನಾನು ಅವರನ್ನು ಅಭಿನಂದಿಸುತ್ತೇನೆ.

ಮಾನ್ಯ ಸಚಿವರನ್ನು ಕ್ಯಾಬಿನೆಟ್ ದರ್ಜೆಗೆ ಏರಿಸಬೇಕೆಂದು ನನ್ನ ಆಸೆಯಾಗಿದೆ. ಈ ಸಚಿವಾಲಯವು ಕ್ಯಾಬಿನೆಟ್ ದರ್ಜೆಯ ಸಚಿವರನ್ನೇ ಒಳಗೊಂಡಿದೆ. ಪರಿಶಿಷ್ಟ ಜಾತಿಗಳಿಗೆ ಸಂಬಂಧಿಸಿದ ಪ್ರಶ್ನೆಯನ್ನು ಎತ್ತಿಕೊಂಡಾಗ, ಕ್ಯಾಬಿನೆಟ್‌ನಲ್ಲಿ-ಕ್ಯಾಬಿನೆಟ್ ದರ್ಜೆಯ ಏಕ ಮಾತ್ರ ಪ್ರಾತಿನಿಧ್ಯ ಮಾತ್ರ ಕಂಡು ಬರುತ್ತದೆಯೇ ವಿನಾಃ ಎರಡನೆಯ ವ್ಯಕ್ತಿಯ ಪ್ರಾತಿನಿಧ್ಯ ಕಂಡುಬರುವುದಿಲ್ಲ. ಪ್ರಧಾನಮಂತ್ರಿಗಳು ಈ ವಿಷಯವನ್ನು ಗಮನಿಸಬೇಕೆಂದೂ, ಇಂಥ ಸಮರ್ಥ ಸಚಿವರೊಬ್ಬರನ್ನು ಸೂಕ್ತವಾದ ಸ್ಥಾನಕ್ಕೆ ಏರಿಸಬೇಕೆಂದೂ ನಾನು ಇಚ್ಛಿಸುತ್ತೇನೆ. ಆಗ ಅವರು ಈ ದೇಶದ ಆರ್ಥಿಕ ಅಭಿವೃದ್ಧಿಗೆ ತಮ್ಮ ಕೊಡುಗೆ ನೀಡುವುದು ಸಾಧ್ಯವಾಗಬಹುದು.

ಈ ಕೆಲವು ಸಂಗತಿಗಳೊಂದಿಗೆ, ನಾನು ನನ್ನ ಮಾತನ್ನು ಮುಗಿಸುತ್ತೇನೆ ಹಾಗೂ ಈ ಅವಕಾಶ ನೀಡಿದುದಕ್ಕಾಗಿ ನಿಮಗೆ ವಂದನೆಗಳನ್ನು ಅರ್ಪಿಸುತ್ತೇನೆ.

ನಾರ್ವದೇಶದ ಸರ್ಕಾರವು ಈಗಾಗಲೇ ಈ ಬಗೆಗಿನ ಒಂದು ಸಂಭವನೀಯ ವರದಿಯನ್ನು ಸಲ್ಲಿಸಿದೆ. ಈ ಯೋಜನೆಗೆ ಕಾರವಾರವನ್ನೆ ಆಯ್ದುಕೊಳ್ಳುವಂತೆ ನಾನು ಸಚಿವರನ್ನು ಕೋರುತ್ತೇನೆ. ಭಾರತದ ಶಿಪ್ಪಿಂಗ್ ಕಾರ್ಪೊರೇಶನ್, ವಿಶಾಖಪಟ್ಟಣ ಮತ್ತು ಕೊಚ್ಚಿಗಳಲ್ಲಿ ಕೆಲವು ಹಡಗುಗಳನ್ನು ನಿರ್ಮಿಸುತ್ತಿದೆ. ಇದು ಸಾಧ್ಯವಾದ ಪಕ್ಷದಲ್ಲಿ ಮಂಗಳೂರು ರೇವಿನ ಅಭಿವೃದ್ಧಿಯ ಬಗ್ಗೆ ಕೂಡ ಆಲೋಚಿಸಬಹುದು.

ಆದರೆ ಹೂಳೆತ್ತುವುದಕ್ಕೆ ಸಂಬಂಧಪಟ್ಟ ಒಂದು ಸಮಸ್ಯೆಯಿದೆ. ಮಂಗಳೂರು ರೇವು ಪ್ರದೇಶದಲ್ಲಿ ಕಲ್ಲುಗಳು ಕಂಡು ಬಂದಿವೆ. ಇವುಗಳನ್ನು ತೆಗೆಯಲು ಸ್ಫೋಟಕಗಳನ್ನು ಆಮದು ಕೊಳ್ಳಬೇಕಾಗಿದೆ. ಇದು ಸಾಧ್ಯವಾಗದ ಹೊರತು 1980ರಲ್ಲಿ ಕುದುರೆಮುಖದ ಅದುರುಗಳನ್ನು ಸಾಗಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಹೂಳೆತ್ತುವ ಕಾರ್ಯವನ್ನು ಅತ್ಯಂತ ವೇಗದಲ್ಲಿ ಕೈಗೊಳ್ಳಬೇಕೆಂದು ಸಚಿವರಲ್ಲಿ ನಾನು ಮನವಿ ಮಾಡಿಕೊಳ್ಳುತ್ತೇನೆ.

ಈ ಸಚಿವಾಲಯಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳವರೆಗೆ ಸಂಬಂಧಿಸಿದಂತೆ, ಹೇಳುವುದಾದರೆ, ಅವರ ಪ್ರಾತಿನಿಧ್ಯ ಅತ್ಯಲ್ಪವಾಗಿದೆ. 24-9-1975ರಂದು ಒಂದು ಸಭೆಯನ್ನು ಕರೆದ ಸಚಿವರು, ತಮ್ಮ ಸಚಿವಾಲಯದ ಪರಿಣಾಮಕಾರಿ ನಿರ್ವಹಣೆಗೆ ಸಂಬಂಧಿಸಿದ, ಅತ್ಯಂತ ಅನುಕೂಲಕರವೆನಿಸಿದ ಆರು ನಿರ್ಧಾರಗಳನ್ನು ತೆಗೆದುಕೊಂಡರು. ಈ ನಿರ್ಧಾರಗಳನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. ಅಪಘಾತಗಳು ಉಂಟಾಗದಂತೆ ತಡೆಯುವ ಮೋಟರ್ ವೆಹಿಕಲ್ ಆ್ಯಕ್ಟ್ , ಸಾರ್ಗಣಿವಾಹನಗಳ ವಿತರಣೆಯಲ್ಲಿ ಮೀಸಲಾತಿ ಒದಗಿಸುವುದು, ಬಸ್‌ಗಳನ್ನು ಓಡಿಸಲು ರಾಷ್ಟ್ರೀಯ ಅನುಮತಿ ನೀಡುವುದು ಹಾಗೂ ರಸ್ತೆಗಳ ನಿರ್ಮಾಣ ಇವುಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಕೈಗೊಳ್ಳಲು ಅವರು ಇಂಡಿಯನ್ ರೋಡ್ ಕನ್‌ಸ್ಟ್ರಕ್ಷನ್ ಕಾರ್ಪೊರೇಷನ್ ಒಂದನ್ನು ಪ್ರಾರಂಭಿಸಿದ್ದು, ಅದು ಈಗಾಗಲೆ ರೂ.13 ಕೋಟಿಗಳ ಒಪ್ಪಂದವೊಂದಕ್ಕೆ ಲಿಬಿಯದಲ್ಲಿ ಸಹಿ ಹಾಕಿದೆ. ಇದನ್ನು ರಾಜ್ಯಗಳಿಗೂ ವಿಸ್ತರಿಸಬೇಕೆಂದು ನಾನು ಬಯಸುತ್ತೇನೆ. ದೇಶದೊಳಗಿನ ರಸ್ತೆ ಹಾಗೂ ಸೇತುವೆಗಳ ನಿರ್ಮಾಣಕ್ಕೆ ಗಮನ ಹರಿಸಬೇಕಾಗಿದೆ ಇತರ ಅನಾವಶ್ಯಕ ವೆಚ್ಚಗಳನ್ನು ಮಾಡದೆ, ಈ ಗುರಿ ಸಾಧನೆಗಾಗಿ ನಾವು ಹೆಚ್ಚು ಹೆಚ್ಚು ಹಣವನ್ನು ಬಳಸಬೇಕಾಗಿದೆ; ಕೆಲಸಗಳನ್ನು ಸಾಧ್ಯವಾದಷ್ಟು ಬೇಗ ಪೂರ್ಣ ಗೊಳಿಸಬೇಕು. ಡ್ರೆಡ್ಜಿಂಗ್ ಕಾರ್ಪೊರೇಷನ್ ಕೂಡ ಒಳ್ಳೆಯ ರೀತಿಯಲ್ಲಿ ಕೆಲಸಮಾಡುತ್ತಿದೆ. ಹಾಗೂ ನಿಜವಾಗಿಯೂ ಸುಮಾರ 3/2 ಕೋಟಿ ರೂ.ಗಳಷ್ಟು ಲಾಭವನ್ನು ಈವರೆಗೆ ಸರಿಪಡಿಸಿದೆ.

ಇತರ ಸ್ವಾಯುತ್ತ ಸಂಸ್ಥೆಗಳೂ ಸಚಿವಾಲಯದ ಆಡಳಿತದಡಿ ಇವೆ ಇವೂ ಒಳ್ಳೆಯ ಕೆಲಸ ಮಾಡುತ್ತಿವೆ. ವಿಶಾಖಪಟ್ಟಣ ಮತ್ತು ಕೊಚ್ಚಿಗಳಲ್ಲಿರುವ ಹಿಂದೂಸ್ಥಾನ್ ಷಿಪ್ಪಿಂಗ್ ಕಂಪನಿಗಳು ತಮ್ಮ ಸಂಪೂರ್ಣ ಸಾಮರ್ಥ್ಯದಿಂದ ದುಡಿಯುತ್ತಿವೆ ಹೀಗಾಗಿ ಅತ್ಯಾವಶ್ಯಕವೆನಿಸಿದ ಹಡುಗುಗಳ ನಿರ್ಮಾಣವಾಗುತ್ತಿವೆ. ಈ ಹಡಗುಗಳ ರಿಪೇರಿಗಾಗಿ ಕೂಡ ಅವಕಾಶವಿದೆ. ಇದು ಕೂಡ ಸರಿಯಾದ ನಿರ್ಧಾರ ಕೈಗೊಳ್ಳುವಲ್ಲಿನ, ಒಂದು ಸ್ವಾಗತಾರ್ಹ ಕ್ರಮವಾಗಿದೆ. ಒಳನಾಡಿನ

ರಾಜ್ಯ ಇವೆರಡೂ ವಿಭಾಗಗಳಲ್ಲಿ, ರಸ್ತೆಗಳ ಅಭಿವೃದ್ಧಿಗಾಗಿ ಸುಮಾರು 2,183 ಕೋಟಿ ರೂಪಾಯಿಗಳನ್ನು ಒದಗಿಸುವ ಪ್ರಯತ್ನವನ್ನು ಮಾಡಲಾಯಿತು. ಮುಖ್ಯವಾಗಿ ರಾಷ್ಟ್ರೀಯ ಹೆದ್ದಾರಿಗಳ ಸರಿಯಾದ ನಿರ್ವಹಣೆಯೇ ಸಚಿವಾಲಯದ ಹೊಣೆಯಾಗಿದ್ದರೂ, ರಾಷ್ಟ್ರದ ಸರಕುಸಾಗಾಣಿಕೆ ಸಹಕಾರ ನೀಡುವುದು ಕೂಡ ಅದರ ಹೊಣೆಯಾಗಿದೆ. ರಸ್ತೆಗಳ ಸರಿಯಾದ ನಿರ್ವಹಣೆ ಹಾಗೂ ದೇಶದ ಒಟ್ಟು ಸರಕು ಸಾಗಾಣಿ ಅಭಿವೃದ್ಧಿ ಕಾರ್ಯಗಳಲ್ಲಿ ರಾಜ್ಯ ಸರ್ಕಾರಗಳಿಗೆ ನೆರವು ನೀಡುವುದು ಈ ಸಚಿವಾಲಯದ ಕರ್ತವ್ಯವಾಗಿದೆ.

ಎರಡನೆಯದಾಗಿ, ನಾನೀಗ ಸರಕು ಸಾಗಣೆಯ ವಿಷಯಕ್ಕೆ ಬರುತ್ತೇನೆ. ಈ ದೇಶದಲ್ಲಿನ, ಮುಖ್ಯವಾಗಿ ದೆಹಲಿಯಲ್ಲಿನ, ಸರಕು ಸಾಗಾಣಿ ವ್ಯವಸ್ಥೆಯು ಹಡಗು ಮತ್ತು ಸಾಗಣೆ ಸಚಿವಾಲಯದ ನಿಯಂತ್ರಣದಲ್ಲಿಯೇ ಇದೆ. ಸೆಂಟ್ರಲ್ ಟ್ರಾನ್ಸ್‌ಪೋರ್ಟ್ ಕಾರ್ಪೊರೇಷನ್ ಅನ್ನು ಮುಚ್ಚಲಾಗಿದೆ. ಹಾಗೂ ದೆಹಲಿಯ 12 ಮಾರ್ಗಗಳಲ್ಲಿ ನಿಯಮಿತ ಸೇವಾ ಸರ್ವಿಸ್ ಅನ್ನು ಪ್ರಾರಂಭಿಸಲಾಗಿದೆ. ಇವು ಚೆನ್ನಾಗಿಯೆ ಕಾರ್ಯ ನಿರ್ವಹಿಸುತ್ತಿದೆ. ಇತರ ಮಾರ್ಗಗಳಿಗೂ ಈ ಸೌಲಭ್ಯವನ್ನು ಒದಗಿಸಿಕೊಡಬೇಕೆಂದು ನಾನು ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಸುಮಾರು 2700 ಬಸ್‌ಗಳು ಈಗ ರಸ್ತೆಗಳಲ್ಲಿ ಓಡಾಡುತ್ತಿವೆ. ದೆಹಲಿಗಾಗಿಯೇ ಇನ್ನಷ್ಟು ಬಸ್‌ಗಳ ಅವಶ್ಯಕತೆಯಿದೆ. ರಾಷ್ಟ್ರದ ರಸ್ತೆಗಳಲ್ಲಿ ಸಂಚರಿಸುವ ವಾಹನಗಳ ಒಟ್ಟು ಸಂಖ್ಯೆ, ಸುಮಾರು 24 ಲಕ್ಷ. ಈ ಭಾರೀ ವಾಹನಗಳಲ್ಲದೆ, ಪ್ರಾಣಿಗಳು ಎಳೆಯುವ ವಾಹನಗಳಿಗೂ ಎತ್ತಿನಗಾಡಿಗಳು ಮತ್ತು ಇತರ ಸಾಗಣೆವಾಹನಗಳೂ ಅಧಿಕ ಸಂಖ್ಯೆಯಲ್ಲಿವೆ. ಆದ್ದರಿಂದ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯ ದೃಷ್ಟಿಯಿಂದ, ಇದು ಅತ್ಯಂತ ಮುಖ್ಯವಾದ ಒಂದು ವಿಷಯವಾಗಿದೆ.

ಅತ್ಯಂತ ಪ್ರಾಮಾಣಿಕವೆನಿಸಿದ ಪ್ರಸ್ತುತ ಸರ್ಕಾರ, ಈ ವಿಷಯಕ್ಕೆ ಸಂಬಂಧಪಟ್ಟಂತೆ ವೇಗವಾಗಿ ಕೆಲಸ ಮುಂದುವರಿಸುತ್ತಿದೆ. ಜಲ ಸಾಗಣೆಗೆ ಸಂಬಂಧಿಸಿದಂತೆ ಹೇಳುವುದಾದರೆ, ನಮ್ಮಲ್ಲಿ 371 ಹಡಗುಗಳಿವೆ. ಅವುಗಳಲ್ಲಿ 206 ಹೊರದೇಶಗಳಲ್ಲಿ ಹಾಗೂ ಉಳಿದವು ಕರಾವಳಿ ತೀರಗಳಲ್ಲಿ ಸಂಚರಿಸುತ್ತಿವೆ. ನನಗಿಂತ ಮೊದಲು ಮಾತನಾಡಿದ ಸದಸ್ಯರೂ ಹೆಚ್ಚು ಮಾರ್ಗಗಳ ಅವಶ್ಯಕತೆಯ ಬಗ್ಗೆ ಒತ್ತಿ ಹೇಳಿದ್ದಾರೆ ಹಾಗೂ ಅಭಿವೃದ್ಧಿ ನಿರುತ್ಸಾಹಕರವಾಗಿದೆ ಮತ್ತು ಅಭಿವೃದ್ಧಿ ಕಾರ್ಯಗಳು ಲಾಭ ಆಧಾರಿತವಾಗುವಂತೆ ನೋಡಿಕೊಳ್ಳಬೇಕೆಂದು ತಿಳಿಸಿದ್ದಾರೆ.

ರೇವುಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೇಳುವುದಾದರೆ, 1947ಕ್ಕಿಂತ ಹಿಂದೆ, ನಮ್ಮ ದೇಶದಲ್ಲಿ ಐದು ಮುಖ್ಯ ರೇವುಗಳು ಮಾತ್ರ ಇದ್ದವು. 1947ರ ಅನಂತರ, ಇನ್ನೂ ಐದು ರೇವುಗಳನ್ನು ಅಭಿವೃದ್ಧಿಪಡಿಸಿ ರೇವುಗಳ ಸ್ಥಾನಕ್ಕೆ ಏರಿಸಲಾಯಿತು. ಇದಕ್ಕೆ ತಗಲಿದ ವೆಚ್ಚ 410 ಕೋಟಿ ರೂ. ನಾಲ್ಕನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕಾರವಾರದ ರೇವಿನ ಅಭಿವೃದ್ಧಿ ಕಾರ್ಯ ಪೂರ್ಣಗೊಳ್ಳುತ್ತದೆಂದು ನಿರೀಕ್ಷಿಸಲಾಗಿದೆ. ಆದರೆ, ಬರುವ ಕೆಲವು ವರ್ಷಗಳಲ್ಲಿ ಈ ಕಾರ್ಯ ಪ್ರಾರಂಭವಾಗಿ ಮುಂದುವರಿಯುವುದೆಂದು ನನಗನಿಸಿದೆ. ಒಂದು ನೌಕರಿ ಸಂಶೋಧನಾ ವಿನ್ಯಾಸಕೇಂದ್ರವನ್ನು [Marine research design centre] ತೆರೆಯುವ ಪ್ರಸ್ತಾಪವೂ ಇದ್ದು,

## ಹಡಗು ಮತ್ತು ಸಾಗಾಣಿಕೆ ಇಲಾಖೆಗಳ ಮೇಲಿನ ಬೇಡಿಕೆ*

ಶ್ರೀ ಬಿ. ರಾಚಯ್ಯ (ಚಾಮರಾಜನಗರ):- ಮಾನ್ಯ ಉಪಾಧ್ಯಾಕ್ಷರೆ, ಹಡಗು ಮತ್ತು ಸಾಗಾಣಿ ಸಚಿವಾಲಯಕ್ಕೆ [Ministry of shipping and Transport] ಸಂಬಂಧಿಸಿದ ಬೇಡಿಕೆಗಳ ಬಗ್ಗೆ ಮಾತನಾಡಲು ನನಗೊಂದು ಅವಕಾಶ ನೀಡಿದ ಬಗ್ಗೆ ನಿಮಗೆ ನಾನು ಕೃತಜ್ಞನಾಗಿದ್ದೇನೆ. ಹಡಗು ಮತ್ತು ಸಾಗಣಿ ಸಚಿವಾಲಯವು ಸಂವಹನ ವ್ಯವಸ್ಥೆಯ, ಎಂದರೆ ರಸ್ತೆಗಳ ಅಭಿವೃದ್ಧಿ ಹಾಗೂ ಸರಕು ಸಾಗಾಣಿಗಳ ದೃಷ್ಟಿಯಿಂದ ತುಂಬ ಮಹತ್ವದ ಸಚಿವಾಲಯವಾಗಿದೆ.

ಕಳೆದ 30 ವರ್ಷಗಳಲ್ಲಿ, ನಮ್ಮ ದೇಶದಲ್ಲಿ ನಾವು 61,000 ಕಿ.ಮೀ.ಗಳಷ್ಟು ರೈಲ್ವೆ ಮಾರ್ಗಗಳನ್ನು 12.2 ಲಕ್ಷ ಕಿ.ಮೀಗಳಷ್ಟು ರಸ್ತೆಗಳನ್ನು ಅಭಿವೃದ್ಧಿ ಪಡಿಸಿದ್ದೇವೆ. ಇವುಗಳಲ್ಲಿ 28,970 ಕಿ.ಮಿ.ಗಳಷ್ಟು ರಾಷ್ಟ್ರೀಯ ಹೆದ್ದಾರಿಗಳು ಈ ಸಚಿವಾಲಯದ ಆಡಳಿತಕ್ಕೆ ಸೇರಿವೆ. ಗಡಿ ಪ್ರದೇಶದ 1,339 ಕಿ.ಯಮಿ. ಗಳಷ್ಟು ರಸ್ತೆಗಳು ಹಾಗೂ ಸಿಕ್ಕಿಂ ಪ್ರದೇಶದ 39 ಕಿ.ಮೀ. ಗಳಷ್ಟು ರಸ್ತೆಗಳ ಆಡಳಿತವೂ ಈ ಸಚಿವಾಲಯಕ್ಕೆ ಸೇರಿದೆ ಕರ್ನಾಟಕದಲ್ಲಿ ರಾಹೆ 4, ರಾಹೆ 7, ರಾಹೆ 13, ಮತ್ತು ರಾಹೆ 17 ಎಂಬ ಹೆಸರುಗಳ 1968 ಕಿಮೀಗಳಷ್ಟು ಉದ್ದದ ರಾಷ್ಟ್ರೀಯ ಹೆದ್ದಾರಿಗಳಿವೆ. ಈ ಮಾರ್ಗಗಳ ಆಡಳಿತವನ್ನು ಸರಿಯಾಗಿ ನಡೆಸುತ್ತಿಲ್ಲ. ಇವು ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಕಾಳಿ, ಕೃಷ್ಣಾ, ತುಂಗಭದ್ರಾ ಹಾಗೂ ಪಾಲಾರ್‌ಗಳಂಥ ಮುಖ್ಯ ನದಿಗಳನ್ನು ಈ ರಸ್ತೆಗಳು ಹಾದು ಹೋಗುತ್ತವೆ. ಈ ಎಲ್ಲಾ ಹಾಯಿದಾರಿಗಳಲ್ಲಿ ಸೇತುವೆಗಳನ್ನು ನಿರ್ಮಿಸುವ ಪ್ರಸ್ತಾಪಮಾಡಲಾಗಿದ್ದು, ಅವಕ್ಕೆ ಕೆಲಮಟ್ಟಿನ ಹಣವನ್ನು ಒದಗಿಸಲಾಗಿದೆ. ಈ ಎಲ್ಲ ಸೇತುವೆಗಳೂ ಬೇಗನೆ ನಿರ್ಮಾಣಗೊಳ್ಳುವಂತೆ ಹಾಗೂ ವಾಹನಗಳಿಗೆ ರಸ್ತೆಗಳ ಮೇಲೆ ಸುಗಮವಾಗಿ ಸಂಚರಿಸಲು ಸಾಧ್ಯವಾಗುವಂತೆ ನೋಡಿಕೊಳ್ಳಬೇಕೆಂದು ನಾನು ಮಾನ್ಯ ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಎರಡನೆಯದಾಗಿ. 1943ರಲ್ಲಿ, ನಾಗಪುರದಲ್ಲಿ ನಡೆದ ಮುಖ್ಯ ಇಂಜಿನಿಯರ್‌ಗಳ ಸಮ್ಮೇಳನದಲ್ಲಿ, ರಾಷ್ಟ್ರೀಯ ಹೆದ್ದಾರಿಗಳು, ಗಡಿ ಪ್ರದೇಶದ ರಸ್ತೆಗಳು, ರಾಜ್ಯದ ಹೆದ್ದಾರಿಗಳು, ಲೋಕಾಪಯೋಗಿ ವಿಭಾಗಕ್ಕೆ ಸೇರಿದ ಪಿ.ಡಬ್ಲ್ಯು ರಸ್ತೆಗಳು, ಜಿಲ್ಲಾ ಪರಿಷತ್ ಹಾಗೂ ಪಂಚಾಯತ್ ರಸ್ತೆಗಳೆಂದು ರಸ್ತೆಗಳನ್ನು ವರ್ಗೀಕರಿಸಲು ಅಗತ್ಯವಾದ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಇಂಜಿನಿಯರ್‌ಗಳು ಮುಂದಿರಿಸಿದರು. 100 ಚದರ ಮೈಲು ವಿಸ್ತಾರದ ಪ್ರತಿಯೊಂದು ಪ್ರದೇಶದಲ್ಲಿಯೂ 26 ಕಿ.ಮೀ. ಗಳಷ್ಟು ರಸ್ತೆಗಳಷ್ಟು ಒದಗಿಸಬೇಕೆಂದು ಅವರು ಸೂಚಿಸಿದರು. 1957ರಲ್ಲಿ, ಶಿಲ್ಲಾಂಗ್‌ನಲ್ಲಿ ನಡೆದ ರೋಡ್ಸ್ ಕಾಂಗ್ರೆಸ್‌ನಲ್ಲಿ, 100 ಚ. ಮೈ. ವಿಸ್ತಾರದ ಪ್ರತಿಯೊಂದು ಪ್ರದೇಶದಲ್ಲಿ ಇರಬೇಕಾದ ರಸ್ತೆಗಳ ಉದ್ದ 56 ಕಿ.ಮೀ. ಗಳೆಂದು ಅವರು ಪರಿಷ್ಕರಿಸಿದರು. ಐದು ಹಾಗೂ ಆರನೆಯ ಪಂಚವಾರ್ಷಿಕ ಯೋಜನೆಗಳಲ್ಲಿ, ಕೇಂದ್ರ ಹಾಗೂ

* ಲೋಕ ಸಭಾ ನಡವಳಿಕೆ ದಿನಾಂಕ 3ನೇ ಏಪ್ರಿಲ್, 1998 ಪುಟ 300-303.

ಅನುಭವಿ ಪಾರ್ಲಿಮೆಂಟೇರಿಯನ್ ಹಾಗೂ ಜನತಾ ಪಕ್ಷದ ಸದಸ್ಯರೂ ಆಗಿರುವ ಮಾನ್ಯ ಸದಸ್ಯ ಶ್ರೀ ಬ್ರಹ್ಮ ಪ್ರಕಾಶ್ ರವರು ಈ ವಿಷಯವನ್ನು ಮುಂದುವರಿಸದಂತೆ ಜನತಾಪಕ್ಷಕ್ಕೆ ಎಚ್ಚರಿಕೆ ನೀಡಿದ್ದಾರೆ. ಜನರು ಒಂದು ವರ್ಷದಿಂದ ತಮ್ಮನ್ನು ಅವಲೋಕಿಸುತ್ತಿದ್ದಾರೆ. ತಮ್ಮ ಇಂಥ ಮೋಹಕ ನುಡಿಗಳನ್ನು ಅವರು ಇನ್ನು ಸಹಿಸಲಾರರು. ಸಚಿವರು ಮಾಡುವ ತಪ್ಪುಗಳ ಬಗ್ಗೆ ಶ್ರೀ ವಿಜನೂರಾರಿಯವರು ಬರೆದ ಪುಸ್ತಕವನ್ನು ನಾನು ಓದಿದ್ದೇನೆ. ಆದರೂ ಅವರ ವಿರುದ್ಧ ಏನೇ ಕ್ರಮಗಳನ್ನು ಕೈಗೊಂಡಿಲ್ಲ. ಸಮ್ಮೇಳನಗಳು ಮತ್ತು ಸಮಿತಿಗಳನ್ನು ನೇಮಿಸುವುದು ವ್ಯರ್ಥ. ಆದ್ದರಿಂದ ಇಂಥ ಬಗೆಯ ಅನಾವಶ್ಯಕ ಕೆಲಸಗಳನ್ನು ಮುಂದುವರಿಸದಂತೆ ಸರ್ಕಾರವನ್ನು ಕೋರುವಲ್ಲಿ ನಾನು ಶ್ರೀ ಬ್ರಹ್ಮಪ್ರಕಾಶ್ ಅವರ ಜೊತೆ ಸೇರುತ್ತೇನೆ.

ಈ ಮಾತುಗಳೊಂದಿಗೆ, ರಾಷ್ಟ್ರದ ಆರ್ಥಿಕತೆಯನ್ನು ಸುಭದ್ರ ಅಡಿಪಾಯದ ಮೇಲೆ ಸ್ಥಿರವಾಗಿ ನಿಲ್ಲಿಸಲು ವಿತ್ತ ಸಚಿವರಿಗೆ ಬಲವೂ, ಧೈರ್ಯವೂ ಬರಲೆಂದು ನಾನು ಮತ್ತೊಮ್ಮೆ ಹಾರೈಸುತ್ತೇನೆ.

ಸಾಧ್ಯವಾಗುತ್ತದೆ. ರಾಜ್ಯಗಳಿಗೆ ನೆರವು ನೀಡುವಲ್ಲಿ ಎಲ್ಲ ರಾಜ್ಯಗಳನ್ನು ಒಂದು ದೃಷ್ಟಿಯಿಂದ ಕಾಣುವುದಾಗಿ ಪ್ರಧಾನಮಂತ್ರಿಗಳು ಭರವಸೆ ನೀಡಿದ್ದಾರೆ. ಆದ್ದರಿಂದ, ರಾಜಕೀಯ ದೃಷ್ಟಿಯಿಂದ ಅಲ್ಲ, ಬದಲಾಗಿ ರಾಜ್ಯಗಳ ಬೇಡಿಕೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ರಾಜ್ಯಗಳಿಗೆ ಆರ್ಥಿಕ ನೆರವು ನೀಡಬೇಕೆಂದು ನಾನು ಮಾನ್ಯ ಸಚಿವರನ್ನು ಕೋರುತ್ತೇನೆ. ವಿದ್ಯುತ್‌ಶಕ್ತಿ ಕೈಗಾರಿಕೆಯೆ ಇರಲಿ. ನೀರಾವರಿಯೇ ಇರಲಿ, ಮುಂದೆ ಸಾಗುತ್ತಿರುವ ಯೋಜನೆಗಳಿಗೆ ಅವುಗಳನ್ನು ಬೇಗ ಪೂರ್ಣಗೊಳಿಸಲು ಅನುಕೂಲವಾಗುವಂತೆ ಧನ ಸಹಾಯ ಅಥವಾ ಸಾಲವನ್ನು ನೀಡಬೇಕು. ಆಗಲೇ ಬೆಳವಣಿಗೆಯ ಗತಿ ವೇಗವಾಗುತ್ತಿದೆ. ಹಾಗೂ ನಿರುದ್ಯೋಗ ಸಮಸ್ಯೆಗೆ ತಕ್ಕ ಮಟ್ಟಿನ ಪರಿಹಾರ ಸಿಗುತ್ತದೆ.

ಚಿನ್ನದ ಮಾರಾಟಕ್ಕೆ ಸಂಬಂಧಿಸಿದಂತೆ, ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಚಿನ್ನದ ಬೆಲೆ ಇಳಿದಿರುವುದರಿಂದ, ಚಿನ್ನದ ಬೆಲೆ ಭಾರತದಲ್ಲಿ ಏರತೊಡಗಿದೆ ಎಂಬ ಒಂದು ಅಭಿಪ್ರಾಯವಿದೆ. ಅಲ್ಲದೆ ದೇಶದಲ್ಲಿ ಹೇರಳ ಪ್ರಮಾಣದಲ್ಲಿ ಚಿನ್ನದ ಕಳ್ಳಸಾಗಾಣಿಕೆ ಕೂಡ ನಡೆಯುತ್ತಿದೆ. ವರ್ತಕರು ಹೇರಳಲಾಭ ಗಳಿಸುತ್ತಿದ್ದಾರೆ. ಶ್ರೀ ಸುಬ್ರಹ್ಮಣ್ಯಂ ಹೇಳಿದಂತೆ ಸುವರ್ಣ ನಿಯಂತ್ರಣ ಕಾಯ್ದೆಯನ್ನು ಅನುಷ್ಠಾನಕ್ಕೇ ತಂದ ಅಂದಿನ ವಿತ್ತ ಸಚಿವರು (ಶ್ರೀ ದೇಸಾಯಿ) ರಾಷ್ಟ್ರದಲ್ಲಿ ಚಿನ್ನದ ಮಾರಾಟಕ್ಕೆ ಮತ್ತು ಅಮೂಲ್ಯವಾದ ಆಭರಣಗಳ ಮಾರಾಟಕ್ಕೂ ಅವಕಾಶ ಕಲ್ಪಿಸಿಕೊಡಬೇಕಾಗಿತ್ತು. ಚಿನ್ನದ ಬೆಲೆಯನ್ನು ಇಳಿಸುವುದು ಸಾಧ್ಯವಾದರೆ ಒಳ್ಳೆಯದೇ ಆದರೆ ಚಿನ್ನದ ಬೆಲೆ ಏರುತ್ತ ಹೋಗುತ್ತಿದೆ. ಅದರ ಜೊತೆಯಲ್ಲಿ ಇತರ ವಸ್ತುಗಳ ಬೆಲೆಗಳೂ ಏರುತ್ತಿವೆ. ಬೆಲೆಗಳನ್ನು ಇಳಿಸುವ ಬದಲಿಗೆ ಕಳ್ಳಸಾಗಣಿದಾರರು ತಮ್ಮ ಕಪ್ಪು ಚಿನ್ನವನ್ನು ಬಿಳಿ ಚಿನ್ನವಾಗಿ ಪರಿವರ್ತಿಸತೊಡಗುತ್ತಾರೆ. ಹಾಗೂ ಅದನ್ನು ಅನಂತರ ಆಭರಣಗಳನ್ನಾಗಿ ಪರಿವರ್ತಿಸುತ್ತಾರೆ. ಆಗಲೂ ಕೂಡ ಚಿನ್ನದ ಬೆಲೆಯನ್ನು ಇಳಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ, ಸೈದ್ಧಾಂತಿಕ ದೃಷ್ಟಿಯಿಂದ, ಬಜೆಟ್‌ನ ಅಂತರವನ್ನು ತುಂಬುವ ದೃಷ್ಟಿಯಿಂದ, ಆಭರಣಗಳ ಮಾರಾಟದ ಪರವಾಗಿ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತೇನೆ.

ಕೊನೆಯದಾಗಿ ಬಜೆಟ್‌ನಲ್ಲಿ ತೋರಿಸಲಾದ 1,396 ಕೋಟಿ ರೂ.ಗಳ ಕೊರತೆಯನ್ನು ಭರ್ತಿಮಾಡಲೇಬೇಕು. ಈ ದೃಷ್ಟಿಯಿಂದ ಆಂತರಿಕ ಸಂಪನ್ಮೂಲಗಳನ್ನು ಕ್ರೋಢಿಕರಿಸುವ ಪ್ರಯತ್ನ ನಡೆಯಬೇಕು. ಈಗಾಗಲೇ ಬಾರೀ ಮೊತ್ತದ ತೆರಿಗೆಗಳು ಪಾವತಿಯಾಗದೇ ಬಾಕಿ ಉಳಿದಿದೆ. ಬಾಕಿ ಉಳಿದ ತೆರಿಗೆಗಳನ್ನು ವಸೂಲಿ ಮಾಡುವ ಕ್ರಮ ತೀವ್ರಗೊಳ್ಳಬೇಕು. ಸರ್ಕಾರಿ ಹಾಗೂ ಕಾರ್ಪೊರೇಟ್ ವಿಭಾಗಗಳ ಪ್ರತಿಯೊಂದು ಉಳಿತಾಯದ ನೆರವನ್ನು ಬಳಸಿಕೊಳ್ಳಬೇಕು. ಅನಾವಶ್ಯಕ ಸಮ್ಮೇಳನಗಳನ್ನು, ಅನಗತ್ಯವಾಗಿ ನಿಯೋಗಗಳನ್ನು ಕಳುಹಿಸುವುದನ್ನು ನಿಲ್ಲಿಸಬೇಕು.

ಇನ್ನೊಂದು ವಿಷಯ 49 ನಿಯೋಗಗಳನ್ನು ಮತ್ತು ಅನೇಕ ಸಮಿತಿಗಳನ್ನು ನೇಮಕಗೊಳಿಸಲಾಗಿದೆ ಎಂದು ನನಗೆ ತಿಳಿದು ಬಂತು. ಈ ನಿಯೋಗಗಳು ಮತ್ತು ಸಮಿತಿಗಳ ಸಂಬಂಧದಲ್ಲಿ ಆಗಲೇ 90 ಕೋಟಿ ರೂ.ಗಳು ವೆಚ್ಚವಾಗಿವೆಯೆಂದೂ ತಿಳಿದು ಬಂತು. ಅತ್ಯಂತ

ಸಮಿತಿಯ ವರದಿಗಿಂತ ಬೇರೆಯೇ ಆದ ಸೂಚನೆಯೊಂದಿದೆ. ಇದನ್ನು ಕೂಡ ಪರಿಷ್ಕರಿಸಬೇಕಾದ ಅಗತ್ಯವಿದೆ. ವಿದ್ಯುತ್ ಶಕ್ತಿಯ ಮೇಲೆ ವಿಧಿಸಲಾದ ಶೇ. 2 ರಷ್ಟು ತೆರಿಗೆಯಿಂದ ಅಂತಿಮವಾಗಿ ಗ್ರಾಹಕರಿಗೆ ಭಾರೀ ಹೊಡೆತವಾಗುತ್ತದೆ. ವಿದ್ಯುತ್ ಶಕ್ತಿಯನ್ನು ಬಳಸುವ ಪಂಪ್ ಸೆಟ್‌ಗಳಿಗೆ ಸಂಬಂದಿಸಿದಂತೆ ತೆರಿಗೆ ವಿನಾಯಿತಿಯಿದೆ. ಇದನ್ನು ನಾನು ಸಂಪೂರ್ಣವಾಗಿ ಮೆಚ್ಚಿದ್ದೇನೆ. ಅದರೆ ತಾತ್ಕಾಲಿಕ ಜಕಾತಿಯ ಬಗ್ಗೆ ಸಭೆಯಲ್ಲಿ ಸಾಗುತ್ತಿರುವ ಚರ್ಚೆಯ ಹಿನ್ನೆಲೆಯಲ್ಲಿ ನಾವು ಇನ್ನೂ ಆಲೋಚಿಸಬೇಕಾಗಿದೆ.

ಮಾರಾಟ ತೆರಿಗೆ ಹಾಗೂ ಆಕ್ಟ್ರಾಯ್‌ಗಳನ್ನು ರದ್ದುಪಡಿಸತಕ್ಕದ್ದೆಂಬ ಆಲೋಚನೆಯೂ ಸಚಿವಾಲಯಕ್ಕಿದೆ. ನಿಮ್ಮ ಭಾಷಣದಲ್ಲಿ ಕೂಡ ನೀವು ಈ ಅಂಶವನ್ನು ಉಲ್ಲೇಖಿಸಿದ್ದೀರಿ. ಈ ದೇಶದಲ್ಲಿ 'ನಿಷೇದ'ವನ್ನು ಜಾರಿಗೆ ತಂದಾಗಲೇ ಮಾರಾಟ ತೆರಿಗೆಯನ್ನು ವಿಧಿಸುವುದು ಪ್ರಾರಂಭವಾಯಿತು. ಆದಾಯದ ಕೊರತೆಯನ್ನು ಭರ್ತಿಮಾಡಲು ಮಾರಾಟ ತೆರೆಗೆ ಪದ್ಧತಿ ಆರಂಭಗೊಂಡಿತು. ಆದರೆ 'ನಿಷೇಧ'ವನ್ನು ಎಂದೂ ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲಾಗಿಲ್ಲ. ಆದರೆ ಈಗ ಈ ಬಗ್ಗೆ ಪುನರಾಲೋಚನೆ ನಡೆಯುತ್ತಿದೆ. ಪ್ರಧಾನಮಂತ್ರಿಗಳ ಮನಸ್ಸೂ ಅಥವಾ ತಿರುಗಿರುವುದು ನನಗೆ ಸಂತೋಷವನ್ನುಂಟುಮಾಡಿದೆ. ಅವರನ್ನು ಜನತಾ ಪಕ್ಷ ಸಂಪೂರ್ಣವಾಗಿ ಬೆಂಬಲಿಸುವುದೂ ಎಂದು ನನಗೆ ತಿಳಿದಿಲ್ಲ. ದುರ್ಬಲ ವರ್ಗಗಳವರು ಹಾಗೂ ದುರ್ವ್ಯಸನಕ್ಕೆ ಒಳಗಾದವರಿಗೆ ಮದ್ಯಪಾನ ನಿಷೇಧವನ್ನು ಅನುಷ್ಠಾನಗೊಳಿಸುವುದರಿಂದ ತುಂಬ ಬಿಡುಗಡೆ ದೊರಕಲು ಸಾಧ್ಯ. ಆದರೆ ಈ ಕ್ರಮ ಕೈಗೊಳ್ಳುವುದರಿಂದ, ಬಹಳಷ್ಟು ಆದಾಯವನ್ನು ನಾವು ಕಳೆದುಕೊಳ್ಳುತ್ತೇವೆ. ಮಾರಾಟ ತೆರಿಗೆಯನ್ನು ಕೂಡ ನೀವು ರದ್ದುಪಡಿಸಲು ಹೋದ ಪಕ್ಷದಲ್ಲಿ, ರಾಜ್ಯ ಸರ್ಕಾರಗಳನ್ನು ಭಾರೀ ನಷ್ಟವನ್ನು ಎದುರಿಸಬೇಕಾಗಿ ಬರುತ್ತದೆ. ಆದ್ದರಿಂದ ಯಾವ ಸರಕುಗಳ ಮೇಲೆ ಕೇಂದ್ರ ಸರ್ಕಾರ ತೆರಿಗೆ ವಿಧಿಸಬೇಕು ಹಾಗೂ ಯಾವ ಸರಕುಗಳ ಮೇಲೆ ರಾಜ್ಯ ಸರ್ಕಾರಗಳು ತೆರಿಗೆ ವಿಧಿಸಬೇಕು ಎಂಬ ಕುರಿತ ಮಿತಿ ನಿರ್ದೇಶ ಮಾಡಬೇಕಾದ್ದು ಅಗತ್ಯ. ಆದ್ದರಿಂದ ಮಾರಾಟ ತೆರಿಗೆ ಹಾಗೂ ಆಕ್ಟ್ರಾಯ್‌ಗಳಿಗೆ ಸಂಬಂಧಪಟ್ಟಿರುವಷ್ಟರ ಮಟ್ಟಿಗೆ ರಾಜ್ಯಗಳ ಸ್ವಾಯುತ್ತತೆ ಮೇಲೆ ಕೇಂದ್ರದ ಅತಿ ಕ್ರಮ ಪ್ರವೇಶ ಇದ್ದೇ ಇರುತ್ತದೆ. ಹಣಕಾಸಿನ ವಿಚಾರದಲ್ಲಿ, ಅಧಿಕಾರದ ವಿಕೇಂದ್ರಿಕರಣಕ್ಕೆ ಸಂಬಂಧಿಸಿದಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ಸಂವಾದ ನಡೆಯದ ಹೊರತು, ರಾಷ್ಟ್ರದ ಒಟ್ಟು ಹಿತಾಸಕ್ತಿಗಳತ್ತ ಗಮನ ಹರಿಸುವುದು ಸಾಧ್ಯವಾಗುವುದಿಲ್ಲ. ಕೇಂದ್ರ ಹಾಗೂ ರಾಜ್ಯಗಳ ನಡುವಣ ಸಹಕಾರ ಆತ್ಮೀಯವಾಗಿರಬೇಕಾದ್ದು ಅತಿ ಮುಖ್ಯ.

ಆರನೆಯ ವಿತ್ತ ಆಯೋಗವು ನಿಧಿಗಳ ವಿತರಣೆಗೆ ಸಂಬಂಧಿಸಿದಂತಹ ಕೆಲವು ಸೂತ್ರಗಳನ್ನು ಮುಂದಿರಿಸಿದೆ. ಯಾವ ರಾಜ್ಯದಲ್ಲಿ ಯಾವ ಪಕ್ಷ ಅಧಿಕಾರ ರೂಢವಾಗಿದೆ ಎಂಬುದನ್ನು ದೃಷ್ಟಿಯಲ್ಲಿ ಇರಿಸಿಕೊಳ್ಳದೆಯೆ, ಧನಸಹಾಯ ಅಥವಾ ಸಾಲ ನೀಡಿಕೆಗಳ ಮುಖಾಂತರ ರಾಜ್ಯಗಳಿಗೆ ಕೇಂದ್ರ ಸರ್ಕಾರ ನಿಧಿ ವಿತರಣೆ ಮಾಡುವಲ್ಲಿ ಕೂಡ ಇವೇ ಸೂತ್ರಗಳನ್ನು ಅನುಸರಿಸಬಹುದು. ರಾಷ್ಟ್ರೀಯ ಐಕ್ಯವನ್ನು ಉಳಿಸಿಕೊಳ್ಳಲು ಇಂಥ ಏರ್ಪಾಟಿನಿಂದ

ನಾವು ಸಮೀಪ ತರಬೇಕು. ಪ್ರಧಾನಮಂತ್ರಿಗಳ ಉದ್ದೇಶ ಇದೇ ಆಗಿದ್ದ ಪಕ್ಷದಲ್ಲಿ, ಸ್ವಾಭಾವಿಕವಾಗಿಯೇ ಅದು ಬಜೆಟ್‌ನಲ್ಲಿ ಪ್ರತಿಬಿಂಬಿಸಬೇಕಾಗಿತ್ತು.

ಗ್ರಾಮೀಣ ಪ್ರದೇಶಗಳಲ್ಲಿನ ------ ಉದ್ಯಮಗಳಿಗೂ ಬಜೆಟ್ ಒತ್ತು ನೀಡಿದೆ ಉದಾಹರಣೆಗೆ, ಗ್ರಾಮೀಣ ಪ್ರದೇಶಗಳಲ್ಲಿ ಲಭ್ಯವಾಗುವ ಸ್ಥಳೀಯ ಸರಕುಗಳ ಪೂರ್ಣಪ್ರಯೋಜನವನ್ನು ಪಡೆದುಕೊಳ್ಳಬಹುದು. ಗ್ರಾಮೋದ್ಯಮಗಳನ್ನು ಪ್ರಾರಂಭಿಸುವುದರಿದ ನಗರಗಳಲ್ಲಿನ ಉದ್ಯಮ ಒತ್ತಡ ಕಡಿಮೆಯಾಗಿ, ಗ್ರಾಮಗಳಿಂದ ಉದ್ಯೋಗಾನ್ವೇಷಣೆಗಳಾಗಿ ನಗರಗಳಿಗೆ ವಲಸೆ ಹೋಗುವ ಜನರ ಸಂಖ್ಯೆಯೂ ಕಡಿಮೆಯಾಗುತ್ತದೆ. ಗ್ರಾಮೀಣ ಪ್ರದೇಶಗಳ ಜನರು ಗ್ರಾಮಗಳಲ್ಲಿಯೇ ಸ್ಥಿರವಾಗಿ ನೆಲೆಸಬಹುದು. ಸುಶೀಕ್ಷಿತ ನಿರುದ್ಯೋಗಿಗಳು ಸರ್ಕಾರಿ ಉದ್ಯೋಗಿಗಳನ್ನು ಹುಡುಕಬೇಕಾದಂತಹ ಪರಿಸ್ಥಿತಿ ಇಲ್ಲವಾಗಬೇಕು. ಅವರು ಸರ್ಕಾರಿ ಉದ್ಯೋಗಗಳನ್ನಾದರೂ ಏಕೆ ಬೆನ್ನಟ್ಟಬೇಕು? ಅವು ಪ್ರತಿ ವರ್ಷ ಸಂಬಳ ಹೆಚ್ಚಾಗುತ್ತ ಹೋಗುವ ಆಕರ್ಷಕ ಉದ್ಯೋಗಗಳಾಗಿರುವುದೇ ಇದಕ್ಕೆ ಕಾರಣ. ಅತ್ಯಂತ ಕಡಿಮೆ ಅಂಕಗಳನ್ನು ಪಡೆದು ಉತ್ತೀರ್ಣನಾದ, ಗ್ರಾಮೀಣ ರೈತನ ಮಗನೂ ಕೃಷಿಗೆ ಅಂಟಿಕೊಳ್ಳಲು ಸಿದ್ಧನಾಗಿರುವುದಿಲ್ಲ, ಅವನು ಸರ್ಕಾರಿ ಉದ್ಯೋಗವನ್ನೇ ಹುಡುಕತೊಡಗುತ್ತಾನೆ. ಆದ್ದರಿಂದ ವ್ಯವಸ್ಥಿತ ವಿಭಾಗದಲ್ಲಿ ಎಂದರೆ ಸರ್ಕಾರಿ ಉದ್ಯೋಗಗಳಲ್ಲಿ ವೇತನಗಳನ್ನು ಹೆಚ್ಚಿಸುತ್ತ ಹೋಗಬಾರದು. ಸರ್ಕಾರಿ ಉದ್ಯೋಗಗಳು ಹೆಚ್ಚು ಹೆಚ್ಚು ಆಕರ್ಷಕವಾಗದಂತೆ ನೋಡಿಕೊಳ್ಳಬೇಕು. ರಾಷ್ಟ್ರದ ಆದಾಯದ ಸರಿಸಮ ವಿತರಣೆಯಾಗುವತ್ತ ಗಮನಹರಿಸಬೇಕು.

ಕೈಮಗ್ಗ, ರೇಷ್ಮೆಕೃಷಿ ಮತ್ತು ಇತರ ಗುಡಿ ಕೈಗಾರಿಕೆಗಳು ನಿಜವಾಗಿಯೂ ಬಹುಸಂಖ್ಯೆಯ ನಿರುದ್ಯೋಗಿಗಳಿಗೆ ನೌಕರಿ ದೊರಕಿಸಿಕೊಡಬಲ್ಲಂತಹ ಕಿರಿಯ ಪ್ರಮಾಣದ ಉದ್ಯಮಗಳಾಗಿವೆ. ಈ ವಿಭಾಗಗಳಲ್ಲಿ ಮಾಡಿಕೊಡಲಾದ ಅವಕಾಶಗಳನ್ನು ಪ್ರಸ್ತುತ ವರ್ಷವೂ ಮುಂದುವರಿಸಬೇಕು. ಈ ಅವಕಾಶಗಳು ನಷ್ಟವಾಗಬಾರದು. ಈ ವಿಭಾಗಗಳಲ್ಲಿ ಯಾವುದೇ ಹೆಚ್ಚುವರಿ ಹಣದ ಅಗತ್ಯ ಕಂಡು ಬಂದ ಪಕ್ಷದಲ್ಲಿ ತತ್‌ಕ್ಷಣ ಅದನ್ನು ಒದಗಿಸಬೇಕು. ಹೀಗೆ ಮಾಡುವುದರಿಂದ, ಗ್ರಾಮೀಣ ಪ್ರದೇಶಗಳಲ್ಲಿ ನಿರುದ್ಯೋಗಿಗಳಾಗಿ ಆಶಾಭಂಗವನ್ನು ಹೊಂದಿರುವ ಜನರಿಗೆ ನಿಜವಾಗಿಯೂ ನೆರವು ದೊರೆಯುತ್ತದೆ.

ನನಗಿಂತ ಮೊದಲು ಮಾತನಾಡಿದ ಮಾನ್ಯ ಅಧ್ಯಕ್ಷರು ಪ್ರಾಣಿ ಸಾಕಾಣಿಕೆಯ ಬಗ್ಗೆ ಕೂಡ ತಿಳಿಸಿದ್ದಾರೆ. ಆದ್ದರಿಂದ ಆ ವಿಷಯದ ಬಗ್ಗೆ ನಾನು ವಿವರಿಸುವುದಿಲ್ಲ.

ತೆರಿಗೆಗಳು ಯಾವ ರೀತಿಯಲ್ಲಿ ಶ್ರೀ ಸಾಮಾನ್ಯರ ಹೊರೆಯನ್ನು ತಗ್ಗಿಸಿದೆ? ತೆರಿಗೆಗಳನ್ನು ವಿಧಿಸದೆ ಯಾವ ಸರ್ಕಾರವೂ ಹೆಚ್ಚು ಹಣವನ್ನು ಹೂಡಲಾರದು ಹಾಗೂ ಹಾಗೆ ಮಾಡದೆ ಹೋದ ಪಕ್ಷದಲ್ಲಿ ಯಾವ ಬೆಳವಣಿಗೆಯೂ ಸಾಧ್ಯವಾಗದು. ಆದರೆ ನಾವು ತೆರಿಗೆಗಳ ಬಾಬನ್ನು ಆಯ್ದುಕೊಳ್ಳಬೇಕಾದ ಅಗತ್ಯವುಂಟು. ಅಂತಿಮ ಉತ್ಪನ್ನಗಳನ್ನು ತಯಾರಿಸ ಹೋಗುವ ಸರಕುಗಳ ಮೇಲೆ ನಾವು ತೆರಿಗೆ ವಿಧಿಸಕೂಡದು ಎಂದು ಜ್ಞಾ: ಸಮಿತಿ ಶಿಫಾರಸ್ ಮಾಡಿದೆ ಇಲ್ಲಿ ಜ್ಞಾ

ಬೆಳವಣಿಗೆಯತ್ತ ಅಭಿಮುಖವಾಗಿರುವ ಉದ್ಯಮಗಳಿರಬೇಕು. ಏಕೆಂದರೆ ಆಗಲೇ ಬಹು ಸಂಖ್ಯೆಯ ನಿರುದ್ಯೋಗಿಗಳಿಗೆ ಮತ್ತು ತಕ್ಕ ನೌಕರಿಯಲ್ಲಿ ಇಲ್ಲದವರಿಗೆ ಉದ್ಯೋಗ ದೊರಕಲು ಸಾಧ್ಯ. ಗ್ರಾಮೀಣ ಅಭಿವೃದ್ಧಿಯ ಮಹತ್ವವನ್ನು ವಿತ್ತ ಸಚಿವರು ಪ್ರತಿಪಾದಿಸಿದ್ದು ಸರಿಯಾಗಿಯೇ ಇದೆ. ಅವರು ನೀರಾವರಿ ಕೃಷಿ ಹಾಗೂ ಪ್ರಾಣಿ ಸಾಕಣೆಗಳಿಗೂ ಆದ್ಯತೆ ನೀಡಿದ್ದಾರೆ. ಇವಲ್ಲದೆ, ಮತ್ಸ್ಯೋದ್ಯಮದ ಅಭಿವೃದ್ಧಿಯತ್ತ ಕೂಡ ಲಕ್ಷ್ಯ ಹರಿಸಬಹುದು. ವಿಶೇಷವಾಗಿ ಹೇಳುವುದಾದರೆ ಒಳನಾಡು ಮೀನುಗಾರಿಕೆಯ ಬೆಳವಣಿಗೆ ಗ್ರಾಮೀಣ ಜನರ ಪಾಲಿಗೆ ವರದಾನವಾಗಬಲ್ಲದು. ಈವರೆಗೆ ಕೃಷಿಯನ್ನು ಮಾತ್ರ ಅವಲಂಬಿಸಿದ್ದ ಜನರು ಮೀನುಗಾರಿಕೆಯಿಂದಲೂ ಆದಾಯಗಳಿಸಬಹುದು.

ಆದ್ದರಿಂದ ವಿತ್ತ ಸಚಿವರು ಗ್ರಾಮೀಣ ಅಭಿವೃದ್ಧಿಗೆ ನೀಡಿದ ಮಹತ್ವಕ್ಕೆ ನಾನು ಸಂತೋಷಪಡುತ್ತೇನೆ. ಆದರೆ ಈ ಬಜೆಟ್‌ನಲ್ಲಿ, 1947 ರಿಂದಲೂ ಒಂದಲ್ಲ ಒಂದು ರೂಪದಲ್ಲಿ ಕಾಂಗ್ರೆಸ್ ಸರ್ಕಾರದ ಕಾರ್ಯಕ್ರಮವಾಗಿರುವ 20 ಅಂಶಗಳ ಕಾರ್ಯಕ್ರಮದ ಉಲ್ಲೇಖವಿಲ್ಲದೆ ಇರುವುದು ಮಾತ್ರ ನನಗೆ ವಿಷಾದವನ್ನು ಉಂಟುಮಾಡಿದೆ.

ಶ್ರೀ ಬಿ. ರಾಚಯ್ಯ:- ಹಣದುಬ್ಬರದ ಪ್ರವೃತ್ತಿಯನ್ನು ತಡೆಯತಕ್ಕದ್ದು ಎಂಬುದೇ ಮೊದಲನೆಯ ಅಂಶ. ಆಮೇಲೆ ನೀರಾವರಿ ಸೌಲಭ್ಯ ಹಾಗೂ ಉತ್ಪಾದನಾ ಸೌಲಭ್ಯಗಳನ್ನು ಹೆಚ್ಚಿಸತಕ್ಕದ್ದು. ಅನಂತರ ಭೂಸುಧಾರಣೆಗಳು. ಅವರು ನನ್ನ ಸ್ಮರಣ ಶಕ್ತಿಯನ್ನು ಪರೀಕ್ಷಿಸುತ್ತಿದ್ದಾರೆ. ಅನಿಸುತ್ತದೆ. ಈ 20 ಅಂಶಗಳ ಕಾರ್ಯಕ್ರಮ ಮುಖ್ಯವಾಗಿ ಬಡ ಜನರತ್ತಲೇ ತನ್ನ ದೃಷ್ಟಿಯನ್ನು ಹರಿಸಿದೆ. ಗ್ರಾಮೀಣ ಪ್ರದೇಶಗಳಲ್ಲಿರುವ ಬಡಜನರಿಗೆ ಮನೆ ಕಟ್ಟಿಸಿಕೊಳ್ಳಲಿಕ್ಕಾಗಿ ನಿವೇಶನಗಳನ್ನು ನೀಡುವುದೂ ಈ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ವಿದ್ಯಾರ್ಥಿಗಳಿಗೆ ಲೇಖನ ಸಾಮಗ್ರಿಗಳನ್ನು ಒದಗಿಸುವುದು. ಉದ್ಯೋಗಾರ್ಹತೆ ಪಡೆಯಲು ಅವಶ್ಯಕವಾದ ತರಬೇತಿ ನೀಡುವುದು, ಕೈಮಗ್ಗದ ನೇಕಾರರಿಗೆ ಪ್ರೋತ್ಸಾಹ ನೀಡುವುದು. ದುರ್ಬಲವರ್ಗಗಳವರಿಗೆ ನಿಯಂತ್ರಿತ ದರದಲ್ಲಿ ವಸ್ತುಗಳನ್ನು ಪೂರೈಸುವುದು, ನಿರ್ಗತಿಕ ವೃದ್ಧರಿಗೆ ಪಿಂಚಣಿ ಸೌಲಭ್ಯವನ್ನು ಒದಗಿಸುವುದು ------ ಇವುಗಳೆಲ್ಲ ನಿಜವಾಗಿಯೂ ಉತ್ತಮ ಯೋಜನೆಗಳೇ.

ಆದ್ದರಿಂದ ಈ ಅಂಶಗಳು ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿನ ದರಿದ್ರವರ್ಗದ ಜನರಿಗೆ ನೆರವಾಗುವ ಉದ್ದೇಶವನ್ನಷ್ಟೆ ಹೊಂದಿವೆ. ಭೂಸುಧಾರಣೆಯೊಂದನ್ನು ಬಿಟ್ಟು ಉಳಿದಂತೆ ಇತರ ಬಾಬುಗಳಿಗೆ ಇನ್ನು ಸಾಕಷ್ಟು ಆದ್ಯತೆಯನ್ನು ನೀಡಲಾಗಿಲ್ಲ ಆದ್ದರಿಂದ, 20 ಅಂಶಗಳ ಕಾರ್ಯಕ್ರಮ ಕಾಂಗ್ರೆಸ್ ಪಕ್ಷದಿಂದ ಬಂದುದಾದುದರಿಂದ, ಯಾವುದೇ ಪೂರ್ವ ಗ್ರಹವಿಲ್ಲದೆ, ಇದರತ್ತ ತಮ್ಮ ದೃಷ್ಟಿಹರಿಸಬೇಕಾಗಿ ನಾನು ವಿತ್ತ ಸಚಿವರನ್ನು ಕೋರುತ್ತೇನೆ. ಗ್ರಾಮೀಣ ಪ್ರದೇಶಗಳ ಬಡಜನರ ಸ್ಥಿತಿಗತಿಗಳ ಸುಧಾರಣೆಗಾಗಿ ಇದು ನಮ್ಮ ಹಿರಿಯರು ಕೈಗೊಳ್ಳಲು ಉದ್ದೇಶಿಸಿದ ಕಾರ್ಯಕ್ರಮ. ಈ ರಾಷ್ಟ್ರದಲ್ಲಿ ಇಬ್ಬಗೆಯ ಸಮಾಜಗಳು ಇರಬಾರದೆಂದು ಪ್ರಧಾನಮಂತ್ರಿಗಳು ಕೂಡ ಹೇಳಿದ್ದಾರೆ. ಒಂದೇ ಒಂದು ರೀತಿಯ ಸಮಾಜವಿರಬೇಕು; ಬಡವರನ್ನು ಶ್ರೀಮಂತರನ್ನು

ಒಂದನೆಯದೇ ಮುಖ್ಯ ಹಾಗೂ ಮಧ್ಯಮ ನೀರಾವರಿ ಮತ್ತು ಎರಡನೆಯದು ಭೂಮಿಯ ಒಳ (ಕೆಳ) ಮಣ್ಣು ಹಾಗೂ ಭೂಮ್ಯಂತರ್ಗತ ನೀರು. ಆದ್ದರಿಂದ ನೀರಾವರಿಯ ಹೆಚ್ಚಿಸಿದ ಉಪಯುಕ್ತತೆ (ಸೌಲಭ್ಯ) ಅಧಿಕ ಫಸಲು ನೀಡುವಂತಹ ಬಗೆಯ ಬೀಜಗಳು ಕೀಟ ನಾಶಕಗಳು, ಗೊಬ್ಬರದ ಅಧಿಕ ಬಳಕೆ-ಇವೆಲ್ಲ ಲಭ್ಯವಾಗಿರುವ ಜಮೀನಿನಲ್ಲಿಯೇ ಗರಿಷ್ಠ ಉತ್ಪಾದಿಸುವಲ್ಲಿ ರೈತರಿಗೆ ಸಹಾಯಕವಾಗಿವೆ.

ಬೇಳೆ ಕಾಳುಗಳು, ಎಣ್ಣೆ ಬೀಜಗಳು ಹಾಗೂ ಇತರ ಒಣ ಬೆಳೆಗಳಿಗೆ ಸಂಬಂಧಿಸಿದಂತೆ ಹೆಚ್ಚು ಹೆಚ್ಚು ಕಾರ್ಯಗಳನ್ನು ಕೈಗೊಳ್ಳಲಾಗಿದೆ. ಗೋಧಿ, ಭತ್ತ ಮತ್ತಿತರ ಬೆಳೆಗಳ, ವಿಶೇಷವಾಗಿ ಸಾವೆ ರಾಗಿ ಮತ್ತು ತೊಗರಿ, ಅವರೆ, ಬಟಾಣಿಯ ಮೊದಲಾದ ಬೇಳೆಕಾಳುಗಳ ಬೆಳೆಗಳ ಸಂದರ್ಭದಲ್ಲಿ ಮಾಡಿದಂತೆ, ಒಣ ಬೇಸಾಯಕ್ಕೆ ಸಂಬಂಧಪಟ್ಟಂತೆ ಸಂಶೋಧನೆ ನಡೆಸಬೇಕಾದ ಅಗತ್ಯವಿದೆ. ಬೇಳೆಕಾಳುಗಳು ಹಾಗೂ ಎಣ್ಣೆ ಬೀಜಗಳ ವಿಷಯದಲ್ಲಿ ಯಾವುದೇ ರಾಷ್ಟ್ರಕ್ಕೂ ನಮ್ಮ ದೇಶದ ಬೇಡಿಕೆಗಳನ್ನು ಪೂರೈಸುವುದು ಸಾಧ್ಯವಾಗುವುದಿಲ್ಲ ಯಾವುದೇ ರಾಷ್ಟ್ರವೂ ನಮ್ಮ ಬೇಡಿಕೆಯಷ್ಟನ್ನು ಉತ್ಪಾದಿಸದಿರುವುದೇ ಇದಕ್ಕೆ ಕಾರಣ. ಆದ್ದರಿಂದ ಅಧಿಕ ಫಸಲು ಕೊಡುವಂತಹ ವಿಧಗಳನ್ನು ಸಂಶೋಧಿಸಲು ನಾವು ಸಂಶೋಧಕರಿಗೆ ಪ್ರೋತ್ಸಾಹ ನೀಡಬೇಕು. ಒಣ ಬೇಸಾಯವನ್ನು ನಿರ್ಲಕ್ಷಿಸಲಾಗಿರುವುದರಿಂದ, ಈ ಬಗ್ಗೆ ಹೆಚ್ಚು ತಿಳುವಳಿಕೆ ಪಡೆಯಲೂ ನಾವು ಸಂಶೋಧಕರಿಗೆ ಉತ್ತೇಜನ ನೀಡಬೇಕು.

ಬೆಳವಣಿಗೆ ನಿಂತುಹೋಗಿರುವುದರಿಂದ ಔದ್ಯಮಿಕ ಚಟುವಟಿಕೆಗಳು ನಿಂತು ಹೋಗಿವೆ. ಎಂದು ಹೇಳಲಾಗಿದೆ. 1975-76ರಲ್ಲಿ ಶೇ 10 ರಷ್ಟು ಔದ್ಯಮಿಕ ಬೆಳವಣಿಗೆ ಕಂಡು ಬಂದಿತ್ತು. ಈಗ ಅದು ಶೇ. 1.6ಕ್ಕೆ ಇಳಿದಿದೆ. ಆದರೆ ಅದನ್ನು ಶೇ. 5ಕ್ಕೆ ಏರಿಸುವ ನಿರೀಕ್ಷೆಯಿದೆ. ಔದ್ಯಮಿಕ ಬೆಳವಣಿಗೆ ಕುಗ್ಗಲು ವಿದ್ಯುತ್‌ಚ್ಛಕ್ತಿಯ ಅಭಾವ ಹಾಗೂ ಔದ್ಯಮಿಕ ಅಶಾಂತಿ-ಕ್ಷೋಭೆಗಳೇ ಕಾರಣ ಔದ್ಯಮಿಕ ಜಡತ್ವಕ್ಕೂ ಇವೆರಡೇ ಕಾರಣಗಳೇ? ಇತರ ಕಾರಣಗಳೇನೂ ಇಲ್ಲವೆ? ಹಳೆಯ ಯಂತ್ರೋಪಕರಣಗಳನ್ನು ಬದಲಿಸಲಾಗಿಲ್ಲ ಆಡಳಿತವರ್ಗ ಮತ್ತು ಕಾರ್ಮಿಕ ವರ್ಗಗಳ ನಡುವೆ ಸಹಕಾರ-ಸಾಮರಸ್ಯಗಳಿಲ್ಲ, ಕಚ್ಚಾಪದಾರ್ಥಗಳ ಅಭಾವವೂ ಇದೆ. ನಮ್ಮ ದೇಶದಲ್ಲಿ ಕಂಡುಬರುವ ಔದ್ಯಮಿಕ ಜಡತೆಗೆ ಇವೆಲ್ಲ ತಮ್ಮ ತಮ್ಮ ಕೊಡುಗೆಯನ್ನು ನೀಡಿವೆ.

ಕೃಷಿ ವಿಭಾಗದಲ್ಲಿ ಅಭಿವೃದ್ಧಿಯುಂಟಾಗದ ಹೊರತು, ಹತ್ತಿ, ಗೋಣಿನಾರು, ಮುಂತಾದವುಗಳಂತಹ ಉದ್ಯಮಗಳಿಗೆ ಅಗತ್ಯವಾದಂತಹ ಕಚ್ಚಾ ಪದಾರ್ಥಗಳನ್ನು ನಾವು ಪಡೆಯಲಾರೆವು ಉದ್ಯಮಗಳಿಗೆ ಅಗತ್ಯವಾಗಿರುವ ಕಚ್ಚಾವಸ್ತುಗಳಲ್ಲಿ ಹೆಚ್ಚಿನವು ಬರುವುದು ಕೃಷಿ ಕ್ಷೇತ್ರದಿಂದಲೇ. ಆದ್ದರಿಂದ ವೇಗಗತಿಯಲ್ಲಿ ಬೆಳವಣಿಗೆಯುಂಟಾಗುವಂತೆ ಮಾಡಲು ಉದ್ಯಮಗಳಿಗೆ ಅಗ್ಗ ದರದಲ್ಲಿ ಕಚ್ಚಾ ಪದಾರ್ಥಗಳನ್ನು ಸರಬರಾಜು ಮಾಡುವುದು ಅತ್ಯಗತ್ಯ ಅದೇ ಕಾಲದಲ್ಲಿ, ವೆಚ್ಚಗಳನ್ನು ಕನಿಷ್ಠ ಗೊಳಿಸುವ ಪ್ರಯತ್ನವನ್ನು ಮಾಡಬೇಕು. ಉತ್ಪಾದನಾ ವೆಚ್ಚವನ್ನು ಕಡಿಮೆಗೊಳಿಸಬೇಕು.

ರಕ್ಷಣೆ ಸಿಗುವಂತೆ ನೋಡಿಕೊಳ್ಳತಕ್ಕದ್ದು ವ್ಯವಸ್ಥಿತ ವಿಭಾಗಕ್ಕೆ ಸೇರಿದ ಮಂದಿಗೆ ಮಾತ್ರ ಬೋನಸ್ ಮತ್ತು ತುಟ್ಟಿಭತ್ಯೆಗಳನ್ನು ಏರಿಸುವುದು ಈ ದೃಷ್ಟಿಯಿಂದ ಸಮಂಜಸವೆನಿಸಲಾರದು.

ಆದ್ದರಿಂದ, ಈ ಕ್ರಮದಿಂದ ಹಣದುಬ್ಬರವುಂಟಾಗಿ ಬೆಲೆಗಳು ಏರಿವೆ. ಆದರೂ ಮಾನ್ಯ ವಿತ್ತ ಸಚಿವರು ಹೇಳಿದಂತೆ ನಾವು, ಆಹಾರ ವಸ್ತುಗಳ ಅದರಲ್ಲಿಯೂ ಮುಖ್ಯವಾಗಿ ಅಕ್ಕಿ ಮತ್ತು ಗೋಧಿಗೆ ಸಂಬಂಧಿಸಿದಂತೆ ನಾವು ಅನುಕೂಲಕವಾದ ಪರಿಸ್ಥಿತಿಯಲ್ಲಿಯೇ ಇದ್ದೇವೆ. ಆದರೆ ಬೇಳೆಕಾಳುಗಳು ಮತ್ತು ಎಣ್ಣೆ ಬೀಜಗಳ ಸರಬರಾಜಿನಲ್ಲಿ ಕೊರತೆ ಕಂಡುಬರುತ್ತಿದೆ. ಅಲ್ಪ ಅವಧಿಗಾದರೂ, ಬೆಳೆಗಳನ್ನು ಸಾಮಾನ್ಯ ಜನರ ಕೈಗೆಟಕುವಂತೆ ಇರಿಸುವ ದೃಷ್ಟಿಯಿಂದ, ಕೆಲವು ವಸ್ತುಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳಬೇಕಾದ ಅಗತ್ಯವಿದೆ. ಆದರೆ ಮುಂದಿನ ವರ್ಷಗಳಲ್ಲಿ ಈ ಕ್ರಮ ಅಷ್ಟೇನೂ ಸಹಾಯಕವಾಗಲಾರದು. ಅಧಿಕ ಫಸಲು ನೀಡುವ ಬಗೆಯ ಅಲ್ಪಾವಧಿಯ ಬೆಳೆಗಳ ಬಗ್ಗೆ ನಾವು ಆಲೋಚಿಸಲು ಸಾಧ್ಯವೇ ಎಂದು ಕಂಡು ಕೊಳ್ಳಬೇಕಾಗಿದೆ.

ಭಾರತದಲ್ಲಿ ಕೃಷಿ ಮುಂಗಾರು ಮಳೆಯನ್ನೇ ಅವಲಂಬಿಸಿದೆ, ಸಕಾಲದಲ್ಲಿ ಸಾಕಷ್ಟು ಮಳೆ ಬೀಳುವಲ್ಲೆಲ್ಲ ರೈತ ಅದರ ಪ್ರಯೋಜನ ಪಡೆದುಕೊಳ್ಳುತ್ತಾನೆ. ವಿಜ್ಞಾನ ಹಾಗೂ ತಂತ್ರಜ್ಞಾನಗಳಲ್ಲಿ ಸಾಧಿಸಲಾದ ಮುನ್ನಡೆಯಿಂದ ಕೆಲ ಮಟ್ಟಿನವರೆಗೆ ನಾವು ಹಸಿರು ಕ್ರಾಂತಿಯನ್ನು ಸಾಧಿಸಲು ಸಮರ್ಥರಾಗಿದ್ದೇವೆ. ಸುಮಾರು 120 ಟನ್‌ಗಳಷ್ಟು ಆಹಾರ ವಸ್ತುಗಳನ್ನು ಉತ್ಪಾದಿಸಲು ನಮಗೆ ಸಾದ್ಯವಾಗಿದೆ. ಇದಕ್ಕಾಗಿ ರೈತರಿಗೆ ನಮ್ಮ ವಂದನೆ ಸಲ್ಲಬೇಕು. ಆದರೆ ಇದಕ್ಕೆ ಪ್ರತಿಯಾಗಿ ರೈತರಿಗೆ ನಾವು ನೀಡುತ್ತಿರುವುದಾದರೂ ಏನು? ಸುಗ್ಗಿಯ ಕಾಲದಲ್ಲಿ ತಾನು ಶ್ರಮಪಟ್ಟು ಬೆಳೆಸಿದುದಕ್ಕೆ ಸಮರ್ಥಕ ಪ್ರತಿಫಲ ಅವರಿಗೆ ಸಿಗುತ್ತಿಲ್ಲ. ಮದ್ಯವರ್ತಿಗಳೇ ಪ್ರಯೋಜನ ಪಡೆಯುತ್ತಾರೆ. ಹೆಚ್ಚುವರಿ ಬೆಳೆಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಸರ್ಕಾರ ಪ್ರಯತ್ನಿಸುತ್ತಿಲ್ಲ. ಈಗ ಕಬ್ಬು ಬೆಳೆಗಾರರ ಪಾಡು ಹೇಗಿದೆ ನೋಡಿ, ಈಚೆಗೆ ಉತ್ತರ ಪ್ರದೇಶದಲ್ಲಿ ಕಬ್ಬನ್ನು ಉರುವಲಾಗಿ ಬಳಸುತ್ತಿರುವುದನ್ನು ನೀವು ಕೇಳಿದ್ದೀರಿ. ತಾನು ಕಬ್ಬು ಬೆಳೆಗಾಗಿ ವೆಚ್ಚ ಮಾಡಿದ ಹಣವನ್ನು ಪುನಃ ಪಡೆಯಲು ಸಾಧ್ಯವಿಲ್ಲ ಎಂದು ರೈತನಿಗೆ ಮನವರಿಕೆಯಾಗಿರುವುದೇ ಇದಕ್ಕೆ ಕಾರಣ. ಆದ್ದರಿಂದ ಆಹಾರ ಧಾನ್ಯಗಳು, ಬೇಳೆಕಾಳುಗಳು ಹಾಗೂ ಖಾದ್ಯತೈಲಗಳೇ ಮುಂತಾದವುಗಳ ಉತ್ಪಾದನೆಗೆ ಉತ್ತೇಜನ ನೀಡಬೇಕೆಂದು ನಾವು ಬಯಸುವಾಗ, ನಾವು ಕೆಲವು ನಿಶ್ಚಿತ ಪ್ರದೇಶಗಳ ಮಿತಿ ನಿರ್ಧಾರ ಮಾಡಬೇಕಾದ ಅಗತ್ಯವಿದೆ. ಗೋಧಿ ಹಾಗೂ ಭತ್ತಗಳ ವಿಷಯದಲ್ಲಿ ನಾವು ಅಧಿಕ ಫಸಲು ಕೊಡುವ ಬಗೆಗಳನ್ನು ಕಂಡು ಕೊಂಡಿದ್ದೇವೆ. ಇವೆರಡು ಕ್ಷೇತ್ರಗಳಲ್ಲಿ ನಾವು ನಿಜವಾದ ಬೆಳವಣಿಗೆಯನ್ನು ಸಾಧಿಸಲು ಸಮರ್ಥರಾಗಿದ್ದೇವೆ.

ನೆಲದ ಮೇಲಿನ ಹಾಗೂ ಕೆಳಗಿನ ಜಲ ಸಂಪನ್ಮೂಲಗಳನ್ನು ಉತ್ಪಾದನೆಯನ್ನು ಗರಿಷ್ಠಗೊಳಿಸುವ ಉದ್ದೇಶದಿಂದ ಬಳಸಿಕೊಳ್ಳಬೇಕಾದ ಅಗತ್ಯವಿದೆ. ಇದಕ್ಕಾಗಿ ಮುಂದಿನ ಐದು ವರ್ಷಗಳಿಗಾಗಿ ನಾವೊಂದು ಕಾರ್ಯಕ್ರಮವನ್ನು ಹೊಂದಿದ್ದು, ಇದರಡಿಯಲ್ಲಿ 17 ಲಕ್ಷ ಹೆಕ್ಟೇರ್‌ಗಳಷ್ಟು ಭೂಮಿ, ನೀರಾವರಿ ಸೌಲಭ್ಯವನ್ನು ಪಡೆಯುತ್ತಿದೆ. ಇದರಲ್ಲಿ ಎರಡು ಬಾಬುಗಳಿವೆ.

ಬೆಳೆಯುತ್ತಿರುವ ಆರ್ಥಿಕತೆಯಲ್ಲಿ ಇದು ಅವಶ್ಯಕ. ಆದರೆ ಬೆಳವಣಿಗೆಗೆ ನೆರವು ನೀಡಲು ಬಜೆಟ್ ಎಷ್ಟರಮಟ್ಟಿಗೆ ಪ್ರಯತ್ನಿಸಬೇಕು? ಅನುತ್ಪಾದಕ ಬಾಬುಗಳ ಮೇಲಿನ ಆಡಳಿತ ಸಂಬಂಧಿ ವೆಚ್ಚಗಳನ್ನು ಭರಿಸುವ ಹೊಣೆಯನ್ನು ಈ ಕೊರತೆ ಹೆಚ್ಚಿದೆಯೆ? ಬಜೆಟ್ ಅನ್ನು ಮುಂದಿಡುವ ಮೊದಲು, ಕೆಲವೇ ದಿನಗಳ ಹಿಂದೆ ಎರಡು ಪ್ರಮುಖ ತೀರ್ಮಾನಗಳನ್ನು ತಾವೇ ಸ್ವತಃ ತೆಗೆದುಕೊಂಡಿರುವುದಾಗಿ ವಿತ್ತ ಸಚಿವರು ಒಪ್ಪಿಕೊಂಡಿದ್ದಾರೆ. ಒಂದನೆಯ ತೀರ್ಮಾನವು ಕಡ್ಡಾಯ ಠೇವಣಿಯನ್ನು [Compulsory Deposit] ಹಿಂದೆಗೆದುಕೊಳ್ಳುವುದಕ್ಕೆ ಹಾಗೂ 1976ನೆಯ ಜನವರಿ 1ರಿಂದ ಹೆಚ್ಚಿಸಿದ ತುಟ್ಟಿಭತ್ಯೆಯ ಮೊದಲನೆಯ ಕಂತಿನ ಪಾವತಿಗೆ ಸಂಬಂಧಿಸಿದ್ದರೆ, ಎರಡನೆಯ ತೀರ್ಮಾನವು ಕೆಲಸಗಾರರಿಗೆ ಶೇಕಡ 8.33 ರಷ್ಟು ಬೋನಸ್ ಪಾವತಿಮಾಡುವುದಕ್ಕೆ ಸಂಬಂಧಪಟ್ಟಿದೆ, ಈ ಬೋನಸ್ ಹಾಗೂ ತುಟ್ಟಿಭತ್ಯೆಯ ಹೆಚ್ಚಳದ ಬಗ್ಗೆ ಕೂಡ ನನ್ನ ಮನಸ್ಸಿನಲ್ಲಿರುವುದನ್ನು ಈ ಮಹಾ ಸಭೆಯ ಮುಂದಿಡಲು ನಾನು ಹಿಂಜರಿಯುವುದಿಲ್ಲ. ಜನರಲ್ಲಿ ಹೆಚ್ಚಿನವರ ಸ್ಥಿತಿಗತಿಗಳ ಬಗ್ಗೆ ತಾವು ಗಮನ ಹರಿಸಬೇಕು. ಅಲ್ಲದೆ ವ್ಯವಸ್ಥಿತ ವಿಭಾಗಗಳು ದೇಶದ ಒಟ್ಟು ಜನಸಂಖ್ಯೆಯ ಸುಮಾರು ಸೇ. 5. ರಷ್ಟನ್ನು ಮಾತ್ರ ಒಳಗೊಂಡಿರುತ್ತದೆ. ತಾವು ಬೋನಸ್ ಹಾಗೂ ತುಟ್ಟಿ ಭತ್ಯೆಗಳ ಬಗ್ಗೆ ಘೋಷಿಸಿದಾಗ, ಸ್ವಾಭಾವಿಕವಾಗಿಯೇ ಮಾರುಕಟ್ಟೆಯ ದರಗಳಲ್ಲಿ ಏರಿಕೆ ಉಂಟಾಗುತ್ತದೆ. ಅವರೇ ಸ್ವತಃ ಹೇಳಿದಂತೆ, ಸಗಟು ದರಗಳಲ್ಲಿ ಸ್ಥಿರತೆಯಿದ್ದಾಗ್ಯೂ, ಗ್ರಾಹಕರಿಗೆ ಮಾರಲಾಗುವ ದರಗಳಲ್ಲಿ, ಮುಖ್ಯವಾಗಿ ಎಣ್ಣೆ ಕಾಳುಗಳು, ಆಹಾರಧಾನ್ಯಗಳು ಮತ್ತು ಇತರ ಅವಶ್ಯಕ ವಸ್ತುಗಳ ದರಗಳಲ್ಲಿ ತತ್‌ಕ್ಷಣ ಏರಿಕೆಯುಂಟಾಗುತ್ತದೆ. ಯಾವುದಕ್ಕೂ ಹೇಸದ ಕೆಲವು ಜನರ ಕೈಗಳಲ್ಲಿ ಈಗಾಗಲೇ ಇರುವ ಚಂಚಲ ಹಣ. ಹಣ ದುಬ್ಬರಕ್ಕೆ ಕೊಡುಗೆ ನೀಡುತ್ತದೆ. ಈ ಹಣದುಬ್ಬರವನ್ನು ತಡೆಯುವುದು ಸಾಧ್ಯವಾಗದಿರುವುದರಿಂದ ಬೆಲೆ ಏರಿಕೆ ಉಂಟಾಗುತ್ತದೆ. ಆದ್ದರಿಂದ ದೇಶದಲ್ಲಿ, ವ್ಯವಸ್ಥಿತ ವಿಭಾಗಗಳಲ್ಲಿ ನೌಕರಿ ಹೊಂದಿರದ, ಉಳಿದ ಶೇ. 95 ರಷ್ಟು ಜನರು, ತಮ್ಮ ಯಾವುದೇ ಅಪರಾಧವೂ ಇಲ್ಲದೆ, ದಂಡರೂಪದಲ್ಲಿ ಅವಶ್ಯಕ ವಸ್ತುಗಳಿಗೆ ಅಧಿಕ ಬೆಲೆ ತೆರಬೇಕಾಗಿ ಬರುತ್ತದೆ. ಕಾರ್ಮಿಕರ ವೇತನ ಅಥವಾ ಮಜೂರಿಯನ್ನು ನಿಗಧಿಪಡಿಸುವಾಗ. ಬೆಲೆಯ ಪರಿಸ್ಥಿತಿಯನ್ನು ಪರಿಗಣಿಸಬೇಕಾಗುತ್ತದೆ. ಆದ್ದರಿಂದ ಜನತಾ ಪಕ್ಷವು ಯಾವಾಗಲೂ ಆಲೋಚಿಸುತ್ತಿರುವ ಒಂದು ನ್ಯಾಷನಲ್ ವೇಜ್ ಬೋರ್ಡ್‌ಅನ್ನು ಪ್ರಾರಂಭಿಸಬೇಕೆಂದು ನಾನು ಒತ್ತಾಯಿಸುತ್ತೇನೆ. ಹೀಗೆ ಮಾಡುವುದರಿಂದ ಕಡಿಮೆ ಹಾಗೂ ಹೆಚ್ಚು ವೇತನ ಪಡೆಯುವವರ ನಡುವಣ ಅಂತರವನ್ನು ಕನಿಷ್ಠ 1:20 ವರೆಗೆ ಕಡಿಮೆ ಮಾಡಬಹುದು. ನಮ್ಮ ರಾಷ್ಟ್ರಪತಿಗಳು ಈ ವಿಷಯದಲ್ಲಿ ತುಂಬ ತ್ಯಾಗ ಮಾಡಿದ್ದಾರೆ. ಈಗ ಮಂತ್ರಿಗಳು ಪ್ರಧಾನ ಮಂತ್ರಿಗಳು ಹಾಗೂ ಇತರ ಮಂತ್ರಿಗಳು-ರಾಷ್ಟ್ರಪತಿಗಳ ದಾರಿಯನ್ನು ಅನುಸರಿಸಬೇಕಾಗಿದೆ. ಉಳ್ಳವರು ಮತ್ತು ಇಲ್ಲದವರ ನಡುವಣ ಅಂತರವನ್ನು ತೊಡೆದುಹಾಕಲು ಇದು ಅತ್ಯಂತ ಸೂಕ್ತವಾದ ಸಮಯ. ವ್ಯವಸ್ಥಿತ ಹಾಗೂ ಅವ್ಯವಸ್ಥಿತ ಜನವಿಭಾಗಗಳನ್ನು ನಾವು ಪ್ರತ್ಯೇಕವೆಂದು ಭಾವಿಸಕೂಡದು. ಎಲ್ಲ ಜನರ ಜೀವನ ಮಟ್ಟಗಳಿಗೆ ಒಂದೇ ವಿಧದ

## ಕೇಂದ್ರದ 1978-79ರ ಆಯವ್ಯಯ ಅಂದಾಜು ಪತ್ರ*

1978-79ರ ಆಯವ್ಯಯ ಅಂದಾಜು ಪತ್ರದ ಪ್ರಸ್ತಾವನೆಗಳ ಬಗ್ಗೆ ಮಾತನಾಡಲು ನನ್ನನ್ನು ಕರೆದುದಕ್ಕಾಗಿ ನಾನು ನಿಮಗೆ ಕೃತಜ್ಞನಾಗಿದ್ದೇನೆ. ಮಾಜಿ ಹಣಕಾಸು ಸಚಿವರ ಮಾತುಗಳನ್ನು ಕೇಳಿದ ಅನಂತರ, ಈ ಪ್ರಸ್ತಾವಗಳನ್ನು ಕುರಿತಂತೆ ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ನನಗೆ ಧೈರ್ಯಬರುತ್ತಿಲ್ಲ. ಇದಕ್ಕೆ ಕಾರಣ ಹೀಗಿದೆ. ಮೊದಲನೆಯದಾಗಿ ನಾನು ಗ್ರಾಮದಿಂದ ಬಂದ ವ್ಯಕ್ತಿ- ಹಣಕಾಸಿನ ವಿಚಾರಗಳಲ್ಲಿ ನಾನು ತಜ್ಞನಲ್ಲ. ಆದರೂ ಕೆಲವು ಪ್ರಶ್ನೆಗಳನ್ನು ಎತ್ತುವ ಸಾಹಸವನ್ನು ನಾನು ಮಾಡುತ್ತೇನೆ. ಒಬ್ಬ ಗ್ರಾಮಸ್ಥನಾಗಿ ನಾನು, ನಿಮ್ಮ ಮುಖಾಂತರ ಹಾಗೂ ಸ್ವಾಮಿ ಈ ಮಹಾಸಭೆಯ ಮುಖಾಂತರ ಈ ಕೆಳಗಿನ ಪ್ರಶ್ನೆಗಳನ್ನು ವಿತ್ತ ಸಚಿವರ ಮುಂದಿರಿಸುತ್ತೇನೆ.

1) 1978-79ರ ಬಜೆಟ್ ಪ್ರಸ್ತಾವಗಳು ಬೆಲೆಗಳನ್ನು ಸ್ಥಿರಗೊಳಿಸುತ್ತವೆಯೆ? ಮತ್ತು ಹಣದುಬ್ಬರದ ಪ್ರವೃತ್ತಿಗಳನ್ನು ತಡೆಯುವಂತೆ ಇವೆಯೆ?

2) ಅವು ಔದ್ಯಮಿಕ ಜಡತ್ವವನ್ನು ಕಡಿಮೆಗೊಳಿಸುತ್ತವೆಯೆ? ಮತ್ತು ಮುಂದಿನ ಬೆಳವಣಿಗೆ ಸ್ತಿಮಿತಗೊಳ್ಳವಂತೆ ಮಾಡುತ್ತವೆಯೆ?

3) ಅವು ಬೆಳವಣಿಗೆಗೆ ಅಭಿಮುಖವಾಗಿವೆಯೆ?ಮತ್ತು ಅಧಿಕ ಸಂಖ್ಯೆಯ ನಿರುದ್ಯೋಗಿಗಳನ್ನು ಮತ್ತು ತಕ್ಕ ನೌಕರಿ ಇಲ್ಲದ ವ್ಯಕ್ತಿಗಳನ್ನು ಅವು ಒಳಗೊಂಡಿವೆಯೆ?

4) ದಾರಿದ್ರ್ಯವನ್ನು ಕಡಿಮೆಗೊಳಿಸಲು ಸಾಧ್ಯವೆ? ಅಥವಾ ಕನಿಷ್ಠ ಪಕ್ಷ "ಉಳ್ಳವರು" ಮತ್ತು "ಇಲ್ಲದವರ" ನಡುವಣ ಅಂತರವನ್ನು ಕುಗ್ಗಿಸಲು ಸಾಧ್ಯವೆ?

5) ಹೊಸದಾಗಿ ವಿಧಿಸಲಾದ ತೆರಿಗೆ ಗ್ರಾಹಕರಿಗೆ ಹೆಚ್ಚು ಹೊರೆಯಾಗುವುದಿಲ್ಲವೆ?

6) ಅಮೂಲ್ಯ ಆಭರಣಗಳ ಮಾರಾಟ ಹಾಗೂ ಚಿನ್ನದ ಆಮದುಗಳು ಬಜೆಟ್‌ನಲ್ಲಿನ ಅಂತರವನ್ನು ತುಂಬುವಷ್ಟು ಅನುಕೂಲಕರವಾಗಿದೆಯೆ?

7) ಬಜೆಟ್‌ನಲ್ಲಿ ಗೊತ್ತುಪಡಿಸಲಾದಂತಹ ಆದ್ಯತೆಗಳು ನಗರವಾಸಿಗಳು ಮತ್ತು ಗ್ರಾಮಸ್ಥರು ಇವೆರಡು ವರ್ಗಗಳವರನ್ನು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಸಮೀಪ ತರುವಂತೆ ಇವೆಯೇ?

ಸ್ವಾಮಿ, ಬಜೆಟ್‌ನಲ್ಲಿ 1,398 ಕೋಟಿ ರೂ.ಗಳ ಕೊರತೆಯನ್ನು ವಿತ್ತ ಸಚಿವರು ತೋರಿಸಿದ್ದಾರೆ. ಕೊರತೆ ಹಣಕಾಸಿನ ಪರಿಸ್ಥಿತಿಯನ್ನು ತಾವು ವಿರೋಧಿಸುವುದಕ್ಕಾಗಿ ಪ್ರಧಾನಮಂತ್ರಿಗಳು ಯಾವಾಗಲೂ ಒತ್ತಿ ಹೇಳುತ್ತಾರೆ. ನನಗಿಂತ ಮೊದಲು ಮಾತನಾಡಿದ ಮಾಜಿ ವಿತ್ತ ಸಚಿವರು ಕೊರತೆ ಹಣಕಾಸಿನ ಬಗ್ಗೆ ತಮ್ಮ ಅಧೈರ್ಯವನ್ನು ಸೂಚಿಸಿಲ್ಲ.

* ಲೋಕ ಸಭಾ ನಡವಳಿಕೆ ದಿನಾಂಕ 13ನೇ ಮಾರ್ಚ್, 1978 ಪುಟ 312-321

ಪರಿಶೀಲಿಸಬೇಕು. ಈ ಕೆಲವುಮಾತುಗಳಿಂದ ನಾನು, ಪರಿಶಿಷ್ಟಜಾತಿ-ಪರಿಶಿಷ್ಟ ಬುಡಕಟ್ಟುಗಳ ಕಮೀಶನರ್‌ರವರು ಮಾಡಿರುವ ಶಿಫಾರಸ್ಸುಗಳೆಲ್ಲವನ್ನು ಒಡನೆಯೇ ಕಾರ್ಯಗತ ಗೊಳಿಸಬೇಕೆಂದು ಮನವಿ ಮಾಡಿಕೊಳ್ಳುತ್ತಾ ಮುಗಿಸುತ್ತೇನೆ.

ಕೊನೆಯದಾಗಿ, ಪರಿಶಿಷ್ಟಜಾತಿ-ಪರಿಶಿಷ್ಟ ಬುಡಕಟ್ಟು ಕಮೀಷನರ್ ಅವರ ಹುದ್ದೆಯೂ ಈಗ ಧಾರ್ಮಿಕ ಅಲ್ಪ ಸಂಖ್ಯಾತರ ಕಮೀಷನರ್ ಹುದ್ದೆಯೂ ಸೇರಿಕೊಂಡಿದೆ. ಎರಡೂ ವರ್ಗದ ಜನರಿಗೆ ಪೂರ್ಣನ್ಯಾಯ ಸಲ್ಲುವಂತೆ ಕೆಲಸಮಾಡುವುದು ಒಬ್ಬ ವ್ಯಕ್ತಿಗೆ ತುಂಬಾ ಕಷ್ಟ. ಹಿಂದೊಂದು ದಿನ ಶ್ರೀ ಬನತ್‌ವಾಲಾ ಅವರು ಇದನ್ನು ಸ್ಪಷ್ಟವಾಗಿ ಹೇಳಿದ್ದರು. ಪರಿಶಿಷ್ಟ ಜಾತಿ ಪರಿಶಿಷ್ಟ ಬುಡಕಟ್ಟುಗಳಿಗೆಂದೇ ಪ್ರತ್ಯೇಕ ಕಮೀಷನರ್ ಇರಬೇಕು. ಕಲ್ಯಾಣ ಮತ್ತು ಸುರಕ್ಷ ಕಾರ್ಯಕ್ರಮಗಳು ಸರಿಯಾಗಿ ಕಾರ್ಯಗತವಾಗುವಂತೆ ನೋಡಕೊಳ್ಳುವ ಪೂರ್ಣ ಅಧಿಕಾರ ಅವರಿಗಿರಬೇಕು. ಈಗ ನಾನು ಮಾತು ಮುಗಿಸುತ್ತೇನೆ. ನನಗೆ ಈ ಅವಕಾಶ ಕೊಟ್ಟಿದ್ದಕ್ಕಾಗಿ ಮತ್ತೊಮ್ಮೆ ವಂದಿಸುತ್ತೇನೆ.

ಸಮಿತಿಗಳು ಇವೆ. ಈ ಸಮಿತಿಗಳಲ್ಲಿ ನಮಗೆ ಪ್ರಾತಿನಿಧ್ಯ ಇಲ್ಲದೆ ಹೋದರೆ, ನಾವು ನ್ಯಾಯ ಕೊಟ್ಟಂತಾಗುವುದಿಲ್ಲ.

335ನೆಯ ಅನುಚ್ಛೇಧದಲ್ಲಿ "ಒಂದೇ ಸಮನೆ ಆಡಳಿತದ ದಕ್ಷತೆಯನ್ನು ಪಾಲಿಸುವ ಸಲುವಾಗಿ" ಎಂಬ ಉಕ್ತಿಯಿರುವುದು ಇದಕ್ಕೆ ಅಡ್ಡಲಾಗಿದೆ. ಆಯ್ಕೆ ಸಮಿತಿಗಳಲ್ಲಿ ಶೋಧನೆ ಸಮಿತಿಗಾರರಲ್ಲಿ ಕುಳಿತಿರುವ ಅನೇಕರು, ತಮ್ಮ ಮುಂದೆ ಬರುವ ಎಲ್ಲಾ ಪ.ಜಾತಿ ಮತ್ತು ಪ.ಬುಡಕಟ್ಟುಗಳಿಗೆ ಸೇರಿದ ಅಭ್ಯರ್ಥಿಗಳೆಲ್ಲರೂ ಅಸಮರ್ಥರು, ಕೆಳಮಟ್ಟದವರು ಎಂಬ ಪೂರ್ವಕಲ್ಪನೆಯನ್ನು ಹೊಂದಿರುತ್ತಾರೆ. ಈ ಮನೋಧರ್ಮವು ಮೊದಲು ಬದಲಾಗಬೇಕು. ಈಗ ನಾನು ಕೊಡುತ್ತಿರುವ ಕಾರಣಗಳಿಗಾಗಿ ಮೇಲೆ ಹೇಳಿದ 335ನೇ ಅನುಚ್ಛೇದ 10ರ ಉಕ್ತಿಯನ್ನು ತೆಗೆದು ಹಾಕಬೇಕು. ಅನೇಕ ಸೇವಾ ವರ್ಗಗಳಲ್ಲಿ ನಮಗೆ ಪ್ರಾತಿನಿಧ್ಯವೇ ಇಲ್ಲ. ಅಲ್ಲಿ 100% ದಕ್ಷತೆ ಇದ್ದು ಬಿಟ್ಟಿದೆಯೇನು? ನನ್ನ ಮಿತ್ರರು 3% I ನೇ ವರ್ಗದಲ್ಲಿಯೂ 4.5% IIನೇ ವರ್ಗದಲ್ಲಿ 11% IIIನೇ ವರ್ಗದಲ್ಲಿ ಎಸ್.ಸಿ.ಗಳಿಗೆ ಸೇರಿವೆ ಎಂದು ಹೇಳಿದರು. ಅವರು ಮಾತ್ರವೇ ಅದಕ್ಷತೆಗೆ ಕಾರಣರಾಗಿದ್ದಾರೆಯೆ? ಈ ವರ್ಗದ ಜನರಿಗೆ ಮಾತ್ರವೇ ಏಕೆ ಅದನ್ನು ಆರೋಪಿಸಲಾಗುತ್ತದೆ? ಮೊದಲು ಈ ಮನೋಭಾವ ಬದಲಾಗಬೇಕು. ಆದ್ದರಿಂದ 335ನೆಯ ಅನುಚ್ಛೇದದಲ್ಲಿ ಮೇಲೆ ಹೇಳಿದ ಆ ಉಕ್ತಿಯನ್ನು ತೆಗೆದುಹಾಕಬೇಕು. ಏಕೆಂದರೆ ಪ.ಜಾತಿ. ಪ.ಬುಡಕಟ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅದು ಅಡ್ಡಿಯಾಗುತ್ತಿದೆ.

ಅವರಿಗೆ ಸಾಕಷ್ಟು ತರಬೇತಿ ನೀಡಿದ ನಂತರ ಸ್ಪರ್ಧಾ ಪರೀಕ್ಷೆಯನ್ನು ನಡೆಸಲು ನನ್ನ ಆಕ್ಷೇಪಣೆಯೇನೂ ಇಲ್ಲ. ಆಮೇಲೆ ಅವರನ್ನು ಬಡ್ತಿಯಿಂದ ತುಂಬಬೇಕಾದ ಹುದ್ದೆಗಳಿಗೆ ಆಯ್ಕೆ ಮಾಡಿಕೊಳ್ಳಬಹುದು.

- ರಾಜ್ಯಗಳ ಮುಖ್ಯ ಮಂತ್ರಿಗಳ ಸಮಾವೇಶದಲ್ಲಿ ಶ್ರೀ ಓಂ.ಮೆಹತಾ ಅಧ್ಯಕ್ಷತೆ ವಹಿಸಿದ್ದರು. ಅಲ್ಲಿ ಒಂದು ನಿರ್ಣಯವನ್ನು ಅಂಗೀಕರಿಸಲಾಯಿತು. ಸಾಮಾನ್ಯವಲಯದ ಸುಮಾರು 18% ಹಣವನ್ನು ಈ ವರ್ಗದ ಜನರ ವಿವಿಧ ವಲಯಗಳಲ್ಲಿನ ಏಳಿಗೆಗೆ ಮೀಸಲಾಗಿಡತಕ್ಕದ್ದು, ಈ ವರ್ಗದ ಜನರ ಪ್ರಯೋಜನಕ್ಕಾಗಿ ಅದರ ಜೊತೆಗೆ ಇನ್ನಷ್ಟು ಹಣವನ್ನು ಒದಗಿಸತಕ್ಕದ್ದು ಎಂಬುದಾಗಿ ನಿರ್ಣಯವು ಹೇಳಿತು. ಇದನ್ನು ಮಾಡದೆ ಹೋದರೆ, ಈ ವರ್ಗದ ಜನರ ಉದ್ಧಾರಕ್ಕಾಗಿ ವೆಚ್ಚ ಮಾಡುತ್ತಿರುವುದೆಲ್ಲವೂ ಸಾಗರದ ಒಂದು ಹನಿಯಂತಾಗುತ್ತದೆ ಅಷ್ಟೆ. ಆದ್ದರಿಂದ ಮುಖ್ಯಮಂತ್ರಿಗಳ ಸಮಾವೇಶದಲ್ಲಿ ಕೈಗೊಂಡ ಈ ನಿರ್ಣಯವನ್ನು ಕಾರ್ಯಗತಗೊಳಿಸಬೇಕು. ಹುದ್ದೆಗಳು ವೈವಿಧ್ಯದಲ್ಲಿ ನಾವು ಕೆಲವು ಸುರಕ್ಷತಾಕ್ರಮವನ್ನು ಕೇಳುತ್ತಿದ್ದೇವೆ. ಯಾವ ಲಾಭವೂ ದೊರಕದೆ ಹೋದ ಇನ್ನೂ ಕೆಲವು ವಲಯಗಳೂ ಇವೆ. ಅಲ್ಲಿ ಬೇರೆ ಬೇರೆ ವೃತ್ತಿಗಳಲ್ಲಿ, ಉದ್ಯಮಗಳಲ್ಲಿ, ಆಸಕ್ತರಾದ ಎಲ್ಲಾ ಜನರ ಬಗೆಗೆ ಕಾಳಜಿ ತೋರಿಸಬೇಕು. ಈ ಸುರಕ್ಷಾ ಕ್ರಮಗಳನ್ನು ಸರಿಯಾಗಿ ಕಾರ್ಯಗತಗೊಳಿಸಲಾಗಿದೆಯೇ, ಅಥವಾ ಅದನ್ನು ನೋಡಿಕೊಳ್ಳಲು ಒಂದು ಕಾವಲು ಸಮಿತಿ ನೇಮಿಸಬೇಕಾದ ಅಗತ್ಯವಿದೆಯೇ ಎಂಬುದನ್ನು

ವಿಸ್ತರಿಸಬೇಕೆಂದು ಅಪೇಕ್ಷಿಸುತ್ತೇನೆ. ಇಲ್ಲವಾದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಪರವಾಗಿ ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ನಾವು ಚುನಾಯಿತರಾಗಿ ಬರುವುದೇ ಸಾಧ್ಯವಿಲ್ಲವಾಗುತ್ತದೆ. ಇದು ಲೋಕಸಭೆಯಲ್ಲಿ ಮುಂದುವರಿಯುವುದು ಮಾತ್ರವಲ್ಲದೆ, ರಾಜ್ಯಸಭೆ, ಮತ್ತು ರಾಜ್ಯ ವಿಧಾನ ಪರಿಷತ್ತುಗಳಲ್ಲೂ ದೊರಕುವಂತಾಗಬೇಕು. ರೈಲ್ವೆ ಸೇವಾ ಆಯೋಗ, ಕೇಂದ್ರ ಸಾರ್ವಜನಿಕ ಸೇವಾ ಆಯೋಗ (UPSC), ಬ್ಯಾಂಕಿಂಗ್ ಕಮೀಷನ್, ಮೊದಲಾದ ಸ್ವಯಂ ಆಡಳಿತವುಳ್ಳ ಸಂಸ್ಥೆಗಳಲ್ಲೂ ಕಾರ್ಯಗತಗೊಳ್ಳಬೇಕು. ಪಾರ್ಲಿಮೆಂಟಿನಿಂದ ಪಂಚಾಯತ್ ವರೆಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಪರವಾಗಿ ರಾಜಕೀಯ ಮೀಸಲಾತಿ ಮುಂದುವರಿಯ ಬೇಕೆಂದು ಬಯಸುತ್ತೇನೆ. ಆದ್ದರಿಂದ ನಾವೂ ದೇಶದ ಅಭಿವೃದ್ಧಿಯ ಮುಖ್ಯ ವಾಹಿನಿಯಲ್ಲಿದ್ದೇವೆ ಎಂಬ ಭಾವನೆ ನಮಗೆ ಬರುತ್ತದೆ.

ಸೇವಾ ಭದ್ರತೆಯ ಬಗೆಗೆ ಹೇಳುವುದಾದರೆ ಪ.ಜಾತಿ ಮತ್ತು ಬುಡಕಟ್ಟು ವರ್ಗದವರಿಗೂ ನೇರ ನೇಮಕಾತಿಯಲ್ಲಿ ಮಾತ್ರ ಮೀಸಲಾತಿ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಈಚೆಗೆ ಸೇವಾ ವಯೋಮಿತಿಯಲ್ಲೂ 1ನೇ ವರ್ಗದಲ್ಲಿ ಮೀಸಲಾತಿ ಕೊಡಲಾಗಿದೆ. ಇದು ಇತರ ವರ್ಗಗಳಿಗೂ ವಿಸ್ತೃತವಾಗಬೇಕು. ಈ ವಿಚಾರದಲ್ಲಿ ನಾನು ಆಗಲೆ ಕೆಲವು ಅಂಶಗಳನ್ನು ಹೇಳಿದ್ದೇನೆ. 16(4) ಮತ್ತು 335ನೆಯ ಅನುಚ್ಛೇದಗಳ ಪ್ರಕಾರ ಮೀಸಲಾತಿ ಮಾಡಲಾಗುತ್ತದೆ. ಆದರೆ ಇದರ ಜೊತೆಗೆ ಯಾವುದೇ ಸೇವಾ ವರ್ಗದಲ್ಲಿ ಈ ವರ್ಗದ ಪ್ರಾತಿನಿಧ್ಯ ಸಾಕಷ್ಟಿಲ್ಲ ಎಂಬ ಬಾವನೆ ಬಂದರೆ ಯು.ಪಿ.ಎಸ್.ಸಿ.ಗಾಗಲಿ ರಾಜ್ಯ ಲೋಕಸೇವಾ ಆಯೋಗಗಳಿಗಾಗಲಿ ತಿಳಿಸದೆಯೇ ಬೇಕಾದರೂ ಸಾಕಷ್ಟು ನೇಮಕಾತಿಗಳನ್ನು ಮಾಡಲು 320 (2) (ಬಿ) ಅನುಚ್ಛೇದವು ಅವಕಾಶ ಕೊಡುತ್ತದೆ. ಪ.ಜಾತಿ-ಬುಡಕಟ್ಟುಗಳ ಜನರ ನೇಮಕಾತಿ ಸಂಬಂಧವಾಗಿ ನೇಮಕವಾಗದೆ ರಾಶಿಯುಳಿದಿರುವ ಬಾಕಿ ಹುದ್ದೆಗಳನ್ನು ಒಡನೆಯೆ ತುಂಬಲು ತುರ್ತು ಕ್ರಮವನ್ನು ಕೈಗೊಳ್ಳಬೇಕು. ಆದ್ದರಿಂದ ಪ್ರತಿಯೊಂದು ವರ್ಗದಲ್ಲೂ ಬರುವ ಹುದ್ದೆಗಳ ಒಟ್ಟು ಮೊತ್ತದ ಆಧಾರದಿಂದ ಮೀಸಲಾತಿಯನ್ನು ಲೆಕ್ಕ ಹಾಕಬೇಕು. ಹಾಗಾದಾಗ ಮಾತ್ರವೇ ನಮಗೆ ಸ್ವಲ್ಪಮಟ್ಟಿಗೆ ನ್ಯಾಯವು ದೊರಕಿದಂತಾಗುತ್ತದೆ. ಈಗ ಮಾಡಿರುವ ಶಿಫಾರಸ್ಸುಗಳಿಗನುಗುಣವಾಗಿ ಮೀಸಲಾತಿ ಕುರಿತ ಆದೇಶಗಳನ್ನು ಹೊರಡಿಸಲು ಮಾನ್ಯ ಸಚಿವರು ಕ್ರಮ ಕೈಗೊಳ್ಳಬೇಕೆಂದು ಕೋರುತ್ತೇನೆ. ಈ ವರ್ಗಗಳ ಪರವಾಗಿ ಮೀಸಲಾತಿಯ ಪ್ರಮಾಣವನ್ನು 15% ಮತ್ತು 7 1/2% ಹೆಚ್ಚಿಸಲು. ಸುಪ್ರಿಂ ಕೋರ್ಟಿನ ಆದೇಶದ ಪ್ರಕಾರ ಯಾವ ಅಡ್ಡಿಯೂ ಇಲ್ಲ. ಯು.ಪಿ.ಎಸ್.ಸಿಯಲ್ಲಿ ಕೆಲವು ರಾಜ್ಯಗಳ ಸೇವಾ ಆಯೋಗಗಳಲ್ಲೂ ನಮಗೆ ಸಲ್ಪಮಟ್ಟಿಗೆ ಪ್ರತಿನಿತ್ಯವಿದೆ; ಬೇರೆ ರಾಜ್ಯಗಳಲ್ಲಿ, ಅಭ್ಯರ್ಥಿಗಳನ್ನು ಶೋಧಿಸಿ ಆರಿಸುವಲ್ಲಿ ನಮಗೆ ಪ್ರಾತಿನಿಧ್ಯವಿಲ್ಲ.

ಈ ಎಲ್ಲಾ ನೀತಿ ನಿರ್ಧಾರಕ ಮತ್ತು ಆಯ್ಕೆ ಮಾಡುವ ಅಂಗಗಳಲ್ಲಿ ಸ್ವಲ್ಪಮಟ್ಟಿಗೆ ಪ್ರಾತಿನಿಧ್ಯಬೇಕು. ಕೆಲವು ರಾಜ್ಯಗಳಲ್ಲಿ IVನೇ IIIನೇ ಮತ್ತು IIನೇ ವರ್ಗಗಳನ್ನು ಲೋಕಸೇವಾ ಆಯೋಗಗಳ ವ್ಯಾಪ್ತಿಯಿಂದ ತೆಗೆಯಲಾಗಿದೆ. ಹಲವು ಆಯ್ಕೆ ಸಮಿತಿಗಳು ಮತ್ತು ನೇಮಕಾತಿ

ಬಂದಿದೆ. ಭೂಮಿಯ ಮಂಜೂರಾತಿ, ನಿವೇಶನಗಳು ಇತ್ಯಾದಿ. ವಿದ್ಯಾ ಸೌಲಭ್ಯಗಳಲ್ಲೂ ನೆರವು ನೀಡುತ್ತಿದೆ. ಪಾಲಕರ ವರಮಾನ ತಿಂಗಳಿಗೆ 750 ರೂಪಾಯಿ ಮೀರದ ಎಲ್ಲಾ ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟು ವಿದ್ಯಾರ್ಥಿಗಳಿಗೆ ಕೇಂದ್ರ ಸರಕಾರವು ಮೆಟ್ರಿಕ್ಯುಲೇಷನ್ ನಂತರದ ಸ್ಕಾಲರ್‌ಶಿಪ್ ಕೊಡುತ್ತಿದೆ.

ಇಲ್ಲೊಂದು ಕಷ್ಟವಿದೆ. ಒಬ್ಬ ಸಾಮಾನ್ಯ 3ನೇ ವರ್ಗದ ನೌಕರನಿಗೆ, ಅವನ ಎಲ್ಲ ವರಮಾನಗಳನ್ನು ಕೂಡಿಸಿದರೆ 750 ರೂಪಾಯಿ ಆಗಬಹುದು. ಆದ್ದರಿಂದ ಪಾಲಕರ ವರಮಾನ ಏನೇ ಇರಲಿ ಅದನ್ನು ಪರಿಗಣಿಸದೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟಿಗೆ ಸೇರಿದ ಎಲ್ಲ ಬಾಲಕ ಬಾಲಿಕೆಯರಿಗೆ ಮೆಟ್ರಿಕ್ಯುಲೇಷನ್ ನಂತರದ ವಿದ್ಯಾರ್ಥಿ ವೇತನವನ್ನು ನೀಡಬೇಕು. ಹಿಂದೆ ಶಿಕ್ಷಣವನ್ನು ರಾಜ್ಯ ಸರಕಾರಗಳಿಗೆ ಬಿಡಲಾಗಿತ್ತು. ಸಂಪನ್ಮೂಲದ ಅಭಾವದಿಂದಾಗಿ ರಾಜ್ಯಸರಕಾರಗಳು ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್ ಕೊಡಲು, ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ದೇಶಾದಾದ್ಯಂತ ಹಾಸ್ಟಲ್ ಸೌಲಭ್ಯ ನೀಡಲು ಸಾಧ್ಯವಾಗಿಲ್ಲ. ಈಗ ಶಿಕ್ಷಣವು ಜಂಟಿ, ಸಾಲಿಗೆ ಸೇರಿರುವ ವಿಷಯ. ಆದ್ದರಿಂದ ಯಾವುದೇ ತರಗತಿಯ್ಲಲಿ ಓದುತ್ತಿರುವ ಬಾಲಕ ಅಥವಾ ಬಾಲಿಕೆ ಒಂದಲ್ಲ ಒಂದು ಬಗೆಯ ರಿಯಾಯಿತಿಯನ್ನು ತಡೆದು ತನ್ನ ವಿಧ್ಯಾಭ್ಯಾಸವನ್ನು ಮುಂದುವರಿಸುವಂತಾಗಬೇಕು. ಮೆಟ್ರಿಕ್‌ಪೂರ್ವ ತರಗತಿಗಳಲ್ಲಿ ತುಂಬಾ ಜನ ಶಾಲೆಗಳನ್ನು ಬಿಟ್ಟುಬಿಡುತ್ತಾರೆ. ಇದನ್ನು ಗಂಭೀರವಾಗಿ ಪರಿಗಣಿಸಿ ಮಾನ್ಯ ಸಚಿವರು ಚಿಂತನೆ ನಡೆಸಬೇಕು.

ಕೆಲವು ತಾಂತ್ರಿಕ ಕೋರ್ಸುಗಳಲ್ಲಿ ಓದುತ್ತಿರುವವರಿಗೆ ತರಬೇತಿ ಪಡೆಯುತ್ತಿರುವವರಿಗೆ ಅವುಗಳ ಪ್ರಮಾಣ ಮತ್ತು ಗುಣಮಟ್ಟಗಳನ್ನು ಹೆಚ್ಚು ಪಡಿಸಬೇಕೆಂಬುದು ನನ್ನ ಅಪೇಕ್ಷೆ. ವಿವಿಧ ನೌಕರಿಗಳಿಗೆ ತಕ್ಕ ಅಭ್ಯರ್ಥಿಗಳಲ್ಲಿ ಎಂದು ನಾವು ಹೇಳುವಂತಾಗಬಾರದು. ವಿಶ್ವವಿದ್ಯಾ ನಿಲಯಗಳಲ್ಲಿ, ಕೇಂದ್ರ ವಿಶ್ವವಿದ್ಯಾನಿಲಯಗಳಲ್ಲಿ, ಕೇಂದ್ರೀಯ ಶಾಲೆಗಳಲ್ಲಿ ಮತ್ತು ಸೈನಿಕ ಶಾಲೆಗಳಲ್ಲಿ ಮೀಸಲಾತಿ ಕೊಡಲಾಗುತ್ತಿಲ್ಲ. ಈ ಮಕ್ಕಳು ಉತ್ತಮ ಮಟ್ಟದ ಶಾಲೆಗಳಿಗೆ ಹೋಗುವಂತೆ ಮಾಡದಿದ್ದರೆ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಅವರು ಸಾಮಾನ್ಯ ಅಭ್ಯರ್ಥಿಗಳೊಂದಿಗೆ ಸ್ಪರ್ಧಿಸುವುದೇ ಸಾಧ್ಯವಾಗುವುದಿಲ್ಲ. ಗಣ್ಯರಿಗೆ ತಿಳಿದಿರುವ ಎಲ್ಲಾ ಕೇಂದ್ರೀಯ ಶಾಲೆಗಳಲ್ಲಿ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ವಿದ್ಯಾರ್ಥಿಗಳಿಗೆ ಪ್ರವೇಶ ದೊರಕಬೇಕು. 340ನೆಯ ಅನುಚ್ಛೇದದ ಪ್ರಕಾರ ಲೋಕಸಭೆಯಲ್ಲಿ, ರಾಜ್ಯ ವಿಧಾನಸಭೆಗಳಲ್ಲೂ ಮೀಸಲಾತಿಗೆ ಅವಕಾಶವಿದೆ. ಆದರೆ ರಾಜ್ಯ ಸಭೆಯಲಾಗಲ್ಲಿ, ರಾಜ್ಯಗಳ ವಿಧಾನ ಪರಿಷತ್ತು ಗಳಲ್ಲಾಗಲಿ ಇಲ್ಲ. ಹಾಗೆಯೇ ಕೆಲವು ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಸೌಲಭ್ಯವು 1980ಕ್ಕೆ ಮುಗಿಯುತ್ತದೆ. ಇನ್ನೊಂದು ಪಕ್ಷದ ಸದಸ್ಯರು ಈ ಬಗೆಗೆ ಏನೂ ಮಾಡಿಲ್ಲವೆಂದು ಹೇಳಿದರು. ನಾನದನ್ನು ಒಪ್ಪುವುದಿಲ್ಲ; ಅನೇಕ ಸುಧಾರಣೆಗಳನ್ನು ಮಾಡಲಾಗಿದೆ. ಆದರೂ ಅವರು ಇತರರ ಮಟ್ಟಕ್ಕೆ ಬರುವಂತೆ ಮಾಡಲು ಇನ್ನೂ ಬಹಳ ದೂರ ಹೋಗಬೇಕಾಗಿದೆ. ಆದ್ದರಿಂದ ಪ. ಜಾತಿಗಳ ಪರವಾದ ಮೀಸಲಾತಿಯನ್ನು ಕೊನೆಯಪಕ್ಷ ಇಪ್ಪತ್ತನೆಯ ಶತಮಾನದ ಕೊನೆಯ ವರೆಗೂ

ಗಮನಕ್ಕೆ ಬಂದಿದೆ. ಪರಿಸ್ಥಿತಿ ಇಲ್ಲೇ ಹೀಗಿರುತ್ತಾ, ಹಬ್ಬಗಳಲ್ಲಿ ಹೇಗಿರಬಹುದೆಂಬುದನ್ನು ನೀವೇ ಊಹಿಸಿಕೊಳ್ಳಬಹುದು. ಈ ವಿಷಯ ಇಷ್ಟಕ್ಕೆ ಬಿಡುತ್ತೇನೆ.

ಈಗ ಇನ್ನೊಂದು ವಿಷಯಕ್ಕೆ ಬರುತ್ತೇನೆ. ಅದು ಹರಿಜನರು ಮತ್ತು ಆದಿವಾಸಿಗಳ ಮೇಲೆ ನಡೆದಿರುವ ದೌರ್ಜನ್ಯಗಳು. ಅಸ್ಪ್ರಶ್ಯರು ತಮಗಾಗುತ್ತಿರುವ ಅನ್ಯಾಯಗಳನ್ನು ಪ್ರತಿಭಟಿಸುತ್ತಾರೆ ಎಂಬುದಕ್ಕಾಗಿ ಅವರ ಮೇಲೆ ದೌರ್ಜನ್ಯವೆಸಗಲಾಗುತ್ತಿದೆ. ಜೀತಗಾರಿಕೆಯನ್ನು ನಿಷೇಧಿಸಲಾಗಿದೆ. ಅದಕ್ಕೆ ಮುಂಚೆ ಜೀತದ ಮೂಲಕ ಅವರನ್ನು ಶೋಧಿಸಲಾಗುತ್ತಿತ್ತು. ಬಾಡಿಗೆ ರೈತರ ಪರಿಸ್ಥಿತಿ ನೋಡಿ, ಜಮೀನುದಾರರು ಅವರಿಂದ ಬಿಡಿಸಲು ಹೊರಡುತ್ತಾರೆ, ಅವರು ಪ್ರತಿಭಟಿಸುತ್ತಾರೆ. ಘರ್ಷಣೆ ಪ್ರಾರಂಭವಾಗುತ್ತದೆ. ನಾಲ್ಕನೆಯದಾಗಿ, ಅವರು ಹರಿಜನ ಮಹಿಳೆಯರ ಮೇಲೆ ಅತ್ಯಾಚಾರ ಮಾಡಲು ಹೋದಾಗ ನಮ್ಮ ಜನರು ಅದನ್ನು ಪ್ರತಿಭಟಿಸಿದರೆ, ಘರ್ಷಣೆ ಪ್ರಾರಂಭ. ಹಾಸ್ಟಲುಗಳಲ್ಲಿರುವ ವಿದ್ಯಾರ್ಥಿಗಳು ಮತ್ತು ಇತರರೊಂದಿಗೆ ವಾಸಮಾಡುವ ನೌಕರರ ಕತೆಯೂ ಇದೆಯೇ. ಯಾವುದೇ ಅನ್ಯಾಯವನ್ನು ಅವರು ಪ್ರತಿಭಟಿಸಿದರೆ ಒಡನೆಯೇ ಅವರ ಮೇಲೆ ಅತಿಕ್ರೂರ ದೌರ್ಜನ್ಯಗಳು ನಡೆಯುತ್ತವೆ. ಹರಿಜನರು ಕುಡಿಯುವ ನೀರು ತರಲು ತೆರೆದ ಬಾವಿಗಳಿಗೋ, ಕೊಳಗಳಿಗೂ ಹೋದರೆ ಅವರನ್ನು ತಿರಸ್ಕಾರದಿಂದ ಕಾಣಲಾಗುತ್ತದೆ. ಅವರ ಮೇಲೆ ದೌರ್ಜನ್ಯವೆಸಗಲಾಗುತ್ತದೆ. ಹರಿಜನರು ನಿಜವಾಗಿ ತಪ್ಪನ್ನೇ ಮಾಡಿದ್ದರೆ, ಕಾನೂನಿನ ಪ್ರಕಾರ ಅವರ ಮೇಲೆ ಕ್ರಮಗಳನ್ನು ಕೈಗೊಳ್ಳುವುದಕ್ಕೆ ಬದಲಾಗಿ, ಸವರ್ಣಿಯ ಹಿಂದುಗಳು ಕಾನೂನನ್ನು ತಮ್ಮ ಕೈಗೆತ್ತಿಕೊಂಡು, ಬಂದೂಕುಧಾರಿಗಳು ಅವರನ್ನು ಕಂಡಲ್ಲಿ ಗುಂಡು ಹಾರಿಸಲು ಪ್ರೋತ್ಸಾಹಿಸುತ್ತಾರೆ. ಸರಕಾರವು ಈ ವಿಷಯದಲ್ಲಿ ಲಕ್ಷ್ಯ ಕೊಟ್ಟಿಲ್ಲ. ಅವರು ಯಾವುದೇ ನಿರ್ಭಂದವಿಲ್ಲದೆ ತಿರುಗುತ್ತಾರೆ ಇದು ಪರಿಸ್ಥಿತಿ. ಭಾರತದ ಗೃಹಸಚಿವರು ಈ ಜನರಿಗಾಗಿ ವಿಶೇಷವಾದ ಆಸಕ್ತಿಯನ್ನು ಸಹಾನುಭೂತಿಯನ್ನು ತೋರಿಸಬೇಕು. ಅವರ ಜೀವ, ಅವರ ಆಸ್ತಿ, ಅವರ ಮಾನವೀಯ ಗೌರವಗಳನ್ನು ಕಾಪಾಡುವಂತೆ ಕ್ರಮ ಕೈಗೊಳ್ಳಬೇಕು. ಈ ಉದ್ದೇಶದಿಂದ ನಾನು ಇಷ್ಟು ಹೇಳುತ್ತಿದ್ದೇನೆಯೇ ಹೊರತು ಮಾನ್ಯ ಗೃಹಸಚಿವರ ವ್ಯಕ್ತಿತ್ವವನ್ನು ಕೆಡಿಸಬೇಕೆಂಬ ಉದ್ದೇಶದಿಂದ ಖಂಡಿತ ಅಲ್ಲ. ಈ ಉದ್ದೇಶದಿಂದ ಮಾತ್ರವೇ ಹರಿಜನರ ಮೇಲೆ ನಡೆದ ಬೆಲ್ಚಿ ದೌರ್ಜನ್ಯಗಳನ್ನು ಕುರಿತು ನಾನು ಹಕ್ಕು ಸೂಚನೆಯನ್ನು ಮಂಡಿಸಬೇಕಾಯಿತು.

ಈ ಬಗೆಯ ದೌರ್ಜನ್ಯಗಳು ಸಂಭವಿಸಿದಾಗಲೆಲ್ಲಾ ಒಂದು ವಿಶೇಷ ತನಿಖಾ ತಂಡವಿರಬೇಕು. ಅಂದರೆ, ಸೆಂಟ್ರಲ್ ಬ್ಯೂರೋ ಆಫ್ ಇನ್‌ವೆಸ್ಟಿಗೇಷನ್‌ನಿಂದ ಬಂದ ಕೆಲವರ ತಂಡ ಕಾರ್ಯೋನ್ಮುಖವಾಗಿ ರಾಜ್ಯದ ಎಲ್ಲಾ ಕಡೆಗಳಿಂದ ಮಾಹಿತಿಯನ್ನು ತರಿಸಿಕೊಂಡು, ಅದರ ಕ್ರಮಗಳನ್ನು ಕೈಗೊಳ್ಳುವಂತಾಗಬೇಕು. ಆಗಮಾತ್ರವೇ ಹರಿಜನರು ಮತ್ತು ಆದಿವಾಸಿಗಳು ಪ್ರಸ್ತುತ ಸರಕಾರದಲ್ಲಿ ತಾವು ಸುರಕ್ಷಿತರು ಎಂಬ ಭಾವನೆಯನ್ನು ಪಡೆಯುತ್ತಾರೆ.

ಆರ್ಥಿಕ ಮುನ್ನಡೆಯ ವಿಷಯಕ್ಕೆ ಬಂದರೆ, ಕಳೆದ ಮೂವತ್ತು ವರ್ಷಗಳಿಂದ ಸರಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ಜನರಿಗೆ ಕೆಲವು ಆರ್ಥಿಕ ನೆರವು ನೀಡುತ್ತಾ

ಬಹಳ ಹಿಂದಿನಿಂದಲೂ ಸುಧಾರಕರು ಈ ಜನರನ್ನು ಸಮಾಜದ ಇತರ ವರ್ಗಗಳ ಮಟ್ಟಕ್ಕೆ ತಂದು ಅವರನ್ನು ಮಾನವ ಜೀವಿಗಳಂತೆ ವ್ಯವಹರಿಸಲು ಪ್ರಯತ್ನಿಸಿದ್ದಾರೆ. ಆದರೆ ಸುಧಾರಕರಲ್ಲಿ ಬಹು ಜನರು ವಿಫಲರಾಗಿದ್ದಾರೆ. ಗಾಂಧೀಜಿಯವರೂ ಸೋತರು. ಮಹಾನ್ ಸುಧಾರಕರನ್ನು ನೋಡಿದರೆ, ಅವರು ಈ ಕಳಂಕವನ್ನು ತೊಡೆದು ಹಾಕಲು ತಮ್ಮ ಶಕ್ತಿ ಮೀರಿ ಶ್ರಮಿಸಿದುದನ್ನು ನೋಡುತ್ತೇವೆ. ಆದರೆ ಅವರ ಜೀವಿತಗಳೇ ಮುಗಿದು ಹೋದವು. ಹಾಗೆಯೇ ಶ್ರೀಮತಿ ಇಂದಿರಾಗಾಂಧಿಯವರೂ ಹಿಂದೂ ಸಮಾಜಕ್ಕೆ ಅಂಟಿದ ಈ ಕಳಂಕವನ್ನು ಹೋಗಲಾಡಿಸಲು ತುಂಬಾ ಶ್ರಮಿಸಿದರು. ಅಸ್ಪೃಶ್ಯತಾ ಶಾಸನಕ್ಕೆ ಅನೇಕ ತಿದ್ದುಪಡಿಗಳು ಅಂಗೀಕಾರವಾಗುವಂತೆ ನೋಡಿಕೊಂಡರು. ಆದರೆ ಅದನ್ನು ಕಾರ್ಯಗತಗೊಳಿಸುವುದು ಸರಕಾರದ ಯಂತ್ರವನ್ನು ಸ್ವಲ್ಪ ಮಟ್ಟಿಗೆ ಅವಲಂಬಿಸಿದೆ ಒಟ್ಟಾರೆ ಸಮಾಜವನ್ನು ಅವಲಂಬಿಸದೆ. ಮೇಲು ಜಾತಿ ಹಿಂದೂ ಪುರೋಹಿತ ವರ್ಗಗಳು ತಮ್ಮನ್ನು ಮೇಲ್ಮಟ್ಟದವರೆಂದು ಭಾವಿಸುತ್ತಾರೆ. ಅವರೆಲ್ಲರೂ ಅರ್ಥಮಾಡಿಕೊಳ್ಳಬೇಕು. ಸಮಾಜದ ಯಾವುದೇ ಒಂದು ವರ್ಗವು ಹಿಂದುಳಿದರೆ ಅಷ್ಟು ಮಟ್ಟಿಗೆ ದೇಶವೇ ಹಿಂದುಳಿದ ಹಾಗೆ ಆದ್ದರಿಂದ ಸಾಧ್ಯವಾದಷ್ಟು ಬೇಗ ಈ ಕಳಂಕ ತೊಡೆದು ಹೋಗುವಂತೆ ನೋಡಿಕೊಳ್ಳಬೇಕಾದುದು ಅವರ ಕರ್ತವ್ಯ.

ಈ ವಿಚಾರವನ್ನು ನಾನು, ಅಸ್ಪೃಶ್ಯರ ವರ್ಗಕ್ಕೆ ಸೇರದ, ಜನತೆಯ ಮಿಕ್ಕ ಮಿಕ್ಕ ಭಾಗಕ್ಕೆ ಬಿಟ್ಟುಬಿಡುತ್ತೇನೆ. ಅಸ್ಪೃಶ್ಯತೆಯು ಗ್ರಾಮಾಂತರ ಪ್ರದೇಶಗಳಲ್ಲಿ ಅಧಿಕವಾಗಿದ್ದರೆ ಅದಕ್ಕೆ ಕಾರಣ ಅವರ ಅಜ್ಞಾನ ಮತ್ತು ಯುಗಾಂತರಗಳಿಂದ ಬಂದ ಸಂಪ್ರದಾಯ ಮತ್ತು ರೂಢಿಗಳು. ಅವರಲ್ಲಿ ಯಾವ ಕೆಟ್ಟ ಉದ್ದೇಶವೂ ಇರುವುದಿಲ್ಲ. ಎಂದು ಹೇಳ ಬಯಸುತ್ತೇನೆ. ಆದರ ಪರಿಣಾಮವೇನೆಂಬುದರ ಬಗೆಗೆ ಅವರು ನಿಜವಾಗಿ ಅರ್ಥಮಾಡಿಕೊಂಡಿಲ್ಲ. ವಿದ್ಯಾವಂತ ವರ್ಗದವರಾದರು. ಈ ಕೆಟ್ಟ ಆಚರಣೆಯಲ್ಲಿ ತೊಡಗಬಾರದು ಎಂಬ ಸಂಗತಿಯೇನೋ ಉಳಿದೇ ಉಳಿಯುತ್ತದೆ. ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ವಿದ್ಯಾವಂತ ಜನರು ಮತ್ತು ಅಧಿಕಾರಿಗಳು ಜಾತ ಪದ್ಧತಿಯ ತೀಕ್ಷ್ಣತೆಯ ಒತ್ತಡವನ್ನು ಅನುಭವಿಸುತ್ತಿದ್ದಾರೆ.

ಆದ್ದರಿಂದ ಸರ್ಕಾರಿ ಕಚೇರಿಗಳಲ್ಲಿ ಯಾರಾದರೂ ಅಧಿಕಾರಿಯು ಈ ಜನರನ್ನು ಅಸ್ಪೃಶ್ಯರಂತೆ ನೋಡಿಕೊಂಡರೆ, ಅವರನ್ನು ತಿರಸ್ಕರಿಸಿದರೆ, ಅದರ ವಿಚಾರಣೆ ನಡೆಸಿ, ಸಂಬಂಧಿತ ಅಧಿಕಾರಿಗೆ ಶಿಕ್ಷೆ ವಿಧಿಸುವ ಏರ್ಪಾಡು ಮಾಡಬೇಕೆಂದು ಕೋರುತ್ತೇನೆ. ಗೃಹಮಂಡಳಿ ಯಾಗಲಿ, ಟ್ರಸ್ಟ್ ಆಗಲಿ ದೆಹಲಿ ಮುನಿಸಿಪಲ್ ಕಾರ್ಪೊರೇಷನ್ ಆಗಲಿ ಸರಕಾರಿ ನೌಕರರಿಗೆ ಸರಕಾರಿ ವಸತಿ ಸೌಲಭ್ಯಗಳನ್ನು ಮಂಜೂರು ಮಾಡುವಾಗ, ಕೆಲವು ಮನೆಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟಬುಡಕಟ್ಟು ಜನರಿಗೆಂದು ಮೀಸಲಿಡಲಾಗುತ್ತದೆ. ಅವರಿಗೆ ಮನೆ ಪಡೆಯಲು ತೊಂದರೆ ಯಾಗಬಾರದೆನ್ನುವುದು ಉದ್ದೇಶ. ಮನೆಗಳ ನಿರ್ದಿಷ್ಟ ಪರಿಮಾಣವನ್ನು ಅವರಿಗಾಗಿ ಕಾದಿರಿಸಬೇಕು. ಕೇಂದ್ರ ಸೆಕ್ರೇಟೇರಿಯೆಟ್‌ನಲ್ಲಿ ಕುಡಿಯುವ ನೀರನ್ನು ಇರಿಸಿರುವ ಪಾತ್ರೆಯಿಂದ ನಾಲ್ಕನೆ ದರ್ಜೆ ನೌಕರರು ನೀರು ತೆಗೆದು ಕೊಳ್ಳುವುದಕ್ಕೂ ಅವಕಾಶಕೊಡುತ್ತಿಲ್ಲ ಎಂಬುದು

## ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಸೇವಾ ಸಂರಕ್ಷಣೆ ಕುರಿತು ಮಂಡಿಸಿದ ವಿಚಾರಗಳು *

ಶ್ರೀ ಬಿ. ರಾಚಯ್ಯ (ಚಾಮರಾಜನಗರ):- ನಿಲುವಳಿ ಸೂಚನೆಯ ಮೇಲೆ ಮಾತನಾಡಲು ಅವಕಾಶ ಕೊಟ್ಟಿದ್ದಕ್ಕಾಗಿ ತಮಗೆ ಅಭಾರಿಯಾಗಿದ್ದೇನೆ. ಅದು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಸೇವಾ ಸಂರಕ್ಷಣೆಗಳನ್ನು ಕುರಿತು ನಮ್ಮ ಅಬಿಪ್ರಾಯಗಳನ್ನು ವ್ಯಕ್ತಪಡಿಸಲು ಒಂದು ಅವಕಾಶವನ್ನು ಕೊಡುತ್ತವೆ......

- 1971 ರಿಂದ 1974ರವರೆಗಿನ ವರ್ಷಗಳ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಕಮೀಶನರ್ ಅವರ ವರದಿಯನ್ನು ಕುರಿತೂ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲು ತಾವು ಅವಕಾಶ ನೀಡಿದ್ದೀರಿ.

ಉಭಯ ಪಕ್ಷಗಳ ಸದಸ್ಯರು ವರದಿಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ನಾಲ್ಕು ಅಥವಾ ಐದು ಅಂಶಗಳನ್ನು ಎಲ್ಲರೂ ಒತ್ತಿ ಹೇಳಿದ್ದಾರೆ. ನನ್ನ ದೃಷ್ಟಿಯಲ್ಲಿ ಅವು ಸ್ಥೂಲವಾಗಿ ಈ ವರ್ಗಗಳಿಗೆ ಸೇರುತ್ತವೆ.

1. ಹರಿಜನರು ಮತ್ತು ಆದಿವಾಸಿಗಳ ಮೇಲೆ ನಡೆಯುವ ದೌರ್ಜನ್ಯಗಳು
2. ಆರ್ಥಿಕವಾಗಿ ಅವರ ಮೇಲೇರಿಕೆ ಮತ್ತು ರಕ್ಷಣೆ.
3. ಶೈಕ್ಷಣಿಕವಾದ ಹಿತರಕ್ಷಣೆ.
4. ಚುನಾಯಿತ ಅಂಗಗಳ ವಲಯಗಳಲ್ಲಿ ರಾಜಕೀಯ ಮೀಸಲಾತಿ
5. ಸೇವೆಗಳಲ್ಲಿ ಮೀಸಲಾತಿ.

ಮಾನ್ಯರೇ, ಅಸ್ಪೃಶ್ಯತೆಯ ನಿರ್ಮೂಲನವನ್ನು ಕುರಿತು ಮಾತನಾಡಲು ಬಯಸುತ್ತೇನೆ. ನಾವು ಈ ಹೊಣೆಯನ್ನು ಹೊತ್ತು ಕೊಳ್ಳಲೇಬೇಕಾಗಿದೆ. ಹಿಂದೂ ಸಮಾಜ ದೇಶಕ್ಕೆ ನುಸುಳಿರುವ, ಹಿಂದೂ ಸಮಾಜಕ್ಕೆ ಅಂಟಿದ ಕಳಂಕವಾಗಿರುವ ಅಸ್ಪೃಶ್ಯತೆಯನ್ನು ಕುರಿತು ನಮ್ಮ ಹಿರಿಯ ನಾಯಕರು ಹೇಳಿದುದು ನನಗೆ ನೆನಪಿನಲ್ಲಿದೆ. ಈ ಕಳಂಕವನ್ನು ಎಷ್ಟು ಬೇಗ ತೊಡೆದು ಹಾಕುತ್ತೇವೆಯೋ ದೇಶಕ್ಕೆ ಅಷ್ಟು ಉತ್ತಮ.

ಮಾನ್ಯರೆ, ಸಂವಿಧಾನದ 17ನೇ ಅನುಚ್ಛೇದದ ಪ್ರಕಾರ ಅಸ್ಪ್ರುಶ್ಯತೆಯನ್ನು ರದ್ದು ಪಡಿಸಲಾಗಿದೆ. ಅದನ್ನು ಉಲ್ಲಂಘಿಸುವುದು ಶಿಕ್ಷಾರ್ಹ ಅಪರಾಧವಾಗುತ್ತದೆ. ಈ ಶಾಸನಕ್ಕೆ 1976ರಲ್ಲಿ ತಿದ್ದುಪಡಿ ಮಾಡಲಾಗಿದೆ. ಈ ಶಾಸನದ ಅವಕಾಶಗಳ ಪ್ರಕಾರ ಅಸ್ಪ್ರುಶ್ಯತೆಯ ಅಪರಾಧಗಳು, ದಂಡ ಶುಲ್ಕವನ್ನು ಕೊಟ್ಟು ಶಿಕ್ಷೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದವು; ಅಸ್ಪ್ರಶ್ಯತಾ ಶಾಸನದ ಅವಕಾಶಗಳ ಉಲ್ಲಂಘನೆಗೆ ಅತ್ಯಂತ ಉಗ್ರವಾದ ಕಠಿಣ ಸಭೆಯನ್ನು ವಿಧಿಸಲಾಗುತ್ತದೆ.

---

* ಲೋಕ ಸಭಾ ನಡವಳಿಕೆ ದಿನಾಂಕ 6ನೇ ಆಗಸ್ಟ್, 1977 ಪುಟ 41-46. (ನಿಲುವಳಿ ಸೂಚನೆ)

ತಿಳಿದಿರುವ ಮನೋಧರ್ಮವನ್ನು ಬದಲಾಯಿಸಿಕೊಳ್ಳಬೇಕು. ಇಂದು ನಾವು ಕೊಡುತ್ತಿರುವ ಶಿಕ್ಷಣ ನಮ್ಮ ದೇಶದ ಸಮಸ್ಯೆಗಳನ್ನು ಪರಿಹರಿಸಲು ಸಹಾಯಕವಾಗಿಲ್ಲ ಎಂಬುದು ನನ್ನ ಭಾವನೆ.

ಮತ್ತೊಮ್ಮೆ ನಾನು ಈ ವರದಿಯನ್ನು ಮಂಡಿಸಿದ್ದಕ್ಕಾಗಿ ಮಾನ್ಯ ಸಚಿವರನ್ನು ವಂದಿಸುತ್ತೇನೆ. ಸಮರ್ಥ ವಿದ್ವಾಂಸರೂ, ಶೈಕ್ಷಣಿಕ ವ್ಯಕ್ತಿಯೂ ಆಗಿರುವ ಅವರು ವಿಶ್ವವಿದ್ಯಾನಿಲಯಗಳಲ್ಲಿ ನಮ್ಮ ವಿದ್ಯಾರ್ಥಿಗಳು ಅನುಭವಿಸುತ್ತಿರುವ ಕಷ್ಟಗಳನ್ನು ತಿಳಿದು ಕೊಳ್ಳುತ್ತಾರೆ ಎಂದು ನಾನು ಭಾವಿಸುತ್ತೇನೆ. ಪರೀಕ್ಷೆಯ ಏಕರೂಪ ಪದ್ಧತಿ, ಏಕರೂಪ ಶಿಕ್ಷಣದ ಸಮಾನ ಪ್ರಮಾಣಕ ವಿನ್ಯಾಸ ಮತ್ತು ಅನುಪಾಲನೆಗಳಿರುವಂತೆ ಮೊದಲು ಅವರು ಪ್ರಯತ್ನಿಸಬೇಕು. ಈ ವಿದ್ಯಾರ್ಥಿಗಳಿಗೆ ಹೆಚ್ಚಿನ ಊಟ-ವಸತಿ ಸೌಲಭ್ಯಗಳು ದೊರಕುವಂತೆ ಅವರು ಮಾಡಬೇಕು. ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ವಿದ್ಯಾರ್ಥಿಗಳ ಹಿತವನ್ನು ಕಾಪಾಡಬೇಕಾಗಿದೆ. ಈ ಮಾತುಗಳೊಂದಿಗೆ ನನ್ನ ಭಾಷಣವನ್ನು ಮುಗಿಸುತ್ತೇನೆ.

3. 15 ವಿಶ್ವವಿದ್ಯಾನಿಲಯಗಳು ಪ.ಜಾತಿ, ಪ.ಬುಡಕಟ್ಟುಗಳ ವಿದ್ಯಾರ್ಥಿಗಳಿಗಾಗಿ ಸೀಟುಗಳ ಮೀಸಲಾತಿಗೆ ಅವಕಾಶ ಮಾಡಿಲ್ಲ. ಆದರೆ ಈ ವರ್ಗದ ವಿದ್ಯಾರ್ಥಿಗಳು ವಿವಿಧ ಪಠ್ಯ ಕ್ರಮಗಳಿಗೆ ಪ್ರವೇಶ ಪಡೆಯುವುದರಲ್ಲಿ ಯಾವ ಕಷ್ಟವನ್ನು ವ್ಯಕ್ತಪಡಿಸಿಲ್ಲ ಎಂದು ಸೂಚಿಸಿವೆ.

ಸಂಖ್ಯೆಗಳನ್ನು ಕೊಡದೆ ಅವರು ಈ ನಿರ್ಣಯಕ್ಕೆ ಬಂದಿದ್ದರೆ ಅವರು ಪರಿಶಿಷ್ಟ ಜಾತಿ ಮತ್ತು ಪ. ಬುಡಕಟ್ಟು ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲು ಸಾಕಷ್ಟು ಅವಕಾಶ ಮಾಡಿಕೊಂಡಿದ್ದಾರೆ ಎಂದು ನಾವು ನಂಬುವುದು ಹೇಗೆ? ಆದ್ದರಿಂದ ಒಂದು ಸೆಲ್ ರಚಿಸಿ, ಸರಕಾರ ನೀಡಿದ ಮಾರ್ಗದರ್ಶಕ ಸೂತ್ರಗಳನ್ನು ಅನುಸರಿಸಿದ್ದಾರೆಯೇ ಎಂದು ನೋಡಲು ಒಂದು ಸರ್ವೆ ನಡೆಸಲು ಏರ್ಪಾಡು ಮಡಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ.

ಇನ್ನೊಂದು ವಿಚಾರ ದೇಶಾದ್ಯಂತ ಕಂಡುಬರುತ್ತಿರುವ ವಿದ್ಯಾರ್ಥಿ ಅಶಾಂತಿಗೆ ಸಂಬಂಧಪಟ್ಟಿದ್ದು, 1974-75ರಲ್ಲಿ ತುರ್ತು ಪರಿಸ್ಥಿತಿಯಿದ್ದರಿಂದ ಅಷ್ಟೊಂದು ತೊಂದರೆಯಿರಲಿಲ್ಲ.

ವಿದ್ಯಾರ್ಥಿನಿಲಯಗಳಲ್ಲಿ ಶೇ. 50 ಭಾಗ ಅಂದವರು ಪರೀಕ್ಷೆಗಳನ್ನು ಸಕಾಲಕ್ಕೆ ನಡೆಸಲಿಲ್ಲ. ವಿಶ್ವವಿದ್ಯಾನಿಲಯಗಳಲ್ಲಿ ಸೃಷ್ಟಿಯಾಗಿರುವ ವಾತಾವರಣದೊಂದಿಗೆ ನಾವು ಯಾವುದಾದರೂ ಬಗೆಯಲ್ಲಿ ಸಂಬಂಧ ಪಟ್ಟಿರಬೇಕು. ಈಗ ಪರೀಕ್ಷೆಗಳನ್ನು ಎದುರಿಸುತ್ತಿರುವ ಬಹುತೇಕ ವಿದ್ಯಾರ್ಥಿಗಳು, ಶೈಕ್ಷಣಿಕ ವರ್ಷದ ಕೊನೆಗೆ ಪರೀಕ್ಷೆಗಳು ನಡೆಯುತ್ತಿರುವುದರಿಂದ, ಅಸಮಾಧಾನಗೊಂಡಿದ್ದಾರೆ.

ಪರೀಕ್ಷಾ ಪದ್ಧತಿಯಲ್ಲೇ ಸ್ವಲ್ಪ ಬದಲಾವಣೆಯಾಗಬೇಕು. ನಮ್ಮ ದೈನಂದಿನ ಜೀವನದೊಂದಿಗೆ ಅದಕ್ಕೆ ಸಂಬಂಧವಿರಬೇಕು. ಈಗ ಪರೀಕ್ಷೆಗಳು ಹಾಗೆ ಸಂಬಂಧ ಹೊಂದಿಲ್ಲ; ಅವು ವಿದ್ಯಾರ್ಥಿಗಳನ್ನು ಮೇಜು ಮುಂದಿನ ಕೆಲಸಕ್ಕೆ ಸಜ್ಜುಗೊಳಿಸುತ್ತಿವೆ. ನಿರುದ್ಯೋಗ ಸಮಸ್ಯೆ ಬೆಳೆದಿರುವುದು ಆದ್ದರಿಂದಲೇ. ಅದು ದಿನ ದಿನಕ್ಕೂ ಏರುತ್ತಲೇ ಇದೆ. ಆದ್ದರಿಂದ ನಾವು ಶಿಕ್ಷಣವನ್ನು ಕಸುಬು ಕೇಂದ್ರಿತವನ್ನಾಗಿಸಲು ವಾಣಿಜ್ಯೀ ಕರಿಸಲು ಗಮನ ಕೊಡಬೇಕು.

ಹಾಸ್ಟೆಲ್ ಸೌಲಭ್ಯಗಳನ್ನು ಕುರಿತು ಹೇಳುವುದಾದರೆ, ದೇಶಾದ್ಯಂತ ವಿದ್ಯಾರ್ಥಿಗಳಿಗೆ ಊಟ-ವಸತಿ ಪಡೆಯುವುದರಲ್ಲಿ ತುಂಬಾ ಕಷ್ಟವಾಗಿದೆ. ವಿದ್ಯಾರ್ಥಿ ಕೇಂದ್ರಗಳೂ ಹೆಚ್ಚಾಗಿಲ್ಲ. ಆದ್ದರಿಂದ ಹಾಸ್ಟೆಲುಗಳ ನಿರ್ಮಾಣಕ್ಕೆ ಅವಕಾಶ ಮಾಡಿ ಹಣವನ್ನು ಒದಗಿಸುವುದು ಆದ್ಯತೆ ಪಡೆಯಬೇಕಾದ ವಿಚಾರವಾಗಿದೆ. ಬುಕ್ ಬ್ಯಾಂಕ್ ಮೊದಲಾದ ಗ್ರಂಥಾಲಯ ಸೌಲಭ್ಯಗಳು ಬಡ ಹಾಗೂ ದುರ್ಬಲ ವರ್ಗಗಳ ವಿದ್ಯಾರ್ಥಿಗಳಿಗೆ ದೊರಕುವಂತೆ ಮಾಡಬೇಕು. ಆದ್ದರಿಂದ ಈ ಅಂಶಗಳ ಮೇಲೆ ನಾನು ಹೆಚ್ಚಿನ ಒತ್ತು ಹಾಕುತ್ತೇನೆ. ಜೀವನದ ವಾಸ್ತವತೆಯನ್ನು ನಾವು ನೋಡಬೇಕು. ನಮ್ಮ ಶಿಕ್ಷಣವು ನಮ್ಮ ಬದುಕಿನೊಂದಿಗೆ ಸಂಬಂಧಪಟ್ಟಿರಬೇಕು. ಅದರಿಂದ ನಾವು ಏನನ್ನು ಪಡೆಯುತ್ತೇವೆ ಎನ್ನುವುದು ಮುಖ್ಯವಾಗಿ ಬೇಕು. ವ್ಯಕ್ತಿಯನ್ನು ಮಾನಸಿಕವಾಗಿಯೂ, ದೈಹಿಕವಾಗಿಯೂ ಸಮರ್ಥನನ್ನಾಗಿ ಮಾಡಿ ಅವನನ್ನು ಪೂರ್ಣ ಮಾನವನನ್ನಾಗಿಸುವುದೇ ನಮ್ಮ ಶಿಕ್ಷಣದ ಲಕ್ಷ್ಯವಾಗಬೇಕು. ಅದು ಹಾಗಾಗಬೇಕಾದರೆ ಮೊದಲು ನಾವು ಶಿಕ್ಷಣದ ಬಗೆಗೆ

ಸಮಾನಾಧಿಕಾರದ ವಿಷಯವಾಗಿರುವುದರಿಂದ, ಈ ದುರಾಚಾರಗಳನ್ನು ಕೊನೆಗೊಳಿಸಲು ನಮಗೆ ವಿಪುಲ ಪ್ರಮಾಣದಲ್ಲಿ ಅಧಿಕಾರವಿದೆ.

ಅಧೀನ ಕಾಲೇಜುಗಳಿಗೆ ಸಂಬಂಧಿಸಿದಂತೆ ನಾನು ಇಲ್ಲಿ ಹೇಳಬೇಕಾದ ಇನ್ನೊಂದು ವಿಚಾರವಿದೆ. ಅವುಗಳಲ್ಲಿ ಕೆಲವು ಕಾಲೇಜುಗಳಿಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಶೇ. 50ಕ್ಕೂ ಹೆಚ್ಚು ಜನ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲಾಗುತ್ತದೆ. ಫಲಿತಾಂಶಗಳು ಉತ್ತಮವಾಗಿದ್ದು ಕಾಲೇಜುಗಳು ಉತ್ತಮವಾಗಿ ನಡೆಯುತ್ತಿವೆ. ಅಂತಹ ಕಾಲೇಜುಗಳಿಗೆ ಹೆಚ್ಚಿನ ಪ್ರೋತ್ಸಾಹಧನವನ್ನು ನೀಡಬೇಕು. ಏಕೆಂದರೆ ಇತರ ಅದೀನ ಕಾಲೇಜುಗಳು ಪ.ಜಾತಿ, ಪ.ಬುಡಕಟ್ಟು ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಅದಿಕ ಸಂಖ್ಯೆಯಲ್ಲಿ ಸೇರಿಸಿಕೊಳ್ಳುವಂತೆ ಮಾಡಬೇಕು. ಉದಾಹರಣೆಗೆ, ಕರ್ನಾಟಕದಲ್ಲಿ ಕೆ.ಜಿ.ಎಂ. ಕಾಲೇಜಿದೆ. ಮಾನ್ಯ ಕೃಷ್ಣಪ್ಪ ಅದರ ಅಧ್ಯಕ್ಷರು. 800 ಜನ ಹೆಣ್ಣು ಮಕ್ಕಳ ದಾಖಲಾತಿಯಲ್ಲಿ 600 ಜನ ಪರಿಶಿಷ್ಟ ಜಾತಿ ಮತ್ತು ಪ. ಬುಡಕಟ್ಟುಗಳ ತಲಾ ಫಲಿತಾಂಶ ನೂರಕ್ಕೆ ನೂರು. ಇಂತಹ ಸಂದರ್ಭದಲ್ಲಿ ಆ ಕಾಲೇಜುಗಳಿಗೆ ಪ್ರೋತ್ಸಾಹಕಗಳನ್ನು ಕೊಡಬೇಕು. ಯು.ಜಿ.ಸಿ. ನಿರ್ಧರಿಸಿರುವ ಆಧಾರದ ಮೇಲಲ್ಲ, ಆದರೆ ಈ ಕಾಲೇಜುಗಳಿಗೆ ಹೆಚ್ಚಿನ ಪ್ರೋತ್ಸಾಹಕಗಳನ್ನು ನೀಡಬೇಕು.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಸಲುವಾಗಿ ಮೀಸಲಾತಿಗೆ ಸಂಬಂಧಿಸಿದಂತೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಕಲ್ಯಾಣಕ್ಕಾಗಿ ಇರುವ ಸಮಿತಿಯು, ಇರುವ ಎಲ್ಲಾ ಸಂಭಂದಿತ ಅಧೀನ ಕಾಲೇಜುಗಳ ಮತ್ತು ವಿಶ್ವವಿದ್ಯಾನಿಲಯ ಕಾಲೇಜುಗಳ ಒಂದು ಸರ್ವೆ ನಡೆಸಬೇಕು ಎಂದು ಹೇಳಿದೆ. ಸ್ಥಾನಗಳ ಮೀಸಲಾತಿಗೆ ಸಂಬಂದಿಸಿದಂತೆ, ಸರಕಾರದ ಆದೇಶಗಳನ್ನು ಪಾಲಿಸಲಾಗಿದೆಯೇ, ನೇರನೇಮಕಾತಿಯ ವಿಷಯದಲ್ಲಿ ವಿಶ್ವವಿದ್ಯಾನಿಲಯಗಳು, ಅವಕ್ಕೆ ನೀಡಲಾಗಿರುವ ಆದೇಶಗಳನ್ನು ಪಾಲಿಸಿವೆಯೇ ಎಂಬುದನ್ನು ತಪಾಸಣೆ ಮಾಡಬೇಕು ಎಂದು ಹೇಳಿದೆ. ಆದರೆ ಸರ್ವೆ ನಡೆಸಲು ಒಂದು ಸೆಲ್ ರಚಿಸಲು ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗಕ್ಕೆ ಸಾಧ್ಯವಾಗಿಲ್ಲ. ಯು.ಜಿ.ಸಿ. ವರದಿ ಹೀಗೆ ಹೇಳುತ್ತದೆ.

ಇದುವರೆಗೆ ಉತ್ತರ ಬಂದಿರುವ 104 ವಿಶ್ವವಿದ್ಯಾನಿಲಯಗಳಲ್ಲಿ ಮತ್ತು ವಿಶ್ವವಿದ್ಯಾನಿಲಯ ಗಳೆಂದು ಭಾವಿತವಾಗಿರುವ ಸಂಸ್ಥೆಗಳಲ್ಲಿ ಪರಿಸ್ಥಿತಿ ಹೀಗಿದೆ.

1. 44 ವಿಶ್ವವಿದ್ಯಾನಿಲಯಗಳು ಭಾರತ ಸರಕಾರವು ಈ ವಿಷಯವಾಗಿ ಕೊಟ್ಟಿರುವ ಆದೇಶಗಳನ್ನು ಅತ್ಯಂತ ಕಟ್ಟು ನಿಟ್ಟಾಗಿ ಪಾಲಿಸುತ್ತಿವೆ. ಇವುಗಳಲ್ಲಿ 18 ವಿಶ್ವವಿದ್ಯಾನಿಲಯಗಳು, ಪ.ಜಾತಿ, ಮತ್ತು ಪ. ಬುಡಕಟ್ಟುಗಳ ವಿದ್ಯಾರ್ಥಿಗಳಿಗಾಗಿ ಶೇ.5, ಅಂಕಗಳನ್ನು ರಿಯಾಯಿತಿ ಕೊಡಲು ಅವಕಾಶ ಮಾಡಿಕೊಂಡಿದೆ.

2. 45 ವಿಶ್ವವಿದ್ಯಾನಿಲಯಗಳಲ್ಲಿ ಪ.ಜಾತಿ, ಪ.ಬುಡಕಟ್ಟುಗಳ ವಿದ್ಯಾರ್ಥಿಗಳು ಸೀಟುಗಳ ಮೀಸಲಾತಿಯು ಶೇ. 30 ರಿಂದ ಶೇ. 33 ವರೆಗೆ ಬೇರೆ ಬೇರೆಯಾಗಿದೆ.

ಪಕ್ಷದಲ್ಲಿ ಅವುಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾರಂಭಿಸಿ ಈ ಅಸಮತೋಲನವು ಪರಿಹಾರವಾಗುವಂತೆ ನಾವು ಮಾಡಬೇಕು.

ಕಾಲೇಜುಗಳ ಒಟ್ಟು ಸಂಖ್ಯೆಯಲ್ಲಿ ಮೂರನೇ ಎರಡರಷ್ಟು ಅಧೀನ ಕಾಲೇಜುಗಳು ಶೇ. 90 ದಾಖಲಾತಿಯನ್ನು ಒಳಗೊಂಡಿವೆ. ಅವು ಸರಕಾರದಿಂದ ಧನ ಸಹಾಯವನ್ನು ಪಡೆಯುತ್ತವೆ. ಆದರೆ, ಎಸ್.ಸಿ.-ಎಸ್.ಟಿ ವಿದ್ಯಾರ್ಥಿಗಳಿಗೆ ವ್ಯಾಸಂಗದ ವೆಚ್ಚಕ್ಕಾಗಿ ಹಣವಿಲ್ಲ ಎಂಬ ನೆಪದಿಂದ ಅವರನ್ನು ಸೇರಿಸಿಕೊಳ್ಳಲು ಹಿಂಜರಿಯುತ್ತಾರೆ. ಆದ್ದರಿಂದ ಶೇ. 90 ವೆಚ್ಚವನ್ನು ಸರಕಾರವು ನೀಡುವುದರಿಂದ, ಸರ್ಕಾರವೇ ಎಲ್ಲಾ ಕಾಲೇಜುಗಳನ್ನು ವಹಿಸಿಕೊಂಡು ಬಿಡಬೇಕು. ಅವುಗಳನ್ನು ಕೇಂದ್ರಿಯ ವಿಶ್ವವಿದ್ಯಾನಿಲಯಗಳಿಗೆ ಸಮನಾಗಿ ಪರಿಗಣಿಸಬೇಕು. ಒಟ್ಟಾರೆ ಮಂಜೂರಾತಿಯಲ್ಲಿ ಕೇಂದ್ರೀಯ ವಿಶ್ವವಿದ್ಯಾಲಯಗಳು ಸರಕಾರದಿಂದ ಬರುವ ಶೇಕಡಾ 26ನ್ನು ಪಡೆಯುತ್ತವೆ. ಈ ಬಗೆಯ ಅಸಮಾನತೆಗಳು ಏಕಿರಬೇಕು? ಕೇಂದ್ರೀಯ ವಿಶ್ವ ವಿದ್ಯಾನಿಲಯಗಳಲ್ಲಿ, ವಿಶೇಷವಾಗಿ ನೆಹರೂ ವಿಶ್ವವಿದ್ಯಾನಿಲಯದಲ್ಲಿ ಪ್ರತಿ ವಿದ್ಯಾರ್ಥಿಗೆ ತಲಾ ವೆಚ್ಚ ಸುಮಾರು 10,000 ರೂಪಾಯಿ. ಗ್ರಾಮೀಣ ಕಾಲೇಜುಗಳಲ್ಲಿ ಅದು 100 ಅಥವಾ 150 ರೂಪಾಯಿಗಳಿಗಿಂತ ಕಡಿಮೆ, ಅಂದರೆ, ನಮ್ಮಲ್ಲಿ ಶಿಕ್ಷಣದ ಎರಡು ಪ್ರಮಾಣಕಗಳಿವೆ ಎಂದಾಯಿತು. ಒಂದು ಗಣ್ಯ ಜನರಿಗೆ, ಇನ್ನೊಂದು ಹಳ್ಳಿಗಳ ಬಡಜನರಿಗೆ, ಈ ಏರುಪೇರನ್ನು, ಅಸಮತೆಯನ್ನು ಒಡನೆಯೇ ತೊಡೆದುಹಾಕಬೇಕು. ಅಧೀನ ಕಾಲೇಜುಗಳಲ್ಲಿ ಸಂಭವಿಸುವ ದುರಾಡಳಿತ ಮತ್ತು ಹಣದ ದುರುಪಯೋಗಗಳಿಗೆ ಸಂಬಂಧಿಸಿದ ಯಾವುದೇ ದೂರನ್ನು ಪರಿಶೀಲಿಸಲು ತನಗೆ ಸಾಧ್ಯವಾಗುವುದಿಲ್ಲವೆಂದು ಯು.ಜಿ.ಸಿ. ಅಸಾಮರ್ಥ್ಯವನ್ನು ಹೇಳಿಕೊಳ್ಳುತ್ತದೆ. ಕಾಲೇಜುಗಳು ಹಣದ ದುರುಪಯೋಗ ಮಾಡಿಕೊಳ್ಳದಂತೆ ಶಾಸನಕ್ಕೆ ತಿದ್ದುಪಡಿ ಮಾಡಬೇಕೆಂದು ನಾನು ಸರಕಾರಕ್ಕೆ ಈ ಸಂದರ್ಭದಲ್ಲಿ ಸೂಚಿಸಬಯಸುತ್ತೇನೆ. ದುರಾಡಳಿತವಿದ್ದರೆ ಸಂಬಂಧಪಟ್ಟ ವಿಶ್ವವಿದ್ಯಾನಿಲಯವು ಅದನ್ನು ನೋಡಿಕೊಳ್ಳಬೇಕು. ಸಹಾಯಧನವನ್ನು ಮಂಜೂರು ಮಾಡುವಾಗ, ಅದನ್ನು ಯಾವುದಕ್ಕಾಗಿ ನೀಡಲಾಗಿದೆಯೋ ಆ ಉದ್ದೇಶಕ್ಕೆ ಬಳಸಬೇಕೆಂದು ನೀವು ಕಡ್ಡಾಯವಾಗಿ ಹೇಳಬೇಕು.

ಯು.ಜಿ.ಸಿ. ವರದಿಯ ಮೂರನೆಯ ಪುಟದಲ್ಲಿ ಅದು ತನ್ನ ಅಸಾಮರ್ಥ್ಯವನ್ನು ನಿರೂಪಿಸಿದೆ.

“ಕೆಲವು ಸಂದರ್ಭಗಳಲ್ಲಿ ಉಪಾಧ್ಯಾಯರಿಗೆ ವೇತನ ನೀಡುವುದರಲ್ಲಿ ದುರ್ವರ್ತನೆಗಳು ಸಂಭವಿಸುತ್ತಿರುವ ಬಗೆಗೆ ಆಯೋಗಕ್ಕೆ ದೂರುಗಳು ಬಂದಿವೆ. ಕಾಲೇಜುಗಳ ಆಂತರಿಕ ವ್ಯವಹಾರಗಳಲ್ಲಿ ಮಧ್ಯಪ್ರವೇಶ ಮಾಡಲು ಆಯೋಗಕ್ಕೆ ಅಧಿಕಾರವಿಲ್ಲವಾದ್ದರಿಂದ ಅಂತಹ ದೂರುಗಳನ್ನು ತಪ್ಪದೇ, ಸಂಬಂಧಿತ ವಿಶ್ವವಿದ್ಯಾನಿಲಯಗಳಿಗೆ ಅವರು ಕೈಗೊಳ್ಳಬಯಸುವ ಕ್ರಮಗಳ ಸಲುವಾಗಿ, ಕಳಿಸಲಾಗುತ್ತಿದೆ”. ಈಗಿರುವ ಪರಿಸ್ಥಿತಿ ಇದು. ಹಾಗಿರುವುದರಿಂದ ನನ್ನ ಸಲಹೆ ಹೀಗಿದೆ. ಮಧ್ಯ ಪ್ರವೇಶಮಾಡಿ ವಿಚಾರಣೆ ನಡೆಸಲು ಅವಕಾಶವಿರಬೇಕು. “ಶಿಕ್ಷಣವು”

ಕ್ರಮಗಳನ್ನು ಕೈಗೊಳ್ಳಬೇಕಾಗಿತ್ತು. ಮೊದಲು ಕೇಳಿದ 3320 ಕೋಟಿ ರೂಪಾಯಿಗಳ ಮಂಜೂರಾತಿಯನ್ನು ನೀಡಿದ್ದ ಪಕ್ಷದಲ್ಲಿ ಅದು ಸಾಧ್ಯವಾಗುತ್ತಿತ್ತು."

ದುರದೃಷ್ಟವಶಾತ್ ಯೋಜನಾ ಆಯೋಗವು 1200 ಕೋಟಿ ರೂಪಾಯಿಗಳನ್ನು ಮಾತ್ರ ಅನುಮೋದಿಸಿದೆ. ಇದರ ಫಲವಾಗಿ, ಯೋಜನಾ ಆಯೋಗವು ಗಮನದಲ್ಲಿರಿಸಿಕೊಂಡಿರುವ ಎಲ್ಲಾ ಧ್ಯೇಯೋದ್ದೇಶಗಳನ್ನು ಕಾರ್ಯಗತಗೊಳಿಸಲು ತಮಗೆ ಸಾಧ್ಯವಾಗಿಲ್ಲವೆಂದು ಯು.ಜಿ.ಸಿ. ಭಾವಿಸುತ್ತದೆ. ಆದರೆ ಈ ಮಿತಿಯಲ್ಲೇ ಯು.ಜಿ.ಸಿ.ಯು ಒಂದಷ್ಟು ಒಳ್ಳೆಯ ಕೆಲಸಗಳನ್ನು ಮಾಡಿದೆ. ತನ್ನ ಕೆಲಸಗಳನ್ನು ಅತ್ಯುತ್ತಮವಾಗಿ ಮಾಡಿಯೂ ಇದೆ.

ಯು.ಜಿ.ಸಿ.ಯು ವರದಿಯ 119ನೆಯ ಪುಟದಲ್ಲಿ ಕಾಲೇಜುಗಳ ಒಟ್ಟು ಸಂಖ್ಯೆಯನ್ನು ಕೊಟ್ಟಿದೆ. 1971-72ರಲ್ಲಿ 3,896 ಕಾಲೇಜುಗಳಿದ್ದವು; 1975-76ರಲ್ಲಿ ಅದು 4,508ಕ್ಕೆ ಏರಿತು. ದಾಖಲಾದ ವಿದ್ಯಾರ್ಥಿ ಸಂಖ್ಯೆ ಸುಮಾರು 24,86,108 ಆಗಿತ್ತು. ಅಂಚೆ ಶಿಕ್ಷಣಕ್ಕೆ ವಿದ್ಯಾರ್ಥಿ ದಾಖಲಾತಿಯನ್ನು 122ನೆಯ ಪುಟದಲ್ಲಿ ಹೇಳಿದೆ. ಆದ್ದರಿಂದ ಕಾಲೇಜುಗಳ ತರಗತಿಗಳಿಗೆ ಹಾಜರಾಗುವ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಇಳಿತಾಯವುಂಟಾಗಿದೆ.

ಯು.ಜಿ.ಸಿ ಯನ್ನು ರಚಿಸುವುದಕ್ಕಿದ್ದ ಉದ್ದೇಶ, ದೇಶದ ವಿಶ್ವವಿದ್ಯಾನಿಲಯಗಳು ಮತ್ತು ಅವುಗಳ ಅಧೀನದ ಕಾಲೇಜುಗಳ ಚಟುವಟಿಕೆಗಳನ್ನು ಕ್ರೋಡೀಕರಿಸುವುದು, ಅವರಿಗೆ ಅಗತ್ಯವಾದ ನೆರವು ನೀಡುವುದು, ಶಿಕ್ಷಣಕ್ರಮ, ಶಿಕ್ಷಣದ ಗುಣಮಟ್ಟ, ಪ್ರಮಾಣಕಗಳ ಸಂಯೋಜನೆ, ಸಂಶೋಧನೆ ಸೌಲಭ್ಯಗಳಲ್ಲಿ ಸುಧಾರಣೆ ಇತ್ಯಾದಿಗಳಲ್ಲಿ ಏಕರೂಪತೆ ತರುವುದು. ಶಿಕ್ಷಣದ ಬಗೆಗೆ ಬಂದಿದ್ದ ಮುಂಚಿನ ವರದಿಗಳು ಇಲ್ಲಿವೆ.

- ಹಿಂದೆಯೂ ಹಲವು ಆಯೋಗಗಳನ್ನು ರಚಿಸಲಾಗಿತ್ತು ಎಂದು ಹೇಳುತ್ತಿದ್ದೆ. ರಾಧ್ಯಾಕೃಷ್ಣನ್ ಆಯೋಗ, ಕೊಠಾರಿ ಆಯೋಗ, ಗಜೇಂದ್ರಗಾಡಕರ್ ಆಯೋಗ ಇತ್ಯಾದಿ. ಆದರೆ ವಿಧಾನವನ್ನು ಇನ್ನೂ ಸರಳಗೊಳಿಸಿಲ್ಲ. ಈಗಿನ ಸಚಿವರು ಪ್ರಶಸ್ತ ನಿರುದ್ಯೋಗ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಂಡು ವಿಶ್ವವಿದ್ಯಾನಿಲಯಗಳ ಕೆಲಸದ ಸಮೀಕ್ಷೆಗಾಗಿ ಇನ್ನೊಂದು ಆಯೋಗವನ್ನು ರಚಿಸುತ್ತಾರೆಯೋ ಏನೋ ನನಗೆ ತಿಳಿಯದು. ಸಂಖ್ಯೆಗಳನ್ನು ಗಮನಿಸಿದರೆ, 1973ರಲ್ಲಿದ್ದ 3856 ಕಾಲೇಜುಗಳ ಪೈಕಿ 910 ಮಾತ್ರ ಗ್ರಾಮಾಂತರ ಪ್ರದೇಶಗಳಲ್ಲಿದ್ದವು. ಮಿಕ್ಕವೆಲ್ಲಾ ನಗರಗಳಲ್ಲಿದ್ದವು. 22.4 ಲಕ್ಷ ದಾಖಲಾತಿಯಲ್ಲಿ 19.6 ಲಕ್ಷ ನಗರ ಪ್ರದೇಶಗಳಲ್ಲಿನ ದಾಖಲಾತಿಗಳು; 5.2 ಲಕ್ಷ ಹೆಣ್ಣುಮಕ್ಕಳ ದಾಖಲಾತಿಯಲ್ಲಿ 63,000 ಜನರು ಮಾತ್ರ ಗ್ರಾಮ ಪ್ರದೇಶಗಳಲ್ಲಿದ್ದರು. ನಮ್ಮ ಶಿಕ್ಷಣವು ನಗರಾಧಾರಿತವಾಗಿದೆ, ನಗರ ಪಕ್ಷಪಾತಿಯಾಗಿದೆ ಎಂಬುದನ್ನು ಇದು ತೋರಿಸುತ್ತದೆ. ಜನತಾ ಪಕ್ಷವು ತನ್ನ ಪ್ರಣಾಳಿಕೆಯಲ್ಲಿ ಗ್ರಾಮಾಂತರದ ಸಮಸ್ಯೆಗಳಿಗೆ ಮತ್ತು ಗ್ರಾಮಾಂತರ ಪ್ರದೇಶಗಳ ಕ್ಷಿಪ್ರ ಬೆಳವಣಿಗೆಗೆ ಆದ್ಯತೆ ನೀಡುವುದಾಗಿ ಹೇಳಿದೆ. ಆದ್ದರಿಂದ ಕಾಲೇಜುಗಳು ಮತ್ತು ವಿಶ್ವ ವಿದ್ಯಾನಿಲಯಗಳ ಸಂಖ್ಯೆಯನ್ನು ಹೆಚ್ಚಿಸುವುದಾದ

## ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ ವರದಿ 1975-76 *

ಶಿಕ್ಷಣ, ಸಮಾಜ ಕಲ್ಯಾಣ ಮತ್ತು ಸಂಸ್ಕೃತಿ ಸಚಿವರು (ಡಾ. ಪ್ರತಾಪ್‌ಚಂದ್ರ ಚಂದರ):- ಮಾನ್ಯರೆ, ಹೀಗೆ ಮಂಡಿಸಬಯಸುತ್ತೇನೆ. "ಈ ಸದನವು 4 ಏಪ್ರಿಲ್ 1977 ರಂದು ಸದನದ ಮುಂದಿರಿಸಿದ ವಿಸ್ವವಿದ್ಯಾನಿಲಯ ಧನ ಸಹಾಯ ಆಯೋಗದ 1975-76ರ ವಾರ್ಷಿಕ ವರದಿಯನ್ನು ಪರಿಶೀಲಿಸುತ್ತದೆ.

ಮಾನ್ಯ ಉಪಾಧ್ಯಕ್ಷರು:- ಸೂಚನೆಯನ್ನು ಮಂಡಿಸಲಾಗಿದೆ.

"ಈ ಸದನವು, 4 ಏಪ್ರಿಲ್ 1977 ರಂದು ಸದನದ ಮೇಜಿನ ಮೇಲಿರಿಸಿದ ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ ವಾರ್ಷಿಕ ವರದಿಯನ್ನು (1975-76) ಪರಿಶೀಲಿಸುತ್ತದೆ."

ಶ್ರೀ ಬಿ. ರಾಚಯ್ಯ (ಚಾಮರಾಜನಗರ):- ಶಿಕ್ಷಣ ಸಚಿವರು 1975-76ನೆಯ ಇಸವಿಗಾಗಿ ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದ ವರದಿಯನ್ನು ಮಂಡಿಸಿದ್ದಾರೆ. ಅದನ್ನು ಕುರಿತು ಕೆಲವು ಮಾತುಗಳನ್ನಾಡಲು ಬಯಸುತ್ತೇನೆ.

ವಿಶ್ವವಿದ್ಯಾನಿಲಯ ಧನಸಹಾಯ ಆಯೋಗವನ್ನು 1956ರಲ್ಲಿ ಶಾಸನದ ಪ್ರಕಾರ ರಚಿಸಲಾಯಿತು. 1968ರಲ್ಲಿ ಶಿಕ್ಷಣವನ್ನು ಕುರಿತು ಒಂದು ರಾಷ್ಟ್ರೀಯ ನೀತಿಯನ್ನು ಪಾರ್ಲಿಮೆಂಟಿನ ಉಭಯ ಸದನಗಳು ಅಂಗೀಕರಿಸಿದವು. ವಿಶ್ವವಿದ್ಯಾನಿಲಯ ಶಿಕ್ಷಣವನ್ನು ಕುರಿತ ಅಭಿಪ್ರಾಯಗಳು ಇವುಗಳನ್ನು ಒಳಗೊಂಡಿದ್ದವು:

1. ಕಾಲೇಜು ಅಥವಾ ವಿಶ್ವವಿದ್ಯಾನಿಲಯ ವಿಭಾಗಗಳಿಗೆ ಪ್ರವೇಶ ಕೊಡಬಹುದಾದ ವಿದ್ಯಾರ್ಥಿಗಳ ಸಂಖ್ಯೆ. ಇದನ್ನು ಉಪಲಬ್ಧ ಪ್ರಯೋಗಾಲಯಗಳಿಗೆ, ಗ್ರಂಥಾಲಯಗಳಿಗೆ ಮತ್ತಿತರ ಸೌಲಭ್ಯಗಳಿಗೆ ಹಾಗೂ ಅಧ್ಯಾಪಕವರ್ಗದ ಸಂಖ್ಯೆಗೆ ಸಂಬಂಧಿಸಿದಂತೆ ನಿರ್ಧರಿಸುವುದು;

2. ನೂತನ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸುವಾಗ ಹೆಚ್ಚು ಎಚ್ಚರ ವಹಿಸಬೇಕಾಗಿದೆ.

3. ಸ್ನಾತಕೋತ್ತರ ವಿಶ್ವವಿದ್ಯಾನಿಲಯ ಪಠ್ಯ ವಿಷಯಗಳ ವ್ಯವಸ್ಥೆಗೆ ಮತ್ತು ಪ್ರಮಾಣಕಗಳ ಸ್ಥಾಪನೆಗೆ, ತರಬೇತಿ ಮತ್ತು ಈ ಹಂತದಲ್ಲಿ ಸಂಶೋಧನೆಗೆ ಗಮನ ಕೊಡಬೇಕು.

ಇದಕ್ಕೆ ಹೆಚ್ಚಿನ ಬೆಂಬಲ ನೀಡಬೇಕಾಗಿದೆ. ಕೇಂದ್ರೀಯ ಶಿಕ್ಷಣ ಸಲಹಾ ಮಂಡಳಿಯ ಸ್ಥಾಯೀ ಸಮಿತಿಯು 1976ರಲ್ಲಿ ಪ್ರಕಟಿಸಿದ ನಿರ್ಣಯದಲ್ಲಿ ಈ ಕೆಳಗಿನ ಅಭಿಪ್ರಾಯಗಳನ್ನು ನೀಡಿದೆ.

"ಬಹು ಕಾಲದಿಂದ ಅಗತ್ಯವಾಗಿದ್ದ ಶಿಕ್ಷಣ ಪದ್ಧತಿಯ ಪರಿವರ್ತನೆಯನ್ನು ಜಾರಿಗೆ ತರುವ ಐದನೇ ಯೋಜನೆಯ ಉದ್ದೇಶಗಳನ್ನು ಸಾಧಿಸಬೇಕಾಗಿತ್ತು, ಮಹತ್ವ ಪೂರ್ಣವಾದ

---

* ಲೋಕ ಸಭಾ ನಡವಳಿಕೆ ದಿನಾಂಕ 20ನೇ ಜುಲೈ, 1977 ಪುಟ 245-251 (ನಿಳುವಳಿ ಸೂಚನೆ)

ಆಮೇಲೆ ಸ್ವಾಮಿ, ರಾಸಾಯನಿಕ ಗೊಬ್ಬರದ ಬೆಲೆಯನ್ನು ತಗ್ಗಿಸಲೇಬೇಕು. ಸಮಯವು ಕಡಿಮೆಯಾಗಿರುವುದರಿಂದ, ನಾನು ಹೇಳಬೇಕಾಗಿರುವ ಅಂಶಗಳನ್ನು ಅಡಕವಾಗಿ ಹೇಳಿ ಬಿಡುತ್ತೇನೆ.

ಅಂತರ-ರಾಜ್ಯ ಜಲ ವಿವಾದಗಳನ್ನು ಬಹಳ ಬೇಗ ಫೈಸಲು ಮಾಡಬೇಕು, ಲೆವಿ ಸಕ್ಕರೆಯ ಬೆಲೆಯನ್ನು ಸಕ್ಕರೆಯ ಅಂಶದ ಆಧಾರದ ಮೇಲೆ ಏಕರೂಪದ ಬೆಲೆಯಾಗಿ ನಿರ್ಧರಿಸಬೇಕು. ಅದರಲ್ಲಿ ಹೆಚ್ಚು ಅಸಮಾನತೆಗೊಳಿಸಬಾರದು, ನೂತನ ಸಕ್ಕರೆ ಕಾರ್ಖಾನೆಗಳಿಗೆ ಪ್ರೋತ್ಸಾಹಗಳನ್ನು ನೀಡಬೇಕು. ಕೃಷಿ ಉತ್ಪಾದನೆಗಳಿಗೆ ರೈತರು ಹೆಚ್ಚು ಹೆಚ್ಚಾಗಿ ಬೆಳೆಯಲು ಪ್ರೋತ್ಸಾಹ ದೊರಕುವಂತೆ ಬೆಲೆಯನ್ನು ನಿಗದಿತಪಡಿಸಬೇಕು.

ಕಡಿಮೆ ಬೆಲೆಯ ರಾಸಾಯನಿಕ ಗೊಬ್ಬರಗಳು ಮತ್ತು ಸುಧಾರಿತ ಉಪಕರಣಗಳು ರೈತರಿಗೆ ದೊರಕಬೇಕು. ಗ್ರಾಮಾಂತರ ಪ್ರದೇಶಗಳ ಒರಟು ದಾರಿಗಳಲ್ಲಿ ಸುಲಭವಾಗಿ ಹೋಗುವಂತೆ, ಎಳೆಯುವ ಪ್ರಾಣಿಯ ಮೇಲೆ ಬೀಳುವ ಭಾರ ಕಡಿಮೆಯಾಗುವಂತೆ ಎತ್ತಿನ ಬಂಡಿಯ ವಿನ್ಯಾಸವನ್ನು ಸುದಾರಿಸಬೇಕು. ಬೆಳೆಯ ವಿಮೆ ಮಾಡಿಸುವ ಕೆಲಸವಾಗಬೇಕು, ಕೊನೆಯ ಪಕ್ಷ ಅಧಿಕ ಇಳುವರಿ ಕೊಡುವ ಬೆಳೆಗಳನ್ನು ವಿಮೆ ಮಾಡಿಸಬೇಕು.

ಪಶು ಆಹಾರದ ಬೆಲೆ ತುಂಬ ಏರಿದೆ. ಅದನ್ನು ತಗ್ಗಿಸಲು ಎಣ್ಣೆ ಹಿಂಡಿಯನ್ನು ರಫ್ತು ಮಾಡುವುದನ್ನು ನಿಷೇದಿಸಬೇಕು. ಅಗತ್ಯ ಪ್ರೋತ್ಸಾಹಕಗಳನ್ನು ನೀಡಿ ಕೋಳಿಸಾಕಣೆ, ಕುರಿಸಾಕಣೆ ಮತ್ತು ಹಂದಿ ಸಾಕಣೆಗಳನ್ನು ಹೆಚ್ಚಿಸಬೇಕು.

ಆಡು-ಕುರಿಗಳನ್ನು ಸಾಕಲು ಸಣ್ಣ ರೈತರಿಗೆ ಸಹಾಯಧನ ನೀಡಬೇಕು. ಜೀತದಾಳುಗಳಿಗೆ ಪುನರ್ವಸತಿ ಏರ್ಪಾಟಿಗಾಗಿ ಈ ಕ್ರಮವು ಸಹಾಯಕವಾಗುತ್ತದೆ. ಈ ವಿಷಯವಾಗಿ ಕರ್ನಾಟಕ ಸರಕಾರವು ಕಳುಹಿಸಿರುವ ಪ್ರಸ್ತಾವನೆಯು ಈಗಾಗಲೆ ಸರಕಾರದ ಮುಂದಿದೆ.

ಅನೇಕ ರಾಜ್ಯಗಳಲ್ಲಿ ಕೃಷಿ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಜಾರಿಗೆ ತಂದಿಲ್ಲ. ಕಾನೂನು ಜಾರಿಗೆ ತರುವುದನ್ನು ನೋಡಿಕೊಳ್ಳುವ ಇನ್ಸ್ ಪೆಕ್ಟರುಗಳ ಅಭಾವವಿದೆ. ಕೆಲವು ಭಾಗಗಳಲ್ಲಿ ಜೀತ ನಿರ್ಮೂಲನವಾದ ಮೇಲೆ, ಭೂಮಿತಿ ಕಾನೂನುಗಳು ಬಂದ ಮೇಲೆ ಬಹುತೇಕ ಸಣ್ಣ ರೈತರನ್ನು ಕೂಡೀ ಜೀತ ಕಾರ್ಮಿಕರನ್ನು ಶೋಷಣೆ ಮಾಡಲಾಗುತ್ತಿದೆ. ಅವರಿಗೆ ಕೆಲಸ ಸಿಕ್ಕುತ್ತಿಲ್ಲ. ಆದ್ದರಿಂದ ಸರಕಾರವು ಹಳ್ಳಿಗಳಲ್ಲಿ ನೌಕರಿ ಸುಭದ್ರತೆಯ ಯೋಜನೆಯೊಂದನ್ನು ಜಾರಿಗೆ ತರಬೇಕು ಇಲ್ಲದೆ ಹೋದರೆ ಹಸಿವೆಯಿಂದ ಅವರು ಸತ್ತು ಹೋಗುತ್ತಾರೆ.

ಬಾವಿಗಳನ್ನಾಗಲಿ, ಕೊಳವೆ ಬಾವಿಗಳನ್ನಾಗಲಿ ನಿರ್ಮಿಸಿದ ಪಕ್ಷದಲ್ಲಿ. ಬರಗಾಲಕ್ಕೀಡಾಗುವ ಈ ಪ್ರದೇಶಗಳ ಸಮಸ್ಯೆಯನ್ನು ಪರಿಹರಿಸುತ್ತೇವೆ.

ಅನೇಕ ನದಿಗಳಿಗೆ ಸಂಬಂಧಿಸಿದಂತೆ ಇರುವ ಅಂತರ್-ರಾಜ್ಯ ವಿವಾದಗಳಿಂದಾಗಿ, ಅವುಗಳ ನೀರನ್ನು ಬಳಸಿಕೊಳ್ಳಲು ನಮಗೆ ಸಾಧ್ಯವಾಗುತ್ತಿಲ್ಲ ಎಂದು ನಮಗೆ ತಿಳಿದಿದೆ. ಈ ವಿವಾದ ಕುರಿತಂತೆ ಒಂದು ನಿಷ್ಪಕ್ಷ ತೀರ್ಮಾನಕ್ಕೆ ಬರಲು ನರ್ಮದಾ ಟ್ರಿಬ್ಯುನಲ್‌ಗೆ ಸಾಧ್ಯವಾಗಿರುವುದರಿಂದ ನನಗೆ ಸಂತೋಷವಾಗಿದೆ. ಹಾಗಿದ್ದರೂ ದಕ್ಷಿಣ ಭಾರತದಲ್ಲಿ, ಕಾವೇರಿ ನೀರಿಗೆ ಸಂಬಂಧಪಟ್ಟಂತೆ ಇನ್ನೂ ವಿವಾದವಿದೆ. ಹೆಚ್ಚಿನ ಯೋಜನೆಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ ಅಣೆಕಟ್ಟು ನಿರ್ಮಾಣ ಕಾರ್ಯ ಪೂರ್ಣಗೊಂಡಿದ್ದು, ಕಾಲುವೆಗಳನ್ನು ತೋಡುವ ಕೆಲಸವಷ್ಟೇ ಬಾಕಿ ಉಳಿದಿದೆ. ಆದ್ದರಿಂದಲೇ ನೀರಾವರಿಗೆ ನೀರನ್ನೊದಗಿಸಲು ನಮಗಿನ್ನೂ ಸಾಧ್ಯವಾಗಿಲ್ಲ.

ಆದ್ದರಿಂದ ಕಬಿನಿ ಯೋಜನೆಗೂ, ಹೇಮಾವತಿ ಯೋಜನೆಗೂ ಬೇಗನೆ ಅನುಮತಿ ನೀಡಿ ನೀರನ್ನು ಕ್ಷಾಮ ಪ್ರದೇಶಕ್ಕೆ ಒದಗಿಸಲು ಅನುಕೂಲ ಕಲ್ಪಿಸಬೇಕೆಂದು ಮಾನ್ಯ ಸಚಿವರನ್ನು ಕೋರುತ್ತೇನೆ.

ಮುಂಗಡ ಪತ್ರದಲ್ಲಿ ಕಳೆದ ವರ್ಷ, ಈಗಾಗಲೆ ನಿರ್ಮಾಣ ಕಾರ್ಯವು ನಡೆದಿರುವ ಯೋಜನೆಗಳನ್ನು ಕ್ಷಿಪ್ರಗತಿಯಲ್ಲಿ, ಮುಂದುವರಿಸುವುದಕ್ಕಾಗಿ 45 ಕೋಟಿ ರೂಪಾಯಿಗಳನ್ನು ನೀಡಲಾಗಿತ್ತು, ಈ ವರ್ಷ ಸುಮಾರು 75 ಕೋಟಿರೂಗಳಿಗೆ ಅವಕಾಶ ಕಲ್ಪಿಸಲಾಗಿದೆ ಎಂಬುದು ತಿಳಿಯುತ್ತದೆ. ಅದರಲ್ಲಿ ಕೇಂದ್ರವು 48 ಕೋಟಿಗಳನ್ನು ಮಾತ್ರ ಒದಗಿಸುತ್ತದೆ, ಉಳಿದ ಹಣವನ್ನು ರಾಜ್ಯ ವಲಯವು ಒದಗಿಸಬೇಕು. ಈ ಯೋಜನೆಗಳ ತ್ವರಿತ ಪೂರೈಕೆಯ ಸಲುವಾಗಿ ಸರಕಾರವು ಇನ್ನೂ ಹೆಚ್ಚು ಆಸಕ್ತಿ ವಹಿಸಿದರೆ ತುಂಬಾ ಸಂತೋಷವಾಗುತ್ತದೆ.

– ಸಕ್ಕರೆಗೆ ಸಂಬಂಧಿಸಿದಂತೆ ಹೇಳುವುದಾದರೆ, ದಕ್ಷಿಣದಲ್ಲಿ ಲೆವಿ ಸಕ್ಕರೆಗೆ 141 ರೂಪಾಯಿ ಕೊಡಲಾಗುತ್ತಿದೆ, ಉತ್ತರದಲ್ಲಾದರೆ 275 ರೂಪಾಯಿ. ಈ ಬಾರೀ ಪ್ರಮಾಣದ ವ್ಯತ್ಯಾಸ ಏಕೆ? ದಕ್ಷಿಣದಲ್ಲಿ ಬೆಳೆಯುವ ಕಬ್ಬಿನಲ್ಲಿ ಸಕ್ಕರೆಯ ಅಂಶ ಹೆಚ್ಚು, ಮತ್ತು ರೈತರು ಹೆಚ್ಚು ಶ್ರದ್ಧೆಯಿಂದ ಬೆಳೆಯುತ್ತಾರೆ. ಹಾಗಿದ್ದರೂ ಲೆವಿ ಬೆಲೆಯಲ್ಲಿ ಅಸಮಾನತೆಯಿದೆ. ತಕ್ಷಣವೇ ಈ ವ್ಯತ್ಯಾಸವು ಹೋಗಬೇಕು ಅಥವಾ ಕೊನೆಯ ಪಕ್ಷ ವ್ಯತ್ಯಾಸ ತುಂಬ ಕಡಿಮೆಯಾಗಬೇಕು. ದಕ್ಷಿಣದ ರೈತನು ತನಗೂ ಸರಕಾರದಿಂದ ಸಮಾನ ವ್ಯವಹರಣೆ ದೊರಕುತ್ತಿದೆ ಎಂಬ ತೃಪ್ತಿಯನ್ನು ಪಡೆಯಬೇಕು.

ನೂತನ ಸಕ್ಕರೆ ಕಾರ್ಖಾನೆಗಳಿಗೆ ಕೆಲವು ರಿಯಾಯಿತಿಗಳನ್ನು ಕೊಡಬೇಕೆಂದು ಸರಕಾರವು ನಿರ್ಧರಿಸಿದೆ. ಅಬಕಾರಿ ಸುಂಕವನ್ನು ಲೆವಿ ಸಕ್ಕರೆಯನ್ನು ಅವು ಕೊಡಬೇಕಾಗಿಲ್ಲ. ಕೊಳ್ಳೆಗಾಲ ಸಕ್ಕರೆ ಕಾರ್ಖಾನೆ ಈ ವಿನಾಯಿತಿಗಾಗಿ ಅರ್ಜಿ ಸಲ್ಲಿಸಿದೆ, ಸಚಿವರು ಅದನ್ನು ಪರಿಶೀಲಿಸಿ ಅವರಿಗೆ ಸೂಕ್ತ ವಿನಾಯಿತಿಯನ್ನು ಕೊಡಬೇಕೆಂದು ಕೋರುತ್ತೇನೆ.

## ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಂಡಿಸಲಾದ ಅಭಿಪ್ರಾಯಗಳು *

ಶ್ರೀ ಬಿ. ರಾಚಯ್ಯ (ಚಾಮರಾಜನಗರ) ಪ್ರಿಯ ಅಧ್ಯಕ್ಷರೆ, ದಿನದ ಕೊನೆಯ ಸಮಯದಲ್ಲಾದರೂ, ಅತ್ಯಂತ ಮುಖ್ಯವಾದ ಈ ವಿಷಯದ ಬಗ್ಗೆ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವ ಅವಕಾಶ ಒದಗಿಸಿಕೊಟ್ಟ ನಿಮಗೆ ನಾನು ಕೃತಜ್ಞನಾಗಿರುತ್ತೇನೆ.

120 ಮಿಲಿಯ ಟನ್‌ಗಳಷ್ಟು ಆಹಾರ ಧಾನ್ಯಗಳನ್ನು ಉತ್ಪಾದಿಸಲು ಶಕ್ತರಾದ ನಾವು ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳವುದನ್ನು ನಿಲ್ಲಿಸಿರುವುದು ನಿಜವಾಗಿಯೂ ನನಗೆ ತುಂಬ ಸಂತೋಷವನ್ನು ಉಂಟುಮಾಡಿದೆ. ಕೃಷಿ ಸಚಿವರು, ಕೃಷಿ ವಿಜ್ಞಾನಿಗಳು ಹಾಗೂ ರೈತರು-ಇವರೆಲ್ಲ ನಮ್ಮ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ನನಗೆ ತಿಳಿದಿರುವಂತೆ, ಭಾರತದಲ್ಲಿ ಕೃಷಿ ಬಹುಮಟ್ಟಿಗೆ ಮುಂಗಾರು ಮಾರುತಗಳನ್ನೇ ಅವಲಂಬಿಸಿದ್ದು. ಸರಿಯಾಗಿ ಮಳೆ ಬಂದರೆ ಮಾತ್ರ ಬೆಳೆಯಾಗುತ್ತದೆ. ಆದರೆ ಪ್ರತಿವರ್ಷ ದೇಶದ ಒಂದು ಬಾಗದಲ್ಲಿ ತುಂಬು ಪ್ರವಾಹ ಕಂಡು ಬಂದರೆ ಇನ್ನೊಂದು ಭಾಗದಲ್ಲಿ ಬರಗಾಲ ಸಂಭವಿಸುವುದು ಸಾಮಾನ್ಯವಾಗಿದೆ. ಕಳೆದ ಮೂವತ್ತು ವರ್ಷಗಳಿಂದ, ನಮ್ಮಲ್ಲಿ ಲಭ್ಯವಾಗಿರುವ ನೀರನ್ನೇ ಕೃಷಿಗಾಗಿ ಬಳಸಿಕೊಳ್ಳಲು ನಾವು ಪ್ರಯತ್ನಿಸುತ್ತಿದ್ದೇವೆ. ರೈತರಿಗೆ ನೀರಾವರಿ ಸೌಲಭ್ಯಗಳನ್ನು ಒದಗಿಸಿಕೊಡುವುದರ ಮೂಲಕ ಕೃಷಿ ಕ್ಷೇತ್ರದಲ್ಲಿ ಸರ್ಕಾರ ಅತ್ಯುತ್ತಮ ಕೆಲಸವನ್ನು ಮಾಡಿರುತ್ತದೆ ಹಾಗೂ ಸುಮಾರು 11 ಮಿಲಿಯ ಹೆಕ್ಟೇರುಗಳಷ್ಟು ಜಮೀನಿಗೆ ನೀರಾವರಿಯನ್ನು ಒದಗಿಸಿರುತ್ತದೆ ಇನ್ನಷ್ಟು ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಒದಗಿಸಲು ಸಾಧ್ಯವಾಗುವಂತೆ, ನಮ್ಮಲ್ಲಿರುವ ನೀರನ್ನು ಬಳಸಿಕೊಳ್ಳಲು ಸರ್ಕಾರಕ್ಕೆ ದೀರ್ಘಕಾಲ ಬೇಕು. ಹೀಗೆ ಮಾಡಿದ ಅನಂತರ ಕೂಡ, ಬಹಳಷ್ಟು ಕೃಷಿ ಪ್ರದೇಶಗಳು ನಿಸರ್ಗವನ್ನೇ ಅವಲಂಬಿಸಬೇಕಾಗುತ್ತದೆ. ಆದ್ದರಿಂದ, ಪದೇ ಪದೇ ಬರಗಾಲಕ್ಕೆ ಈಡಾಗುವ ಪ್ರದೇಶಗಳಲ್ಲಿ ಇರುವ ಭೂಮ್ಯಂತರ್ಗತ ಜಲ ಸಂಪನ್ಮೂಲಗಳತ್ತ ಗಮನ ಹರಿಸಬೇಕು ಎಂದು ನನಗನಿಸುತ್ತಿದೆ. ಕೆಲವು ಕೊಳವೆ ಬಾವಿಗಳು, ಕೊರೆದ-ಬಾವಿಗಳು ಮತ್ತು ಸಾಮಾನ್ಯ ಬಾವಿಗಳು ಈಗಾಗಲೇ ನೀರಾವರಿ ಉದ್ದೇಶಗಳಿಗಾಗಿ ನೀರನ್ನು ಒದಗಿಸುತ್ತಿರುವುದರಲ್ಲಿ ಸಂಶಯವಿಲ್ಲ. ಈ ಉದ್ದೇಶಕ್ಕಾಗಿ ರೈತರಿಗೆ ಸಾಲವನ್ನು ನೀಡುವ ಬದಲಾಗಿ ಈಗ, ಕೃಷಿಗಾಗಿ ರೈತರಿಗೆ ನೀರನ್ನು ಸರಬರಾಜು ಮಾಡುಬಲ್ಲ ಸಾಮಾನ್ಯ ಸಮುದಾಯ ಯೋಜನೆಯೊಂದನ್ನು ಸರ್ಕಾರೀ ವೆಚ್ಚದಲ್ಲಿ ನಿರ್ಮಿಸುವುದು ಉಪಯುಕ್ತವಲ್ಲವೇ ಎಂದು ಪರಿಶೀಲಿಸುವಂತೆ ನಾನು ಮಾನ್ಯ ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಇಂಥ ಸಂದರ್ಭದಲ್ಲಿ ನಮ್ಮ ವೆಚ್ಚವನ್ನು ಕಡಿಮೆಮಾಡಿಕೊಳ್ಳಲು ಹಾಗೂ ರೈತರನ್ನು ನಷ್ಟದಿಂದ ಪಾರು ಮಾಡಲು ನಮಗೆ ಸಾಧ್ಯವಾಗುತ್ತದೆ. ತಮ್ಮ ಜಮೀನಿನಲ್ಲಿ ಬೇಸಾಯ ಮಾಡಲು ಆಗ ಅವರಿಗೆ ಪ್ರತ್ಯೇಕವಾದ ಕೊಳವೆ ಅಥವಾ ಕೊರೆದ ಬಾವಿಗಳ ಅವಶ್ಯಕತೆ ಬರುವುದಿಲ್ಲ. ನಾವು ಸಮುದಾಯ

---

* ಲೋಕ ಸಭಾ ನಡವಳಿಕೆ ದಿನಾಂಕ 2ನೇ ಜುಲೈ, 1977 ಪುಟ 164-166

ನೋಡಿಕೊಳ್ಳಬೇಕಾಗಿದೆ. ಹೀಗೆ ಮಾಡುವುದರಿಂದ, ರೈತರಲ್ಲಿ ಅಧಿಕ ಪ್ರಮಾಣದ ಹತ್ತಿ ಬೆಳೆಯುವ ಆಸಕ್ತಿ ಮೂಡುತ್ತದೆ. ಈ ಮಾತುಗಳೊಂದಿಗೆ, ರಫ್ತನ್ನು ಅಧಿಕ ಪ್ರಮಾಣದಲ್ಲಿರಿಸಲು ಶಕ್ತವಾಗಿರುವ ಸಚಿವಾಲಯವನ್ನು ನಾನು ಅಭಿನಂದಿಸುತ್ತೇನೆ.

ಸುಂಕ ಸಂರಕ್ಷಣೆಯನ್ನು ಇನ್ನಷ್ಟು ಕಾಲ ವಿಸ್ತರಿಸಬೇಕೆಂದು ನಾನು ಮಾನ್ಯ ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಬತ್ತದ ಕಣಜ ಹಾಗೂ ಹಿಂಡಿಗಳಂತಹ ರಫ್ತಾಗುತ್ತಿರುವ ಸರಕುಗಳನ್ನು ಕುರಿತಂತೆ, ಇವುಗಳಿಗೆ ರಫ್ತು ಸುಂಕದಿಂದ ವಿನಾಯಿತಿ ನೀಡಬೇಕೆಂದು ನಾನು ಸಲಹೆ ಮಾಡುತ್ತೇನೆ. ದನ-ಕರುಗಳಿಗೆ, ಎಮ್ಮೆಗಳಿಗೆ ಹಾಗೂ ಇತರ ಪ್ರಾಣಿಗಳ ಆಹಾರ ವಸ್ತುಗಳ ಉತ್ಪಾದನೆಗಾಗಿ ಇವು ಅಗತ್ಯವಾಗಿದೆ. ಪ್ರಾಣಿ ಆಹಾರಗಳ ಬೆಲೆ, ಅವುಗಳನ್ನು ಸಾಕುವವರ ಕೈಗೆ ಎಟುಕದಷ್ಟು ಎತ್ತರ ಏರಿ ಬಿಟ್ಟಿದೆ. ಆದ್ದರಿಂದ ಇವುಗಳನ್ನು ರಫ್ತು ಸರಕುಗಳ ಪಟ್ಟಿಯಿಂದ ತೆಗೆದು ಹಾಕಬೇಕೆಂದು ನಾನು ಬಯಸುತ್ತೇನೆ.

ಸಕ್ಕರೆಗೆ ಸಂಬಂದಿಸಿದಂತೆ ಹೇಳುವುದಾದರೆ, ಶೇಕಡ 65 ರಷ್ಟು ಸಕ್ಕರೆಗೆ ತೆರಿಗೆ ವಿಧಿಸಲಾಗುತ್ತಿದೆ ಹಾಗೂ ಶೇ 35ರಷ್ಟು ಸಕ್ಕರೆಯನ್ನು ಮುಕ್ತ ಮಾರುಕಟ್ಟೆ ಮಾರಾಟಕ್ಕೆ ಬಿಡಲಾಗುತ್ತಿದೆ. ದಕ್ಷಿಣದ ರಾಜ್ಯಗಳು ಹಾಗೂ ಉತ್ತರದ ರಾಜ್ಯಗಳ ನಡುವೆ ತೆರಿಗೆ ವಿಧಿಸಲಾಗುವ ಸಕ್ಕರೆಯ ಬೆಲೆಯಲ್ಲಿ ವ್ಯತ್ಯಾಸವಿದೆ. ನಿಮಗೆ ತಿಳಿದಿರುವಂತೆ ದಕ್ಷಿಣದ ರಾಜ್ಯಗಳಲ್ಲಿ ಬೆಳೆಯುವ ಕಬ್ಬುಗಳಲ್ಲಿನ ಸಕ್ಕರೆಯ ಅಂಶ ಹೆಚ್ಚು ಅಲ್ಲದೆ ಇಲ್ಲಿ ಬೆಳೆಯುವ ಕಬ್ಬಿನ ಪ್ರಮಾಣವೂ ಅಧಿಕ. ಆದರೆ ಉತ್ತರ ರಾಜ್ಯಗಳಲ್ಲಿ ಹೀಗಿಲ್ಲ. ಆದ್ದರಿಂದ ಸಕ್ಕರೆ ಉದ್ಯಮಕ್ಕೆ ಉತ್ತೇಜನ ನೀಡಬೇಕೆಂದು ನೀವು ಬಯಸುವಿರಾದ ಪಕ್ಷದಲ್ಲಿ ಮಹಾರಾಷ್ಟ್ರ, ಆಂಧ್ರ, ಕರ್ನಾಟಕ ಹಾಗೂ ತಮಿಳು ನಾಡು ರಾಜ್ಯಗಳಲ್ಲಿನ ಸಕ್ಕರೆ ಸಹಕಾರ ಸಂಘಗಳಿಗೆ ಪ್ರೋತ್ಸಾಹ ನೀಡಬೇಕಾದ ಅಗತ್ಯವಿದೆ. ಏಕೆಂದರೆ ಈ ರಾಜ್ಯಗಳಲ್ಲಿ ಸಕ್ಕರೆಯ ಉತ್ಪಾದನೆ ಅಧಿಕವಾಗಿದೆ. ಆದ್ದರಿಂದ ದಕ್ಷಿಣದ ರಾಜ್ಯಗಳ ಕಬ್ಬು ಬೆಳೆಗಾರರಿಗೆ ತಕ್ಕ ನ್ಯಾಯ ದೊರಕುವ ರೀತಿಯಲ್ಲಿ ಉತ್ತರ ಮತ್ತು ದಕ್ಷಿಣ ರಾಜ್ಯಗಳ ಸಕ್ಕರೆಯ ಬೆಳೆಗಳಲ್ಲಿ ಇರುವ ಅಂತರವನ್ನು ಕಡಿಮೆ ಮಾಡಬೇಕೆಂದು ನಾನು ಸಚಿವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ತೋಟದ ಕೃಷಿ ಉದ್ಯಮಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಮಾವು, ಬಾಳೆ, ಅನಾನಸ್, ಆಪ್ರಿಕಾಟ್‌ಗಳಂತಹ ಹಣ್ಣುಗಳು ಹಾಗೂ ಬಾದಾಮಿ ಮತ್ತು ಅಕ್ರೋಡುಗಳಂತಹ ಒಣ ಹಣ್ಣುಗಳನ್ನು ರಫ್ತುಮಾಡಲಾಗುತ್ತಿದೆ. ಈ ಸರಕುಗಳನ್ನು ಅತ್ಯಧಿಕ ಪ್ರಮಾಣದಲ್ಲಿ ರಫ್ತುಮಾಡಲಾಗುತ್ತಿರುವುದರಿಂದ, ಇವುಗಳನ್ನು ಹೆಚ್ಚು ಹೆಚ್ಚು ಬೆಳೆಸಲು ರೈತರಿಗೆ ಪ್ರೋತ್ಸಾಹ ದೊರೆಯುತ್ತಿದೆ. ಈ ರೈತರಿಗೆ ಸಾಲ ಹಾಗೂ ವಿನಾಯಿತಿ ನೀಡಿಕೆಗಳಂತಹ ಸೌಲಭ್ಯಗಳೂ ಸಿಗುತ್ತಿವೆ. ಅವರಿಗೆ ಬೇಕಾದ ಎಲ್ಲ ಅವಶ್ಯಕ ವಸ್ತುಗಳನ್ನು ಕಡಿಮೆ ಬೆಲೆಯಲ್ಲಿ ಒದಗಿಸಲಾಗುತ್ತಿದೆ.

ಆಮದು ಮಾಡಲಾಗುತ್ತಿರುವ ಹತ್ತಿಯ ಬೆಲೆ ಏರಿದೆ ಆಮದು ಹತ್ತಿಗೆ ಸರ್ಕಾರವು ಬೆಂಬಲ ಬೆಲೆ ನಿರ್ಧರಿಸಬೇಕಾದ ಅಗತ್ಯವಿದೆ, ಸ್ಥಳೀಯವಾಗಿ ಬೆಳೆಸುವ ಹತ್ತಿಗೆ ಹೆಚ್ಚು ಬೆಲೆ ಸಿಗುವಂತೆ, ಸ್ಥಳೀಯ ಹತ್ತಿ ಬೆಳೆಗಾರರಿಗೆ ಹೆಚ್ಚು ಉತ್ತೇಜನ ದೊರಕುವಂತೆ ಮಾನ್ಯ ಸಚಿವರು

ಯಷ್ಟೇ ಅಲ್ಲದೆ, ಬೆಲೆ ನಿರ್ಧಾರದಲ್ಲಿನ ಏರುಪೇರುಗಳ ಕಾರಣವಾಗಿ ಕೂಡ ರೈತರು ನಷ್ಟಕ್ಕೆ ಈಡಾಗುತ್ತಿದ್ದಾರೆ. ಮಾರುಕಟ್ಟೆಯಲ್ಲಿ ಅಧಿಕ ಧರವಿದ್ದಾಗಲೂ ಅವರು ಮೋಸ ವಂಚನೆಗಳಿಗೆ ಬಲಿಯಾಗುತ್ತಿದ್ದಾರೆ. ವರ್ತಕರು ಹೆಚ್ಚಿನ ಲಾಭ ಗಳಿಸುತ್ತಾರೆ. ಆದ್ದರಿಂದ ಕರ್ನಾಟಕ ಡೆವಲಪ್‌ಮೆಂಟ್ ಸಿಲ್ಕ್ ಮಾರ್ಕೆಟಿಂಗ್ ಸೊಸೈಟಿಯ ಮೂಲಕ ಬೆಂಗಳೂರಿನಲ್ಲಿ ಸಿಲ್ಕ್ ಬ್ಯಾಂಕ್ ಒಂದನ್ನು ಕರ್ನಾಟಕ ಸರ್ಕಾರ ಮುಂದಿರಿಸಿದೆ. ಇದಕ್ಕೆ ಆರ್ಥಿಕ ನೆರವು ಅತ್ಯಗತ್ಯ. ಈ ವಿಷಯದತ್ತ ತಮ್ಮ ಗಮನಹರಿಸುವಂತೆ ನಾನು ಮಾನ್ಯ ಸಚಿವರಲ್ಲಿ ಮನವಿಮಾಡಿಕೊಳ್ಳುತ್ತೇನೆ. ಆಗ ಬೆಲೆಯಲ್ಲಿ ಏರುಪೇರುಗಳು ಕಂಡುಬರುವುದು ನಿಂತುಹೋಗಿ, ರೇಷ್ಮೆ ಉತ್ಪಾದಕರು ತಮ್ಮ ಶ್ರಮಕ್ಕೆ ತಕ್ಕ ಲಾಭವನ್ನು ಗಳಿಸಲು ಸಾಧ್ಯವಾಗುತ್ತದೆ. ರೇಷ್ಮೆ ನೇಕಾರರಿಗೂ ತಕ್ಕಮಟ್ಟಿನ ಆದಾಯ ಸಿಗುತ್ತದೆ. ಆದ್ದರಿಂದ ಕರ್ನಾಟಕ ಸರ್ಕಾರದ ಈ ಪ್ರಸ್ತುಪದತ್ತ ಗಮನಹರಿಸಿ ಆರ್ಥಿಕ ನೆರವು ನೀಡುವಂತೆ ನಾನು ಸಚಿವರನ್ನು ಪ್ರಾರ್ಥಿಸುತ್ತೇನೆ.

ಈಗ ಮಲ್‌ಬೆರಿ ಪ್ರದೇಶಗಳ ನೀರಾವರಿ ಸೌಲಭ್ಯಕ್ಕೆ ಸಂಬಂಧಪಟ್ಟಂತೆ ವಿಶ್ವಬ್ಯಾಂಕ್ ಈಗಾಗಲೆ ಯೋಜನೆಗಳಿಗೆ ಸಹಕಾರ ನೀಡಲು ಒಪ್ಪಿರುತ್ತದೆ. ಸಹಕಾರ ಸಂಘಗಳು ನೊಂದಣಿಗೊಂಡು ಅವು ಆರ್ಥಿಕ ನೆರವಿಗಾಗಿ ನಿಮ್ಮತ್ತ ನೋಡುತ್ತಿವೆ. ಈ ಸಂಘಗಳಿಗೆ ಬೇಗ ಆರ್ಥಿಕ ನೆರವು ಲಭ್ಯವಾಗುವಂತೆ ನೋಡಿಕೊಳ್ಳಬೇಕೆಂದು ನನ್ನ ಮನವಿಯಾಗಿದೆ.

ಕರ್ನಾಟಕವು ಸುಮಾರು 26500 ಟನ್‌ಗಳಷ್ಟು ಕಾಫಿಯನ್ನು ಉತ್ಪಾದಿಸುತ್ತಿದೆ. ಇದರ ಶೇಕಡ 34 ಕ್ಕಿಂತಲೂ ಹೆಚ್ಚು ಭಾಗವನ್ನು ರಫ್ತು ಮಾಡಲಾಗುತ್ತಿದೆ ಹಾಗೂ ಉಳಿದ ಭಾಗವನ್ನು ದೇಶದೊಳಗಿನ ಗ್ರಾಹಕರು ಬಳಸಿಕೊಳ್ಳುತ್ತಿದ್ದಾರೆ. ಕಾಫಿ ರಫ್ತಿನ ಮೇಲಣ ಸುಂಕವನ್ನು ಕಡಿಮೆ ಮಾಡಬೇಕೆಂಬ ಬಗ್ಗೆ ಹುಯಿಲು-ಗುಲ್ಲುಗಳು ಎದ್ದಿವೆ. ರಫ್ತು ಸುಂಕವನ್ನು ಕಡಿಮೆಮಾಡಲು ಸರ್ಕಾರ ಈಗಾಗಲೆ ಕ್ರಮ ಕೈಗೊಂಡಿದೆ. ಎಂದು ಪತ್ರಿಕಾ ವರದಿಯಿಂದ ನನಗೆ ತಿಳಿದುಬಂದಿದೆ. ಈ ಕ್ರಮವನ್ನು ತತ್‌ಕ್ಷಣ ಕೈಗೊಂಡುದಕ್ಕಾಗಿ ನಾನು ಮಾನ್ಯ ಸಚಿವರನ್ನು ಅಭಿನಂದಿಸುತ್ತೇನೆ. ಹೀಗಾಗಿ ರಫ್ತು ಮಾರುಕಟ್ಟೆಯ್ಲಲಿ ಕಾಫಿಯ ಬೆಲೆ ಇಳಿಯುವ ಸಂದರ್ಭ ತಪ್ಪಿ ಹೋಗಿದೆ.

ಕೈಮಗ್ಗ ಬಟ್ಟೆಗಳು, ಕರಕುಶಲ ವಸ್ತುಗಳು, ಏಲಕ್ಕಿ, ಕೆಲವು ಅರಣೋತ್ಪನ್ನಗಳು, ಪ್ಲೈವುಡ್‌ಗಳಂತಹವುಗಳ ರಫ್ತು ಮಾರುಕಟ್ಟೆಗೆ ಕರ್ನಾಟಕವು ತನ್ನ ಕೊಡುಗೆಯನ್ನು ನೀಡುತ್ತಿದೆ. ಈ ವಸ್ತುಗಳನ್ನು ರಫ್ತು ಮಾಡುತ್ತಿರುವುದರಿಂದ, ಇವುಗಳಿಗೆ ನೀಡಲಾಗುವ ಸಂರಕ್ಷಣೆಯನ್ನು ಇನ್ನಷ್ಟು ವಿಸ್ತರಿಸಬೇಕೆಂದು ನಾನು ಮಾನ್ಯ ಸಚಿವರಲ್ಲಿ ಮನವಿಮಾಡಿಕೊಳ್ಳುತ್ತೇನೆ.

ಮತ್ತೆ ರೇಷ್ಮೆ ಉದ್ಯಮದತ್ತ ಹಿಂದಿರುಗೋಣ, 1977 ಅಥವಾ 1978ರವರೆಗೆ ಈ ಉದ್ಯಮಕ್ಕೆ ಸಂರಕ್ಷಣೆಯನ್ನು ನೀಡಲಾಗಿದೆ. ಇನ್ನೂ ಹತ್ತು ವರ್ಷಗಳವರೆಗೆ ನೀವು ರೇಷ್ಮೆ ಉದ್ಯಮಕ್ಕೆ ಸುಂಕ ಸಂರಕ್ಷಣೆಯನ್ನು ಒದಗಿಸದ ಹೊರತು, ಈ ಉದ್ಯಮಗಳನ್ನು ಸಂಪೂರ್ಣವಾಗಿ ಸಂರಕ್ಷಿಸುವುದು ಸಾಧ್ಯವಾಗುವುದಿಲ್ಲ. ನಿಮಗೆ ತಿಳಿದಿರುವಂತೆ, ರೇಷ್ಮೆ ಉದ್ಯಮದಲ್ಲಿ ಕಾರ್ಮಿಕರ ಸಂಖ್ಯೆ ಅಧಿಕವಾಗಿದ್ದು ಇಲ್ಲಿ ಹತ್ತಿರ ಹತ್ತಿರ 3.4 ಮಿಲಿಯ ಜನರು ಕೆಲಸ ಮಾಡುತ್ತಿದ್ದಾರೆ.

ನೇಮಿಸಿಕೊಳ್ಳದಿರುವ ಬಗ್ಗೆ ಗುಲ್ಲೆದ್ದಿದೆ. ಮಾನ್ಯ ಸಚಿವರು ಅತ್ತ ದೃಷ್ಟಿ ಹರಿಸಿ ಸ್ಥಳೀಯರ ಆಶಯ ಹಂಬಲಗಳನ್ನು ಪೂರೈಸಿಕೊಡುತ್ತಾರೆಂದು ನಾನು ನಂಬಿದ್ದೇನೆ.

ಶ್ರೀ ಮಾಯಾ ಥೆವಾರ್ ಅವರು ರೇಷ್ಮೆ ನೂಲಿಗಿರುವ ಏರಿಕೆಯ ಬೆಲೆಯ ಬಗ್ಗೆ ಕಟುವಿಮರ್ಶೆ ಮಾಡಿದ್ದರು. ಕೈಮಗ್ಗದ ಉದ್ಯಮಗಳಿಗೆ ಭಾರೀ ನಷ್ಟವುಂಟಾಗುತ್ತದೆ ಎಂದು ಅವರು ಹೇಳಿದ್ದರು. ಅವರ ಅಭಿಪ್ರಾಯವನ್ನು ಒಪ್ಪುತ್ತಾ, ಕರ್ನಾಟಕದಲ್ಲಿ ಮಲ್‌ಬೆರಿ (ಉಪ್ಪುನೇರಳೆ) ಬೆಳೆಸುತ್ತಿರುವವರ ಪಾಡಿನತ್ತ ಅವರು ದೃಷ್ಟಿಹರಿಸಬೇಕೆಂದು ನಾನು ಬಯಸುತ್ತೇನೆ. ಭಾರತ ನಾಲ್ಕು ಬಗೆಗಳ ರೇಷ್ಮೆಯನ್ನು ಉತ್ಪಾದಿಸುತ್ತಿದ್ದು ಈ ಎಲ್ಲ ನಾಲ್ಕು ವಿಧಗಳಲ್ಲಿ ವಿಶ್ವಮಾರುಕಟ್ಟೆಯಲ್ಲಿಯೇ ಪ್ರಥಮ ಸ್ಥಾನವನ್ನು ಹೊಂದಿದೆ. ಕರ್ನಾಟಕವೊಂದೇ, ಭಾರತದಲ್ಲಿ ಒಟ್ಟು ಉತ್ಪಾದನೆಯಾಗುವ ಮಲ್ ಬೆರಿ ರೇಷ್ಮೆಯ ಸುಮಾರು ಶೇ. 80 ರಷ್ಟು ಭಾಗವನ್ನು ಉತ್ಪಾದಿಸುತ್ತಿದೆ. ಮಲ್‌ಬೆರಿ ರೇಷ್ಮೆಯನ್ನು ಉತ್ಪಾದಿಸುವ ಅನೇಕ ಪ್ರದೇಶಗಳು ಮುಂಗಾರು ಮಾರುತವನ್ನೇ ಅವಲಂಬಿಸಿವೆ ಮುಂಗಾರು ವೈಪರೀತ್ಯದಿಂದಷ್ಟೇ ಅಲ್ಲದೆ, ದೋಷಯುಕ್ತ ಬೀಜಗಳ ಸರಬರಾಜಿನಿಂದಾಗಿ ಕೂಡ, ರೈತರು ಫಸಲಿನಲ್ಲಿ ಭಾರೀ ನಷ್ಟವನ್ನು ಅನುಭವಿಸುತ್ತಾರೆ. ಹೀಗೆ ಇದು ಸಮಸ್ಯೆಯ ಕ್ಲಿಷ್ಟ ಅಂಶ ಅಥವಾ ಒಗಟಾಗಿದೆ. ರೈತರಿಗೆ ಸಾಕಷ್ಟು ನೀರಾವರಿ ಸೌಲಭ್ಯಗಳನ್ನು ಒದಗಿಸಿಕೊಟ್ಟ ಪಕ್ಷದಲ್ಲಿ ಮತ್ತು ಉತ್ತಮ ಬೀಜಗಳ ಸರಬರಾಜು ಮಾಡಿದಲ್ಲಿ, ಈಗ ಕರ್ನಾಟಕದಲ್ಲಿ ಈಗ ಉತ್ಪಾದನೆಯಾಗುತ್ತಿರುವ ರೇಷ್ಮೆಯ ಮೂರರಷ್ಟು ರೇಷ್ಮೆಯನ್ನು ಉತ್ಪಾದಿಸಲು ರೈತರು ಸಮರ್ಥರಾಗುತ್ತಾರೆ.

ಸಂಶೋಧನ ಕೇಂದ್ರಗಳನ್ನು ಪ್ರಾರಂಭಿಸಲು, ಕೇಂದ್ರದ ಸಿಲ್ಕ್ ಬೋರ್ಡ್ ತೆಗೆದುಕೊಂಡ ಕ್ರಮಗಳು ನನಗೆ ತಿಳಿದಿದೆ. ಈಚೆಗೆ ಕರ್ನಾಟಕ ಸರ್ಕಾರ, ರೇಷ್ಮೆ ದಾರದ ಉರುಳೆಗಳಿಗಾಗಿ ಬಯ್ವೋಲ್ಟೈನ್ ರೇಷ್ಮೆಗೂಡುಗಳನ್ನು ಉತ್ಪಾದಿಸಲು ಸಮರ್ಥವಾಗಿದೆ ಆದ್ದರಿಂದ ರೇಷ್ಮೆ ಹೆಚ್ಚು ಉತ್ಪಾದನೆ ಸಾಧ್ಯವಾಗಿದೆ. ಆದರೆ ಈ ಸಲ ದೋಷಯುಕ್ತ ಬೀಜಗಳ ಸರಬರಾಜಿನಿಂದಾಗಿ ರೇಷ್ಮೆ ಬೆಳೆ ಕುಗ್ಗಿ ಹೋಗಿದೆ. ರೈತರಿಗೆ ತಮ್ಮ ಜೀವನೋಪಾಯಕ್ಕೆ ಸಾಕಾಗುವಷ್ಟು ಸಂಪಾದಿಸಲು ಕೂಡ ಸಾಧ್ಯವಾಗಿಲ್ಲ. ಆಯವ್ಯಯದ ಅಂದಾಜುಪಟ್ಟಿಯ ಬಗ್ಗೆ ಮಾತನಾಡುತ್ತಾ ಶ್ರೀ ನರಸಿಂಹರಾವ್ ಅವರು ಬೆಳೆ ವಿಮೆಯನ್ನು ಜಾರಿಗೆ ತರಬೇಕೆಂಬ ಸಲಹೆ ನೀಡಿದ್ದಾರೆ. ನಾನೂ ಇದೇ ಸಲಹೆ ನೀಡಬಯಸುತ್ತೇನೆ. ಹೀಗೆ ಮಾಡಿದ ಪಕ್ಷದಲ್ಲಿ ರೈತರು ನಷ್ಟಕ್ಕೆ ಈಡಾಗುವ ಸಂಭವ ತುಂಬ ಕಡಿಮೆಯಾಗುತ್ತದೆ. ನಾವೇ ರೇಷ್ಮೆ ಗೂಡುಗಳನ್ನು ತಯಾರಿಸಲು ಪ್ರಾರಂಭಿಸಿದರೆ, ಕಷ್ಟ ನಷ್ಟಗಳನ್ನು ತಪ್ಪುತ್ತವೇ. ಕರ್ನಾಟಕ ಸರ್ಕಾರವು ರೇಷ್ಮೆಗೂಡು ಮಾರುಕಟ್ಟೆಗಳನ್ನು ಪ್ರಾರಂಭಿಸಿದ್ದು ಅಲ್ಲಿ ಸರ್ಕಾರಗಳು ಮಾತ್ರವೇ ಅಲ್ಲದೆ ಖಾಸಗಿ ಗುಂಪುಗಳೂ ಭಾಗವಹಿಸುತ್ತವೆ. ಆದರೆ ಖಾಸಗಿ ವಿಭಾಗ ರೈತರಿಗೆ ತತ್‌ಕ್ಷಣ ನಗದು ಹಣ ನೀಡುವ ಪರಿಸ್ಥಿತಿಯಲಿಲ್ಲ. ಆದ್ದರಿಂದ ರೈತರು ಸಾಕಷ್ಟು ಲಾಭ ಸಂಪಾದಿಸುತ್ತಿಲ್ಲ ಎರಡನೆಯದಾಗಿ ತುಂಬ ಮಳೆ ಬೀಳುತ್ತಿರುವ ಪ್ರದೇಶದಲ್ಲಿ ಉತ್ಪಾದಿಸಲಾದ ರೇಷ್ಮೆ ಗೂಡುಗಳು ಹೆಚ್ಚು ರೇಷ್ಮೆಯನ್ನು ಹೊಂದಿರುವುದಿಲ್ಲ. ಆದ್ದರಿಂದ, ನೈಸರ್ಗಿಕ ವೈಪರೀತ್ಯದಿಂದ ಎಂದರೆ ಪ್ರವಾಹ ಮೊದಲಾದವುಗಳ ಪರಿಣಾಮವಾಗಿ

## ನಾಗರಿಕ ಸರಬರಾಜು ಮತ್ತು ಸಹಕಾರ ಇಲಾಖೆಗಳ ಬೇಡಿಕೆ ಮೇಲಿನ ಚರ್ಚೆ*

ಶ್ರೀ ಬಿ. ರಾಚಯ್ಯ (ಚಾಮರಾಜನಗರ):- ಪ್ರಿಯ ಅಧ್ಯಕ್ಷರೆ, ವಾಣಿಜ್ಯ ನಾಗರೀಕ ಸರಬರಾಜು ಮತ್ತು ಸಹಕಾರ ಸಚಿವರು ಸಭೆಯ ಮುಂದೆ ಇರಿಸಿದ ಬೇಡಿಕೆಗಳನ್ನು ಕುರಿತಂತೆ ನನ್ನ ಕೆಲವು ಅಭಿಪ್ರಾಯಗಳನ್ನು ಮಂಡಿಸುತ್ತೇನೆ. ಈ ಬೇಡಿಕೆಗಳ ಬಗ್ಗೆ ಈಗಾಗಲೇ ಹಲವು ಸದಸ್ಯರು ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ, ರಫ್ತು ಮಾಡುವ ಕೆಲವು ವಸ್ತುಗಳಿಗಷ್ಟೇ ನಾನು ನನ್ನ ಮಾತುಗಳನ್ನು ಮಿತಿಗೊಳಿಸುತ್ತೇನೆ.

ಭಾರತೀಯ ರಫ್ತುಗಳ ಚರಿತ್ರೆಯಲ್ಲಿಯೇ 1976-77ನೆಯ ವರ್ಷವು ಒಂದು ಸ್ಮರಣಾರ್ಹ ವರ್ಷವೆಂದು ನಾವು ಹೇಳಬಹುದು. ಆ ವರ್ಷ ರಫ್ತುಗಳು ಆಮದುಗಳಿಗಿಂತ ಹೆಚ್ಚಿದವು ಹಾಗೂ ಸುಮಾರು 72 ಕೋಟಿ ರೂಗಳಷ್ಟರ ಅನುಕೂಲಕರ ವ್ಯಾಪಾರ ಸಮತೋಲನ [Trade balance] ಕಂಡು ಬಂತು. ಇದು ಸಚಿವಾಲಯವು ನೀಡಿದ ಒಂದು ಅಂದಾಜು ಲೆಕ್ಕವಾಗಿದೆ. ಸ್ವಾತಂತ್ರ್ಯೋದಯದ ಅನಂತರ, ಎರಡು ವರ್ಷ ಮಾತ್ರ ಹೆಚ್ಚುವರಿ ವ್ಯಾಪಾರ ಸಮತೋಲನ ಕಂಡು ಬಂದಿದೆ. 1972-73 ರಲ್ಲಿ ಹಾಗೂ 1976-77 ರಲ್ಲಿ. ಆದ್ದರಿಂದ, ಈ ವಿಷಯಕ್ಕೆ ಸಂಬಂಧಪಟ್ಟಂತೆ ವಾಣಿಜ್ಯ ಸಚಿವಾಲಯವು ಕೈಗೊಂಡ ಉತ್ತಮ ಕಾರ್ಯಕ್ಕಾಗಿ ಮೆಚ್ಚಿಗೆ ಸೂಚಿಸುವ ಅವಕಾಶವನ್ನು ನಾನು ಬಳಸಿಕೊಳ್ಳಬೇಕು.

ಈ ರಾಷ್ಟ್ರದ ರಫ್ತು ವ್ಯಾಪಾರಕ್ಕೆ ಕರ್ನಾಟಕವು ಬಹುಪಾಲು ಕೊಡುಗೆಯನ್ನು ನೀಡುತ್ತಿದೆ. ನಮ್ಮ ದೇಶದಿಂದ ರಫ್ತಾಗುವ ಹಾಗೂ ಭಾರತದ ರಫ್ತು ನಕಾಶೆಯಲ್ಲಿ ಸ್ಥಾನವನ್ನು ಕಂಡುಕೊಂಡಂತಹ ವಸ್ತುಗಳಲ್ಲಿ ಹೆಚ್ಚಿನವು. ವಿಶೇಷವಾಗಿ ಮ್ಯಾಗ್ನಟೈಟ್ ಹಾಗೂ ಕುದುರೆಮುಖದ ಅದುರುಗಳು ಕರ್ನಾಟಕದ್ದೇ ಆಗಿರುತ್ತವೆ. ಇರಾನಿಗೆ 7.5 ಮಿಲಿಯ ಟನ್ ಅದುರನ್ನು ರಫ್ತು ಮಾಡುವ ಉದ್ದೇಶವನ್ನು ಅದು ಹೊಂದಿದೆ. ಸ್ಥಳೀಯ ಸ್ಟೀಲ್ ಕಾರ್ಖಾನೆಗಳಿಗಾಗಿ 16 ಮಿಲಿಯನ್ ಟನ್ ಹಾಗೂ ರಫ್ತು ಮಾಡಲೋಸುಗ 26 ಮಿಲಿಯ ಟನ್‌ಗಳನ್ನು ಉತ್ಪಾದಿಸುವ ಗುರಿಯನ್ನು ಅದು ಇರಿಸಿಕೊಂಡಿದ್ದು, ಹೀಗೆ 1976-77ರ ಅದರ ಉತ್ಪಾದನಾ ಅಂದಾಜು ಒಟ್ಟು 42 ಮಿಲಿಯಟನ್. ಭಾರತದ ಹಾಗೂ ಇರಾನಿನ ಸರ್ಕಾರಗಳು ಜಂಟಿ ಯೋಜನೆಯೊಂದನ್ನು ಈ ವಿಷಯುದಲ್ಲಿ ಯೋಜಿಸಿಕೊಂಡಿರುತ್ತವೆ. ಸಚಿವಾಲಯುವನ್ನು ಅಭಿನಂದಿಸುತ್ತಾ, ಈ ಯೋಜನೆಯಲ್ಲಿ ಸ್ಥಳೀಯ ಜನರಿಗೇ ನೌಕರಿಯ ಅವಕಾಶ ಕಲ್ಪಿಸಿಕೊಡಬೇಕೆಂದು ನಾನು ಸಚಿವರನ್ನು ಕೋರುತ್ತೇನೆ. ಆದರೆ III ಹಾಗೂ IV ನೆಯ ದರ್ಜೆಗಳ ಸೇವೆಗಳಲ್ಲಿ ಕೂಡ ಇವರನ್ನು ಬಹುಸಂಖ್ಯೆಯಲ್ಲಿ ನೇಮಿಸಿಕೊಳ್ಳದಿರುವುದು ವಿಷಾದನೀಯ ಯೋಜನೆಗಳು ಪ್ರಾರಂಭವಾಗಿರುವ ಮಂಗಳೂರು ಮತ್ತು ಚಿಕ್ಕಮಗಳೂರು ಪ್ರದೇಶಗಳಲ್ಲಿ ಸ್ಥಳೀಯರನ್ನು ಕೆಲಸಕ್ಕೆ

---

* ಲೋಕ ಸಭಾ ನಡವಳಿಕೆ ದಿನಾಂಕ 27ನೇ ಜೂನ್, 1977 ಪುಟ 303-307

ಸಹಜವಾಗಿಯೇ ಯಾವುದೇ ಒಂದು ಇಲಾಖೆಯಂತೆ ಅವರು ತಮ್ಮ ಸಿಬ್ಬಂದಿಯ ಅಗತ್ಯಗಳನ್ನು ಪೂರೈಸಬೇಕು. ಆದರೆ ಪ್ರಯಾಣ ಮಾಡುವ ಸಾರ್ವಜನಿಕರಿಗೆ ರೈಲು ನಿಲ್ದಾಣಗಳಲ್ಲಿ ನೀರು, ವಿಶ್ರಾಂತಿ ಕೊಠಡಿಗಳು, ಶೌಚಾಲಯಗಳು ಮೊದಲಾದ ಸೌಲಭ್ಯಗಳನ್ನು ಒದಗಿಸುವುದು ಅವರ ಕರ್ತವ್ಯ. ಸಚಿವರು ಜನಸಾಮಾನ್ಯರ ಉಪಯೋಗಕ್ಕಾಗಿ ದರ್ಜೆ ರಹಿತ ರೈಲುಗಳನ್ನು ಯೋಜಿಸುತ್ತಿರುವುದು ನಿಜವಾಗಿ ಪ್ರಶಂಸನೀಯವಾಗಿದೆ. ಅವರಿಗೆ ವೆಚ್ಚ ಬೀಳದಂತೆ ಮೊತ್ತಗಳನ್ನು ಒದಗಿಸಲು ಅವರು ಆಲೋಚಿಸುತ್ತಿದ್ದಾರೆ. ಇವೆಲ್ಲ ಹೊಸ ವಿಚಾರಗಳನ್ನು ಅವರು ಮುಂಗಡ ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ. ಯಾವನೇ ನೌಕರನಿಗೆ ಬದಲಿ ವ್ಯಕ್ತಿಯನ್ನು ತರಲು ಕಷ್ಟವಾದ ತಾಂತ್ರಿಕ ನಿಪುಣ ವ್ಯಕ್ತಿಯಾಗಿರದ ಹೊರತು ಸೇವೆಯ ವಿಸ್ತರಣೆಯನ್ನು ನೀಡುವುದಿಲ್ಲ ಎಂದು ಸಚಿವರು ಸ್ಪಷ್ಟವಾಗಿ ಹೇಳಿದ್ದಾರೆ. ಇದು ಸ್ವಾಗತಾರ್ಹವಾದ ಸಲಹೆ. ಆದ್ದರಿಂದ ನಿರುದ್ಯೋಗಿ ಜನರಿಗೆ ಸ್ವಲ್ಪವಾದರೂ ಸಹಾಯವಾಗುತ್ತದೆ.

ಆದ್ದರಿಂದ ಅವರು ಮುಂದಿಟ್ಟಿರುವುದು ಉತ್ತಮವಾದ ನೀತಿ, ಅವರಿಗೆ ಪ್ರಯತ್ನದಲ್ಲಿ ದೈವ ಸಹಾಯವಿರಲಿ, ಜನತಾ ಸರಕಾರದ ಎಲ್ಲಾ ಒಳ್ಳೆಯ ಕೆಲಸಗಳಿಗೆ, ಉತ್ತಮ ಸಲಹೆಗಳಿಗೆ ನಾವು ಬೆಂಬಲ ಕೊಡುತ್ತೇವೆ. ನಾವಿಲ್ಲಿರುವುದು ಅವರನ್ನು ಟೀಕಿಸುವುದಕ್ಕಾಗಿ ಮಾತ್ರ ಅಲ್ಲ, ಅವರಿಗೆ ರಚನಾತ್ಮಕವಾದ ಸಲಹೆಗಳನ್ನು ಕೊಡುವುದಕ್ಕಾಗಿ ಕೂಡ. ಒಳ್ಳೆಯ ಕೆಲಸಕ್ಕೆ ವಿರೋಧಪಕ್ಷವು ತನ್ನ ಸಹಕಾರವನ್ನು ನೀಡುವುದಕ್ಕೆ ಇಲ್ಲಿ ನಿದರ್ಶನವಿದೆ. ಅವರು ತಪ್ಪು ಮಾಡಿದಾಗ, ಅವರಿಗೆ ಅದನ್ನು ತೋರಿಸಿಕೊಡುತ್ತೇನೆ, ತಿದ್ದಿಕೊಳ್ಳುವುದು ಅವರಿಗೆ ಸೇರಿದ್ದು, ಇಲ್ಲವಾದರೆ ಅವರು ಕಾಂಗ್ರೆಸ್ ಹೋದ ದಾರಿಗೆ ಹೋಗಬೇಕಾಗುತ್ತದೆ.

ನೇರವಾಗಿ ಬ್ರಾಡ್ ಗೇಜ್ ಮಾರ್ಗವನ್ನು ಕೈಗೆತ್ತಿಕೊಳ್ಳಬೇಕು. ಈ ಹಿಂದುಳಿದ ಪ್ರದೇಶಕ್ಕೆ ಪ್ರಯೋಜನವಾಗುವಂತೆ ಮಾಡಬೇಕು ಎಂದು ರೈಲ್ವೆ ಸಚಿವರಲ್ಲಿ ವಿನಂತಿಸಿಕೊಳ್ಳುತ್ತೇನೆ.

ಮಾನ್ಯ ಸಚಿವರು ಸೂಚಿಸಿದ ಇನ್ನೊಂದು ಮುಖ್ಯವಾದ ಕೆಲಸ ಗುಂತಕಲ್-ಬೆಂಗಳೂರು ಮಾರ್ಗದ ಗೇಜ್ ಪರಿವರ್ತನೆ, ಇದು ಬಸವನಹುಳುವಿನ ವೇಗದಲ್ಲಿ ನಡೆಯುತ್ತಲೇ ಇದೆ. ಗುರಿಯ ದಿನಾಂಕ ವೇಳೆಗೆ ರೈಲ್ವೆ ಆಡಳಿತವು ಅದನ್ನು ಮುಗಿಸಲು ಸಾಧ್ಯವಾಗುತ್ತದೆಯೋ ಇಲ್ಲವೋ ನಾನರಿಯೇ. ಏಕೆಂದರೆ ಅದಕ್ಕಾಗಿ ಒದಗಿಸಿರುವ ಹಣ ಬಹಳ ಕಡಿಮೆ ಬೆಂಗಳೂರಿನಲ್ಲಿ ಸಾಗಣೆಯ ಕಷ್ಟ ತುಂಬಾ ಇರುವುದರಿಂದ ರಾಜ್ಯ ಸರಕಾರವೂ ಸಂಸತ್ತಿನ ಉಭಯ ಸದನಗಳೂ ಬೆಂಗಳೂರು ಮೈಸೂರು ಮಾರ್ಗದ ಪರಿವರ್ತನೆ ಮತ್ತು ಈರೋಡಿನೊಂದಿಗೆ ಅದರ ಜೋಡಣೆಗಳನ್ನು ಕೇಳಿ ಮನವಿಸಲ್ಲಿಸಿವೆ. ರಾಜ್ಯ ಸರ್ಕಾರವು ಇದಕ್ಕೆ ಬೇಕಾದ ಸ್ಲೀಪರುಗಳನ್ನು ಉಚಿತವಾಗಿ ಪೂರೈಸುವುದಾಗಿ ಸಲಹೆ ಕೊಟ್ಟಿದೆ, ಅಲ್ಲದೆ ಮಾರ್ಗವನ್ನು ಹಾಕಲು ರಾಜ್ಯ ಸರ್ಕಾರದ ವೆಚ್ಚದಲ್ಲಿ ಭೂ ಸ್ವಾಧೀನ ಮಾಡಿಕೊಳ್ಳಲು ಮುಂದಡಿಯಿಡಲು ಸಿದ್ಧವಾಗಿದೆ. ಪ್ರಾರಂಬಿಕ ಹಂತಗಳಲ್ಲಿ ನಷ್ಟವೇನಾದರೂ ಆದರೆ, ಅದನ್ನು ತುಂಬಿಕೊಡಲು ಕೂಡ ಅವರು ಕೂತಿದ್ದಾರೆ. ಕೈಗಾರಿಕೆಯ ದೃಷ್ಟಿಯಿಂದ ಮೈಸೂರು ಹಿಂದುಳಿದ ನಗರವಾಗಿದೆ. ಆದ್ದರಿಂದ ಮೈಸೂರು-ಚಾಮರಾಜನಗರಗಳನ್ನು ಈರೋಡಿನೊಂದಿಗೆ ಸಂಪರ್ಕಗೊಳಿಸಿದರೆ ನೀವು ಎರಡು ರಾಜ್ಯಗಳನ್ನು ಒಂದುಗೂಡಿಸಿರುತ್ತೀರಿ. ತುಂಬಾ ಹಿಂದುಳಿದ ಪ್ರದೇಶಕ್ಕೆ ಸಹಾಯ ಮಾಡುತ್ತಿರುತ್ತೀರಿ. ಬೇರೆಯಾವುದಾದರೂ ರಾಜ್ಯವು ರೈಲ್ವೆಮಾರ್ಗದ ಪರಿವರ್ತನೆಗಾಗಿ ಇಷ್ಟೊಂದು ನೆರವು ನೀಡಲು ಮುಂದೆ ಬಂದಿದೆಯೆ ಎನ್ನುವುದು ಸಂದೇಹ.

ಆದ್ದರಿಂದ ಸನ್ಮಾನ್ಯ ಸಚಿವರು ಅದನ್ನು ಕೈಗೆತ್ತಿಕೊಳ್ಳುವಂತೆ ನೋಡಬೇಕೆಂದು ಕೋರುತ್ತೇನೆ. ಪ್ರಸ್ತುತ ಮುಂಗಡ ಪತ್ರದಲ್ಲೇ ಅದು ಸೇರುತ್ತದೆ ಎಂದು ನಾನು ನಿರೀಕ್ಷಿಸಿದ್ದೆ, ಆದರೆ ಈಗಲೂ ತುಂಬಾ ತಡವೇನೂ ಆಗಿಲ್ಲ. ಅವರು ತುಂಬಾ ಹೊಂದಾಣಿಕೆಗೊಳಿಸಿಕೊಂಡು ಒಡನೆ ಈ ಮಾರ್ಗವನ್ನು ಎತ್ತಿಕೊಳ್ಳಬೇಕೆಂದು ಕೊರುತ್ತೇನೆ.

ಅಪಘಾತಗಳನ್ನು ಕುರಿತು, ಬಹು ವೇದನೆಯಿಂದ ಸಚಿವರು ಹೇಳಿಕೆ ನೀಡಿ ತೇಜ್‌ಪುರದಲ್ಲಿ ನಡೆದ ಅಹಿತಕರ ಅಪಘಾತದ ಬಗೆಗೆ ಪ್ರಸ್ತಾಪಿಸಿದರು. ಪ್ರತಿವರ್ಷವೂ ಒಂದಲ್ಲ ಒಂದು ಸ್ಥಳದಲ್ಲಿ ಅಪಘಾತಗಳಾಗುವುದನ್ನು ನೋಡುತ್ತೇವೆ. ಸಾಮಾನ್ಯವಾಗಿ ಇಂತಹ ಸಂದರ್ಭಗಳಲ್ಲಿ ಮಾನವ ಅಂಶವು ಅತ್ಯಂತ ಮುಖ್ಯವಾಗಿರುತ್ತದೆ. ಆದ್ದರಿಂದ ಈ ರೈಲ್ವೆ ಮಾರ್ಗಗಳ ಅನುಪಾಲನೆಯನ್ನು ನಿರ್ವಹಿಸುವವರು ತೃಪ್ತರಾಗಿರುವಂತೆ ನೋಡಿಕೊಳ್ಳಬೇಕು. ಮತ್ತು ಪ್ರೋತ್ಸಾಹಿಸಬೇಕು; ಆದರೆ ಅದೇ ಸಮಯದಲ್ಲಿ ತಪ್ಪು ಮಾಡುವವರಿಗೆ ಸೂಕ್ತವಾದ ರೀತಿಯಲ್ಲಿ ವ್ಯವಹರಿಸಬೇಕು.

ಸರಕಾರವು ರೈಲ್ವೆಯನ್ನು ಒಬ್ಬ ಚಾಣಾಕ್ಷ ಉದ್ಯಮದಾರನಂತೆ ನಿರ್ವಹಿಸಬೇಕು. ಆದರೆ ಇವರಲ್ಲಿ ಸಮಾಜಸೇವೆಯ ಅಂಶವೂ ಇದೆ. ಅಷ್ಟು ಮಟ್ಟಿಗೆ ವರಮಾನ ಕಳೆಯುತ್ತದೆ.

ಗೇಜು ಪರಿವರ್ತನೆಯ ಸಲಹೆಯ ಮೇಲೂ ಅವರಿಂದ ವಿಷಯ ಪರಿಣಾಮವಾಗಿಲ್ಲ. ಆದರೆ ಎಂಜಿನ್ನುಗಳ ವಿದ್ಯುದೀಕರಣ ಮತ್ತು ಡೀಸಲೀಕರಣಗಳ ಮೇಲೆ ಪರಿಣಾಮವನ್ನುಂಟು ಮಾಡಿದೆ. ಉಗಿ ಎಂಜಿನ್ನುಗಳಿಗಿಂತ ಡೀಸಲ್ ಎಂಜಿನ್ನುಗಳು ಉತ್ತಮತರವಾಗಿ ಕೇಲಸ ಮಾಡುತ್ತವೆ ಎನ್ನುವುದು ಪ್ರಸಿದ್ಧವಾದ ವಿಚಾರವೇ ಆಗಿದೆ. ಡೀಸೆಲ್ ಯಂತ್ರಗಳಿಗಿಂತ ವಿದ್ಯುತ್ ಎಂಜಿನುಗಳು ಇನ್ನೂ ಚೆನ್ನಾಗಿ ಕೆಲಸ ಮಾಡುತ್ತವೆ. ಇದು ಪ್ರಪಂಚದ ಎಲ್ಲಾ ಕಡೆಯು ಪ್ರಸಿದ್ಧವಾಗಿರುವ ಸಂಗತಿ. ಅಂದಮೇಲೆ ನಾವು ಡೀಸಲೀಕರಣದಿಂದ ಉಗಿ ಎಂಜಿನುಗಳ ಕಡೆಗೆ ಹಿಂದಕ್ಕೆ ಬರುತ್ತಿದ್ದೇವೆ ಎಂದರ್ಥ. ನಮ್ಮ ಸರಕು ಸಾಗಣೆ ಕ್ಷಿಪ್ರವಾಗಿರುವುದಿಲ್ಲ. ಮತ್ತು ಮಾಲಿನ್ಯ ರಹಿತವಾಗಿರುವುದಿಲ್ಲ. ಆದ್ದರಿಂದ ಇಲ್ಲಿ ಮಾಡುವ ಕಡಿತ ನ್ಯಾಯವಲ್ಲ ಎನ್ನುವುದು ನನ್ನ ಅಭಿಪ್ರಾಯ ರೈಲ್ವೆ ಸಚಿವರು ಇದನ್ನು ಸರಿಪಡಿಸಬೇಕೆಂದು ವಿನಂತಿಸುತ್ತೇನೆ.

ನೂತನ ಮಾರ್ಗಗಳ ವಿಷಯವಾಗಿ ಹೇಳುವುದಾದರೆ, ಈ ಮೊದಲ ಭಾಷಣಕಾರರು ಆಗಲೆ ಹೇಳಿದಂತೆ, ಔದ್ಯಮಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಪ್ರದೇಶಗಳಿಗೆ ಹೊಸ ರೈಲು ಮಾರ್ಗಗಳನ್ನು ಹಾಕುವ ಒಂದು ಬೃಹತ್ ಯೋಜನೆಯಿರಬೇಕು. ಇದರಿಂದ, ಇದುವರೆಗೂ ರೈಲು ಮಾರ್ಗಗಳನ್ನೇ ಕಂಡಿರದ ಎಷ್ಟೋ ಪ್ರದೇಶಗಳು ನೋಡಿದಂತಾಗುತ್ತದೆ. ಆ ಹಿಂದುಳಿದ ಪ್ರದೇಶಗಳಿಗೆ ಹೊಸಮಾರ್ಗಗಳನ್ನು ಕೊಟ್ಟು ನ್ಯಾಯ ದೊರಕಿಸಬೇಕೆಂದು ಮಾನ್ಯ ಸಚಿವರನ್ನು ಕೋರುತ್ತೇನೆ.

ಹಾಗೆಯೇ, ರೈಲ್ವೆಗಳು ಬೇಕಾದಷ್ಟು ಸಮಸ್ಯೆಗಳನ್ನು ಎದುರಿಸುತ್ತಿವೆ. ಒಂದು ಸಮಸ್ಯೆ ಬಹುಗೇಜು ಮಾರ್ಗಗಳನ್ನು ಏಕಗೇಜು ಮಾರ್ಗಗಳನ್ನಾಗಿ ಪರಿವರ್ತಿಸುವುದು. 4292 ಕಿ.ಮಿ.ಗಿಂತ ಹೆಚ್ಚಿನ ನ್ಯಾರೋ ಗೇಜುಗಳನ್ನು ಸುಮಾರು 25427 ಕಿ.ಮೀ. ವರೆಗಿನ ಮೀಟರ್ ಗೇಜುಗಳನ್ನು ಬ್ರಾಡ್‌ಗೇಜುಗಳಾಗಿ ಪರಿವರ್ತಿಸಬೇಕಾಗಿದೆ. ಬಹುಗೇಜು ಗಳಿರುವವರೆಗೆ ಸಾಗಣೆಯಲ್ಲಿ ಕಷ್ಟಗಳಿರುತ್ತವೆ, ಕ್ಷಿಪ್ರ ಚಲನೆಯೂ ಇರುವುದಿಲ್ಲ. ಆದ್ದರಿಂದ, ಪರಿವರ್ತನೆಯ ಪ್ರಕ್ರಿಯೆಯನ್ನು ಚುರುಕುಗೊಳಿಸಬೇಕು. ಇದನ್ನು ಸಾಧ್ಯವಾದಷ್ಟು ಬೇಗ ಮಾಡಬೇಕು. ಸಾಗಾಣಿಕೆಯಲ್ಲಿ ಯಾವುದೇ ಕಷ್ಟವಿರಬಾರದು ಸರಕುಗಳ ಮತ್ತು ಪ್ರಯಾಣಿಕರ ಕ್ಷಿಪ್ರ ಚಲನೆ ಸಾಧ್ಯವಾಗುತ್ತದೆ.

ನೂತನ ಮಾರ್ಗಗಳಿಗೆ ಸಂಬಂಧಿಸಿದಂತೆ, ಸಚಿವರು ಕರ್ನಾಟಕದಲ್ಲಿ ಹಾಸನ-ಮಂಗಳೂರು ಮಾರ್ಗಗಳನ್ನು ಕೃಪೆಯಿಟ್ಟು ಸೂಚಿಸಿದ್ದಾರೆ. 1976 ವೇಳೆಗೆ, ಅದು ಮುಗಿಯಬೇಕಾಗಿತ್ತು. ಈಗ ಅದನ್ನು ಇನ್ನೂ ಎರಡು ಅಥವಾ ಮೂರು ವರ್ಷ ವಿಸ್ತರಿಸಲಾಗಿದೆ. ರೈಲ್ವೆ ಮಂಡಳಿಯು ಮೊದಲಲ್ಲೆ ಮಾಡಿದ ತಪ್ಪು ಅದನ್ನು ಬ್ರಾಡ್ ಗೇಜ್ ಆಗಿ ಕೈಗೊಳ್ಳದೇ ಹೋದುದು. ಬ್ರಾಡ್ ಗೇಜಿಗೆ ಬೇಕಾದ ರೀತಿಯಲ್ಲಿ ಪ್ರಾರಂಭಿಕ ಕೆಲಸಗಳನ್ನೆಲ್ಲಾ ಮಾಡಿದ್ದರೂ, ಮೀಟರ್ ಗೇಜ್ ಆಗಿ ಹಳಿಗಳನ್ನು ಜೋಡಿಸಿದರು. ಆಗಲೆ ಬ್ರಾಡ್ ಗೇಜ್ ಮಾಡಿದ್ದರೆ, ಅತಿಸುಲಭವಾಗಿ, ಮತ್ತು ಹತ್ತಿರದ ಮಾರ್ಗದಿಂದ ಮದರಾಸುವರೆಗೆ ತಲುಪಬಹುದಾಗಿತ್ತು. ಆದ್ದರಿಂದ ವಿಳಂಬವಾಗಿರುವ ಈ ಹಂತದಲ್ಲೂ ಈ ಮೀಟರ್ ಗೇಜ್ ಮಾರ್ಗವನ್ನು ತೆಗೆದುಹಾಕಿ

ವಿಕೇಂದ್ರಿಕರಿಸಲು ಅವರು ಆಲೋಚಿಸುತ್ತಿರುವುದು ಇದು ಪ್ರಶಂಸನೀಯವಾಗಿದೆ. ವಿಕೇಂದ್ರಿಕರಣವೆಂದರೆ, ಪ್ರಜಾ ಸತ್ತಾತ್ಮಕತೇ ಎಂದರ್ಥ ಅಧಿಕಾರಿಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಿ ಅವರನ್ನು ವಿವಿಧ ಹಂತಗಳಲ್ಲಿ ರೈಲ್ವೆ ಮಂದಿಯನ್ನು ನಂಬುವುದು. ಇದರಿಂದ ಗುರಿಗಳನ್ನು ಸಾಧಿಸಲು ರೈಲ್ವೆ ಆಡಳಿತಕ್ಕೆ ಸಹಾಯವಾಗುವುದು. ಮಾತ್ರವಲ್ಲ, ನಿರ್ಧಾರ ಕೈಗೊಳ್ಳುವ ಪ್ರಕ್ರಿಯೆಯನ್ನು ಅದು ಚುರುಕುಗೊಳಿಸುತ್ತದೆ.

ರೈಲ್ವೆಯು ಹೋದ ವರ್ಷ ಸುಮಾರು 65 ಕೋಟಿ ರೂಪಾಯಿಗಳು ಹೆಚ್ಚುವರಿಯನ್ನು ತೋರಿಸಿದೆ. ಆದರೆ ಈ ವರ್ಷಕ್ಕೆ ಸಚಿವರು ರೈಲ್ವೆ ಆಧಾಯವನ್ನು ಕಡಿಮೆಯಾಗಿ ಅಂದಾಜು ಮಾಡಿರುವಂತೆ ಅನ್ನಿಸುತ್ತದೆ, ವೆಚ್ಚವನ್ನು ಕೆಳಮಟ್ಟದಲ್ಲೆ ಇರಿಸಿದ್ದಾರೆ. 1975-76ರ ಕೋಟಿ ರೂಪಾಯಿಗಳ ಕೊರತೆಯನ್ನು ಅಳಿಸಿ, 1976-77ರಲ್ಲಿ ಸುಮಾರು 65 ಕೋಟಿ ರೂಪಾಯಿಗಳನ್ನು ಗಳಿಸಿದರೆ ಇನ್ನು 1977-78ನೆಯ ಸಾಲಿಗಾಗಿ ಕಡಿಮೆ ಅಂದಾಜು ಮಾಡಬೇಕಾದ ಅಗತ್ಯವೇನಿದೆ? ಇದರರ್ಥ ಇಷ್ಟೆ- ಅವರೇ ತಮ್ಮ ಭಾಷಣದ ಕೊನೆಯಲ್ಲಿ ಮಾಡಿದ ಹೇಳಿಕೆಯಂತೆ, ಸದ್ಯದಲ್ಲಿ ಪ್ರಯಾಣ ದರವನ್ನಾಗಲಿ ಸರಕುಸಾಗಾಣೆ ದರವನ್ನಾಗಲಿ ಏರಿಸಿಲ್ಲವಾದರೂ, ಅದನ್ನು ಪರಿಶೀಲಿಸಿ ತರ್ಕಬದ್ಧವಾಗಿಸುರುದಕ್ಕಾಗಿ ಒಂದು ತಜ್ಞರ ಸಮಿತಿಯನ್ನು ನೇಮಿಸಲಿದ್ದಾರೆ. ತಜ್ಞರ ಸಮಿತಿಯು ಸಾಗಣೆ ದರವನ್ನು ಪ್ರಯಾಣಿಕರ ಪ್ರಯಾಣ ಶುಲ್ಕವನ್ನು ತಗ್ಗಿಸಬಹುದು ಎಂದು ಅವರು ಭಾವಿಸುತ್ತಾರೆ. ಇವುಗಳನ್ನು ಈಗ ಒಂದು ವರ್ಷದ ಹಿಂದಷ್ಟೇ ಪರಿಷ್ಕರಿಸಲಾಗಿತ್ತು. ಆಗ ಈ ಸದನದಲ್ಲೂ ಇನ್ನೊಂದರಲ್ಲೂ ಸಾಗಾಣಿ ದರ ಮತ್ತು ಪ್ರಯಾಣ ಶುಲ್ಕಗಳ ಏರಿಕೆಯನ್ನು ಕಡಿಮೆ ಮಾಡಬೇಕೆಂದು ಗಲಾಟೆಯಾಗಿತ್ತು. ಹಾಗಿದ್ದರೆ ಅಂದಾಜು ಸರಿಯಾಗಿದೆ. ಅಲ್ಲವಾದರೆ, ಸಹಜವಾಗಿ ನಾವು ಸಾಗಣೆಯಿಂದಲೂ ಪ್ರಯಾಣ ಶುಲ್ಕದಿಂದಲೂ ಹೆಚ್ಚಿನ ವರಮಾನವನ್ನು ಗಳಿಸುತ್ತೇವೆ. ಅಥವಾ ನಿರೀಕ್ಷೆಗಳಿಗೆ ಸಮನಾಗಿ ವರ್ತಿಸಲು ಆಡಳಿತವು ಸಮರ್ಥವಾಗುವ ವಿಚಾರದಲ್ಲಿ ಅವರಿಗೆ ವಿಶ್ವಾಸವಿಲ್ಲವೆಂದು ಭಾವಿಸುತ್ತೇನೆ.

ರೈಲ್ವೆಯಲ್ಲಿಯೇ ಕೆಲಸಮಾಡುತ್ತಿದ್ದು, ಉದ್ಯೋಗದಿಂದ ತೆಗೆಯಲ್ಪಟ್ಟವರು, ಹಿಂದಿನ ಆಡಳಿತದಲ್ಲಿ ಸೇವೆಯಿಂದ ನೀಗಲಾದ ವ್ಯಕ್ತಿಗಳು- ಇವರನ್ನು ಮತ್ತೆ ನೇಮಿಸಿಕೊಂಡಾಗ, ಅವರಿಂದ ಸಹಜವಾಗಿಯೇ ಹೆಚ್ಚಿನ ಸಹಕಾರವು ದೊರಕುತ್ತದೆ; ಅವರು ಹೆಚ್ಚಿನ ದೇಶಭಕ್ತಿಯಿಂದ ಕಷ್ಟಪಟ್ಟು ದುಡಿಯುತ್ತಾರೆ. ಹಾಗಾದ ಪಕ್ಷದಲ್ಲಿ 32.5 ಕೋಟಿ ಹೆಚ್ಚುವರಿಯನ್ನು ಅವರು ಅಂದಾಜು ಮಾಡಿರುವುದು ಸಮರ್ಥನೀಯವಾಗುವುದಿಲ್ಲ. ನನ್ನ ಅಂದಾಜಿನಂತೆ ರೈಲ್ವೆ ಇನ್ನೂ ಹೆಚ್ಚಿನ ಆಧಾಯವನ್ನು ಗಳಿಸಬೇಕು, ಕಳೆದ ಎರಡು ತಿಂಗಳಲ್ಲಿ ಸಾಧಿಸಿದ ಕಾರ್ಯಗತಿಯನ್ನೇ ಮುಂದುವರಿಸಿದರೆ ಬರಲಿರುವ ವರ್ಷಗಳಲ್ಲಿ ರೈಲ್ವೆಗೆ 60 ಕೋಟಿ ರೂಪಾಯಿಗಳಷ್ಟು ವರಮಾನವು ಬರುತ್ತದೆ. ಯೋಜನಾ ವೆಚ್ಚದಲ್ಲಿ 20 ಕೋಟಿ ರೂ. ವರೆಗೆ ತಗ್ಗಿಸಿರುವುದು ನ್ಯಾಯವಾಗಿಲ್ಲ ಎನಿಸುತ್ತದೆ. ರೈಲ್ವೆ ಬೋರ್ಡ್ ಅಧ್ಯಕ್ಷರು ಪತ್ರಿಕಾ ಗೋಷ್ಠಿಯಲ್ಲಿ ಹೇಳಿದ ಪ್ರಕಾರ, 20 ಕೋಟಿ ರೂಪಾಯಿ ಕಡಿತವು ನೂತನ ರೈಲು ಮಾರ್ಗ ನಿರ್ಮಾಣದ ಮೇಲೆ, ಪರಿಣಾಮ ಬೀರಿಲ್ಲ;

## 1977-78ನೆಯ ಸಾಲಿನ ರೈಲ್ವೆ ಮುಂಗಡ ಪತ್ರ*

ಶ್ರೀ ಬಿ. ರಾಚಯ್ಯ (ಚಾಮರಾಜನಗರ):- ಅಧ್ಯಕ್ಷರೆ, ರೈಲ್ವೆ ಸಚಿವರು 1977-78ನೆಯ ವರ್ಷಕ್ಕಾಗಿ ಮಂಡಿಸಿರುವ ಮುಂಗಡ ಪತ್ರವನ್ನು ಕುರಿತು ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ನಿಂತಿದ್ದೇನೆ. ಮಾನ್ಯರೆ ಹೀಗೆ ಮಾಡುವಾಗ, ರೈಲ್ವೆ ಆಡಳಿತಕ್ಕೆ ನೂತನ ಕಾರ್ಯ ವಿಧಾನವೊಂದನ್ನು ನೀಡುವಲ್ಲಿ ವಿಶಿಷ್ಟ ಶೈಲಿಯನ್ನು ತೋರಿಸಿರುವ ಸಚಿವರನ್ನು ಅಭಿನಂದಿಸುವುದು ನನ್ನ ಮೊದಲನೆಯ ಕರ್ತವ್ಯವಾಗಿದೆ. ಎಲ್ಲಕ್ಕಿಂತ ಮೊದಲು ಅವರು ರೈಲ್ವೆ ಆಡಳಿತವನ್ನು ವ್ಯವಸ್ಥೆಗೊಳಪಡಿಸಿದ್ದಾರೆ, ರೈಲ್ವೆ ಮಂಡಳಿಯನ್ನು ಪುನಾರಚಿಸಿದ್ದಾರೆ.

ರೈಲ್ವೆ ಮಂಡಳಿಯು ರಚಿತವಾದಾಗಿನಿಂದಲೂ ನಮಗಿದ್ದ ವ್ಯಥೆ ಎಲ್ಲಾ ಅಧಿಕಾರಿಗಳೂ ರೈಲ್ವೆ ಮಂಡಳಿಯಲ್ಲಿ ಕೇಂದ್ರೀಕೃತವಾಗಿತ್ತೆನ್ನುವುದು. ಕೆಲವೊಮ್ಮೆ ಸಚಿವರಿಗೆ ರೈಲ್ವೆ ಮಂಡಳಿಯ ಮೇಲೆ ಹತೋಟಿಯಿದೆಯೆ ಇಲ್ಲವೆ ಎನ್ನುವುದೇ ಈ ಸದನದಲ್ಲೂ ಇನ್ನೊಂದು ಸದನದಲ್ಲೂ ಪ್ರಶ್ನೆಯಾಗಿತ್ತು. ಆಡಳಿತ ಸುಧಾರಣಾ ಆಯೋಗದ ಅಧ್ಯಕ್ಷರಾಗಿದ್ದ ಶ್ರೀ ಮುರಾರ್ಜಿ ದೇಸಾಯಿಯವರ ಸಂಪುಟದ ಸಚಿವರಾಗಿದ್ದ ಅವರು ಆ ಆಯೋಗದ ಬಹುತೇಕ ಶಿಫಾರಸ್ಸುಗಳನ್ನು, ರೈಲ್ವೆ ಆಡಳಿತಕ್ಕೆ ಸಂಬಂಧಿಸಿದಂತೆ ಒಪ್ಪಿಕೊಂಡುದ್ದು ಅತ್ಯಂತ ಉಚಿತವಾಗಿದೆ. ರೈಲ್ವೆ ಮಂಡಳಿಯ ರಚನೆಯನ್ನು ಗಮನಿಸಿದಾಗ ಅತ್ಯಂತ ಮುಖ್ಯರಾದ ವ್ಯಕ್ತಿಗಳು, ಮುಖ್ಯ ಸಚಿವ ಇಲಾಖೆಗಳನ್ನು ಪ್ರತಿನಿಧಿಸುವ ಅಧಿಕಾರಿಗಳು ಅದರಲ್ಲಿರುವುದು ಕಂಡು ಬರುತ್ತದೆ. ---------------- ರೈಲ್ವೆ ಮಂಡಳಿಯೇ ಒಂದು ಸಚಿವಾಲಯ (ಸೆಕ್ರೆಟೇರಿಯಟ್) ದಂತೆ ವರ್ತಿಸುತ್ತದೆ, ರೈಲ್ವೆ ಸಚಿವರಿಗೆ ಸಲಹಾಕಾರ ಪಾತ್ರವನ್ನು ನಿರ್ವಹಿಸುತ್ತದೆ ಎಂದು ವಾದಿಸಿ ಅದನ್ನು ಹಾಗೆಯೇ ಮುಂದುವರಿಸುವಂತೆ ಒತ್ತಾಯ ಪಡಿಸಲಾಗಿತ್ತು.

[ಶ್ರೀ ಎಂ. ಸತ್ಯನಾರಾಯಣರಾವ್ ಅಧ್ಯಕ್ಷತೆ ವಹಿಸಿದ್ದರು]

ಪುನರಚನೆಗಾಗಲಿ, ಸಂಖ್ಯೆಯನ್ನು ತಗ್ಗಿಸುವುದಕ್ಕಾಗಲಿ ಅಗತ್ಯವಿರಲಿಲ್ಲ. ಅವರೇ ಈಗ ಮಂಡಳಿಯನ್ನು ಮರುರಚಿಸಿ, ಸಂಖ್ಯೆಯನ್ನು ತಗ್ಗಿಸಲು ಮುಂದೆ ಬಂದಿರುವುದರಿಂದ, ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸಿ, ಅವರ ಪ್ರಯತ್ನದಲ್ಲಿ ನನ್ನೆಲ್ಲ ಸಹಕಾರದ ಭರವಸೆ ಕೊಡುತ್ತೇನೆ.

ಮಾನ್ಯರೆ, ರೈಲ್ವೆ, ಏಷಿಯಾದಲ್ಲಿ ರಾಜ್ಯ ಸರ್ಕಾರಗಳು ಆಡಳಿತ ನಡೆಸುವ ಎರಡನೆಯ ಬಹು ಮುಖ್ಯ ಉದ್ಯಮವೆಂದು ಪ್ರಸಿದ್ಧವಾಗಿದೆ. ಇದು ಜಗತ್ತಿನಲ್ಲೇ ಅತಿ ದೊಡ್ಡ ನಾಲ್ಕನೆಯ ಉದ್ಯಮವಾಗಿದೆ. ಆಡಳಿತ ನಿರ್ವಹಣೆಯಲ್ಲಿ ಸುಮಾರಾಗಿ 17 ಲಕ್ಷ ಜನರು ಕಾರ್ಯ ಪ್ರವೃತ್ತರಾಗಿದ್ದಾರೆ. ರೈಲ್ವೆಯು ಎದುರಿಸುತ್ತಿರುವ ವಿವಿಧ ಸಮಸ್ಯೆಗಳು ತುಂಬಾ ಕ್ಲಿಷ್ಟವಾದವು. ಕೆಲವೇ ತಿಂಗಳಲ್ಲಿ ಪರಿಹರಿಸಲು ಸಾಧ್ಯವಾಗದಂಥವು. ಆದರೆ ಸಚಿವರು ಅವುಗಳನ್ನು ಎದುರಿಸುತ್ತಿರುವ ರೀತಿ, ರೈಲ್ವೆ ಮಂಡಲಿಯಲ್ಲಿ ಕೇಂದ್ರಿಕೃತವಾಗಿರುವ ಅಧಿಕಾರಗಳನ್ನು

* ಲೋಕ ಸಭಾ ನಡವಳಿಕೆ ದಿನಾಂಕ 13ನೇ ಜೂನ್, 1977 ಪುಟ -333-339.

ನನಗೆ ತಿಳಿದು ಬಂದಿದೆ. ಈಗ ರಾಜಣ್ಣನವರೂ ಹೇಳಿದರು. ಆದರೆ ನಾನು ಅದನ್ನು ಪ್ರತಿಬಂಧ ಮಾಡುವುದಕ್ಕೆ ಕಷ್ಟವಾಗುತ್ತದೆ. ಯಾವುದೇ ಬೀಜವಾಗಲಿ ಆ ಬೀಜವನ್ನು ನಮ್ಮ ಸೀಡ್ಸ್ ಫಾರಂನಲ್ಲಿ ನೋಡಿ, ನಮ್ಮ ಯೂನಿವರ್ಸಿಟಿಯವರನ್ನು ಉಪಯೋಗಿಸಿಕೊಂಡು, ಜರ್ಮಿನೇಷನ್ ಎಷ್ಟಾಗುತ್ತದೆ. ಈಲ್ಡ್ ಎಷ್ಟಾಗುತ್ತದೆ. ಎಂದು ಮಾಡುವುದಕ್ಕೆ ತಡವಾಗುತ್ತದೆ. ಆದರೂ ಕೂಡ ಪ್ರೊಸೀಜರ್ ಪ್ರಕಾರ ನಾವು ಮಾಡಲೇಬೇಕು ಈ ವರ್ಷ ಇದನ್ನು ಮಾಡದೇ ಹೋದರೆ ಮುಂದಿನ ವರ್ಷ ಈ ಬೀಜ ಉಪಯೋಗಕ್ಕೆ ಬರುತ್ತದೆಯೋ ಇಲವೋ ಗೊತ್ತಿಲ್ಲ. ಮೊಳಕೆಯಾಗುವ ಸಂಖ್ಯೆ ಕಡಿಮೆಯಾಗಿ ಉತ್ಪಾದನೆ ಸಹ ಕಡಿಮೆಯಾಗಬಹುದು. ಈ ವರ್ಷ ಸಾಧ್ಯವಾದಷ್ಟು ಮಟ್ಟಿಗೆ ರೈತರಿಗೆ 5 ಸಾವಿರ ಕ್ವಿಂಟಾಲ್‌ನಷ್ಟು ಉತ್ತಮವಾಗಿರುವ ಬೀಜಬೇಕಾಗುತ್ತದೆ ಎಂದು ಬೆಳೆಸಿದ್ದೇವೆ. ಮತ್ತೆ ಇಲ್ಲಿ ಬೆಳೆದಿರುವ ರೈತರಿಗೆ ಅವರ ವ್ಯವಸಾಯದ ಖರ್ಚು ಹೆಚ್ಚಾಗಿದೆ. ಅಧುದರಿಂದ ಇಂದು ಬೀಜ ಬೆಳೆದಿರುವಂಥವರಿಗೆ ಹೆಚ್ಚು ದರ ಕೊಡಬೇಕು ಎನ್ನುವ ಮಾತನ್ನು ಹೇಳಿದ್ದಾರೆ. ಕಳೆದ ವರ್ಷ ನಮ್ಮ ಸರ್ಕಾರದವರು ಒಂದು ಕೆ.ಜಿ. ಹತ್ತಿ ಬೀಜಕ್ಕೆ 120 ರೂಪಾಯಿನಂತೆ ಗೊತ್ತು ಮಾಡಿದರು. ಹೊರಗಡೆ ಕಡಿಮೆ ಬೆಲೆ ಇತ್ತು. ಆದುದರಿಂದ ಸಾಕಷ್ಟು ಪ್ರಮಾಣದಲ್ಲಿ ಆಕರ್ಷಕ ಎಂದು ತಿಳಿದು ಇಲ್ಲಿ ಮಾರಾಟವಾಯಿತು. ಇಂದು ಮಹಾರಾಷ್ಟ್ರದಲ್ಲಿ, ಗುಜರಾತ್‌ನಲ್ಲಿ ಮತ್ತು ಆಂಧ್ರದಲ್ಲಿ ಗೊತ್ತು ಮಾಡಿರುವ ಬೆಲೆಗಿಂತಲೂ ಕಡಿಮೆ ಇದೆ. ಒಂದುಕಡೆ 80 ರೂಪಾಯಿ, ಮತ್ತೊಂದು ಕಡೆ 90 ರೂಪಾಯಿ ಇನ್ನೊಂದು ಕಡೆ 100 ರೂಪಾಯಿ ಗೊತ್ತು ಮಾಡಿದ್ದಾರೆ. ಹೋದ ವರ್ಷ ನಮ್ಮಲ್ಲಿ 120 ರೂಪಾಯಿ ಇತ್ತು. ಈ ವರ್ಷ 120 ರೂಪಾಯಿ ಮಾಡಬೇಕೆಂದು ಮಾಡಿದ್ದೇವೆ. ಈಗ 125 ರೂಪಾಯಿಯನ್ನು ಇನ್ನೂ ಹೆಚ್ಚಿಗೆ ಮಾಡುತ್ತಾರೆ ಎನ್ನುವ ದೃಷ್ಟಿಯಿಂದಲೆ ಕಾಯುತ್ತಿದ್ದಾರೆ.

ಪ್ರಕರಣವನ್ನು ಸಿ.ಓ.ಡಿ.ಗೆ ವಹಿಸಲಾಗಿದೆ. ಎಚ್.ಕೆ. ಪಾಟೀಲ್ ಅವರು ಈ ಸಂದರ್ಭದಲ್ಲಿ ಮಾತನಾಡುವಾಗ ಕೊಟ್ಟಂತಹ ಸಲಹೆಗಳ ಪ್ರಕಾರ ರೈತರಿಗೆ ಅತ್ಯುತ್ತಮವಾದ ಬೀಜಗಳನ್ನು ಕೊಡಬೇಕಾದುದು ನಮ್ಮ ಕರ್ತವ್ಯವಾಗಿದೆ.

ಸೀಡ್ಸ್ ಕಂಪನಿಯವರು ನಮ್ಮ ರೈತರಿಗೆ ಬೀಜವನ್ನು ಸರಬರಾಜು ಮಾಡುವುದಕ್ಕೆ ಮೊದಲು, ಇದು ಅತ್ಯುತ್ತಮವಾದಂಥ ತಳಿಯೇ ಎಂಬುದನ್ನು ಪರೀಕ್ಷೆ ಮಾಡುವ ಸಲುವಾಗಿ ಇರುವಂತಹ ಕಂಟ್ರೋಲ್ ಕಮಿಟಿ ಮುಂದೆ ಹೋಗಲಿಲ್ಲ; ಇದಕ್ಕಾಗಿಯೇ ಇರುವಂತಹ ಇವ್ಯಾಲ್ಯುಯೇಷನ್ ಕಮಿಟಿ ಮುಂದೆಯೂ ಸಹ ಹೋಗಲಿಲ್ಲ. ಇವೆಲ್ಲವೂ ಇತ್ತೀಚೆಗೆ ನನ್ನ ಗಮನಕ್ಕೆ ಬಂದ ಮೇಲೆ ಇದರ ಬಗ್ಗೆ ವಿಚಾರಣೆಮಾಡಲೇಬೇಕು ಎಂದು ನಾನು ಸಿ.ಓ.ಡಿ. ತನಿಖೆಗೆ ಒಪ್ಪಿಸಿದ್ದೇನೆ. --------- ಆ ದೃಷ್ಟಿಯಿಂದ ಅವರು ಎಂತಹ ಉನ್ನತ ಅಧಿಕಾರಿಗಳಾಗಲಿ, ಅವರು ರೈತರಿಗೆ ಇಂತಹ ಕಳಪೆ ಬೀಜಗಳನ್ನು ಕೊಡಿಸುವುದರಲ್ಲಿ ಶಾಮಿಲಾಗಿದ್ದಾರೆ, ಅವರು ತಪ್ಪಿತಸ್ಥರು ಎಂದು ಸಿ.ಓ.ಡಿ.ಯಿಂದ ವರದಿ ಬಂದರೆ ನಾನು ನಿಜವಾಗಲೂ ತಿಳಿಸುತ್ತಿದ್ದೇನೆ. ಯಾರೂ ಅಡ್ಡಬಂದರೂ ಕೇಳುವುದಿಲ್ಲ, ಅವರಿಗೆ ಏನು ಶಿಕ್ಷೆ ವಿಧಿಸಬೇಕು ಎಂದು ಸೂಚನೆ ಮಾಡುತ್ತಾರೋ ಅದನ್ನು ಮಾಡುವುದಕ್ಕೆ ನಾನು ತಯಾರಿದ್ದೇನೆ. ಎಂದು ನಾನು ಭರವಸೆ ಕೊಡಬಲ್ಲೆ, ಎರಡನೆಯದಾಗಿ ಕಾಂಪನ್‌ಸೇಷನ್ ಕೊಡುವ ಬಗ್ಗೆ ಅವರೇನಾದರೂ ಇನ್ಸ್ ಷ್ಯೂರೆನ್ಸ್ ಮಾಡಿದ್ದಾರೆಯೇ ಇಲ್ಲವೇ ಎನ್ನುವ ವಿಷಯಕೂಡ ನನಗೆ ತಿಳಿದಿಲ್ಲ. ಅದನ್ನೂ ಕೂಡ ಎನ್‌ಕ್ವೈರಿ ಮಾಡುವ ಕಾಲದಲ್ಲಿ ಅವರ ಮುಖಾಂತರ ನಾನು ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಈ ಸೀಡ್ಸ್ ತೆಗೆದುಕೊಳ್ಳುವುದರಲ್ಲಿ ಕಡೂರಿನಲ್ಲಿರುವ ಜಾಯಿಂಟ್ ಡೈರೆಕ್ಟರ್ ಮತ್ತು ಹಾನಗಲ್‌ನಲ್ಲಿರುವವರು ಪ್ರಚಾರ ಮಾಡಿ ಅವರಿಗೆ ಹೆಚ್ಚಿನ ರೀತಿಯಲ್ಲಿ ಸಹಾಯ ಮಾಡಿದ್ದಾರೆಂದು ಕೂಡ ಹೇಳಿದ್ದಾರೆ. ಅದೆಲ್ಲವೂ ಕೂಡ ಸಿ.ಓ.ಡಿ. ವ್ಯಾಪ್ತಿಗೆ ಬರುತ್ತದೆ. ಕಳೆದ ಸಾರಿ ನಮಗೆ ಎಷ್ಟು ಹತ್ತಿ ಬೀಜ ಬೇಕಾಗಿತ್ತು ಎನ್ನುವುದಿಲ್ಲ, ಎಂದು ಹೇಳಿಕೆ ಕೊಟ್ಟಿದ್ದೆ. ನಾಲ್ಕಾರು ವರ್ಷಗಳಿಂದ ಮಳೆ ಸಕಾಲದಲ್ಲಿ ಆಗದೇ ಇದ್ದುದರಿಂದ ಮತ್ತು ಕಳೆದ ವರ್ಷ ಮಳೆ ಬಿದ್ದಂಥ ಕಾಲದಲ್ಲಿ ಎಲ್ಲರೂ, ಹತ್ತಿಬೆಳೆಯಬೇಕು ಎಂದು ಅತ್ಯಂತ ಕಾತುರತೆಯಿಂದ ಕೇಳಿದರು. ಆ ಸಂದರ್ಭದಲ್ಲಿ ಹೊರಗಡೆಯಿಂದ ಬೀಜಗಳನ್ನು ತಂದಿದ್ದಾರೆ. ಅಲ್ಲಿ ಬಹಳ ಮಟ್ಟಿಗೆ ಬೆಲೆ ಕಡಿಮೆ ಇತ್ತು. ಆಕ್ಟ್ ಪ್ರಕಾರ ಬೇರೆಯವರು ಇಲ್ಲಿ ಬಂದು ಮಾರಾಟ ಮಾಡುವುದಕ್ಕೆ ಅವಕಾಶವಿಲ್ಲ. ಮಹಾರಾಷ್ಟ್ರದಲ್ಲಿ ರೈತರಿಂದ ಬೀಜವನ್ನು ಸಿಲೆಕ್ಟ್‌ಮಾಡಿ ತಂದುಬಿತ್ತುವುದಕ್ಕೆ ಮತ್ತು ಬೆಳೆಯುವುದಕ್ಕೆ ಅವಕಾಶ ಕೊಟ್ಟಿದ್ದೇವೆ. ಅವರು ಬೆಳೆದ ಎಲ್ಲವನ್ನೂ ನಾವು ಕೊಂಡು ಕೊಳ್ಳಬೇಕು ಎಂಬ ಬಲವಂಥವಾದ ಕಾಯಿದೆ ಇಲ್ಲ.

ಈ ವರ್ಷ ನಮ್ಮ ರಾಜ್ಯಕ್ಕೆ ಎಷ್ಟು ಹತ್ತಿ ಬೀಜ ಬೇಕು ಎನ್ನುವುದನ್ನು ಲೆಕ್ಕ ಹಾಕಿದೆ. ಸುಮಾರು 4-5 ಸಾವಿರ ಕ್ವಿಂಟಾಲ್ ಅಷ್ಟು ಒಳ್ಳೆಯ ಹತ್ತಿ ಬೀಜ ಬೇಕು ಎನ್ನುವುದನ್ನು ಲೆಕ್ಕ ಹಾಕಿದ್ದಾರೆ. ಅದರ ಪ್ರಕಾರ 750 ಹೆಕ್ಟೇರಿನಲ್ಲಿ ಈ ಬೀಜವನ್ನು ಬೆಳೆಸುವುದಕ್ಕೆ ಪ್ರತಿಯೊಬ್ಬ ರೈತರಿಗೂ 10 ಗುಂಟೆಯಷ್ಟು ಜಮೀನಿನಲ್ಲಿ ಬೆಳೆಯುವುದಕ್ಕೆ ಅವಕಾಶ ಕೊಟ್ಟಿದ್ದಾರೆ. ಎಂದು

## ಬಿತ್ತನೆ ಬೀಜಗಳ ಕುಂದು ಕೊರತೆ ಕುರಿತು*

ಶ್ರೀ ಬಿ. ರಾಚಯ್ಯ [ಅರಣ್ಯ ಮತ್ತು ಕೃಷಿ ಸಚಿವರು]

ಮಾನ್ಯ ಸಭಾಪತಿಯವರೇ ಕರ್ನಾಟಕದಲ್ಲಿ ಬೆಳೆಯುವ ಹತ್ತಿಯ ಬಗ್ಗೆ ಮಾನ್ಯ ಎಚ್.ಕೆ. ಪಾಟೀಲ್‌ರವರು ಈ ಸಭೆಯ ಗಮನವನ್ನು ಸೆಳೆದಿದ್ದಾರೆ. ಅವರು ಹತ್ತಿ ಬೆಳೆಗಾರರು ಮತ್ತು ಹತ್ತಿ ಗಿರಣಿ ಸಹಕಾರಿ ಸಂಘದಲ್ಲಿ ಅನುಭವ ಹೊಂದಿದ್ದಾರೆ. ಈ ಸಂದರ್ಭದಲ್ಲಿ ನಮ್ಮ ರಾಜ್ಯದ ಹತ್ತಿ ಬೆಳೆಗೆ ಬೇಕಾಗಿರುವಂತಹ ಉತ್ತಮವಾದ ಬೀಜವನ್ನು ತಯಾರು ಮಾಡಲು ನಾವು ಏನು ಕಾರ್ಯಕ್ರಮ ಹಾಕಿಕೊಂಡಿದ್ದೇವೆ. ಹಾಗೂ ಈ ವರ್ಷ ಈ ಬಗ್ಗೆ ಕೈಗೊಳ್ಳುವ ಕಾರ್ಯಕ್ರಮವೇನು? ಎಂಬುದನ್ನು ಈ ಸಬೆಯ ಗಮನಕ್ಕೆ ತರುತ್ತೇನೆ.

ಕರ್ನಾಟಕ ರಾಜ್ಯ ಬೀಜ ನಿಗಮವು ರಾಜ್ಯಕ್ಕೆ ಬೇಕಾಗುವ ಪ್ರಮಾಣಿತ ಹತ್ತಿ ಬೀಜ ವಿತರಣೆಯನ್ನು ಮಾಡಲಾಗುತ್ತಿದೆ, 1987-88ನೇ ಸಾಲಿನಲ್ಲಿ ಮಾರಾಟವಾದ ಪ್ರಮಾಣಿತ ಸಂಕರ ಹತ್ತಿ ಬೀಜದ ಪ್ರಮಾಣವನ್ನು ಪರಿಗಣಿಸಿ 1988-89ನೇ ಸಾಲಿನಲ್ಲಿ ವಿತರಣೆ ಮಾಡಲು 1701 ಕ್ವಿಂಟಾಲ್ ಸಂಕರ ಹತ್ತಿ ಬೀಜವನ್ನು ಉತ್ಪಾದಿಸಿ ಕರ್ನಾಟಕ ರಾಜ್ಯ ನಿಗಮವು ಶೇಖರಿಸಿತ್ತು. ಆದರೆ ಅತೀ ಉದ್ದ ಎಳೆಯ ಹತ್ತಿಗೆ ಉತ್ತೇಜಕರವಾದ ಬೆಲೆಯಿದ್ದುದರಿಂದ ಪ್ರಮಾಣಿತ ಹತ್ತಿ ಬೀಜಕ್ಕೆ ಅಧಿಕ ಬೇಡಿಕೆ ಉಂಟಾಗಿ, ಈ ಬೇಡಿಕೆಯನ್ನು ಕರ್ನಾಟಕ ರಾಜ್ಯ ಬೀಜ ನಿಗಮವು ಈಡೇರಿಸಲು ಸಾಧ್ಯವಾಗಲಿಲ್ಲ. ರಾಜ್ಯದ ಬೀಜ ನಿಗಮವು 1648 ಕ್ವಿಂಟಾಲ್ ಡಿ.ಸಿ. ಎಚ್ 32, ಮತ್ತು 110 ಕ್ವಿಂಟಾಲ್ ವರಲಕ್ಷ್ಮಿ, ಬೀಜವನ್ನು ಸರಬರಾಜು ಮಾಡಿತ್ತು. ಸರ್ಕಾರದಿಂದ ಪರವಾನಗಿ ಪಡೆದ ರಾಜ್ಯದ ಹತ್ತಿ ಬೀಜ ವ್ಯಾಪಾರಿಗಳು 897100 ಕ್ವಿಂಟಾಲ್ ಬೀಜಗಳನ್ನು ವಿತರಣೆ ಮಾಡಿದರು.

ಕಳಪೆ ಹತ್ತಿ ಬೀಜಗಳನ್ನು ಧಾರವಾಡ, ಉತ್ತರ ಕನ್ನಡ, ಬೆಳಗಾಂ, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ಅನಧಿಕೃತವಾಗಿ ಮಾರಾಟ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ------- ರೈತರಿಗೆ ಪ್ರಾಮಾಣಿತ ಬೀಜಗಳನ್ನೇ ಅಧಿಕೃತ ಡೀಲರುಗಳ ಮೂಲಕ ಮಾತ್ರ ಖರೀದಿಸಲು ಆಕಾಶವಾಣಿ ಮೂಲಕ ಮತ್ತು ಇತರ ಮಾಧ್ಯಮಗಳ ಮೂಲಕ ತಿಳಿಸಲಾಗಿತ್ತು. ನಷ್ಟಕ್ಕೆ ಗುರಿಯಾದ ನಂತರ ಸಾಲದ ಹೊರೆಯ ಬಗೆಗೆ ನಿಖರವಾದ ಮಾಹಿತಿಯ ರೈತರಿಂದಾಗಲೀ, ರೈತ ಸಂಘಟಣೆ ಗಳಿಂದಾಗಲಿ ಬಂದಿಲ್ಲ. ------ ಇಲಾಖೆಯು ಕಾನೂನು ರೀತ್ಯಾ ಕ್ರಮಗಳನ್ನು ಜರುಗಿಸುತ್ತಿದ್ದು ಇಲ್ಲಿಯವರೆಗೆ ಇಂತಹ ಒಟ್ಟು 83 ಪ್ರಕರಣಗಳನ್ನು ಹತ್ತಿ ನಿಯಂತ್ರಣ ಕಾಯಿದೆ 1964, (ಕಾಟನ್ ಕಂಟ್ರೋಲ್ ಆಕ್ಟ್) ಹತ್ತಿ ಸಾಗಾಣಿಕೆಯ ಕಾಯಿದೆ 1923, (ಕಾಟನ್ ಟ್ರಾನ್ಸ್‌ಪೋರ್ಟ್ ಆಕ್ಟ್) ಹಾಗೂ ಬೀಜ-ಕಾಯಿದೆ (1966)ಗಳ (ಸೀಡ್ಸ್-ಆಕ್ಟ್) ಅಡಿಯಲ್ಲಿ ದಾಖಲುಮಾಡಿಕೊಂಡಿದೆ. ಆದರೂ ಸಹ ಇದೊಂದು ತುಂಬಾ ಗಂಭೀರವಾದ ವಿಷಯವೆಂದು ಪರಿಗಣಿಸಿ ಸುಧೀರ್ಘವಾಗಿ ತನಿಖೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸಲು ಈ

* ವಿಧಾನ ಪರಿಷತ್ತಿನ ನಡವಳಿಕೆ ದಿನಾಂಕ 21ನೇ ಫೆಬ್ರವರಿ, 1989 ಪುಟ 530-531

ನಡೆಯುತ್ತಿಲ್ಲ, ಮೊದಲ ವೇಗದಲ್ಲೂ ನಡೆಯುತ್ತಿಲ್ಲ. ವೈದ್ಯಕೀಯ ರಂಗದಲ್ಲಿ ರಾಷ್ಟ್ರೀಯ ಗುರಿ ಏನು ಇದೆಯೋ ಆ ಗುರಿಯ ಸಾಧನೆ ಮಾಡುತ್ತಿದ್ದೇವೆ.

ಒಂದೊಂದು ಸಾರಿ ಕೇಂದ್ರ ಸರ್ಕಾರವು ನಮಗೆ ಹೆಚ್ಚಿನ ಗುರಿಯನ್ನು ಗೊತ್ತು ಮಾಡುತ್ತದೆ. ಆದರೆ ವಾಸ್ತವಿಕ ಅಂಶವನ್ನು ಗಮನದಲ್ಲಿಟ್ಟುಕೊಂಡು ಯೋಜನೆಯನ್ನು ತಯಾರು ಮಾಡಿ ಗುರಿಯನ್ನು ಈಗಾಗಲೇ ನಿಗದಿ ಮಾಡಬೇಕೆಂದು ನಮ್ಮ ಸರ್ಕಾರ ಕೇಂದ್ರ ಸರ್ಕಾರಕ್ಕೆ ತಿಳಿಸಿದೆಯೆಂದು ಈ ಸಂದರ್ಭದಲ್ಲಿ ಹೇಳುತ್ತಿದ್ದೇನೆ. ಮಾನ್ಯ ವೀರಯ್ಯ ಸ್ವಾಮಿಯವರು ವೈದ್ಯಕೀಯ ಇಲಾಖೆಯ ಬಗ್ಗೆ ಎಸ್ಟಿಮೇಟ್ ಕಮಿಟಿಯವರು ಮಾಡಿರುವ ಆರೋಪಗಳ ಬಗ್ಗೆ ಮಾತನಾಡಿದ್ದಾರೆ. ಆಸ್ಪತ್ರೆಗಳಿಗೆ ಕೊಡುವ ಬೆಡ್‌ಶೀಟ್‌ಗಳು, ರಗ್ಗುಗಳು ಹಾಗೂ ಮತ್ತಿತರ ವಸ್ತುಗಳನ್ನು ಕೊಂಡುಕೊಂಡಿರುವರು ಮಾಡಿರುವ ಬೆಲೆಗೂ ಹಾಗೂ ಮಾರ್ಕೆಟ್ ಬೆಲೆಗೂ ಬಹಳ ವ್ಯಾತ್ಯಾಸ ಇದೆಯೆಂದು, ಈ ಎಲ್ಲಾ ವಸ್ತುಗಳನ್ನು ಹಳೇಪಾಳ್ಯಾದ ಒಂದು ಕಡೆಯೇ ಕೊಂಡು ಕೊಳ್ಳುವ ವ್ಯವಸ್ಥೆ ನಡೆದಿದೆ ಎಂದು ಹೇಳಿದ್ದಾರೆ. ಎಸ್ಟಿಮೇಟ್ ಕಮಿಟಿಯವರು ಆ ಬಗ್ಗೆ ರಿಪೋರ್ಟ್ ಕೊಟ್ಟ ತಕ್ಷಣ, ನಾನು ಆ ರಿಪೋರ್ಟನ್ನು ಲೋಕಾಯುಕ್ತಕ್ಕೆ ಕಳುಹಿಸಿ ವಿಚಾರಣೆ ಮಾಡಬೇಕೆಂದು ತಿಳಿಸಿದ್ದೇನೆ. ಯಾರು ಇದರಲ್ಲಿ ತಪ್ಪು ಮಾಡಿದ್ದಾರೋ ಅವರ ಮೇಲೆ ನಿರ್ಧಾಕ್ಷಿಣ್ಯವಾಗಿ ಕ್ರಮ ತೆಗೆದುಕೊಳ್ಳಬೇಕೆನ್ನುವ ದೃಷ್ಟಿಯಿಂದ ಲೋಕಾಯುಕ್ತಕ್ಕೆ ಆ ರಿಪೋರ್ಟ್‌ನ್ನು ಕಳುಹಿಸಲಾಗಿದೆ. ಈ ಇಲಾಖೆಯಲ್ಲಿ ನೇಮಕಾತಿ ಮಾಡುವುದಾಗಲಿ, ಔಷಧಗಳನ್ನು ಕೊಂಡುಕೊಳ್ಳುವುದಾಗಲಿ, ಮತ್ತಿತರ ವಸ್ತುಗಳನ್ನು ಖರೀದಿ ಮಾಡುವ ಸಂದರ್ಭದಲ್ಲಿ ಎಲ್ಲವೂ ಸರಿಯಾಗಿದೆ ಎಂದು ನಾನು ಹೇಳುವುದಿಲ್ಲ. ನಾನು ಇದರ ಬಗ್ಗೆ ತೀಕ್ಷ್ಣವಾಗಿ ನೋಡುತ್ತಿದ್ದೇನೆ. ಯಾರು ಲೋಪ ದೋಷಗಳನ್ನು ಮಾಡಿದ್ದಾರೋ ಅವರ ಮೇಲೆ ಎಲ್ಲಾ ಕ್ರಮವನ್ನೂ ತೆಗೆದುಕೊಳ್ಳುವುದಕ್ಕೆ ನಾನು ಪ್ರಯತ್ನ ಮಾಡುತ್ತೇನೆ. ಈ ದೃಷ್ಟಿಯಲ್ಲಿ ಅಕ್ರಮಕ್ಕೆ ಅವಕಾಶ ಮಾಡಿಕೊಟ್ಟ ಯಾರೇ ಅಧಿಕಾರಿ ಇರಲಿ ಅವರ ಮೇಲೆ ಕ್ರಮ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆಂದು ಮತ್ತೊಮ್ಮೆ ಹೇಳುತ್ತೇನೆ ಈಗಾಗಲೇ ಸಂಬಂಧ ಪಟ್ಟವರಿಗೆ ಆ ಪ್ರಕರಣವನ್ನು ಕಳುಹಿಸಿಕೊಟ್ಟಿದ್ದೇನೆ. ಇನ್ನು ಮಾನ್ಯ ಸದಸ್ಯರೊಬ್ಬರು ಮಾತನಾಡುತ್ತಾ ನನ್ನ ಇಲಾಖೆಯ ಜವಾಬ್ದಾರಿಯನ್ನು ನಾನು ನಿರ್ವಹಿಸುತ್ತಿರುವಾಗ ಅನ್ಯರು ಕೈ ಹಾಕಿ ಅಡ್ಡಿ ಬರುವ ಸಂದರ್ಭಗಳಲ್ಲೂ ಕೂಡ ಸುಮ್ಮನೆ ಕುಳಿತಿದ್ದೀರಿ. ಎಂದು ಹೇಳಿದ್ದಾರೆ ಹಾಗೇನೂ ಇಲ್ಲ. ನಾನು ನನ್ನ ಇಲಾಖೆಯ ಕರ್ತವ್ಯವನ್ನು ಸೂಕ್ತವಾಗಿ ಜವಾಬ್ದಾರಿಯುತವಾಗಿ ನಿರ್ವಹಿಸುತ್ತಿದ್ದೇನೆ, ಅದಕ್ಕೆ ಯಾರೂ ಅಡ್ಡಿ ಪಡಿಸಬೇಕಾದ ಪ್ರಮೇಯ ಬಂದಿಲ್ಲ. ಬಂದರೂ ಕೂಡ ಅಂಥ ಸಂದರ್ಭದಲ್ಲಿ ನಾನು ಈ ಸ್ಥಾನದಲ್ಲಿ ಇರುವುದಿಲ್ಲ ಎಂದು ಹೇಳಬಯಸುತ್ತೇನೆ. ನಾನು ನನ್ನ ಜವಾಬ್ದಾರಿಯನ್ನು ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ಮಾಡುತ್ತಿದ್ದೇನೆ ಈ ಸಂದರ್ಭದಲ್ಲಿ ತಿಳಿಸುತ್ತೇನೆ.

ಈ ಸಂದರ್ಭದಲ್ಲಿ ಹೇಳುತ್ತೇನೆ.

ಆ ಮೇಲೆ ನರ್ಸಿಂಗ್ ಕಾಲೇಜುಗಳು, ನರ್ಸಿಂಗ್ ಸ್ಕೂಲುಗಳು, ಫಾರ್ಮಸಿ ಕಾಲೇಜುಗಳು ಹಾಗೂ ಸ್ಕೂಲುಗಳನ್ನು ಆದಷ್ಟು ಮಟ್ಟಿಗೆ ಹೊಸದಾಗಿ ಓಫನ್ ಮಾಡುವುದನ್ನು ತಡೆಗಟ್ಟಿದ್ದೇವೆ. ಈ ರೀತಿ ಕಾಲೇಜುಗಳನ್ನು ಹೆಚ್ಚು ಮಾಡುವುದರಿಂದ ನಿರುದ್ಯೋಗಿಗಳು ಹೆಚ್ಚಾಗುತ್ತ ಇವತ್ತಿನ ದಿವಸಗಳಲ್ಲಿ ಡಾಕ್ಟರುಗಳಾಗಲಿ, ನರ್ಸಸ್‌ಗಳಾಗಲೀ, ನಿರುದ್ಯೋಗಿಗಳಾಗಿ ಇರುವುದಕ್ಕೆ ಅವಕಾಶವಿಲ್ಲ ಅವರುಗಳಿಗೆ ಯಾವುದಾದರೊಂದು ಕಡೆ ಉದ್ಯೋಗ ಸಿಗುತ್ತವೆ. ಹೊಸದಾಗಿ 800 ಎ.ಎನ್.ಎಂ.ಗಳನ್ನು ನಮ್ಮ ಸರ್ಕಾರ ನೇಮಿಸಿದೆ. ಈ ದೃಷ್ಟಿಯಲ್ಲಿ ಹೇಳುವುದಾದರೆ ಈ ಹುದ್ದೆಗಳು ಹಲವಾರು ವರ್ಷಗಳಿಂದ ಖಾಲಿ ಬಿದ್ದಿದ್ದವು. ನಮ್ಮ ರಾಜ್ಯದಲ್ಲಿರುವ ಆಸ್ಪತ್ರೆಗಳಲ್ಲಿ ಒಟ್ಟು 234 ಜನ ಡಾಕ್ಟರುಗಳ ಜಾಗ ಖಾಲಿ ಇದೆ. ಅವುಗಳಲ್ಲಿ ಈ ವರ್ಷ 150 ಜಾಗಗಳಿಗೆ ಡಾಕ್ಟರುಗಳನ್ನು ನೇಮಕ ಮಾಡುತ್ತೇವೆ. ಈ ತಿಂಗಳು ಅವರುಗಳನ್ನು ನೇಮಕ ಮಾಡಲಾಗುತ್ತದೆಂದು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟ ಪಡುತ್ತೇನೆ. ಆ ಮೇಲೆ ಆಸ್ಪತ್ರೆಗಳಿಗೆ ಬೇಕಾಗಿರುವ ಕಟ್ಟಡಗಳು, ಸಿಬ್ಬಂದಿವರ್ಗ, ಔಷಧಗಳು ಹಾಗೂ ಆಸ್ಪತ್ರೆಗಳ ನಡೆಯುತ್ತಿರುವ ಅವ್ಯವಹಾರಗಳನ್ನು ಸರಿಪಡಿಸುವುದಕ್ಕೆ ಎಲ್ಲಾ ರೀತಿಯ ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಿದ್ದೇನೆ. ಆ ಮೇಲೆ ಭಾರತೀಯ ವೈದ್ಯಕೀಯ ಪದ್ಧತಿಯ ಬಗ್ಗೆ ಮಾತ್ರ ಮಾನ್ಯ ಸದಸ್ಯರು ಒಬ್ಬರು ಮಾತನಾಡಿದ್ದಾರೆ. ಭಾರತೀಯ ವೈದ್ಯ ಪದ್ದತಿಯಲ್ಲಿ ಬರುವ ಆಯುರ್ವೇದ, ಯುನಾನಿ, ಹೋಮಿಯೋಪತಿಗಳಿಗೆ ಸರ್ಕಾರ ಹೆಚ್ಚು ಗಮನವನ್ನು ಕೊಟ್ಟು ಗಿಡಮೂಲಿಕೆಗಳನ್ನು ಹೆಚ್ಚು ಬೆಳೆಸುವುದಕ್ಕೆ ಪ್ರಯತ್ನ ಮಾಡಬೇಕೆಂದು ಮಾನ್ಯ ಬೆಲ್ಲದ್ ರವರು ಹೇಳಿದ್ದಾರೆ. ಮಾನ್ಯ ಸದಸ್ಯರು ಹೇಳಿದ ಹಾಗೆ ಆಯುರ್ವೇದ, ಯುನಾನಿ ಮತ್ತು ಹೋಮಿಯೋಪತಿಗಳಿಗೆ ಬೇಕಾಗುವ ಎಲ್ಲಾ ಮೂಲಿಕೆಗಳನ್ನು ಬೆಳೆಸುವ ಕಡೆ ಸರ್ಕಾರ ಹೆಚ್ಚಿನ ಗಮನವನ್ನು ಕೊಡುತ್ತಿದೆ. ಗಿಡ ಮೂಲಿಕೆಗಳನ್ನು ಬೆಳೆಸುವುದಕ್ಕೆ ಅರಣ್ಯ ಇಲಾಕೆ ಮತ್ತು ತೋಟಗಾರಿಕೆ ಇಲಾಖೆಗೆ ನಿರ್ದೇಶನವನ್ನು ಕೊಡಲಾಗಿದೆ. ಈ ಕಾರ್ಯಕ್ರಮದಲ್ಲಿ ಸರ್ಕಾರ ಹೆಚ್ಚಿನ ಸಾಧನೆಯನ್ನು ಮಾಡಿದೆ ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಆಯುರ್ವೇದ, ಹೋಮಿಯೋಪತಿ, ಯೂನಾನಿ ರೀತಿಯ ವೈದ್ಯಕೀಯ ಸೌಲಭ್ಯಗಳಿಗೆ ಉತ್ತೇಜನ ಕೊಡುವುದಕ್ಕೋಸ್ಕರ ಯಾರು ಈ ಮೇಲ್ಕಂಡ ವೈದ್ಯಕೀಯದಲ್ಲಿ ಪರಿಣಿತರಾಗಿದ್ದಾರೋ ಅವರುಗಳಿಗೆ ಮಾನಸಿಕ 250 ರೂಪಾಯಿಗಳನ್ನು ಮಾಸಾಶನವಾಗಿ ನೀಡಲಾಗುತ್ತಿದೆ. ಅದೂ ಅಲ್ಲದೆ ಆಯುರ್ವೇದ, ಹೋಮಿಯೋಪತಿ ಮತ್ತು ಯುನಾನಿ ವೈದ್ಯಕೀಯದಲ್ಲಿ ಹೆಚ್ಚು ಸಾಧನೆ ಮಾಡಿರುವ 4 ಜನರಿಗೆ ತಲಾ 2100 ರೂಪಾಯಿಗಳನ್ನು ಬಹುಮಾನವಾಗಿ ಕೊಟ್ಟಿದ್ದೇವೆ. ಆಯುರ್ವೇದವನ್ನು ಉತ್ತಮ ಪಡಿಸುವುದಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಆ ದಿಸೆಯಲ್ಲಿ ಸರ್ಕಾರ ಕೆಲಸ ಮಾಡುತ್ತಿದೆ. ಬರುವ ಎರಡು ಸಾವಿರದೊಳಗೆ ಕೇವಲ ಆಲೋಪತಿ ಡಾಕ್ಟರುಗಳಿಂದ ಅಲ್ಲದೆ ಬೇರೆ, ಬೇರೆ ಸಿದ್ಧಾಂತಗಳ ಮೇಲೆ ಇರುವ ವೈದ್ಯಕೀಯ ಪದ್ಧತಿಯಿಂದಲೂ ಎಲ್ಲಾ ಜನರಿಗೆ ಆರೋಗ್ಯವನ್ನು ಕೊಡಬೇಕೆನ್ನುವ ಕಾರ್ಯಕ್ರಮವನ್ನು ನಾವು ಹಾಕಿಕೊಂಡಿದ್ದೇವೆ. ನಮ್ಮ ಸಾಧನೆ ಆಮೆ ವೇಗದಿಂದ ಮಾತ್ರ

ಸ್ಟೇ ಆರ್ಡರ್ ಕೊಟ್ಟಿರುವುದರಿಂದ ನಾಲ್ಕು ವರ್ಷಗಳಲ್ಲಿ ಡೈರೆಕ್ಟ್ ಆಗಿ ರೆಕ್ರೂಟ್‌ಮೆಂಟ್ ಆಗಿಲ್ಲ, ಲೆಕ್ಚರರ್ಸ್, ಅಸಿಸ್ಟೆಂಟ್ ಪ್ರೊಫೆಸರ್ಸ್ ಡೈರೆಕ್ಟ್ ಆಗಿ ರಿಕ್ರೂಟ್ ಆಗಿರುವುದರಿಂದ ಈ ವೇಕೆನ್ಸಿಗಳು ಉಳಿದುಕೊಳ್ಳುವುದಕ್ಕೆ ಅವಕಾಶ ವಾಯಿತು. ಇನ್ನು 50% ನ್ನು ನಾವೇ ನೇರವಾಗಿ ಭರ್ತಿ ಮಾಡಬೇಕಾಗಿತ್ತು. ಅಸಿಸ್ಟೆಂಟ್ ಸರ್ಜನ್ಸ್‌ನಲ್ಲಿ ಯಾರು ಪೋಸ್ಟ್ ಗ್ರಾಜುಯೇಷನ್ ಓದಿದ್ದಾರೆ. ಎಂ.ಎಸ್. ಎಂ.ಡಿ ಪೀಡಿಯಾಟ್ರಿಕ್ಸ್, ಗೈನೆಕಾಲಜಿ ಈ ರೀತಿ ಬೇರೆ ಬೇರೆ ಸಬ್ಜೆಕ್ ಗಳಲ್ಲಿ ಯಾರು ಪೋಸ್ಟ್ ಗ್ರಾಜುಯೇಷನ್ ಮಾಡಿಕೊಂಡಿದ್ದಾರೆ. ಯಾರು ಟೀಚಿಂಗ್ ಕೇಡರ್‌ಗೆ ಬರಬೇಕೆಂದು ಇದ್ದಾರೆ ಅವರಿಗೆ ಈ ವರ್ಷ 74 ಜನಕ್ಕೆ ಕೇಡರ್ ಚೇಂಜ್ ಮಾಡಿ ಕೊಟ್ಟಿದ್ದೇವೆ. ಹುಬ್ಬಳ್ಳಿ ಮತ್ತು ಬಳ್ಳಾರಿ ಕಾಲೇಜುಗಳಲ್ಲಿ ಐದು ವರ್ಷ ಕಡ್ಡಾಯವಾಗಿ ಸೇವೆ ಮಾಡಬೇಕೆಂಬ ಕಂಡೀಷನ್ ಮೇಲೆ ಚೇಂಜ್‌ಕೊಟ್ಟಿದ್ದೇವೆ. ಅದರಲ್ಲಿ ಕೆಲವರು ಒಪ್ಪಿಕೊಂಡರು ಇನ್ನು ಕೆಲವರು ಒಪ್ಪಿಕೊಳ್ಳಲಿಲ್ಲ. ಅವರಿಗೆ ಕೇಡರ್ ಚೇಂಜ್ ಕೊಟ್ಟಿದ್ದನ್ನು ಕ್ಯಾನ್ಸಲ್ ಮಾಡಿರುತ್ತೇವೆ. ಹೀಗಾಗಿ ಸಾಕಷ್ಟು ಸಂಖ್ಯೆಯಲ್ಲಿ ಈ ಹುದ್ದೆಗಳನ್ನು ಭರ್ತಿಮಾಡುವುದಕ್ಕೋಸ್ಕರ ಕ್ರಮ ತೆಗೆದುಕೊಂಡು, ಅಲ್ಲಿನ ವಿದ್ಯಾರ್ಥಿಗಳಿಗೆ ಹೆಚ್ಚಿನ ರೀತಿಯಲ್ಲಿ ಅನುಕೂಲವಾಗುವುದಕ್ಕೆ ಕಾರ್ಯಕ್ರಮ ಹಾಕಿಕೊಂಡಿದ್ದೇವೆ. -----

ಇನ್ನು ಬೆಂಗಳೂರು ಮಹಾವಿದ್ಯಾಲಯದಲ್ಲಿ ಸುಮಾರು 86 ಪ್ರಾಧ್ಯಾಪಕರ ಹುದ್ದೆಗಳು ಇದ್ದು, ಅಲ್ಲಿ ಸುಮಾರು 84 ಜನ ಕೆಲಸ ಮಾಡುತ್ತಿದ್ದಾರೆ. ಅಲ್ಲಿ ಮಂಜೂರಾತಿಗಿಂತ 8 ಮಂದಿ ಅಧಿಕವಾಗಿ ಕೆಲಸ ಮಾಡುತ್ತಿದ್ದಾರೆ. ಇಲ್ಲಿ ಸುಮಾರು 95 ಅಸಿಸ್ಟೆಂಟ್ ಪ್ರೊಫೆಸರ್ಸ್ ಹುದ್ದೆಗಳಿದ್ದು, ಸುಮಾರು 65 ಜನ ಕೆಲಸ ಮಾಡುತ್ತಿದ್ದಾರೆ. ಉಪನ್ಯಾಸಕರ ಹುದ್ದೆಗಳು ಸುಮಾರು 158ಗಳಿದ್ದು, ಇಲ್ಲಿ ಸುಮಾರು 98 ಜನ ಕೆಲಸ ಮಾಡುತ್ತಿದ್ದಾರೆ. ಇನ್ನು ಸುಮಾರು 60 ಹುದ್ದೆಗಳು ಖಾಲಿ ಇರೆ. ಇಲ್ಲಿ ಲೀವ್‌ನಲ್ಲಿರುವವರನ್ನು ಸಹ ತೋರಿಸುತ್ತಿದ್ದಾರೆ. ಅಷ್ಟು ಹುದ್ದೆಗಳು ಖಾಲಿ ಇಲ್ಲವೆಂದು ನನಗನಿಸುತ್ತದೆ. ಆ ಮೇಲೆ ಮೈಸೂರು ಮಹಾವಿದ್ಯಾಲಯದಲ್ಲಿ ಪ್ರಾಧ್ಯಾಪಕರ ಹುದ್ದೆಗಳು ಸುಮಾರು 51 ಇದ್ದು ಇಲ್ಲಿ ಸುಮಾರು 45 ಜನ ಕೆಲಸ ಮಾಡುತ್ತಿದ್ದಾರೆ. ಅಲ್ಲಿಯೂ ಸಹ ಸುಮಾರು ನಾಲ್ಕು ಜನ ಅಧಿಕ ಸಂಖ್ಯೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿ ಉಪನ್ಯಾಸಕರ ಹುದ್ದೆಗಳು 107 ಇದ್ದು ಇದರಲ್ಲಿ ಸುಮಾರು 45 ಜನರು ಮಾತ್ರ ಕೆಲಸ ಮಾಡುತ್ತಿದ್ದಾರೆ. ಕರ್ನಾಟಕ ಲೋಕ ಸೇವಾ ಆಯೋಗದವರು ಇತ್ತೀಚೆಗೆ ಈ ಉಪನ್ಯಾಸಕರ ಹುದ್ದೆಗಳ ನೇಮಕಾತಿಯನ್ನು ಮಾಡಿಲ್ಲ. ಇವರು ಈ ಹುದ್ದೆಗಳ ನೇಮಕಾತಿಯನ್ನು ಮಾಡಿ ಸುಮಾರು 4 ವರ್ಷಗಳಾದವು. ಈ ಖಾಲಿ ಹುದ್ದೆಗಳಿಗೆ ನೇಮಕಾತಿ ಮಾಡದೆ ಇರುವುದರಿಂದ ಅಸಿಸ್ಟೆಂಟ್ ಪ್ರೊಫೆಸರ್ಸ್ ಹುದ್ದೆಗಳಿಗೆ ಲೆಕ್ಚರರ್ಸ್ ಹುದ್ದೆಗಳಲ್ಲಿರುವವರು ಯಾರಾದರೂ ಅರ್ಹತೆಯನ್ನು ಪಡೆದುಕೊಂಡಿದ್ದರೆ ಹಾಗೂ ಬಡ್ತಿಗೆ ಅರ್ಹತೆ ಇದ್ದವರನ್ನು ಕೂಡ ನಾವು ಪ್ರಮೋಟ್ ಮಾಡುವಂತಹ ಕೆಲಸವನ್ನು ತೀವ್ರವಾಗಿ ಮಾಡುತ್ತಿದ್ದೇವೆ. ಮತ್ತೇ ಅಸಿಸ್ಟೆಂಟ್ ಹುದ್ದೆಗಳಿಂದ ಪ್ರೊಫೆಸರ್ ಹುದ್ದೆಗಳಿಗೆ ಸಹ ನಿಗದಿತ ವಿದ್ಯಾರ್ಹತೆ ಪಡೆದುಕೊಂಡಿದ್ದರೆ ಅವರನ್ನು ಸಹ ಪ್ರಮೋಟ್ ಮಾಡುವ ಕೆಲಸ ಮಾಡುತ್ತಿದ್ದೇವೆ. ಮೆಡಿಕಲ್ ಕಾಲೇಜುಗಳಲ್ಲಿ ಓದುವಂಥ ಏನಿವೆ

ಚುಂಚನಗಿರಿ ಮತ್ತು ಎಸ್. ಆರ್. ಎನ್. ಆಸ್ಪತ್ರೆ, ದೇವರಾಜ ಅರಸು ಕಾಲೇಜು - ಈ ಕಾಲೇಜುಗಳಲ್ಲಿ ಎಷ್ಟು ಸಿಬ್ಬಂದಿ ಇಕ್ವಿಪ್‌ಮೆಂಟ್ ಇರಬೇಕು. ಎನ್ನುವಂತಹ ಎಲ್ಲಾ ವಿಷಯಗಳ ಬಗ್ಗೆ ಒಂದು ಸ್ಟಾಂಡರ್ಡ್ ಫಿಕ್ಸ್ ಮಾಡಿದರು. ಆದರಂತೆ ಬೆಂಗಳೂರು ಮೆಡಿಕಲ್ ಕಾಲೇಜಿನಲ್ಲಿ ಬೌರಿಂಗ್ ಮತ್ತು ವಿಕ್ಟೋರಿಯಾ ಆಸ್ಪತ್ರೆಗಳಿಗೆ ಯಾವ ರೀತಿ ಉಪಕರಣಗಳನ್ನು ಒದಗಿಸಬೇಕು, ಹುಬ್ಬಳ್ಳಿ ಮೆಡಿಕಲ್ ಕಾಲೇಜಿಗೆ ಯಾವ ರೀತಿ ಮಾಡಬೇಕು, ಬಳ್ಳಾರಿ ಕಾಲೇಜಿಗೆ ಯಾವ ರೀತಿ ಮಾಡಬೇಕೆಂಬುದನ್ನು ಚಿಂತನೆ ಮಾಡಿದ್ದೇವೆ. ಆದಕ್ಕೋಸ್ಕರ ಹೊಸದಾಗಿ Sophisticated ಉಪಕರಣಗಳನ್ನು ಕೊಡಬೇಕೆಂದು ಕೇಳಿದ್ದೇವೆ.

ಸ್ವಾಮಿ ಟೀಚರ್ಸ್, ಪ್ರೊಫೆಸರ್ಸ್, ಅಸಿಸ್ಟೆಂಟ್ ಪ್ರೊಫೆಸರ್ಸ್ ಲೆಕ್ಚರರ್ಸ್ ಹುದ್ದೆಗಳು ಎಷ್ಟು ಖಾಲಿ ಇದೆ, ಎಷ್ಟು ಭರ್ತಿಮಾಡಲಾಗಿದೆ ಎಂದು ಕೇಳಿದ್ದಾರೆ, ಅದರ ಬಗ್ಗೆ ಸ್ವಲ್ಪ ಹೊತ್ತಾದ ಮೇಲೆ ವಿವರಗಳನ್ನು ಕೊಡುತ್ತೇನೆ ಸಪ್ಲೈ ಆಫ್ ಸೊಫಿಸ್ಟಿಕೇಟೆಡ್ ಎಕ್ಯುಪ್ ಮೆಂಟ್ಸ್ ಬಗ್ಗೆ ಹೇಳಿರುತ್ತಾರೆ ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು, ಕೆ.ಆರ್. ಆಸ್ಪತ್ರೆ, ಮೈಸೂರು, ಮತ್ತು ಕೆ.ಎಂ.ಸಿ. ಆಸ್ಪತ್ರೆ ಹುಬ್ಬಳ್ಳಿ ಈ ಮೂರುಕಡೆಗೂ ಕೂಡ ಈ ವರ್ಷ ಕೊಡುವುದಕ್ಕೆ ಪ್ರಾವಿಷನ್ ಮಾಡಿಕೊಂಡಿದ್ದೇವೆ. ವಿಕ್ಟೋರಿಯಾ ಆಸ್ಪತ್ರೆ, ಕೆ.ಆರ್. ಆಸ್ಪತ್ರೆ, ಬೌರಿಂಗ್ ಆಸ್ಪತ್ರೆ, ಮತ್ತು ಕೆ.ಎಂ.ಸಿ. ಆಸ್ಪತ್ರೆಗಳಲ್ಲಿ Endoscopy system with video ಇರುವಂತಹದ್ದು. ಅಲ್ಲಿಗೆ ಇದನ್ನು ಕೊಡುವ ಕಾರ್ಯಕ್ರಮ ಹಾಕಿಕೊಂಡಿದ್ದೇವೆ. 19 ಪೋರ್ಟ್‌ಬಲ್ ಎಲೆಕ್ಟ್ರಾನಿಕ್ ಘಾಕ್ಷನ್ ಯೂನಿಟ್ ಏನಿದೆ ಅದನ್ನು ಕೊಂಡು ಕೊಳ್ಳುವುದಕ್ಕೆ ಪ್ರಾವಿಜನ್ ಮಾಡಿದ್ದೇವೆ. ಆಪರೇಷನ್ ಮಾಡುವಂತಹ ಸಂದರ್ಭದಲ್ಲಿ ಕರೆಂಟ್ ಹೋಗುತ್ತದೆ ಎಂದು ಹೇಲಿ 10 ಕಿಲೋ ವಾಟ್‌ನ 10 ಜನರೇಟರ್ಸ್‌ನ್ನು ಈ ವರ್ಷ ಸಪ್ಲೈ ಮಾಡುವುದಕ್ಕೆ ಏರ್ಪಾಡು ಮಾಡಿಕೊಂಡಿದ್ದೆಟ್ವೆ. In addition to cancer Equipment, which is already working one opthalmic ultrasound and one Refractionist will be supplied to Minto Hospital. ಈ ವರ್ಷ ಆಸ್ಪತ್ರೆಗಳಲ್ಲಿ ಅಪ್‌ಗ್ರೇಡ್ ಮಾಡುವುದಕ್ಕೆ ಮತ್ತು ಆಸ್ಪತ್ರೆಗಳಲ್ಲಿ ಹೆಚ್ಚಿನ ರೀತಿಯಲ್ಲಿ ಎಕ್ಯೂಪ್ ಮಾಡಿಕೊಳ್ಳುವುದಕ್ಕೆ ಕಾರ್ಯಕ್ರಮ ಹಾಕಿಕೊಂಡಿದ್ದೇವೆ. ಈ ಆಸ್ಪತ್ರೆಗಳಲ್ಲಿ ಎಷ್ಟು ಜನ ವೈದ್ಯರಿದ್ದಾರೆ, ಎಷ್ಟು ಜನ ಪ್ರಾಧ್ಯಾಪಕರಿದ್ದಾರೆ ಎಂದು ಮಾನ್ಯ ಸದಸ್ಯರಾದ ಬೆಲ್ಲದ್ ರವರಿಗೆ ಹೇಳುವುದಾದರೆ, ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ ಹುಬ್ಬಳ್ಳಿ ಇಲ್ಲಿಗೆ ಮಂಜೂರಾಗಿರುವ ಪ್ರಾಧ್ಯಾಪಕರ ಹುದ್ದೆ 49, ಭರ್ತಿ ಆಗಿರುವುದು, 34 ಖಾಲಿ ಇರುವುದು 15, ಸಹಾಯಕ ಪ್ರಾಧ್ಯಾಪಕರ ಹುದ್ದೆ ಮಂಜೂರಾಗಿರುವುದು 56 ಇದರಲ್ಲಿ 29 ಜನ ಕೆಲಸ ಮಾಡುತ್ತಿದ್ದಾರೆ. ಹಾಗೂ 27 ಹುದ್ದೆಗಳು ಖಾಲಿ ಇದೆ. ಉಪನ್ಯಾಸಕರ ಹುದ್ದೆ ಮಂಜೂರಾಗಿರುವುದು 102, ಇದರಲ್ಲಿ 49 ಜನ ಕೆಲಸ ಮಾಡುತ್ತಿದ್ದಾರೆ. ಇನ್ನೂ 41 ಹುದ್ದೆಗಳು ಖಾಲಿ ಇವೆ. ಈಗ ಕೇಡರ್ ಚೇಂಜ್ ಮಾಡಿ ಸುಮಾರು 74 ಜನಕ್ಕೆ ಕೊಟ್ಟಿದ್ದೇವೆ. ಕಳೆದ ನಾಲ್ಕು ವರ್ಷದಿಂದ ಉಪನ್ಯಾಸಕರನ್ನು ನೇರವಾಗಿ ಅಪಾಯಿಂಟ್ ಮಾಡಿಕೊಂಡಿಲ್ಲ. 50% of the Assistant professors could not be appointed. ಸುಪ್ರೀಮ್ ಕೋರ್ಟ್

ಮೆಡಿಕಲ್ ಕಾಲೇಜು, ಎಂ.ಎಸ್. ರಾಮಯ್ಯ ಮೆಡಿಕಲ್ ಕಾಲೇಜು ಮತ್ತು ಮಣಿಪಾಲ್ ಎಂ.ಎಂ.ಸಿ. ಮೆಡಿಕಲ್ ಕಾಲೇಜುಗಳು ತಮ್ಮ ಆಸ್ಪತ್ರೆಗಳನ್ನು ಕಟ್ಟಿಸಿಕೊಂಡಿದ್ದಾರೆ. ಉಳಿದಿರುವಂತಹವರು ಇದನ್ನು ಕಟ್ಟಿಸಿಕೊಂಡಿಲ್ಲ. ಎಂ.ಸಿ.ಎ. ಯವರು ಬಂದು ಭೇಟಿ ಮಾಡಿದ್ದಾರೆ. ನಮ್ಮ ಯೂನಿವರ್ಸಿಟಿ ಅಫಿಲಿಯೇಶನ್ ಕಮಿಟಿಯವರು ವಿಸಿಟ್ ಮಾಡುತ್ತಿದ್ದಾರೆ. ಈ ದೃಷ್ಟಿಯಿಂದ ನಮ್ಮ ಸ್ಟಾಂಡರ್ಡ್ ಇನ್ ಮೆಡಿಕಲ್ ಕಾಲೇಜಸ್ ಏನಿದೆ ಅದನ್ನು ಸಾಕಷ್ಟು ಅಪ್‌ಗ್ರೇಡ್ ಮಾಡುವುದಕ್ಕೆ ಮೇನ್‌ಟೇನ್ ಮಾಡುವುದಕ್ಕೆ ಯಾವ ರೀತಿ ಮಿನಿಮಮ್ ಸ್ಟಾಂಡರ್ಡ್ ಇರಬೇಕೆಂದು ಗೊತ್ತು ಮಾಡಿದ್ದಾರೆ. ಅದನ್ನು ಈ ವರ್ಷ ಕಟ್ಟುನಿಟ್ಟಾಗಿ ಮಾಡಬೇಕೆಂದು ಪ್ರಯತ್ನ ಮಾಡಿದ್ದೇವೆ. ಅದಕ್ಕೋಸ್ಕರ ಈ ಸೀಟುಗಳನ್ನು ಯೂನಿವರ್ಸಿಟಿಯವರೇ ನಿಗದಿ ಮಾಡಬೇಕೆಂದು ಹೇಳಿದ್ದೇವೆ. ಕಳೆದ ವರ್ಷ ಅದರ ಹಿಂದಿನ ವರ್ಷ ಏನು ಸೀಟುಗಳನ್ನು ನಿಗದಿ ಮಾಡಿದ್ದೆವು ಅದಕ್ಕಿಂತ ಹೆಚ್ಚು ಅವರು ಮಾಡಿಕೊಂಡರು. 1986-87ರಲ್ಲಿ 238 ಹೆಚ್ಚುವರಿ ಸೀಟುಗಳನ್ನು ತೆಗೆದುಕೊಂಡಿದ್ದಾರೆ. ಮತ್ತೆ ಅದೇ ರೀತಿಯಲ್ಲಿ 145 ಹೆಚ್ಚುವರಿ ಸೀಟುಗಳನ್ನು ತೆಗೆದುಕೊಂಡರು. ಇದಕ್ಕೆ ಕಾರಣಗಳನ್ನು ಹೇಳುತ್ತೇನೆ. ಪ್ರೈವೇಟ್ ಕಾಲೇಜುಗಳವರು ಏನಿದ್ದಾರೆ ಇವರು ತಮ್ಮದೇ ಆದಂತಹ ಆಸ್ಪತ್ರೆ ಸೌಲಭ್ಯಗಳನ್ನು ಮಾಡಿಕೊಂಡಿದ್ದಾರೆ. ಅದರಲ್ಲಿ ಕೆಲವರು 450 ಹಾಸಿಗೆಗಳನ್ನು ಮಾಡಿಕೊಂಡಿರುವಂತಹವರು ಇದ್ದಾರೆ. ಕೆಲವರು ಮುನ್ನೂರು ಹಾಸಿಗೆಗಳನ್ನು ಮಾಡಿಕೊಂಡಿದ್ದಾರೆ. ಇನ್ನೂ ಕೆಲವರು ಇನ್ನೂರು ಮಾಡಿಕೊಂಡಿದ್ದಾರೆ. ಒಬ್ಬ ವಿದ್ಯಾರ್ಥಿಗೆ 7 ಬೆಡ್‌ಗಳು ಇರಬೇಕೆಂದು ನಿಯಮ ಮಾಡಿಕೊಂಡಿರುವುದಕ್ಕೆ ಅನುಗುಣವಾಗಿ ಈ ಸೀಟುಗಳು ಇರಬೇಕೆಂದೂ ಆ ಪ್ರಕಾರ ಲೆಕ್ಕ ತೆಗೆದುಕೊಳ್ಳಬೇಕೆಂದು ಕೇಳಿದ್ದಾರೆ. ಸರ್ಕಾರ ಈ ರೀತಿಯಾಗಿ ವಿಶ್ವವಿದ್ಯಾನಿಲಯಗಳು ಈ ಅಡ್ಮಿಷನ್ ಎಷ್ಟಿರಬೇಕೆಂದು ನಿಗದಿ ಮಾಡಿ -------

ಶ್ರೀ ಬಿ. ರಾಚಯ್ಯ - 1986-87ರಲ್ಲಿ 2388 ಸೀಟುಗಳನ್ನು ಹೆಚ್ಚು ಕೊಟ್ಟಿದ್ದೇವೆ. ಇದಕ್ಕೆ ಕಾರಣವೇನೆಂದರೆ ಕೆಲವು ಸೀಟುಗಳನ್ನು ನಾವು ಇನ್‌ಸಿಸ್ಟ್ ಮಾಡಬೇಕಾಗಿ ಬಂತು. ರಿಸರ್ವೇಷನ್ ಇರಲಿಲ್ಲ, ಕೆಲವು ಕಡೆ ಎಸ್.ಸಿ., ಎಸ್.ಟಿ, ಮತ್ತು ಬಿ.ಸಿ. ಗುಂಪಿನವರು ಬರುತ್ತಿರಲಿಲ್ಲ. ಈ ರೀತಿಯಾಗಿ ಕೊಡಬೇಕೆಂದು ಹೇಳಿದಾಗ ಹೆಚ್ಚುವರಿಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. 1987-88ರಲ್ಲಿ ಇದನ್ನು 135ಕ್ಕೆ ಇಳಿಸಿದೆ. ಹೆಚ್ಚುವರಿ ಸೀಟುಗಳನ್ನು, ಅವರು ಆಸ್ಪತ್ರೆಯನ್ನು ಕಟ್ಟಿಸಿಕೊಂಡಿರುವುದರಿಂದ ರಾಜ್ಯಾಂಗ ಬದ್ಧವಾಗಿ ಕೊಡಬೇಕಾಗಿ ಬಂತು. ಈ ರೀತಿಯಾಗಿ ಇನ್ನು ಮುಂದೆ ಮಾಡಕೂಡದೆಂದು ಅವರಿಗೆ ಎಚ್ಚರಿಕೆಯನ್ನು ಕೊಟ್ಟಿದ್ದೇವೆ. ಮತ್ತೆ ಅವರಿಗೆ ಇನ್‌ಟೇಕ್ ಫಿಕ್ಸ್ ಮಾಡುವಂತಹ ಸಂದರ್ಭದಲ್ಲಿ ನೀವು ಯೂನಿವರ್ಸಿಟಿಯಿಂದ ಫಿಕ್ಸ್ ಮಾಡಿಸಿಕೊಳ್ಳಬೇಕೆಂದು ಹೇಳಿದ್ದೇವೆ. ಡಾ. ನಂಜುಂಡಪ್ಪ ಕಮಿಟಿ ರಿಪೋರ್ಟ್ ಬಂದ ಮೇಲೆ, ಪ್ರೈವೇಟ್ ಕಾಲೇಜುಗಳಿಗೆ ಎರವಲಾಗಿ ಕೊಟ್ಟ ಪ್ರೊಫೆಸರ್ಸ್, ಟೀಚರ್ಸ್ ಇವರನ್ನು ವಾಪಸು ತೆಗೆದುಕೊಳ್ಳಬೇಕೆಂದು ಹೇಳಿದ ಮೇಲೆ ಎರಡು ಕಾಲೇಜುಗಳನ್ನು ಬಿಟ್ಟು ಮಿಕ್ಕ ಎಲ್ಲಾ ಕಾಲೇಜುಗಳಲ್ಲಿ ಇದ್ದ ಅಧ್ಯಾಪಕರನ್ನು ನಾವು ವಾಪಸ್ ತೆಗೆದುಕೊಂಡಿದ್ದೇವೆ. ಆದಿ

ಕುಟುಂಬ ನಿಯಂತ್ರಣಾ ಮಾಡಬೇಕೆಂದು ಅವರು ಕಡ್ಡಾಯ ಮಾಡಿದ್ದರು. ಅವರು ಆ ರೀತಿ ಕಡ್ಡಾಯ ಮಾಡದಿದ್ದರೆ ಜನಸಂಖ್ಯೆ ಜಾಸ್ತಿಯಾಗುತ್ತಿತ್ತು. ಕೆಲವು ವರ್ಗಗಳು ಈ ಪರಿಮಿತಿಗೆ ಬರುತ್ತಿಲ್ಲ ಕೇಂದ್ರ ಸರ್ಕಾರದವರು ಈ ಬಗ್ಗೆ ಪುನಃ ಪರಿಶೀಲನೆ ಮಾಡಿದರೆ ಬಹಳ ಒಳ್ಳೆಯದೆಂದು ಈ ಸಂದರ್ಭದಲ್ಲಿ ಸೂಚನೆಯನ್ನು ಕೊಡುತ್ತಿದ್ದೇನೆ. --------- ಮಾನ್ಯ ಸದಸ್ಯರು ಮಾತನಾಡುವಾಗ ಲಸಿಕೆ ಬಗ್ಗೆ ಮಾತನಾಡಿದರು. 12 ಜಿಲ್ಲೆಗಳಲ್ಲಿ ಲಸಿಕೆಗಳ ಲಭ್ಯವಿದೆ. ಉಳಿದ 8 ಜಿಲ್ಲೆಗಳಲ್ಲಿ ಪೂರ್ಣವಾಗಿ ಲಸಿಕೆಗಳು ಸಿಗುವ ರೀತಿಯಲ್ಲಿ ವ್ಯವಸ್ಥೆ ಮಾಡುತ್ತೇವೆಂದು ಈ ಸಂದರ್ಭದಲ್ಲಿ ತಿಳಿಸಲಿಕ್ಕೆ ಇಚ್ಛೆಪಡುತ್ತೇನೆ. ಈ ವರ್ಷ ನಾವು ಕೇಂದ್ರ ಸರ್ಕಾರದ ಧನಸಹಾಯದಿಂದ 500 ಉಪ ಆರೋಗ್ಯ ಕೇಂದ್ರಗಳನ್ನು ತೆರೆದಿದ್ದೇವೆ. ಇದಕ್ಕೆ ಕೇಂದ್ರ ಸರ್ಕಾರ ಪೂರ್ಣ ಹಣವನ್ನು ಕೊಟ್ಟರೆ, 80 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪನೆ ಮಾಡಿದ್ದೇವೆ. ಕುಷ್ಠ ರೋಗ ತಡೆಗಟ್ಟುವ ಬಗ್ಗೆ ಕೆಲವು ಸಾಧನೆಗಳನ್ನು ಮಾಡಿದ್ದೇವೆ. ಕ್ಷಯರೋಗ ಪರೀಕ್ಷಾಕೇಂದ್ರ ಹಾಗೂ ಕ್ರಿಮಿನಾಶಕ ಪ್ರಯೋಗಾಲಯವನ್ನು ಬೆಂಗಳೂರು ನಗರದಲ್ಲಿ ಸ್ಥಾಪನೆ ಮಾಡಿದ್ದೇವೆ. ಮತ್ತೆ ಅನೇಕ ಡಾಕ್ಟರುಗಳು ಗೈರುಹಾಜರಾಗಿ ಹೊರಗಡೆ ಹಾಗೂ ಒಳಗಡೆ ಸ್ವಂತ ಕ್ಲಿನಿಕ್‌ಗಳನ್ನು ನಡೆಸುತ್ತಿದ್ದಾರೆ. ಅಂತಹವರು 100 ಜನರು ಇದ್ದಾರೆ. ಅವರ ಮೇಲೆ ಕ್ರಮ ತೆಗೆದುಕೊಳ್ಳುವುದಕ್ಕೆ ಲೀಗಲ್ ಸೆಲ್ ಮುಖಾಂತರ ವಿಚಾರಣೆ ನಡೆಸಿ ಸೂಕ್ತ ಕ್ರಮ ತೆಗೆದುಕೊಳ್ಳುವುದಕ್ಕೆ ಹೊಸದಾಗಿ ಲೀಗಲ್ ಸೆಲ್ ಅನ್ನು ಈ ವರ್ಷ ಮಾಡಿದ್ದೇವೆ. 1988-89ನೇ ಸಾಲಿನಲ್ಲಿ 116 ಉಪಕೇಂದ್ರಗಳನ್ನು ತೆರೆಯತ್ತೇವೆ. ಅಲ್ಲದೆ 300 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಈ ವರ್ಷ ಮಾಡುವುದಕ್ಕೆ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೇವೆ. 31 ಸಮುದಾಯ ಆರೋಗ್ಯ ಕೇಂದ್ರಗಳನ್ನು ಮಾಡಬೇಕೆಂದು ಇದ್ದೇವೆ. ಕೇಂದ್ರ ಸರ್ಕಾರದ ಯೋಜನೆಯಂತೆ ಕುಷ್ಠರೋಗ, ಕ್ಷಯರೋಗ, ಅಂಧತ್ವ ನಿವಾರಣೆ ಮಾಡುವುದಕ್ಕೆ ಕಾರ್ಯಕ್ರಮಗಳನ್ನು ಕೈಗೊಂಡು ನಿಗದಿತ ಗುರಿಸಾಧನೆ ಮಾಡಿದ್ದೇವೆ. ------ ಹೀಗೆ ಆರೋಗ್ಯ ಇಲಾಖೆ ತನ್ನ ಕಾರ್ಯ ಮಾಡುವುದರಲ್ಲಿ ಹೆಚ್ಚಿನ ರೀತಿಯಲ್ಲಿ ಸೇವೆ ಸಲ್ಲಿಸುತ್ತಿದೆ. ಈಗ ಶ್ರೀ ಬೆಲ್ಲದ್ ರವರು, ಶ್ರೀ ರತ್ನಾಕರ್‌ರವರು ಒಂದು ವಿಷಯವನ್ನು ಹೇಳಿದರು. ಪ್ರಪಂಚಕ್ಕೆ ಕೊಡುಗೆಯಾದಂತಹ ಮಲೇರಿಯಾ ಮತ್ತು ಕ್ಯಾನ್ಸರ್ ಬಾರದಂತೆ ಮಾಡಲು ಒಂದೇ ಲಸಿಕೆಯನ್ನು ತಯಾರು ಮಾಡಿದ್ದನ್ನು ಬೇರೆ ದೇಶದವರು ಪ್ರಶಂಸಿಸಿದ್ದಾರೆ. ಎಂದು ಡಾಕ್ಟರ್ ಬಸವರಾಜು ಅವರು ತಿಳಿಸಿದ್ದಾರೆ. ಇದು ಕರ್ನಾಟಕದವರೇ ಮಾಡಿರುವಂತಹದ್ದು. ಈ ಸಂತೋಷಕ್ಕೋಸ್ಕರ ನಾನು ಅವರಿಗೆ ಅಭಿನಂದನೆ ವ್ಯಕ್ತಪಡಿಸುತ್ತಿದ್ದೇನೆ.

- ಇದರಲ್ಲಿ ಕುಟುಂಬ ಯೋಜನೆ, ಮಲೇರಿಯಾ ಮತ್ತು ಕ್ಯಾನ್ಸರ್ ಬಾರದಂತೆ ಮಾಡಲು ಈ ಮೂರು ರೋಗಕ್ಕೂ ಒಂದೇ ಲಸಿಕೆಯನ್ನು ತಯಾರು ಮಾಡಿದವರು ಕರ್ನಾಟಕದವರು. ಇದಕ್ಕೆ ಬೇರೆ ದೇಶದವರು ಪ್ರಶಂಸೆ ಮಾಡಿದ್ದಾರೆಂದು ಹೇಳಿದೆ. ಇನ್ನು ಮೆಡಿಕಲ್ ಎಜುಕೇಷನ್ ವಿಷಯದಲ್ಲಿ ಶ್ರೀ ಪಟಮಕ್ಕಿ ರತ್ನಾಕರ್ ಅವರು ಮಾತನಾಡಿದ್ದಾರೆ. ಈ ಮೆಡಿಕಲ್ ಎಜುಕೇಶನ್‌ನಲ್ಲಿ 14 ಪ್ರವೈಟ್ ಕಾಲೇಜುಗಳು ಮತ್ತು 4 ಸರ್ಕಾರಿ ಕಾಲೇಜುಗಳಿವೆ. ಇದರಲ್ಲಿ ಒಂಭತ್ತಕ್ಕೆ ಇನ್ನೂ ಎಂ.ಸಿ.ಎ ಯಿಂದ ಮಾನ್ಯತೆ ಸಿಕ್ಕಿಲ್ಲ. ಇವುಗಳಲ್ಲಿ ಸೆಂಟ್ ಜಾನ್ಸ್

ಭಯಪಡಬೇಕಾದ ಅಗತ್ಯ ಇಲ್ಲ ಶಸ್ತ್ರ ಚಿಕಿತ್ಸೆ ಮಾಡುವಾಗ ಲ್ಯಾಪ್ರಸ್ಕೋಪ್ ಚಿಕಿತ್ಸೆ ಒಳ್ಳೆಯದಲ್ಲ ಎಂಬುದಾಗಿ ಜನರು ತಿಳಿದುಕೊಂಡಿದ್ದಾರೆ. ಅದನ್ನು ಕರೆಂಟಿನಿಂದ ಮಾಡುತಿದ್ದಾರೆ. ಎನ್ನುವ ಭಯ ಜನರಲ್ಲಿ ಬಂದಿದೆ ಕರೆಂಟಿನಿಂದ ಆ ಆಪರೇಷನ್ ಮಾಡುವುದಿಲ್ಲ. ಅದು ಬರೀ ಸಣ್ಣ ಆಪರೇಷನ್ ಆಗಿದ್ದು ಆ ವೇಳೆ ಸ್ವಲ್ಪ ಗ್ಯಾಸ್ ಹೊರಗೆ ಬರುವ ರೀತಿಯಲ್ಲಿ ಮಾಡುತ್ತಾರೆ. ಆದರಿಂದ ಶಬ್ದ ಬರುತ್ತದೆ. ಇದನ್ನೇ ಅವರು ಕರೆಂಟ್ ಎಂದು ತಿಳಿದಿದ್ದಾರೆ. ಆದರೆ ಅದು ಸರಿಯಲ್ಲ ಅದು ಸಿಂಪಲ್ ಆಪರೇಷನ್ ಎಂದು ಹೇಳಿದ್ದೇವೆ. ಇವತ್ತು ಲೆಪ್ರೋಸ್ಕೋಪಿಕ್ ಆಪರೇಷನ್‌ಗೆ ಹೆಚ್ಚು ಜನರು ಬರುತ್ತಿದ್ದಾರೆ. ಇದು ಕರೆಂಟನಲ್ಲಿ ಮಾಡುವುದು ಅಲ್ಲ ಎಂದು ನಾವು ಹೇಳುತ್ತೇವೆ.

ಬಿ. ರಾಚಯ್ಯ– ಈಗ ಆಪರೇಷನ್ ಮಾಡದೇ ಇದ್ದರೂ ಕೂಡಾ ಹೆಣ್ಣು ಮಕ್ಕಳಿಗೆ ವಂಕಿಧಾರಣೆ, ಓರಲ್ ಪಿಲ್ಸ್ ಮೂಲಕ ಮಕ್ಕಳಾಗುವುದನ್ನು ತಡೆಗಟ್ಟುವ ಬಗ್ಗೆ ಹೆಚ್ಚು ಪ್ರಚಾರ ಮಾಡಿದರೆ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತದೆ. ಇಂದು ನಾಲ್ಕು ರೀತಿಯಲ್ಲಿ ಸಂತಾನ ನಿಲ್ಲಿಸುವುದಕ್ಕೆ ಸಾಧ್ಯವಿದೆ. ನಮ್ಮಲ್ಲಿ ಅವಿದ್ಯಾವಂತರೇ ಹೆಚ್ಚು ಇರುವುದರಿಂದ ಹೆಣ್ಣು ಮಕ್ಕಳು ಡಾಕ್ಟರುಗಳನ್ನು ಕೇಳಲು ನಾಚಿಕೆ ಪಟ್ಟುಕೊಳ್ಳುತ್ತಾರೆ. ಹೆಣ್ಣು ಮಕ್ಕಳು ಡಾಕ್ಟರ್ ಇದ್ದರೆ ಸ್ವಲ್ಪ ಕೇಳುತ್ತಾರೆ. ಯಾರು ಇವತ್ತು ಆಪರೇಷನ್ ಮಾಡಿಸಿಕೊಂಡಿದ್ದಾರೋ ಅವರು ಇವರ ಜೊತೆ ಚರ್ಚೆಮಾಡಿದರೆ ಉತ್ತಮವಾಗುತ್ತದೆಂದು ತಿಳಿದುಕೊಂಡೇ ಆ ರೀತಿಯಲ್ಲಿ ಒಂದು ಚಲನಚಿತ್ರ ಕೂಡ ಮಾಡಿ ದೂರದರ್ಶನದ ಮೂಲಕ ಪ್ರಚಾರ ಮಾಡಲಾಗುತ್ತಿದೆ. ಅದನ್ನು ನೋಡಿ ಜನರು ಹೆಚ್ಚು ಹೆಚ್ಚಾಗಿ ಇದರ ಬಗ್ಗೆ ಆಪರೇಷನ್ ಮಾಡಿಸಿಕೊಳ್ಳಲು ಬರುತ್ತಿದ್ದಾರೆ.

– ಹೆಣ್ಣು ಮಕ್ಕಳಾದರೂ ಅಷ್ಟೇ ಗಂಡು ಮಕಳಾದರೂ ಅಷ್ಟೆ. ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಷ್ಟೇ ಹಕ್ಕು ಇದೆ ಎಂದು ಕಾನೂನು ಮಂತ್ರಿಗಳು ಹೇಳಿದ್ದಾರೆ. ನಮ್ಮ ವಿರೋಧ ಪಕ್ಷದ ನಾಯಕಿಯವರು ಯಾರಿಗೂ ಕಡಿಮೆ ಇಲ್ಲದಂತೆ ಮುಖಂಡತ್ವ ವಹಿಸಿಕೆಲಸ ಮಾಡುತ್ತಿದ್ದಾರೆ. ಇಂದಿರಾ ಗಾಂಧಿಯವರು ಪ್ರಧಾನಿಗಳಾಗಿ ಕೆಲಸ ಮಾಡಿದರು. ಥ್ಯಾಚರ್, ಸಿರಿಮಾವೋ ಎಲ್ಲರು ಯಾವ ರೀತಿ ಸೇವೆ ಸಲ್ಲಿಸಿದ್ದಾರೆಂದು ತಮಗೆಲ್ಲಾ ಗೊತ್ತಿದೆ. ನನ್ನ ಸ್ವಂತ ಅನುಭವದಲ್ಲಿ ಹೇಳುವುದಾದರೆ ಹೆಣ್ಣು ಮಕ್ಕಳೇ ತಂದೆ ತಾಯಿಯವರಿಗೆ ಹೆಚ್ಚಿನ ರೀತಿಯಲ್ಲಿ ಸಹಾಯ ಮಾಡುವರು.

ಬಿ. ರಾಚಯ್ಯ – ಇವತ್ತಿನ ದಿವಸ ಜನಸಂಖ್ಯಾ ಸ್ಫೋಟವನ್ನು ತಡೆಯದೇ ಹೋದರೆ, 6ನೇ ಯೋಜನೆಗೆ ಏನೆಲ್ಲಾ ಮಾಡಿದ್ದೇವೆ ಅದೆಲ್ಲಾ ಉಪಯೋಗವಾಗುವುದಿಲ್ಲ. ಇವತ್ತು ಬಡತನದ ರೇಖೆಗಿಂತಾ ಕೆಳಗೆ ಏನು 52% ಜನ ಇದ್ದಾರೆ, ಅವರು ಅಭಿವೃದ್ಧಿ ಹೊಂದಬೇಕಾಗಿದ್ದರೆ ಬೆಳೆಯುತ್ತಿರುವ ಜನ ಸಂಖ್ಯೆಯನ್ನು ತಡೆಗಟ್ಟಬೇಕು. ಇದರ ಕಡೆಗೆ ನಿಧಾನವಾದರೂ ಕೂಡ ಕೇಂದ್ರ ಸರ್ಕಾರದವರು ಹೆಚ್ಚಿನ ಗಮನ ಕೊಟ್ಟಿದ್ದಾರೆ. ಸಂಜಯಗಾಂಧಿಯವರನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳಬೇಕಾಗಿದೆ. ಎನ್ನುವ ಮಾತನ್ನು ಬಹಳ ಸಂತೋಷದಿಂದ ಹೇಳುತ್ತೇನೆ.

ಅ ವಿದ್ಯಾವಂತರಿದ್ದಾರೆ ಆ ಜನರಿಗೆ ತಿಳಿವಳಿಕೆ ಕೊಟ್ಟರೆ ಅನುಕೂಲವಾಗುತ್ತದೆಂದು ಹೇಳಿ ಚಿಕ್ಕದಾದ ಸಂಸಾರವನ್ನು ಹೂಡಿದರೆ ಒಳ್ಳೆಯದು ಎಂದು ಪ್ರಚಾರ ಮಾಡುತ್ತಿದ್ದೇವೆ. ಈ ದೃಷ್ಟಿಯಿಂದ ನಮ್ಮ ಪ್ರಚಾರ ಕಾರ್ಯ ಏನೂ ಕಳಪೆಯಲ್ಲ. ಹೆಚ್ಚಾಗಿಯೇ ಮಾಡುತ್ತಿದ್ದೇವೆ. ಮಾನ್ಯ ಪಟಮಕ್ಕಿ ರತ್ನಾಕರ್ ಅವರು ಯುವಕರಾಗಿ ಈ ವಿಷಯದಲ್ಲಿ ಹೆಚ್ಚಿನ ಚಿಂತನೆ ಮಾಡಿರುವುದು ಅತ್ಯಂತ ಸಂತೋಷದ ವಿಷಯ. ಮದುವೆ ಮಾಡುವ ವಯಸ್ಸುಗಳನ್ನು 18 ವರ್ಷ ಎಂದು ನಿಗದಿ ಮಾಡಿ ಅದನ್ನು ಕಟ್ಟು ನಿಟ್ಟಾಗಿ ಪಾಲನೆ ಮಾಡುತ್ತಿದ್ದೇವೆ. ಅದಕ್ಕಿಂತ ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಿದರೆ ಅದು ಕಾನೂನಿಗೆ ವಿರುದ್ಧವಾಗುತ್ತದೆ. ಆದ್ದರಿಂದ ಯುವಕರು ಭಾವಿ ಸಂಸಾರ ಹೇಗಿರಬೇಕೆಂದು ಚಿಂತನೆ ಮಾಡುವಂತಹದು ಪ್ರಗತಿಯ ಕುರುಹು ಎಂದು ಭಾವಿಸಿಕೊಂಡಿದ್ದೇನೆ. ಇಂಥ ಚಿಂತಕರು ಹೆಚ್ಚಾದರೆ ಸಣ್ಣ ಸಣ್ಣ ಸಂಸಾರವನ್ನು ------

ಶ್ರೀ ಬಿ. ರಾಚಯ್ಯ - ಯುವಕರು ಈ ರೀತಿಯ ಚಿಂತನೆ ಮಾಡಿದರೆ ನಮ್ಮ ಗುರಿಸಾಧನೆ ಏನಿದೆ ಅದನ್ನು ಸಾಧಿಸಬಹುದು. ಬರ್ತ್‌ರೇಟನ್ನು ಇಳಿಸಬಹುದು. ಸಾವಿರಕ್ಕೆ 29 ಬರ್ತ್‌ರೇಟನ್ನು ಇರುವುದನ್ನು 21ಕ್ಕೆ ಇಳಿಸಬೇಕೆಂದು ಯೋಚನೆ ಮಾಡಿದ್ದೇವೆ. ಕಳೆದ 9 ವರ್ಷಗಳಲ್ಲಿ ನಾವು ಸಾಕಷ್ಟು ಗುರಿ ಸಾಧಿಸಿದ್ದೇವೆ, ಮತ್ತೆ ದಾಂಪತ್ಯ ಸಂರಕ್ಷಣೆ ಏನು ಇದೆ. ಇದು 39 ಇದ್ದದ್ದು 69ಕ್ಕೆ ಹೆಚ್ಚಿಸಬೇಕೆಂದು ಒಂದು ಕಾರ್ಯಕ್ರಮ ಇಟ್ಟು ಕೊಂಡಿದ್ದೇವೆ. ಶಿಶುಗಳು ಈಗ ಏನು ಸಾಯುತ್ತಿವೆ. ಅದನ್ನು ಬೇರೆ ರಾಜ್ಯಗಳಲ್ಲಿ ಹೋಲಿಸಿ ನೋಡಿದರೆ ಇದು ಸ್ವಲ್ಪ ಮಟ್ಟಿಗೆ ನಮ್ಮಲ್ಲಿ ಕಡಿಮೆಯಾಗಿದೆ. ಅದನ್ನು ಶೇ 74 ರಿಂದ 60ಕ್ಕೆ ಇಳಿಸಬೇಕೆಂದು ತೀರ್ಮಾನ ಮಾಡಿದ್ದೇವೆ. ಆ ದೃಷ್ಟಿಯಲ್ಲಿ ರಾಷ್ಟ್ರೀಯ ಕಾರ್ಯಕ್ರಮ ಏನಿದೆ, ಆ ಕಾರ್ಯಕ್ರಮಗಳಲ್ಲಿ ನಮ್ಮ ಸರ್ಕಾರ ಹೆಚ್ಚಿನ ಆಸಕ್ತಿ ವಹಿಸಿ ಈ ಯೋಜನೆ ಅಡಿಯಲ್ಲಿ ಜನಸಂಖ್ಯೆಯನ್ನು ಇಳಿಸುವುದಕ್ಕೆ ಪ್ರಯತ್ನ ಮಾಡಲಾಗಿದೆ, -------- ಎಲ್ಲಾ ಜನರಿಗೂ ಕೂಡ 200ನೇ ಇಸವಿಯ ಹೊತ್ತಿಗೆ ಆರೋಗ್ಯವನ್ನು ಕೊಡಬೇಕೆಂದು ಹೇಳಿದ್ದೇವೆ. ಈಗ ನಮ್ಮಲ್ಲಿರುವ ಜಿಲ್ಲಾ ಆಸ್ಪತ್ರೆಗಳ ಜೊತೆಗೆ ಆರೋಗ್ಯ ಕೇಂದ್ರಗಳು 1233, ಆರೋಗ್ಯ ಘಟಕಗಳು 7677. ಇವುಗಳ ಜೊತೆಗೆ ಉಪ ಕೇಂದ್ರಗಳು ಮತ್ತೆ ನಗರದಲ್ಲಿರುವ ಕುಟುಂಬ ಕಲ್ಯಾಣ ಯೋಜನೆಗಳ ಕೇಂದ್ರಗಳು 100 ಇವೆ. ಈ ಎಲ್ಲ ವ್ಯವಸ್ತೆಯ ಮುಖಾಂತರ ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನು ನಡೆಸಿ, ಅದರ ಮುಖಾಂತರ ಜನತೆಗೆ ಅವಶ್ಯಕವಾಗಿ ಆರೋಗ್ಯ ಮತ್ತು ಅವರಿಗೆ ಬೇಕಾಗಿರುವ ಚಿಕಿತ್ಸೆ ಕಾರ್ಯಕ್ರಮಗಳನ್ನು ಮಾಡುವ ಕೆಲಸವನ್ನು ನಾವು ಮಾಡುತ್ತಿದ್ದೇವೆ. ಈ ದೃಷ್ಟಿಯಲ್ಲಿ ಹೇಳುವುದಾದರೆ ನಮ್ಮ ಸಾಧನೆ ಬಹುಶಃ ಕೇಂದ್ರ ಸರ್ಕಾರ ಎರಡು ಸಲ ಕೊಟ್ಟಿರುವ ಬಹುಮಾನವನ್ನು ನೋಡಿದರೆ ನಮ್ಮ ಇಲಾಖೆ ಈ ಭಾಗದಲ್ಲಿ ಅತ್ಯಂತ ಉತ್ತಮವಾಗಿ ಕೆಲಸ ಮಾಡುತ್ತಿದೆ ಎಂಬುದಾಗಿ ಹೇಳಬಹುದು. ಇನ್ನೂ ಉತ್ತಮವಾದ ರೀತಿಯಲ್ಲಿ ಕೆಲಸ ಮಾಡಬೇಕೆಂಬ ಉದ್ದೇಶದಿಂದ ಅವರಿಗೆ ಪ್ರೋತ್ಸಾಹ ನೀಡುವುದಕ್ಕೋಸ್ಕರ ಅನೇಕ ಬಹುಮಾನಗಳನ್ನು ಕೊಡುತ್ತೇವೆ. ಜಿಲ್ಲಾ ಮಟ್ಟದಲ್ಲಿ ಕೂಡ ಆರೋಗ್ಯಕ್ಕೆ ಸಂಬಂಧಪಟ್ಟ ಹಾಗೆ ಕೆಲವಾರು ಹೊಸ ಹೊಸ ಕಾರ್ಯಕ್ರಮಗಳನ್ನು ಹಾಕಿಕೊಂಡು ಆ ಮೂಲಕ ಜನತೆಗೆ ತಿಳಿವಳಿಕೆ ಕೊಡುವ ಕೆಲಸವನ್ನು ಕೂಡ ನಾವು ಮಾಡುತ್ತಿದ್ದೇವೆ. -------- ಆದ್ದರಿಂದ ಜನರು

ಔಷಧಿ ಏನಿದೆ ಅದರ ಬಗ್ಗೆಯೂ, ಔಷಧಿಗಳ ಪ್ರಮಾಣವನ್ನು ಶೇ 15ಕ್ಕೆ ಹೆಚ್ಚಿಸಿದ್ದೇವೆಂದು ಹೇಳಿದ್ದೇನೆ. -------- ಕೆಲವು ನಿಮಿಷಗಳ ಹಿಂದೆ ಆಸ್ಪತ್ರೆಗಳಿಗೆ ಹೆಚ್ಚಿಸಿರುವ ಗ್ರಾಂಟಿನ ಪ್ರಮಾಣದ ಫಿಗರ್ಸ್ ಸಿಗಲಿಲ್ಲ ಎಂದು ಹೇಳಿದೆ. ಈಗ ಅದು ಸಿಕ್ಕಿದೆ. ಅದರ ಪ್ರಕಾರ ಜಿಲ್ಲಾ ಆಸ್ಪತ್ರೆಗಳಿಗೆ 3 ಲಕ್ಷ ಇದ್ದದನ್ನು 10 ಲಕ್ಷಕ್ಕೆ ಹೆಚ್ಚು ಮಾಡಿದ್ದೇವೆ. ತಾಲ್ಲೂಕು ಮಟ್ಟದ ಸಾರ್ವಜನಿಕ ಆಸ್ಪತ್ರೆಗೆ 1 ಲಕ್ಷ ಇದ್ದದನ್ನು 2 ಲಕ್ಷಕ್ಕೆ ಏರಿಸಿದ್ದೇವೆ. ತಾಲ್ಲೂಕು ಮಟ್ಟದ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ 25 ಸಾವಿರ ಇದ್ದದನ್ನು 75 ಸಾವಿರಕ್ಕೂ 25 ಸಾವಿರ ಇದ್ದದನ್ನು 50 ಸಾವಿರಕ್ಕೂ ಮತ್ತು ತಾಲ್ಲೂಕು ಮಟ್ಟದ ಆರೋಗ್ಯ ಘಟಕದಲ್ಲಿ ಹೆರಿಗೆ ವಿಭಾಗ ಸೇರಿ 10 ಸಾವಿರ ರೂಪಾಯಿ ಇದ್ದುದನ್ನು 50 ಸಾವಿರ ರೂಪಾಯಿಗೆ ಏರಿಸಿದ್ದೇವೆ. ತಾಲ್ಲೂಕು ಮಟ್ಟದ ಕೆಳಗೆ ಇರುವ ಪ್ರಾಥಮಿಕ ಆರೋಗ್ಯ ಘಟಕಗಳಿಗೆ ಹೆರಿಗೆ ವಿಭಾಗ ಸೇರಿ 12 ಸಾವಿರ ರೂಪಾಯಿಯಿಂದ 30 ಸಾವಿರ ರೂಪಾಯಿಗೆ ಹೆಚ್ಚಿಸಿದ್ದೇವೆ. ಪ್ರಾಥಮಿಕ ಆರೋಗ್ಯ ಘಟಕಗಳಿಗೆ 8 ಸಾವಿರ ಇದ್ದುದನ್ನು 20 ಸಾವಿರಕ್ಕೆ ಹೆಚ್ಚು ಮಾಡಿದ್ದೇವೆ. ದಾವಣಗೆರೆ ಆಸ್ಪತ್ರೆಗೆ 37 ಲಕ್ಷ ರೂಪಾಯಿ ಇದ್ದುದನ್ನು 50 ಸಾವಿರರೂಪಾಯಿ ಮಾಡಿದ್ದೇವೆ. ನಾನ್‌ಪ್ಲಾನ್‌ನಲ್ಲಿ ಕೂಡ ಹಣವನ್ನು ಈ ಆಸ್ಪತ್ರೆಗೆ 214.5 ಲಕ್ಷ ರೂಪಾಯಿಗೆ ಹೆಚ್ಚಿಸಿದ್ದೇವೆ. ಈ ದೃಷ್ಟಿಯಿಂದ ಔಷಧಗಳಿಗೆ-----

ಶ್ರೀ ಬಿ. ರಾಚಯ್ಯ- ಸಾಮಾನ್ಯವಾಗಿ ಎಲ್ಲಾ ಘಟಕಗಳ ಆಸ್ಪತ್ರೆಗಳಿಗೆ ಕೊಟ್ಟಿರುವುದರ ಜೊತೆಗೆ 15% ಹೆಚ್ಚಿಗೆ ಕೊಟ್ಟಿದ್ದೇವೆ. ಕುಟುಂಬ ಕಲ್ಯಾಣ ವಿಷಯದಲ್ಲಿ ನಮ್ಮ ರಾಜ್ಯದಲ್ಲಿ ಕಳೆದ 1982-83, 1983-84 ಮತ್ತು 1984-85ರಲ್ಲಿ ಮಾಡಿದ ಸಾಧನೆಗೋಸ್ಕರ 1 ಕೋಟಿ ರೂಪಾಯಿಯನ್ನು ಕೇಂದ್ರ ಸರ್ಕಾರದವರು ಬಹುಮಾನವಾಗಿ ನಮಗೆ ಕೊಟ್ಟಿದ್ದಾರೆ. ನಮ್ಮ ಅಧಿಕಾರಿಗಳು ಮತ್ತು ಸಾರ್ವಜನಿಕರು ಹೆಚ್ಚಿನ ರೀತಿಯಲ್ಲಿ ಸಹಕರಿಸಿ ಕೆಲಸ ಮಾಡಿದ್ದಕ್ಕಾಗಿ ನಾನು ಅವರಿಗೆ ಅಭಿನಂದನೆಯನ್ನು ಸಲ್ಲಿಸುತ್ತೇನೆ. 1987-88ರಲ್ಲಿ ನಮ್ಮ ಸಾಧನೆ 91.3 ಆಗಿದೆ. ವಂಕಿಧಾರಣೆಯಲ್ಲಿ ಸಂತಾನ ನಿರೋಧ ಚಿಕಿತ್ಸೆ ಈ ಬಾಗದಲ್ಲಿ 91.6 ಆಗಿದೆ. ಇದರಿಂದ 'ಡಿ' ಗ್ರೂಪ್‌ನಲ್ಲಿ ಮೇಲಿನವರಾಗಿದ್ದೇವೆ. ಇದರಿಂದ ಎರಡೂವರೆ ಕೋಟಿ ರೂಪಾಯಿ ನಮಗೆ ಬರಬೇಕೆಂದು ನಿರೀಕ್ಷೆ ಮಾಡುತ್ತಿದ್ದೇವೆ. ಸಂತಾನಹರಣ ಶಸ್ತ್ರ ಚಿಕಿತ್ಸೆ ವಿಷಯದಲ್ಲಾಗಲಿ, ಕುಟುಂಬ ಕಲ್ಯಾಣ ನಿಯಂತ್ರಣದಲ್ಲಾಗಲಿ, ವಂಕಿಧಾರಣೆಯಲ್ಲಾಗಲಿ ಐ.ಯು.ಡಿನಲ್ಲಾಗಲಿ, ಬೇರೆ ರಾಜ್ಯಗಳಿಗೆ ಹೋಲಿಸಿದಾಗ ನಮ್ಮ ರಾಜ್ಯದಲ್ಲಿ ಅತ್ಯುತ್ತಮವಾದ ಕಾರ್ಯವನ್ನು ಮಾಡಿದ್ದಾರೆ. ಬರೀ ಶಸ್ತ್ರ ಚಿಕಿತ್ಸೆ ಮಾಡುವುದಲ್ಲ ಏತಕ್ಕೋಸ್ಕರ ಇದನ್ನು ಮಾಡುತ್ತಿದ್ದೇವೆ ಎಂಬುದನ್ನು ಜನಗಳಿಗೆ ಪ್ರಚಾರ ಮಾಡಬೇಕೆಂದು ಅವರು ಹೇಳಿದರು ದೊಡ್ಡ ಕುಟುಂಬ ಇದ್ದರೆ ಅತ್ಯಂತ ಉತ್ತಮವಾಗಿ ಜೀವನವನ್ನು ಸಾಗಿಸುವುದಕ್ಕಾಗುವುದಿಲ್ಲ, ಅವರಿಗಿರತಕ್ಕ ಹಣಕಾಸಿನ ಪರಿಸ್ಥಿತಿಯಲ್ಲಿ ಚಿಕ್ಕದಾದ ಚೊಕ್ಕವಾದ ಸಂಸಾರ ಆದರೆ ಅವರ ಮಕ್ಕಳಿಗೆ ಬೇಕಾದ ವಿದ್ಯಾಭ್ಯಾಸ, ಆರೋಗ್ಯ ನೋಡಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ ಎಂದು ಅವರಿಗೆ ತಿಳಿವಳಿಕೆ ಹೊಟ್ಟಿದ್ದೇವೆ. ------ ಕೆಲವರಿಗೆ ಏನು ಅಭಿಪ್ರಾಯ ಇದೆ ಅಂದರೆ ಕೇವಲ ಹರಿಜನ ಗಿರಿಜನರಿಗೆ ಹೆಚ್ಚು ಆಪರೇಷನ್ ಮಾಡುತ್ತಿದ್ದಾರೆ. ಬೇರೆಯವರಿಗೆ ಮಾಡುತ್ತಿಲ್ಲ ಎಂಬ ಅಭಿಪ್ರಾಯವಿದೆ ಆ ರೀತಿ ಅಲ್ಲ. ಯಾರು

ಆಸ್ಪತ್ರೆಗಳಲ್ಲಿ, ಬೆಂಗಳೂರಿನಲ್ಲಿರುವ ಮಿಂಟೋ ಆಸ್ಪತ್ರೆಯಲ್ಲಿ ಹಾಗೂ ಮೈಸೂರು ಹುಬ್ಬಳ್ಳಿ, ಬೆಳಗಾಮ್‌ನಲ್ಲಿರುವ ಎಲ್ಲಾ ಆಸ್ಪತ್ರೆಗಳಲ್ಲೂ ಪೊರೆ ತೆಗೆಯುವಂತಹ ಕಾರ್ಯಕ್ರಮಗಳನ್ನು ಕೈಗೊಂಡು ಇದರಲ್ಲಿ ಹೆಚ್ಚಿನ ರೀತಿಯಲ್ಲಿ ನಾವು ಕೆಲಸ ಮಾಡುತ್ತಿದ್ದೇವೆ. ಆದಕ್ಕೋಸ್ಕರವಾಗಿ ಯಾರಿಗೆ ಕಣ್ಣು ಬರುವುದಿಲ್ಲವೆಂದು ತಿಳಿದುಕೊಂಡಿರುತ್ತಾರೋ ಅವರಿಗೆ ಆಪರೇಷನ್ ಮಾಡಿದಾಗ ಹೊಸದಾಗಿ ದೃಷ್ಟಿಬರುವುದರಿಂದ ಬಹಳ ಮಟ್ಟಿಗೆ ಶಿಬಿರಗಳನ್ನು ನಡೆಸುವ ಮುಖಾಂತರ ಇಂತಹ ಜನರಿಗೆ ಸಹಾಯ ಮಾಡುತ್ತಿದ್ದೇವೆ. ಇದಕ್ಕೆ ಖಾಸಗಿ ಸಂಸ್ಥೆಗಳಾಗಿರುವ ಲಯನ್ಸ್ ಕ್ಲಬ್, ರೋಟರಿ ಮುಂತಾದ ಸಂಸ್ಥೆಗಳು ಕೂಡ ಮುಂದೆ ಬಂದು ಹೆಚ್ಚಿನ ರೀತಿಯಲ್ಲಿ ಸಹಾಯ ಮಾಡುತ್ತಿವೆ. ಆದ್ದರಿಂದ ಹುಟ್ಟಿದಾಗಲೇ ಕಣ್ಣು ಕಳೆದುಕೊಂಡಿರುವಂತಹ ಜನ ಯಾರಿದ್ದಾರೆ ಅವರ ವಿಷಯದಲ್ಲಿ ಗಮನ ಹರಿಸಿಲ್ಲ, ಪ್ರಚಾರ ಮಾಡಲಿಲ್ಲವೆಂದು ಮಾನ್ಯ ರತ್ನಾಕರ್‌ರವರು ಏನು ಹೇಳಿದರು. ಇದಕ್ಕೆ ಬಹುಶಃ 'ಎ' ಅನ್ನಾಂಗ ಕೊರತೆ ಇರಬಹುದು 'ಎ' ಅನ್ನಾಂಗದ ಕೊರತೆಯನ್ನು ತಪ್ಪಿಸುವುದಕ್ಕೋಸ್ಕರವಾಗಿ ಅವರಿಗೆ ಹೆಚ್ಚಿನ ರೀತಿಯಲ್ಲಿ ಬೇಕಾಗಿರುವಂತಹ 'ಎ' ಅನ್ನಾಂಗ ಕಡಿಮೆಯಾಗಿರುವ ತಾಯಂದಿರಿಂದ ಹುಟ್ಟುವ ಮಕ್ಕಳಿಗೆ ದೃಷ್ಟಿ ಮಾಂದ್ಯ ಇರುತ್ತದೆ. ಆದಕ್ಕೋಸ್ಕರವಾಗಿ ಗರ್ಭಿಣಿ ಸ್ತ್ರೀಯರಿಗೆ ಕಬ್ಬಿಣಾಂಶ ಹೆಚ್ಚಾಗಿ ತೆಗೆದುಕೊಳ್ಳಬೇಕೆಂಬ ಅಂಶವನ್ನು ಪ್ರಚಾರ ಮಾಡುತ್ತಿದ್ದೇವೆ. --------- ನಮ್ಮ ಮಿಂಟೋ ಆಸ್ಪತ್ರೆ ಅತ್ಯಂತ ಆಧುನಿಕ ಉಪಕರಣಗಳನ್ನು, ತಜ್ಞರನ್ನು ಈ ದೃಷ್ಟಿಯಿಂದ ಹೊಂದಿದ್ದು ಉತ್ತಮ ಮಟ್ಟದ ಆಸ್ಪತ್ರೆಯಾಗಿದೆ. ಈ ಆಸ್ಪತ್ರೆಯಲ್ಲಿ ಏನೊಂದು ಉಪಕರಣಗಳಿವೆ ಅದೇ ರೀತಿಯಲ್ಲಿ ಮೈಸೂರು ಹುಬ್ಬಳ್ಳಿ ಮತ್ತು ಬೆಳಗಾಂ ಆಸ್ಪತ್ರೆಗಳಿಗೂ ಅಳವಡಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದೇವೆ.

ಕರ್ನಾಟಕ ರಾಜ್ಯದಲ್ಲಿ ಕಂಡುಬರುವ ಕೆಲವು ಪ್ರಮುಖ ರೋಗಗಳು ಏನಿವೆ ಅವುಗಳ ನಿವಾರಣೆ ಬಗ್ಗೆ ಕಾರ್ಯಕ್ರಮವನ್ನು ಹಾಕಿಕೊಂಡು ಸಂಪೂರ್ಣವಾಗಿ ಎಲ್ಲಾ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸುತ್ತಿದ್ದೇವೆ. ನಾವು ಈ ಕೆಲಸವನ್ನು ಚೆನ್ನಾಗಿ ಮಾಡುತ್ತಿದ್ದೇವೆಂಬ ಪ್ರಶಂಸೆಯನ್ನು ಬೇರೆ ರಾಜ್ಯದವರಿಂದ ಪಡೆದಿದ್ದೇವೆ. ಮುಖ್ಯವಾಗಿ ಮಕ್ಕಳ ಮತ್ತು ತಾಯಂದಿರ ಆರೋಗ್ಯ ಸಂರಕ್ಷಣೆಯ (ಮಿನಿಮಮ್ ನೀಡ್ಸ್ ಪ್ರೋಗ್ರಾಂ) ವಿಷಯದಲ್ಲಿ ನಾವು ಸಾಕಷ್ಟು ಕಾರ್ಯ ಮಾಡುತ್ತಿದ್ದೇವೆ. ಜಿಲ್ಲಾ ಪರಿಷತ್ತುಗಳು ರಚನೆಯಿಂದ ಮೇಲೆ ಅವುಗಳಿಗೆ ಈ ಕಾರ್ಯಕ್ರಮವನ್ನು ವಹಿಸಿದ್ದೇವೆ. ಇದಕ್ಕೋಸ್ಕರ 65% ಹಣವನ್ನು ಜಿಲ್ಲಾ ಪರಿಷತ್ತುಗಳಿಗೆ ಕೊಟ್ಟು ಈ ಕಾರ್ಯಕ್ರಮವನ್ನು ನಡೆಸುವ ವ್ಯವಸ್ಥೆ ಮಾಡಿದ್ದೇವೆ. ನಾವು 65% ಹಣವನ್ನು ಕೊಟ್ಟಾಗ್ಯೂ ಕೂಡ ಕೆಲವು ಆಸ್ಪತ್ರೆಗಳಲ್ಲಿ ಔಷಧಿಗಳಿಲ್ಲ. ಅಲ್ಲಿನ ವೈದ್ಯರು ಕೊಟ್ಟ ಚೀಟಿಯನ್ನು ತೆಗೆದುಕೊಂಡು ಹೋಗಿ ಅಂಗಡಿಗಳಲ್ಲಿ ಔಷಧಿ ಕೊಂಡುಕೊಳ್ಳಬೇಕೆಂದು ವೀರಯ್ಯಸ್ವಾಮಿಯವರು ಮತ್ತು ಬೆಲ್ಲದವರು ಹೇಳಿದ್ದಾರೆ. ಆ ದೃಷ್ಟಿಯಿಂದ ಔಷಧಿ ಕೊಡುವ ಸಲುವಾಗಿ ಉತ್ತರ ಭಾಗದಲ್ಲಿ ಬರುವಂತಹ ಆಸ್ಪತ್ರೆಗಳಿಗೆ ಶೇ 150 ರಷ್ಟು ಹಣವನ್ನು ಕೊಡಬೇಕೆಂದು ಮಾಡಿದ್ದೇವೆ. ಅದು ಈ ವರ್ಷದಿಂದ ಜಾರಿಗೆ ಬರುತ್ತದೆ. ಇದೇ ಸಂದರ್ಭದಲ್ಲಿ ಔಷಧಿಗೆ ಸಂಬಂಧಪಟ್ಟ ಹಾಗೆ ಪ್ರತಿ ಸಮೂಹ ಕೇಂದ್ರಗಳಿಗೆ ಮತ್ತು ಪಿ.ಎಚ್.ಯು ಹಾಗೂ ಪಿ.ಎಚ್.ಸಿ. ಗಳಿಗೆ ಕೊಡುವ

ಅವರು ಹೇಳಿದಂತಹ ತಿಪ್ರಸಿ ಆಗಲಿ, ಟಿ.ಬಿ. ಆಗಲಿ, ಈ ಕಾರಣಗಳಿಗೋಸ್ಕರ ನಾವು ಕೆಲವು ಸಾಧನೆಗಳನ್ನು ಮಾಡಿರುವಂತಹದು ಇದೆ. ಲೆಪ್ರೊಸಿಗೆ ಸಂಬಂಧಪಟ್ಟಂತೆ ಈ ಎಂ.ಡಿ.ಟಿ. ಕಾರ್ಯಕ್ರಮ ಏನಿದೆ ಅದನ್ನು 12 ಜಿಲ್ಲೆಗಳಿಗೆ ವಿಸ್ತರಿಸಿದ್ದೇವೆ. ಮತ್ತೆ ಅದಕ್ಕೋಸ್ಕರ ನಾವು ಹೆಚ್ಚಿನ ರೀತಿಯಲ್ಲಿ 'ಮಲ್ಟಿಡ್ರಗ್' ತೆರಪಿ ಬಂದ ಮೇಲೆ ಬಹಳ ವರ್ಷಗಳು ಕೊಡುತ್ತಿದ್ದ ಈ ಕಾರ್ಯವನ್ನು ನಾವು ಸ್ವಲ್ಪ ಹತ್ತಿರವಾಗಿ ಇದನ್ನು ಮುಗಿಸಲಿಕ್ಕೆ ಅವಕಾಶವಾಗಿದೆ. ಕೇಂದ್ರ ಸರ್ಕಾರದಿಂದ ಇದಕ್ಕೆ 100% ನೆರವು ದೊರೆಯಬೇಕು. ಅದು ಪಂಚವಾರ್ಷಿಕ ಯೋಜನೆಯಲ್ಲಿ ಅಂದರೆ ಐದು ವರ್ಷಗಳ ಅವಧಿಯಲ್ಲಿ ಸಿಕ್ಕುತ್ತದೆ. ಮಿಕ್ಕಿದ್ದು ನಾನ್ ಪ್ಲಾನ್ ಆಗುತ್ತದೆ. ಆ ದೃಷ್ಟಿಯಿಂದ ಕೂಡ ನಾವು ಈ ರಾಜ್ಯದ ಕಾರ್ಯಕ್ರಮದಡಿಯಲ್ಲಿ 350 ಲಕ್ಷ ರೂಪಾಯಿ ನಮಗೆ ಬಂದಿದೆ. ಈ ಲೆಪ್ರಸಿ ಕಾಯಿಲೆ ಅಂಟುರೋಗ ಎಂದು ಏನು ಹೇಳಿದ್ದಾರೆ ಅದು ಅಂಟುರೋಗ ಅಲ್ಲ. ಗಂಡನಿಗೆ ಇದ್ದರೆ ಹೆಂಡತಿಗೆ ಬರುವುದಿಲ್ಲ ಪ್ರಾರಂಭದಲ್ಲಿ ಇದನ್ನು ಕಂಡ ಕೂಡಲೇ ಆ ಮಚ್ಚೆಯನ್ನು ಕಂಡಂಥ ಕಾಲದಲ್ಲಿ ರಕ್ತ ಪರೀಕ್ಷೆ ಮಾಡಿದ ಮೇಲೆ ಅದಕ್ಕೆ ಚಿಕಿತ್ಸೆ ಪಡೆಯುವುದು ಒಳ್ಳೆಯದು, ಚಿಕಿತ್ಸೆ ಪಡೆದುಕೊಂಡು ಅವರು ಅಂಗವಿಕಲರಾದ ಕೆಲವು ಸಂದರ್ಭದಲ್ಲಿ ಬೇರೆ,ಬೇರೆ ರೀತಿಯಲ್ಲಿ ರೂಪ ವಿಕಾರ ಆಗುವ ಸಂದರ್ಭದಲ್ಲಿ ಅಸಹ್ಯ ಪಡುತ್ತಾರೆಯೇ ವಿನಃ ಇದು ಸಾಂಕ್ರಾಮಿಕ ರೋಗ ಅಥವಾ ಅಂಟು ರೋಗ ಅಲ್ಲ. ಆದ್ದರಿಂದ ಮಲ್ಟಿಡ್ರಗ್ಸ್ ದೃಷ್ಟಿಯಿಂದ ಎಲ್ಲಾ ಕಡೆಗೂ ಖಾಸಗೀ ಸಂಸ್ಥೆಗಳಲ್ಲಿ ಕೆಲಸ ಮಾಡುವವರಿಗೂ ಸಹಾಯ ಮಾಡುತ್ತಿದ್ದೇವೆ. ಅವರಿಗೆ ಕೇಂದ್ರದಿಂದ ಮತ್ತು ನಮ್ಮ ಸರ್ಕಾರದಿಂದಲೂ ಸಹಾಯ ದೊರೆಯುತ್ತದೆ ನಮ್ಮ ಆಸ್ಪತ್ರೆಗಳಲ್ಲೂ ಕೂಡ ಆ ಕೆಲಸ ಮಾಡುತ್ತಿದ್ದಾರೆ. ಈ ದಿಸೆಯಲ್ಲೂ ಕೂಡ ರೋಗವನ್ನು ತಡೆಗಟ್ಟುವುದಕ್ಕೆ ಸಾಕಷ್ಟು ಪ್ರಮಾಣದಲ್ಲಿ ಬೇರೆ ರಾಜ್ಯಗಳಿಗಿಂತಲೂ ಹೆಚ್ಚಿನ ರೀತಿಯಲ್ಲಿ ಕೆಲಸ ಮಾಡುತ್ತಿದ್ದೇವೆ. ಕ್ಷಯ ರೋಗಕ್ಕೆ ಸಂಬಂಧಪಟ್ಟ ಹಾಗೆ ನಾವು ಪ್ರತಿ ಜಿಲ್ಲೆಗೂ ಕೂಡ ಜಿಲ್ಲಾ ಕ್ಷಯ ರೋಗ ತಜ್ಞರನ್ನು ನೇಮಿಸಿ ಕ್ಷಯರೋಗವನ್ನು ತಡೆಗಟ್ಟಲು ಸಾಕಷ್ಟು ಪ್ರಮಾಣದಲ್ಲಿ ಕಾರ್ಯ ಮಾಡುತ್ತಿದ್ದೇವೆ. ಮುಖ್ಯವಾಗಿ 12 ಜಿಲ್ಲೆಗಳಲ್ಲಿ ಅಲ್ಪಾವಧಿ ಚಿಕಿತ್ಸಾ ಪ್ರಯೋಗ ನಡೆಸಿ, ಅದು ಹೆಚ್ಚು ಪರಿಣಾಮಕಾರಿಯಾದರೆ ಈ ವರ್ಷದಲ್ಲಿ ಇಡೀ ರಾಜ್ಯದಲ್ಲಿ ಈ ವ್ಯವಸ್ಥೆಯನ್ನು ಜಾರಿ ಮಾಡಲಿಕ್ಕೆ ಸಾಧ್ಯವಾಗುತ್ತದೆ. ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಮಾತ್ರ ಈ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಇದರಲ್ಲಿ ಸುಮಾರು 150 ವೈದ್ಯಾಧಿಕಾರಿಗಳಿಗೆ 1150 ಕಾರ್ಯಕರ್ತರಿಗೆ ತರಬೇತಿಕೊಟ್ಟು 12 ಜಿಲ್ಲೆಗಳಲ್ಲಿ ಕ್ಷಯರೋಗ ನಿವಾರಣೆ ಕ್ರಮದ ವೈದ್ಯಕೀಯವನ್ನು ತಿಳಿದು ಕೊಳ್ಳುವುದಕ್ಕೆ ಸಾಕಷ್ಟು ತರಬೇತಿ ಕೊಟ್ಟಿದ್ದೇವೆ. ಈ ದೃಷ್ಟಿಯಿಂದ 85 ಸಾವಿರ ಕ್ಷಯ ರೋಗಿಗಳ 1987-88ನೇ ಇಸವಿಯಲ್ಲಿ ಪತ್ತೆಹಚ್ಚಿ ಅವರಲ್ಲಿ 71.796 ರೋಗಿಗಳನ್ನು ಈ ಚಿಕಿತ್ಸೆಗೆ ಒಳಪಡಿಸಿ ಸುಮಾರು 84% ಕ್ಷಯ ರೋಗಗಳನ್ನು ಗುಣಪಡಿಸುವುದರಲ್ಲಿ ನಾವು ಸಾಧನೆಮಾಡಿದ್ದೇವೆಂದು ಹೇಳಲು ಹೆಮ್ಮೆ ಪಡುತ್ತೇನೆ.

ಇನ್ನು ಸಮುದಾಯ ಕ್ಷಯ ಮತ್ತು ಲೆಪ್ರೊಸಿ, ಬ್ಲೈಂಡೆನೆಸ್ ಇದಕ್ಕೆ ಕೇಂದ್ರ ಸರ್ಕಾರದಿಂದ 100% ಹಣದ ಸಹಾಯ ಸಿಗುತ್ತದೆ. ನಮ್ಮ ಎಲ್ಲಾ 4 ದೊಡ್ಡ ಪಟ್ಟಣಗಳಲ್ಲಿ ನಮ್ಮ ಜಿಲ್ಲಾ

1976ರಲ್ಲಿ 6 ಸಾವಿರ ಜನ ಮಲೇರಿಯಾ ರೋಗದಿಂದ ನರಳುತ್ತಿದ್ದರು, ಇವತ್ತು ಅದು 86 ಸಾವಿರಕ್ಕೆ ಹೆಚ್ಚಿದೆ. ಇದರಲ್ಲಿ ಗುಲ್ಬರ್ಗಾ, ಬಿಜಾಪುರ, ಮಂಡ್ಯ ಮತ್ತು ಮೈಸೂರಿನ ಕೆಲವು ಭಾಗಗಳಲ್ಲಿ ಇದು ಮರುಕಳಿಸಿದೆ. ಇದಕ್ಕೆ ಕಾರಣ ನೀರಾವರಿ ಹೆಚ್ಚು ಆದ ಮೇಲೆ ಅಲ್ಲಿ ನೀರು ನಿಂತು ಈ ಸೊಳ್ಳೆಗಳು ಬೆಳೆಯುವುದಕ್ಕೆ ಅವಕಾಶವಾಗಿರುವುದು. ಆದ್ದರಿಂದ ನಾವು ಈ ಭಾಗಗಳಲ್ಲಿ ಒಂದು ತಿಂಗಳಿಗೆ ಒಂದು ಸಲ ಸಿಂಪಡಿಸುವ ಔಷಧವನ್ನು 15 ದಿವಸಗಳಿಗೆ ಒಂದು ಸಲ ಸಿಂಪಡಿಸುವ ಕಾರ್ಯವನ್ನು ಪ್ರಾರಂಭ ಮಾಡಿದ್ದೇವೆ. ಆದರೂ ಕೂಡ ಸೊಳ್ಳೆಗಳು ಎಚ್ಚೆತ್ತು ಕೊಂಡಿವೆ. ಬಿ.ಸಿ.ಜಿ. ಆಗಲಿ, ಮತ್ತೆ ನಮ್ಮ ಪೌಡರ ಆಗಲಿ, ಇದರಿಂದ ನಾವು ಏನು ಮಾಡುತ್ತೇವೆ ಅದರಿಂದ ಅವು ಸಾಯುವುದಿಲ್ಲ ರಸಿಸ್ಟೆನ್ಸ್ ಜಾಸ್ತಿ ಆಗಿದೆ. ಆದ್ದರಿಂದ ಮಾಲಿತಿನ್ ಪೌಡರ್ ಹಾಕುವುದರಿಂದ ಅವುಗಳ ಸಂತಾನ ಅಭಿವೃದ್ಧಿ ತಡೆಯಲಿಕ್ಕೆ ಸಾಧ್ಯವಾಗುತ್ತದೆ ಎನ್ನುವುದನ್ನು ಕೇಂದ್ರ ಸರ್ಕಾರದ ಜೊತೆಯಲ್ಲಿ ಚರ್ಚೆ ಮಾಡಿದಾಗ ತಿಳಿಯಿತು. ಅದನ್ನು ನಾವು ಒಪ್ಪಿಕೊಂಡು ಉಪಯೋಗ ಮಾಡುವುದರಿಂದ ಸೊಳ್ಳೆಗಳ ಬೆಳವಣಿಗೆಯನ್ನು ತಡೆಗಟ್ಟಲಿಕ್ಕೆ ಸಾಧ್ಯವಾಗುತ್ತದೆ. ಎಂದು ನಮ್ಮ ಅಧಿಕಾರಿಗಳು ಅವರ ಜೊತೆ ಚರ್ಚೆಮಾಡಿದ್ದಾರೆ. ಈಗ ಅವರು ಒಪ್ಪಿಕೊಳ್ಳುವ ಪರಿಸ್ಥಿತಿ ಇದೆ. ಇದರಿಂದ ಪುನಃ 7-8 ಜಿಲ್ಲೆಗಳಲ್ಲಿ ಮರುಕಳಿಸುವಂತಹ ಸೊಳ್ಳೆಯ ಬೆಳವಣಿಗೆಯನ್ನು ನಾವು ಹತೋಟಿಗೆ ತರುವುದಕ್ಕೆ ಸಾಧ್ಯವಾಗುತ್ತದೆ. ಬೆಂಗಳೂರು ನಗರದ ವಿಮಾನ ನಿಲ್ದಾಣದ ಪಕ್ಕದಲ್ಲಿರುವ ಕೆರೆಗಳಲ್ಲಿ ಮತ್ತೆ ಎಲ್ಲಿ ಕೊಳಚೆ ಪ್ರದೇಶವಿದೆ ಮತ್ತು ನಮ್ಮ ಸಿವಿರೇಜ್ ವಾಟರ್ ಎಲ್ಲಿ ಹೋಗುತ್ತದೆ ಅದರಿಂದ ಎಲ್ಲಿ ಹುಲ್ಲು ಬೆಳೆಯುತ್ತದೆ, ಹಾಗೂ ನೀರಿನೊಳಗೆ ಬೆಳೆಯುವ ಗಿಡಗಳು ಏನಿವೆ ಅವುಗಳು ಸೊಳ್ಳೆಯನ್ನು ಸಂರಕ್ಷಣೆ ಮಾಡುವಂತಹ ತಾನಗಳಾಗಿರುವುದರಿಂದ, ಆ ಕಡೆಗಳಲ್ಲಿ ನಮ್ಮ ಕಾರ್ಪೊರೇಷನ್‌ರವರು ಹೆಚ್ಚು ಪ್ರಯತ್ನ ಮಾಡಬೇಕಾಗಿದೆ. ನಮ್ಮ ಇಲಾಖೆಯಿಂದ ಒಂದು ಕೆರೆಯನ್ನು ತೆಗೆದುಕೊಂಡು ಪ್ರಾಯೋಗಿಕವಾಗಿ ಮಾಡುತ್ತಿದ್ದಾರೆ. ಈ ದೃಷ್ಟಿಯಲ್ಲಿ ಅನಾಫಿಲಿಸ್ ಸೊಳ್ಳೆಯನ್ನಾಗಲಿ ಅಥವಾ ಯಾವುದೇ ಸೊಳ್ಳೆಯನ್ನಾಗಲಿ ಸಾಧ್ಯವಾದಷ್ಟು ಮಟ್ಟಿಗೆ ಕಡಿಮೆಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

ಮನೆಗಳ ಹತ್ತಿರ ಬೇರೆ, ಬೇರೆ ಪರಿಸರಗಳಲ್ಲಿ ಎಲ್ಲಿ ಜನರು ಮಾಲಿತಿನ್ ಪೌಡರ್ ಹಾಕಿದರೆ ಸಾಯುತ್ತವೆ ಎಂದು ಹೇಳುತ್ತಾರೆ ಅಂತಹ ಕಡೆ ಹಾಕುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಕಳೆದ ವರ್ಷ ನಾವು ಇದಕ್ಕಾಗಿ ಖರ್ಚು ಮಾಡದೆ ಹಣವನ್ನು ಲ್ಯಾಪ್ಸ್ ಮಾಡಿದ್ದಾರೆಂದು ಹೇಳಿದರು. ಇದಕ್ಕೋಸ್ಕರ 425 ಲಕ್ಷ ರೂಪಾಯಿ ಕೇಂದ್ರದವರು ಕೊಟ್ಟಿದ್ದಾರೆ. ನಾವು 425 ಲಕ್ಷ ರೂಪಾಯಿ ಕೊಟ್ಟಿದ್ದೇವೆ. ನಮ್ಮ ಯೋಜನೇತರ ಪ್ಲಾನ್‌ನಲ್ಲಿ 360 ಲಕ್ಷ ರೂಪಾಯಿ ಕೊಟ್ಟು ಈ ಒಂದು ಕಾರ್ಯಕ್ಕೆ 1210 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ಈ ರಾಜ್ಯದಲ್ಲಿ ಬೇರೆ, ಬೇರೆ ರಾಜ್ಯಗಳಿಗಿಂತ ಹೆಚ್ಚಿನ ರೀತಿಯಲ್ಲಿ ಸಾಧನೆ ಮಾಡಿದ್ದೇವೆ. ಇದರ ಫಂಡ್ಸ್ ಲಾಸ್ ಮಾಡಿದ್ದಾರೆ. ಖರ್ಚು ಮಾಡಿಲ್ಲ ಎಂದು ಹೇಳಿದ್ದುದು ಸರಿಯಲ್ಲ. ನಾವು ಹೆಚ್ಚಿನ ರೀತಿಯಲ್ಲಿ ಹಣ ಖರ್ಚು ಮಾಡಿದ್ದೇವೆಂದು ಈ ಸಂದರ್ಭದಲ್ಲಿ ಹೇಳಲಿಕ್ಕೆ ಬಯಸುತ್ತೇನೆ. ಅದೇ ರೀತಿ

## 1988-89ನೇ ಸಾಲಿನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸಂಬಂಧಿಸಿದ ಬೇಡಿಕೆಗಳ ಮೇಲಿನ ಚರ್ಚೆಗೆ, ನೀಡಿದ ಉತ್ತರ

ಶ್ರೀ. ಬಿ. ರಾಚಯ್ಯ- ಮಾನ್ಯ ಅಧ್ಯಕ್ಷರೆ, ಕುಟುಂಬ ಕಲ್ಯಾಣ ಆರೋಗ್ಯ ಇಲಾಖೆ ಸಂಬಂಧಪಟ್ಟಂತೆ ಹಣಕಾಸಿನ ಮನವಿಯ ಮೇಲೆ ಮಾತನಾಡಿದಂಥ ಮಾನ್ಯ ಸದಸ್ಯರುಗಳಿಗೆ ಪ್ರಥಮತಹ ಅಬಿನಂದನೆಗಳನ್ನು ಸಲ್ಲಿಸುತ್ತೇನೆ. ಮುಖ್ಯವಾಗಿ ಈ ಇಲಾಖೆಯ ಮೇಲೆ 10 ಜನ ಮಾತನಾಡಿದ್ದು, ಅದರಲ್ಲಿ ಶ್ರೀಮಾನ್ ರತ್ನಾಕರ್ ಅವರು ಸುದೀರ್ಘವಾಗಿ ಕುಟುಂಬ ಕಲ್ಯಾಣ, ಆರೋಗ್ಯ ಇಲಾಖೆಗಳ ಮೇಲೆ ಹೆಚ್ಚಿನ ವಿಷಯಗಳನ್ನು ಚರ್ಚಿಸಿದ್ದಾರೆ. ಮತ್ತೆ ಕೆಲವರು ಸರ್ಕಾರದ ಈ ಇಲಾಖೆಯಲ್ಲಿ ಕಂಡು ಬಂದ ಲೋಪದೋಷಗಳನ್ನು ಎತ್ತಿಹಿಡಿದಿದ್ದಾರೆ. ಸರ್ಕಾರದ ಆಸ್ಪತ್ರೆಗಳಲ್ಲಿ ವೈದ್ಯರುಗಳಿದ್ದರೆ ಔಷಧಿಗಳು ಇಲ್ಲ. ಔಷಧಿ ಇದ್ದರೆ ದಾದಿಯರು ಇಲ್ಲವೆಂದು ಟೀಕೆ ಮಾಡಿದ್ದಾರೆ. ನಾನು ಒಂದೊಂದು ವಿಚಾರಕ್ಕೂ ಉತ್ತರ ಕೊಡುವುದಕ್ಕೆ ಸಾಧ್ಯವಾದಷ್ಟು ಮಟ್ಟಿಗೆ ಪ್ರಯತ್ನ ಮಾಡುತ್ತೇನೆ. ಪ್ರಾರಂಭ ಮಾಡಿದಂತ ಮಾನ್ಯ ಸದಸ್ಯರು ಕನ್ನಡದಲ್ಲಿ ಒಳ್ಳೆಯ ಶೈಲಿಯಲ್ಲಿ ಉತ್ತಮವಾದಂತಹ ಭಾಷಣವನ್ನು ಮಾಡಿದ್ದಾರೆ. ವ್ಯಕ್ತಿ, ಕುಟುಂಬ ಸಮಾಜ ಇದರ ಸ್ವಾಸ್ಥ್ಯವನ್ನು ನೋಡಿಕೊಳ್ಳುವ ಮಂತ್ರಿಗಳು ಮಾನಸಿಕವಾಗಿ ಭೌತಿಕವಾಗಿ ಅವರ ಆರೋಗ್ಯ ನೋಡಿಕೊಂಡಿದ್ದರೆ, ಚೆನ್ನಾಗಿ ನಡೆಯುತ್ತಿತ್ತು. ಆದರೆ ಅವರ ಕೈಯಲ್ಲಿ ಇಲಾಖೆ ಎಷ್ಟರ ಮಟ್ಟಿಗೆ ನಡೆಯಬೇಕಾಗಿತ್ತು, ಅಷ್ಟರಮಟ್ಟಿಗೆ ನಡೆಯುತ್ತಿಲ್ಲವೆನ್ನುವ ಸಂಶಯದಿಂದಲೇ ಪ್ರಾರಂಭ ಮಾಡಿದರು. ಸಹಜವಾಗಿ ಆ ವಯಸ್ಸಿನಲ್ಲಿರುವಂತಹವರಿಗೆ ನನ್ನನ್ನು ನೋಡಿದಾಗ ಹಾಗೆ ಕಾಣುತ್ತದೆ. ಆ ದೃಷ್ಟಿಯಿಂದ ಮಾನಸಿಕವಾಗಿ, ದೈಹಿಕವಾಗಿ ನನ್ನ ಸ್ವಾಸ್ಥ್ಯ ಚೆನ್ನಾಗಿದೆ ಎನ್ನುವ ಆಶ್ವಾಸನೆಯನ್ನು ಕೊಟ್ಟು ನನ್ನ ಸ್ವಾಸ್ಥ್ಯ ಉತ್ತಮವಾಗಲಿ ಮತ್ತು ಜನರ ಸ್ವಾಸ್ಥ್ಯವನ್ನು ಉತ್ತಮ ಪಡಿಸುವ ದೃಷ್ಟಿಯಿಂದ ಮುಖ್ಯ ಮಂತ್ರಿಗಳು ನನ್ನ ಕೈಗೆ ಈ ಇಲಾಖೆಯನ್ನು ಕೊಟ್ಟಿದ್ದಾರೆ. ನಾನು ಉತ್ತಮ ವೈದ್ಯನೂ ಅಲ್ಲ, ತಜ್ಞನೂ ಅಲ್ಲ 30-40 ವರ್ಷಗಳ ಹಳೆಯ ರೋಗಿಯಾಗಿದ್ದೇನೆ ಒಂದಲ್ಲಾ ಒಂದು ಸಲ ಹೊರಗಡೆಯಿಂದ ಆಸ್ಪತ್ರೆ ತಜ್ಞರು ಶುಶ್ರೂಕರು, ಔಷಧಿಗಳು ಇರುವಂತಹ ಉಪಕರಣಗಳನ್ನು ನೊಡಿಕೊಂಡು ಬಂದಿದ್ದೇನೆ. ಸಹಜವಾಗಿ ಇರುವ ಕೊರತೆಗಳನ್ನು ಸರಿದೂಗಿಸುವಂತಹ ಪ್ರಯತ್ನವನ್ನು ಮಾಡಿಕೊಂಡು ಬಂದಿದ್ದೇನೆ. ಒಳಗಡೆ ಹೋಗಿ ನೋಡುವ ಅವಕಾಶ ಕಳೆದ 8-9 ತಿಂಗಳಿಂದ ಸಿಕ್ಕಿದೆ. ಸಾಧ್ಯವಾದಷ್ಟು ಮಟ್ಟಿಗೆ ಒಂದೊಂದನ್ನು ಬಗೆಹರಿಸುವುದಕ್ಕೆ ಪ್ರಯತ್ನ ಮಾಡಿದ್ದೇನೆ. ನಮ್ಮ ರಾಜ್ಯದಲ್ಲಿ ರೋಗಗಳು ಬಾರದಹಾಗೆ ನೋಡಿಕೊಳ್ಳುವ ವಿಷಯದಲ್ಲಿ ಪ್ರಥಮವಾಗಿ ಭಾಷಣ ಪ್ರಾರಂಭ ಮಾಡಿದರು. ಅದರಲ್ಲಿಯೂ ಮಲೇರಿಯಾ ರೋಗ ರಾಜ್ಯದಲ್ಲಿ ಮತ್ತೆ ಮರುಕಳಿಸಿದ್ದು, ಅದು ವ್ಯಾಪಕವಾಗದಂತೆ ನೋಡಿಕೊಳ್ಳಬೇಕೆಂದು ಹೇಳಿದ್ದಾರೆ.

---

* ವಿಧಾನ ಸಭಾ ನಡವಳಿಕೆ ದಿನಾಂಕ 16ನೇ ಜೂನ್, 1988 ಪುಟ 1-13.